ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ. ೨೯

ಶ್ರೀ ವೇದವ್ಯಾಸರಿಂದ ರಚಿತವಾದ

# ನಾರದೀಯ ಮಹಾಪುರಾಣ

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

ಭಾಗ—೫

(೬೩—೭೯ ಅಧ್ಯಾಯಗಳು)

(ಮಂತ್ರಶಾಸ್ತ್ರ ಭಾಗ—೧)



ಮಹಾವಿದ್ವಾನ್, ವಿದ್ವನ್ಮಣಿ,
**ದೊಡ್ಡಬಳ್ಳಾಪುರಂ ವಾಸುದೇವಾಚಾರ್ಯ.**
ಅನುವಾದಕ.



ಮೈಸೂರು
ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್
೧೯೪೭

# ಉಪೋದ್ಘಾತ.

'ಸುಖವು ಬೇಕು, ದುಃಖವು ಬೇಡ' ಎಂಬ ಬಯಕೆಯು ಪ್ರಾಣಿಗಳಿಗೆಲ್ಲ ಸಹಜವಾದುದು. ಅದನ್ನು ಸಾಧಿಸುವ ಬಗೆಯರಿತು ತಕ್ಕ ಉಪಾಯಗಳನ್ನು ಮಾಡಿದ ಹೊರತು ಸುಖವು ಲಭಿಸಲಾರದು. ಸುಖವು ಐಹಿಕ, ಆಮುಷ್ಮಿಕವೆಂಬುದಾಗಿ ಎರಡು ವಿಧವು. ಐಹಿಕಸುಖವು ಸ್ರಕ್ ಚಂದನ ವನಿತಾದಿ ಭೋಗಸಾಧನವಸ್ತುಗಳನ್ನು ಸಂಪಾದಿಸುವುದರಿಂದ ಲಭಿಸುತ್ತದೆ. ಅದರ ಉಪಾಯವು ಲೌಕಿಕವೂ, ಅನುಭವಶಾಲಿಗಳಿಗೆ ವೇದ್ಯವೂ ಆಗಿದೆ. ಆಮುಷ್ಮಿಕಸುಖವು ಸ್ವರ್ಗಾದಿಸುಖ, ಮೋಕ್ಷಸುಖವೆಂಬುದಾಗಿ ಎರಡು ವಿಧವು. ಸ್ವರ್ಗಸುಖವು ಅವನವನ ಪುಣ್ಯಕ್ಕೆ ತಕ್ಕಂತೆ ಸ್ವಲ್ಪಕಾಲಮಾತ್ರವೇ ಇದ್ದು ನಷ್ಟವಾಗುವುದು. ಅದು ಶಾಶ್ವತವಲ್ಲ. ಎರಡನೆಯದಾದ ಮೋಕ್ಷಸುಖವೇ ಶಾಶ್ವತವು. ಅದಕ್ಕೆ ದುಃಖಸಂಪರ್ಕವಿಲ್ಲ. ಅದನ್ನು ಗಳಿಸಿದ ಬಳಿಕ ದುಃಖ ಬರುವ ಪ್ರಸಕ್ತಿಯೇ ಇಲ್ಲ. ಆದುದರಿಂದಲೇ ಅದು ಪರಮ ಪುರುಷಾರ್ಥವೆನಿಸುತ್ತದೆ.

ಅಂತಹ ಉತ್ತಮಪುರುಷಾರ್ಥಪ್ರಾಪ್ತಿಗೆ ವೇದದಲ್ಲಿ ಸಾಧನಗಳು ಉಕ್ತವಾಗಿವೆ. ಅವರ ತತ್ವವನ್ನು ಅರಿತು ಅನುಷ್ಠಾನಮಾಡಿದರೆ ಮೋಕ್ಷವು ಲಭಿಸುವುದು. ಧರ್ಮಮಾರ್ಗವು ಮತ್ತೊಂದು ಉಪಾಯವು. ಅದು ವೈದಿಕ ಮತ್ತು ತಾಂತ್ರಿಕವೆಂದು ಎರಡು ಬಗೆ. ವೈದಿಕಮಾರ್ಗವು ವೇದ, ಸೂತ್ರ, ಸ್ಮೃತಿ, ಇತಿಹಾಸ, ಪುರಾಣಾದಿಗಳಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟು ಪ್ರಚಾರದಲ್ಲಿದೆ. ತಾಂತ್ರಿಕಮಾರ್ಗವಾದರೋ ಅತ್ಯಂತಗೂಢವು. ಸಾಮಾನ್ಯವಾಗಿ ತಿಳಿಯಲಶಕ್ಯವು. ತಿಳಿದರೂ ಅದನ್ನು ಆಚರಿಸುವುದು ಬಹುಕಷ್ಟಸಾಧ್ಯವೂ ಆಗಿರುವುದರಿಂದ ಅದು ಹೆಚ್ಚು ಪ್ರಚಾರಕ್ಕೆ ಬರವೆ ಅಲ್ಲಲ್ಲಿ ಅಲ್ಪಸ್ವಲ್ಪವಾಗಿ ಕಾಣುತ್ತಿರುವುದು. ದಯಾಳುಗಳಾದ ಋಷಿಗಳು ಮಂತ್ರಶಾಸ್ತ್ರದಲ್ಲಿ ಬಹುಗ್ರಂಥಗಳನ್ನು ರಚಿಸಿರುವರು. ಅವು ಅರವತ್ತುನಾಲ್ಕು ತಂತ್ರಗಳೆಂದು ಉಕ್ತವಾಗಿವೆ. ಅವುಗಳಲ್ಲಿ ಅನೇಕ ತಂತ್ರಗಳು ಈಗ ಪ್ರಚಾರದಲ್ಲಿಲ್ಲ. ತಂತ್ರಗಳೆಲ್ಲವೂ ಸಂಕೇತಶಬ್ದಮಯವಾಗಿ ಅತ್ಯಂತ ಗಹನವಾಗಿವೆ. ಅವು ಯಾವುವೆಂದರೆ:—

೧ ಮಹಾಮಾಯಾತಂತ್ರ
೨ ಶಂಬರ
೩ ಯೋಗಿನೀ
೪ ಜಾಲಶಂಬರ
೫ ತತ್ವಶಂಬರ
೬ ಭೈರವಾಷ್ಟಕ
೭ ಬ್ರಾಹ್ಮೀ
೮ ಮಾಹೇಶ್ವರೀ
೯ ಕೌಮಾರೀ
೧೦ ವೈಷ್ಣವೀ
೧೧ ವಾರಾಹೀ
೧೨ ಇಂದ್ರಾಣೀ
೧೩ ಚಾಮುಂಡಾ
೧೪ ಶಿವದೂತೀ
೧೫ ಬ್ರಹ್ಮಯಾಮಲ
೧೬ ವಿಷ್ಣುಯಾಮಲ
೧೭ ರುದ್ರಯಾಮಲತಂತ್ರ
೧೮ ಲಕ್ಷ್ಮೀಯಾಮಲ
೧೯ ಉಮಾಯಾಮಲ
೨೦ ಸ್ಕಂದಯಾಮಲ
೨೧ ಗಣೇಶಯಾಮಲ
೨೨ ಜಯದ್ರಥಯಾಮಲ
೨೩ ಚಂದ್ರಜ್ಞಾನ
೨೪ ವಾಸುಕಿ
೨೫ ಮಹಾಸಂಮೋಹನ
೨೬ ಮಹೋಚ್ಛುಷ್ಮ (ವಾಮಜುಷ್ಟ)
೨೭ ವಾತುಲ
೨೮ ವಾತುಲೋತ್ತರ
೨೯ ಹೃದ್ಭೇದ
೩೦ ತಂತ್ರಭೇದ
೩೧ ಗುಹ್ಯ
೩೨ ಕಾಮಿಕ
೩೩ ಕಲಾವಾದತಂತ್ರ
೩೪ ಕಲಾಸಾರ
೩೫ ಕುಬ್ಜಿಕಾಮತ
೩೬ ತಂತ್ರೋತ್ತರ
೩೭ ವೀಣಾ
೩೮ ತ್ರೋತಲ
೩೯ ತ್ರೋತಲೋತ್ತರ
೪೦ ಪಂಚಾಮೃತ
೪೧ ರೂಪಭೇದ
೪೨ ಭೂತೋಡ್ಡಾಮರ
೪೩ ಕುಲಸಾರ
೪೪ ಕುಲೋಡ್ಡೀಶ
೪೫ ಕುಲಚೂಡಾಮಣಿ
೪೬ ಸರ್ವಜ್ಞಾನೋತ್ತರ
೪೭ ಮಹಾಕಾಳೀಮತ
೪೮ ಮಹಾಲಕ್ಷ್ಮೀಮತ
೪೯ ಸಿದ್ಧಯೋಗೀಶ್ವರೀಮತ
೫೦ ಕುರೂಪಿಕಾಮತ
೫೧ ದೇವರೂಪಿಕಾಮತ
೫೨ ಸರ್ವವೀರಮತ
೫೩ ವಿಮಲಾಮತ
೫೪ ಪೂರ್ವಾಮ್ನಾಯ

೫೫ ಪಶ್ಚಿಮಾಮ್ನಾಯ
೫೬ ದಕ್ಷಿಣಾಮ್ನಾಯ
೫೭ ಉತ್ತರಾಮ್ನಾಯ
೫೮ ಊರ್ಧ್ವಾಮ್ನಾಯ
೫೯ ವೈಶೇಷಿಕತಂತ್ರ
೬೦ ಜ್ಞಾನಾರ್ಣವ
೬೧ ವೀರಾವಳಿ
೬೨ ಅರುಣೇಶ
೬೩ ಮೋಹಿನೀಶ
೬೪ ವಿಶುದ್ಧೇಶ್ವರತಂತ್ರ

ಈ ನಾರದೀಯಪುರಾಣ ಪೂರ್ವಭಾಗದ ಮೂರನೆಯ ಪಾದವು ಸಂಪೂರ್ಣವಾಗಿ ಮಂತ್ರಶಾಸ್ತ್ರವಾಗಿದೆ. ಪ್ರಸಿದ್ಧಮಂತ್ರಶಾಸ್ತ್ರಗ್ರಂಥಗಳಲ್ಲಿ ಹೇಳದಿರುವ ಅನೇಕ ಮಂತ್ರವಿಧಾನಗಳು ಇಲ್ಲಿ ಉದಾಹರಿಸಲ್ಪಟ್ಟಿವೆ. ಇಲ್ಲಿ ಹೇಳಿರುವುದರಲ್ಲಿ ಕೆಲಕೆಲವು ಭಾಗಗಳನ್ನು ಇತರ ಗ್ರಂಥಗಳಲ್ಲಿ ಸಂಗ್ರಹಿಸಿದೆ. ಇದು ಬಹುಪ್ರಾಚೀನವಾಗಿರುವುದರಿಂದ ಮಂತ್ರಶಾಸ್ತ್ರಗ್ರಂಥಗಳಿಗೆಲ್ಲಾ ಈ ಪುರಾಣವೇ ಮೂಲವೆಂದು ಹೇಳಿದರೂ ಅತಿಶಯೋಕ್ತಿಯಾಗಲಾರದು.

ಮಂತ್ರವೆಂದರೆ ' ಜ್ಞಾನವನ್ನು ಅನುಗ್ರಹಿಸಿ ರಕ್ಷಿಸುವುದು ' ಎಂಬ ಅರ್ಥವನ್ನು ಅರವತ್ತನಾಲ್ಕನೆಯ ಅಧ್ಯಾಯದ ಮೂರನೆಯ ಶ್ಲೋಕದಲ್ಲಿ ಹೇಳಿದೆ. ಹೀಗೆಯೇ ಮಂತ್ರಾಂಗವಾದ ದೀಕ್ಷಾ ಮುಂತಾದ ಪದಗಳ ಅವಯವಾರ್ಥವೂ ಅಲ್ಲಿಯೇ ವಿವರಿಸಲ್ಪಟ್ಟಿದೆ. ಮಂತ್ರವನ್ನು ಮಾತ್ರ ತಿಳಿವರೆ ಸಾಲದು. ಮಂತ್ರಸ್ವರೂಪ, ಋಷಿ, ದೇವತೆ, ಛಂದಸ್ಸು, ಷಡಂಗ ಅಥವಾ ಪಂಚಾಂಗನ್ಯಾಸಮಂತ್ರ, ಧ್ಯಾನ, ಜಪಸಂಖ್ಯಾನಿಯಮ, ತರ್ಪಣ, ಹೋಮ ಮತ್ತು ಸಾಂಗಪೂಜೆಯ ರೀತಿ ಇವೆಲ್ಲವನ್ನೂ ಚೆನ್ನಾಗಿ ತಿಳಿದುಕೊಂಡು ಅವರಂತೆ ಆಚರಿಸಿದಾಗಲೇ ಸಿದ್ಧಿಯಾಗುವುದು. ಇವುಗಳಲ್ಲಿ ಯಾವ ಅಂಗಲೋಪವಾದರೂ ಅನರ್ಥವುಂಟಾಗುತ್ತದೆ. ಇಷ್ಟೇ ಅಲ್ಲ; ತತ್ವನ್ಯಾಸ ಮಾತೃಕಾನ್ಯಾಸಗಳನ್ನು ಎಲ್ಲಾ ಮಂತ್ರಜಪಗಳಿಗೂ ಅಂಗವಾಗಿ ಆದ್ಯಂತಗಳಲ್ಲಿ ಆಚರಿಸಬೇಕು. ಇದು ಸಾಮಾನ್ಯ ಜಪವಿಧಾನವು. ಕೆಲವುಮಂತ್ರಗಳಿಗೆ ವರ್ಣನ್ಯಾಸ, ಪದನ್ಯಾಸ, ವಿಭೂತಿಪಂಜರನ್ಯಾಸ, ಹರಿನ್ಯಾಸ, ಆವೃತ್ತಿನ್ಯಾಸ ಮುಂತಾದ ವಿಶೇಷನ್ಯಾಸಗಳೂ ವಿಹಿತವಾಗಿವೆ. ಅವುಗಳನ್ನೂ ಆಯಾ ಮಂತ್ರಜಪಮಾಡುವಾಗ ಆಚರಿಸಬೇಕು.

ಹೀಗೆ ಸಾಂಗವಾಗಿ ಜಪಮಾಡಿ ಸಿದ್ಧಿಯನ್ನು ಹೊಂದಿದವನು ಶತ್ರು ಭಯ, ವಶೀಕರಣ, ಧನಧಾನ್ಯಾದಿ ಸಮೃದ್ಧಿ ಮುಂತಾದ ಆಯಾ ಫಲಗಳನ್ನು ಪಡೆಯುವುದಕ್ಕಾಗಿ ಪ್ರಯೋಗವಿಧಾನ ಮತ್ತು ಯಂತ್ರನಿರ್ಮಾಣಕ್ರಮಗಳು ವಿಶೇಷವಾಗಿ ವಿಹಿತವಾಗಿವೆ. ಆಯಾ ಫಲಾಕಾಂಕ್ಷಿಗಳು ಆಯಾ ಪ್ರಯೋಗಾದಿಗಳನ್ನು ಆಚರಿಸಿದರೆ ಇಷ್ಟಫಲವು ದೊರೆಯುವುದು. ಆದರೆ ಐಹಿಕವಾದ ಕ್ಷುದ್ರಕಾಮನೆಗಳಿಗಾಗಿ ಮಂತ್ರಜಪವನ್ನಾಚರಿಸುವುದರಿಂದ ತತ್ಕಾಲದಲ್ಲಿ ಫಲವು ದೊರೆತರೂ ಪರಲೋಕದಲ್ಲಿ ಅದರಿಂದ ಅನರ್ಥವಾಗುವುದು ತಪ್ಪುವುದಿಲ್ಲ. ಸಿದ್ಧಿ ಹೊಂದಿದವನು ಕ್ಷುದ್ರಕಾಮನೆಗಳನ್ನು ದ್ವೇಶಿಸದೆ ಭಗವಂತನು ಸಂತುಷ್ಟನಾಗಲೆಂದು ನಿಷ್ಕಾಮನಾಗಿ ಸಾತ್ವಿಕಮಂತ್ರಗಳನ್ನು ಜಪಿಸಿದರೆ ಅಂತಹವನು ಮೋಕ್ಷಭಾಗಿಯಾಗಿ ಶಾಶ್ವತಸುಖವನ್ನು ಪಡೆಯುವನು ಎಂಬುದಾಗಿ ಈ ಗ್ರಂಥದಲ್ಲಿಯೇ ಹೇಳಿದೆ.

ಮಂತ್ರವು ಅತ್ಯಂತ ಗೋಪ್ಯವಾದುದು. ಶೀಲಸ್ವಭಾವವನ್ನರಿಯದೆ ಯಾರಿಗೂ ಉಪದೇಶಿಸತಕ್ಕುದಲ್ಲ. ಸದ್ಗುರುವು ಶಿಷ್ಯನನ್ನು ಪರೀಕ್ಷಿಸಿ ಮಂತ್ರವನ್ನೂ ಶೋಧಿಸಿ ಯೋಗ್ಯನಾಗಿ ಕಂಡುಬಂದಲ್ಲಿ ದೀಕ್ಷೆಯನ್ನು ಕೊಟ್ಟು ಉಚಿತ ಮಂತ್ರೋಪದೇಶಮಾಡಬೇಕು.

ಮಂತ್ರವು ರಹಸ್ಯವಾಗಿರಬೇಕಾಗಿರುವುದರಿಂದಲೇ ಈ ಗ್ರಂಥದಲ್ಲಿಯೂ ಇತರ ಮಂತ್ರಶಾಸ್ತ್ರಗ್ರಂಥಗಳಲ್ಲಿಯೂ ಸಹ ಸ್ಪಷ್ಟವಾಗಿ ಮಂತ್ರಾನುಪೂರ್ವಿಯನ್ನು ಹೇಳಿಲ್ಲ. ಮಂತ್ರದ ಒಂದೊಂದು ಅಕ್ಷರಕ್ಕೂ ಸಂಕೇತನಾಮವಿದೆ. ಅವುಗಳನ್ನೇ ಗ್ರಂಥದಲ್ಲಿ ಹೇಳುವ ವಾಡಿಕೆಯಾಗಿದೆ. ಉದಾಹರಣೆ;— ' ವಕ್ರತುಂಡಾಯ ಹುಂ ' ಎಂಬ ಷಡಕ್ಷರ ವಕ್ರತುಂಡಮಂತ್ರವನ್ನು ಹೇಳಿರುವ ಕ್ರಮವು:—

**ತೋಯಂ ವಿಧಿರ್ವಹ್ನಿಯುಕ್ತಃ ಕರ್ಣೇಂದ್ವಾಢ್ಯೋ ಹರಿಸ್ತಥಾ ।**
**ಸದೀರ್ಘೋ ದಾರುಕೋ ವಾಯುರ್ವರ್ಮಾಂತೋಽಯಂ ರಸಾರ್ಣಕಃ ॥**

(ನಾರದೀಯಪುರಾಣ ಪೂ. ಭಾ. ಅ. ೬೮. ಶ್ಲೋ. ೬೪)

ಇದರಲ್ಲಿ ತೋಯ= ವ, ವಿಧಿ= ಕ, ವಹ್ನಿ= ರ, ಹರಿ= ತ, ಕರ್ಣ= ಉ, ಇಂದು= ಂ, ಸದೀರ್ಘದಾರುಕ= ಡಾ, ವಾಯು= ಯ, ವರ್ಮ=

ಹುಂ ಎಂಬುದಾಗಿ ಸಂಕೇತಗಳು ಅಡಗಿವೆ. ಈ ಸಂಕೇತಗಳನ್ನರಿತು ' ವಕ್ರ ತುಂಡಾಯ ಹುಂ ' ಎಂಬ ಷಡಕ್ಷರಗಣಪತಿಮಂತ್ರವು ಇಲ್ಲಿ ಹೇಳಲ್ಪಟ್ಟಿದೆ ಯೆಂದು ತಿಳಿಯಬೇಕು. ಹೀಗೆಯೇ ಎಲ್ಲಾ ಮಂತ್ರಗಳೂ ಸಂಗ್ರಹಿಸಲ್ಪಟ್ಟಿವೆ.

ಈ ಪುರಾಣದ ಪೂರ್ವಭಾಗದಲ್ಲಿ ಅರವತ್ತು ಮೂರನೆಯ ಅಧ್ಯಾಯ ದಿಂದ ತೊಂಬತ್ತೊಂದನೆಯ ಅಧ್ಯಾಯವು ಪೂರ್ತಿಯಾಗಿ ಸನತ್ಕುಮಾರ ಮುನಿಯು ನಾರದರಿಗೆ ಮಾಡಿದ ಉಪದೇಶವು. ಇದನ್ನು ಮೂರನೆಯ ಪಾದವೆಂದು ವಿಂಗಡಿಸಿದೆ. ಈ ಇಪ್ಪತ್ತೊಂಬತ್ತು ಅಧ್ಯಾಯಗಳಲ್ಲಿಯೂ ಮಂತ್ರ, ಕವಚ, ದೀಪವಿಧಾನ ಮುಂತಾದ ಮಂತ್ರಶಾಸ್ತ್ರದ ವಿಷಯಗಳೇ ನಿರೂಪಿತವಾಗಿವೆ. ಇದರಲ್ಲಿ ಸುಮಾರು ನಾಲ್ಕುಸಾವಿರದ ಐನೂರು ಶ್ಲೋಕಗಳು ಅಡಗಿವೆಯಾದ ಕಾರಣ ಈ ಭಾಗವನ್ನು ಎರಡು ಸಂಪುಟಗಳಾಗಿ ವಿಭಾಗಿಸಿದೆ. ಇವೆರಡಕ್ಕೂ ವಿಷಯಾನುಸಾರವಾಗಿ ಮಂತ್ರಶಾಸ್ತ್ರವೆಂದು ಅಂಕಿತಮಾಡಿದೆ. ಈ ಸಂಪುಟದಲ್ಲಿ ಅರವತ್ತೆರಡನೆಯ ಅಧ್ಯಾಯದಿಂದ ಎಪ್ಪತ್ತೊಂಬತ್ತನೆಯ ಅಧ್ಯಾಯಪೂರ್ತಿ ಯಾಗಿ ಸಂಗ್ರಹಿಸಿ ಇದನ್ನು ಮಂತ್ರಶಾಸ್ತ್ರದ ಪ್ರಥಮಭಾಗವಾಗಿ ಪರಿಗಣಿಸಿದೆ.

ಇಹಪರಗಳಲ್ಲಿ ಶ್ರೇಯಸ್ಸನ್ನು ಕೊಡುವ ಅಮೋಘವಿಷಯಗಳನ್ನೊಳ ಗೊಂಡಿರುವ ಈ ಪುರಾಣವನ್ನು ದೇಶಭಾಷೆಯಲ್ಲಿ ಪರಿವರ್ತಿಸಲು ಅವಕಾಶ ವನ್ನು ಕಲ್ಪಿಸಿ ಕನ್ನಡನಾಡಿನ ಜನತೆಗೆ ಜ್ಞಾನಜ್ಯೋತಿಯನ್ನು ಬೆಳಗಿಸಿ ಉದ್ಧರಿಸುತ್ತಿರುವ ನಮ್ಮನ್ನಾಳುವ **ಶ್ರೀಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.,** ಮಹಾಪ್ರಭುಗಳ ಸನ್ನಿಧಾನ ದಲ್ಲಿ ಕೃತಜ್ಞತೆಯನ್ನರ್ಪಿಸಿ ಮಹಾಸ್ವಾಮಿಯವರಿಗೆ ಮಂತ್ರಮೂರ್ತಿಯಾದ ಭಗವಂತನು ಆಯುರಾರೋಗ್ಯಸತ್ಸಂತಾನಾದಿ ಸಂಪತ್ತುಗಳನ್ನು ಅನುಗ್ರಹಿಸ ಲೆಂದು ಪ್ರಾರ್ಥಿಸುತ್ತೇನೆ.

| | |
|---|---|
| ಮೈಸೂರು<br>**ಸರ್ವಜಿತ್ ಸಂ॥** ಶ್ರಾವಣ ಶುಕ್ಲ ದ್ವಿತೀಯಾ<br>18-8-1947 | ಅನುವಾದಕ<br>ಮಹಾವಿದ್ವಾನ್, ವಿದ್ವನ್ಮಣಿ,<br>**ಡಿ. ವಾಸುದೇವಾಚಾರ್ಯ,** |

# ವಿಷಯಾನುಕ್ರಮಣಿಕೆ

**ಎಪ್ಪತ್ತುನಾಲ್ಕನೆಯ ಅಧ್ಯಾಯವು.**

**ಹನುಮನ್ಮಂತ್ರ ಪ್ರಕರಣ**

ಪುಟಸಂಖ್ಯೆ

ರಾಮನು ತನ್ನ ಅವತಾರವೊದಲುಗೊಂಡು ರಾವಣನನ್ನು ಸಂಹರಿಸಿ ಅಯೋಧ್ಯೆಗೆ ಹಿಂದಿರುಗಿ ಪಟ್ಟಾಭಿಷಿಕ್ತನಾದ ಕಥೆಯವರೆಗಿನ ಸಂಗತಿಯನ್ನು ಸಂಗ್ರಹವಾಗಿ ತಿಳಿಸಿದುದು.

ರಾಮನು ತಂದೆಯ ಶ್ರಾದ್ಧಕ್ಕೆ ಸುಗ್ರೀವ ವಿಭೀಷಣರನ್ನು ಅಯೋಧ್ಯೆಗೆ ಬರಲು ಹೇಳಿಕಳುಹಿಸಿದುದು.

ಆವೇಳೆಗೆ ಅಕಾಸ್ಮಾತ್ತಾಗಿ ಬ್ರಾಹ್ಮಣವೇಷದಿಂದ ಬಂದ ಶಿವನಿಂದ ಸಹಿತನಾಗಿ ರಾಮನು ವಿಭೀಷಣನು ಬಂಧಿತನಾಗಿದ್ದ ದ್ರವಿಡ ದೇಶಕ್ಕೆ ಹೋಗಿ ಅವನ ಬಂಧನವನ್ನು ಬಿಡಿಸಿದುದು.

ಗೌತಮಮುನಿಯ ಯಜ್ಞಕ್ಕಾಗಿ ಆಹೂತರಾದ ಬ್ರಾಹ್ಮಣ, ದೇವತೆ, ದೈತ್ಯ ನರೇಶ್ವರರು ಬಂದು ಅವನಿಂದ ಸತ್ಕೃತರಾಗಿ ತ್ರ್ಯಂಬಕಾದ್ರಿಯಲ್ಲಿ ಶಿವಪೂಜೆಯನ್ನು ಮಾಡಿ ಅಲ್ಲಿಯೇ ನೆಲಸಿದುದು.

ಗೌತಮನ ಶಿವಪೂಜೆಯವಿಧಾನವು.

ಪೂಜಾಸಮಯಕ್ಕೆ ಅವನ ಶಿಷ್ಯನಾದ ಶಂಕರಾತ್ಮನೆಂಬ ಅವಧೂತನು ಬಂದುದು ವೃಷಪರ್ವನಿಂದ ಶಂಕರಾತ್ಮನು ಹತನಾದುದು.

ಅವನ ಮರಣದಿಂದ ಗೌತಮಾದಿಗಳೆಲ್ಲರೂ ಸತ್ತುಹೋದುದು.

ವೀರಭದ್ರನಿಂದ ಈ ಸಂಗತಿಯನ್ನು ಕೇಳಿದ ಶಿವನು ವಿಷ್ಣ್ವಾದಿಗಳೊಡನೆ ಗೌತಮಾಶ್ರಮಕ್ಕೆ ಬಂದು ಎಲ್ಲರನ್ನೂ ಬದುಕಿಸಿದುದು.

ತ್ರಿಮೂರ್ತಿಗಳಿಗೆ ಗೌತಮನ ಮನೆಯಲ್ಲಿ ನಡೆದ ಆತಿಥ್ಯ.

ಹರಿಹರರ ಜಲಕ್ರೀಡೆ ಮುಂತಾದುವುಗಳ ವಿವರಣೆ.

ಆಗ ಹನುಮಂತನು ಗಾನಮಾಡಿದುದು.

ಊಟವಾದನಂತರ ಪಾರ್ವತಿಯೊಡನೆ ವಿಲಾಸದಿಂದಿದ್ದ ಶಂಕರನ ಅಪ್ಪಣೆಯನ್ನು ಪಡೆದು ಹನುಮಂತನು ಶಿವಪೂಜೆಮಾಡಲು

ಪುಟಸಂಖ್ಯೆ

ಕರದಲ್ಲಿ ಲಿಂಗವನ್ನು ತೆಗೆದುಕೊಂಡಾಗ ಪೀಠವು ಅವನಿಗೆ ಕಾಣದೇ ಹೋದುದು.

ಆಗ ವೀರಭದ್ರನು ಬಂದು ಪ್ರಾರ್ಥಿಸಿದರೂ ಶಿವನು ಬರದಿರಲು ಕುಪಿತನಾಗಿ ಪಾತಾಳಾದಿ ಲೋಕಗಳನ್ನು ಸುಟ್ಟುದು.

ಭೀತರಾದ ಮುನಿಗಳು ಗೌತಮರಾಶ್ರಮಕ್ಕೆ ಬಂದು ಅಲ್ಲಿ ಶಿವನನ್ನುಕಾಣದೆ ಅವನನ್ನೇ ಸ್ತುತಿಸಲಾರಂಭಿಸಿದುದು.

ಶಿವನು ಪ್ರಸನ್ನನಾಗಿ ಕಾಣಿಸಿಕೊಂಡು ಲೋಕಗಳನ್ನು ಮೊದಲಿದ್ದಂತೆ ಮಾಡಿ ಹನುಮಂತನಿಗೆ ವರವನ್ನು ಕೊಟ್ಟುದುದು. 442–520.



॥ ಶ್ರೀಃ ॥

# ನಾರದೀಯಮಹಾಪುರಾಣಂ

## ತೃತೀಯಃ ಪಾದಃ



### ಶೌನಕ ಉವಾಚ

ಸೂತ ಸಾಧೋ ಚಿರಂ ಜೀವ ಸರ್ವಶಾಸ್ತ್ರವಿಶಾರದ ।
ಯತ್ತ್ವಯಾ ಪಾಯಿತಾ ವಿದ್ವನ್ವಯಂ ಕೃಷ್ಣಕಥಾಮೃತಮ್ ॥ ೧ ॥

ಶ್ರುತ್ವಾ ತು ಮೋಕ್ಷಧರ್ಮಾನ್ವೈ ನಾರದೋ ಭಗವತ್ಪ್ರಿಯಃ ।
ಸನಂದನಮುಖೋದ್ಗೀತಾನ್ಕಿಂ ಪಪ್ರಚ್ಛ ತತಃ ಪರಮ್ ॥ ೨ ॥

ಮಾನಸಾ ಬ್ರಹ್ಮಣಃ ಪುತ್ರಾಃ ಸನಕಾದ್ಯಾ ಮುನೀಶ್ವರಾಃ ।
ಚರಂತಿ ಲೋಕಾನ್ಸಂಸಿದ್ಧಾ ಲೋಕೋದ್ಧಾರಣತತ್ಪರಾಃ ॥ ೩ ॥

---

### ಅರವತ್ತುಮೂರನೆಯ ಅಧ್ಯಾಯವು

೧. ಶೌನಕನು ಹೇಳಿದನು:—ಸಾಧುವು, ಸಕಲ ಕಲಾಭಿಜ್ಞನು, ಜ್ಞಾನಿಯೂ ಆಗಿರುವ ಸೂತನೇ! ನಿನ್ನ ಅನುಗ್ರಹದಿಂದ ಕೃಷ್ಣಕಥೆಯೆಂಬ ಅಮೃತವನ್ನು ಪಾನಮಾಡಿದೆವು. ಆದಕಾರಣ ನೀನು ಬಹುಕಾಲ ಜೀವಿಸಿರು.

೨. ಭಗವದನುಗ್ರಹಕ್ಕೆ ಪಾತ್ರನಾದ ನಾರದನು ಸನಂದನನು ಹೇಳಿದ ಮೋಕ್ಷಧರ್ಮಗಳನ್ನು ಕೇಳಿ ಆಮೇಲೆ ಏನನ್ನು ಪ್ರಶ್ನೆಮಾಡಿದನು?

೩. ಬ್ರಹ್ಮನ ಮಾನಸಪುತ್ರರಾದ, ಉತ್ತಮ ಸಿದ್ಧಿಯನ್ನು ಹೊಂದಿದ, ಸನಕ ಮುಂತಾದ ಋಷಿಗಳು ಲೋಕೋದ್ಧಾರಕಾರ್ಯದಲ್ಲಿ ನಿರತರಾಗಿ ಲೋಕಗಳಲ್ಲಿ ಸಂಚರಿಸುತ್ತಿರುವರು.

ನಾರದೋಽಪಿ ಮಹಾಭಾಗಃ ನಿತ್ಯಂ ಕೃಷ್ಣಪರಾಯಣಃ ।
ತೇಷಾಂ ಸಮಾಗಮೇ ಭದ್ರಾ ಕಾ ಕಥಾ ಲೋಕಪಾವನೀ ॥ ೪ ॥

ಸೂತ ಉವಾಚ

ಸಾಧು ಪೃಷ್ಟಂ ಮಹಾಭಾಗ ತ್ವಯಾ ಲೋಕೋಪಕಾರಿಣಾ ।
ಕಥಯಿಷ್ಯಾಮಿ ತತ್ಸರ್ವಂ ಯತ್ಪೃಷ್ಟಂ ನಾರದರ್ಷಿಣಾ ॥ ೫ ॥

ಶ್ರುತ್ವಾ ಸನಂದನಪ್ರೋಕ್ತಾನ್ಮೋಕ್ಷಧರ್ಮಾನ್ಸನಾತನಾನ್ ।
ನಾರದೋ ಭಾರ್ಗವಶ್ರೇಷ್ಠ ಪುನಃ ಪಪ್ರಚ್ಛ ತಾನ್ಮುನೀನ್ ॥ ೬ ॥

ಸರ್ವದೇವೇಶ್ವರೋ ವಿಷ್ಣುರ್ವೇದೇ ತಂತ್ರೇ ಚ ಕೀರ್ತಿತಃ ।
ಸಮಾರಾಧ್ಯಃ ಸ ಏವಾತ್ರ ಸರ್ವೈಃ ಸರ್ವಾರ್ಥ ಕಾಂಕ್ಷಿಭಿಃ ॥ ೭ ॥

---

೪. ಧನ್ಯನಾದ ನಾರದನೂ ಸಹ ಯಾವಾಗಲೂ ಕೃಷ್ಣನನ್ನು ಧ್ಯಾನಿಸುತ್ತಿರುವನು. ಅವರೆಲ್ಲರೂ ಒಂದೆಡೆಯಲ್ಲಿ ಸೇರಿದಾಗ ಲೋಕವನ್ನು ಪವಿತ್ರ ಮಾಡುವ ಯಾವ ಶುಭಕಥೆಯು ಪ್ರಸ್ತುತವಾಯಿತು ?

೫. ಸೂತನು ಹೇಳಿದನು :—ಧನ್ಯನಾದ ಶೌನಕನೇ ! ಲೋಕೋಪಕಾರಿಯಾದ ನಿನ್ನಿಂದ ಒಳ್ಳೆಯ ಪ್ರಶ್ನೆಯು ಮಾಡಲ್ಪಟ್ಟಿತು. ನಾರದ ಮುನಿಯು ಕೇಳಿದುದೆಲ್ಲವನ್ನೂ ಹೇಳುವೆನು.

೬. ಭಾರ್ಗವವರ್ಯನಾದ ಶೌನಕನೇ! ಸನಂದನನು ಉಪದೇಶಿಸಿದ, ಸನಾತನವಾದ ಮೋಕ್ಷಧರ್ಮಗಳನ್ನು ನಾರದನು ಶ್ರವಣಮಾಡಿ, ಆ ಸನಕಾದಿ ಮುನಿಗಳನ್ನು ಪುನಃ ಈರೀತಿ ಪ್ರಶ್ನೆಮಾಡಿದನು.

೭. ನಾರದನು ಹೇಳಿದನು :—ಸಕಲ ದೇವತೆಗಳಿಗೊಡೆಯನಾದ ವಿಷ್ಣುವು ವೇದ ಮತ್ತು ಪಂಚರಾತ್ರಾದಿ ತಂತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವನು. ಪ್ರಯೋಜನಾಕಾಂಕ್ಷಿಗಳಾದ ಸರ್ವರೂ ಆ ವಿಷ್ಣುವನ್ನೇ ಆರಾಧಿಸಬೇಕು.

ಕೈರ್ಮಂತ್ರೈರ್ಭಗವಾನ್ವಿಷ್ಣುಃ ಸಮಾರಾಧ್ಯೋ ಮುನೀಶ್ವರಾಃ ।
ಕೇ ದೇವಾಃ ಪೂಜನೀಯಾಶ್ಚ ವಿಷ್ಣುಪಾದಪರಾಯಣೈಃ ॥ ೮ ॥

ತಂತ್ರಂ ಭಾಗವತಂ ವಿಪ್ರಾ ಗುರುಶಿಷ್ಯಪ್ರಯೋಜಕಮ್ ।
ದೀಕ್ಷಣಂ ಪ್ರಾತರಾದ್ಯಂ ಚ ಕೃತ್ಯಂ ಸ್ಯಾದ್ಯತ್ತದುಚ್ಯತಾಮ್ ॥ ೯ ॥

ಯೈರ್ಮಾಸೈಃ ಕರ್ಮಭಿರ್ಮೈರ್ವಾ ಜಪ್ಯೈರ್ಹೋಮಾದಿಭಿಸ್ತಥಾ ।
ಪ್ರೀಯೇತ ಪರಮಾತ್ಮಾ ವೈ ತದ್ಬ್ರೂತ ಮಮ ಮಾನದಾಃ ॥ ೧೦ ॥

ಏತಚ್ಛ್ರುತ್ವಾ ವಚಸ್ತಸ್ಯ ನಾರದಸ್ಯ ಮಹಾತ್ಮನಃ ।
ಸನತ್ಕುಮಾರೋ ಭಗವಾನುವಾಚಾರ್ಕಸಮದ್ಯುತಿಃ ॥ ೧೧ ॥

---

೮. ಮುನೀಶ್ವರರೇ! ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವನ್ನು ಯಾವ ಮಂತ್ರಗಳಿಂದ ಆರಾಧಿಸಬೇಕು? ವಿಷ್ಣುಪಾದಭಕ್ತರು ಯಾವ ದೇವತೆಗಳನ್ನು ಪೂಜಿಸಬೇಕು?

೯. ಬ್ರಾಹ್ಮಣರೇ ! ತಂತ್ರ, ಭಾಗವತ, ಗುರುಶಿಷ್ಯರಿಗೆ ಪ್ರಯೋಜನಕಾರಿಯಾದ ದೀಕ್ಷೆ ಮತ್ತು ಬೆಳಗಿನಿಂದ ಮಾಡಬೇಕಾದ ದಿನಚರ್ಯೆ ಇವುಗಳಾವುವು?

೧೦. ಮಾನದಾತೃಗಳಾದ ಸನಕಾದಿಗಳೇ! ಯಾವ ಯಾವ ಮಾಸಗಳಲ್ಲಿ ಯಾವಕರ್ಮ, ಮಂತ್ರಜಪ, ಹೋಮ ಮುಂತಾದುವುಗಳಿಂದ ಪರಮಾತ್ಮನು ಸಂತುಷ್ಟನಾಗುವನು ? ಇವೆಲ್ಲವನ್ನೂ ನನಗೆ ಹೇಳಿರಿ.

೧೧. ಸೂತನು ಹೇಳಿದನು:—ಮಹಾತ್ಮನಾದ ಆ ನಾರದನ ಮಾತನ್ನು ಕೇಳಿ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ, ಪೂಜ್ಯ ಸನತ್ಕುಮಾರನು ಹೇಳಿದನು.

## ಸನತ್ಕುಮಾರ ಉವಾಚ

**ಶೃಣು ನಾರದ ವಕ್ಷ್ಯಾಮಿ ತಂತ್ರಂ ಭಾಗವತಂ ತವ ।**
**ಯದ್ಜ್ಞಾತ್ವಾಮಲಯಾ ಭಕ್ತ್ಯಾ ಸಾಧಯೇದ್ವಿಷ್ಣುಮವ್ಯಯಮ್ ॥ ೧೨ ॥**

**ತ್ರಿಪದಾರ್ಥಂ ಚತುಷ್ಪಾದಂ ಮಹಾತಂತ್ರಂ ಪ್ರಚಕ್ಷತೇ ।**
**ಭೋಗಮೋಕ್ಷಕ್ರಿಯಾಚಾರ್ಯಾಹ್ವಯಾಃ ಪಾದಾಃ ಪ್ರಕೀರ್ತಿತಾಃ ॥ ೧೩ ॥**

**ಪದಾರ್ಥಾಸ್ತು ಪಶುಪತಿಪಶುಪಾಶಾಸ್ತ್ರಯ ಏವ ಹಿ ।**
**ಪತಿಸ್ತತ್ರ ಶಿವೋ ಹ್ಯೇಕೋ ಜೀವಸ್ತು ಪಶವಃ ಸ್ಮೃತಾಃ ॥ ೧೪ ॥**

**ಯಾವನ್ಮೋಹಾದಿಸಂಯೋಗಾಃ ಸ್ವರೂಪಾಬೋಧಲಕ್ಷಣಾಃ ।**
**ತಾವತ್ಪಶುತ್ವಮೇತೇಷಾಂ ದ್ವೈತವತ್ಸಶ್ಯ ನಾರದ ॥ ೧೫ ॥**

---

೧೨. ಸನತ್ಕುಮಾರನು ಹೇಳಿದನು:—ನಾರದನೇ! ಯಾವುದನ್ನು ತಿಳಿದರೆ ನಿರ್ಮಲಭಕ್ತಿಯುಂಟಾಗಿ ಅದರಿಂದ ನಾಶರಹಿತನಾದ ವಿಷ್ಣುವನ್ನು ಪ್ರಸನ್ನೀಕರಿಸಿಕೊಳ್ಳಬಹುದೋ, ಅಂತಹ ತಂತ್ರ ಭಾಗವತವನ್ನು ನಿನಗೆ ಹೇಳುವೆನು ಕೇಳು.

೧೩. ಮೂರು ಪದಾರ್ಥಗಳು, ನಾಲ್ಕು ಪಾದಗಳು ಉಳ್ಳುದನ್ನು ಮಹಾತಂತ್ರವೆಂದು ಹೇಳುವರು. ಪಾದಗಳು, ಭೋಗ, ಮೋಕ್ಷ, ಕ್ರಿಯಾ, ಚರ್ಯಾ ಎಂಬ ಹೆಸರುಳ್ಳುವುಗಳೆಂದು ಉಕ್ತವಾಗಿವೆ.

೧೪. ಪಶುಪತಿ, ಪಶು, ಪಾಶ ಎಂಬುದಾಗಿ ಮೂರೇ ಪದಾರ್ಥಗಳು. ಶಿವನೊಬ್ಬನು ಪತಿಯು, ಜೀವರು ಪಶುಗಳು ಎಂದು ಸ್ಮೃತವಾಗಿವೆ.

೧೫. ನಾರದನೇ! ಸ್ವರೂಪಜ್ಞಾನವುಂಟಾಗದಂತಹ ಮೋಹಾದಿಗಳಿಂದ ಯುಕ್ತರಾಗಿರುವವರೆಗೂ, ಜೀವರು ಅನ್ಯಥಾ ಜ್ಞಾನಿಗಳಾಗಿ ಪಶುಗಳಂತಿರುವರೆಂದು ತಿಳಿ.

**ಪಾಶಾಃ ಪಂಚವಿಧಾಸ್ತ್ವೇಷಾಂ ಪ್ರತ್ಯೇಕಂ ತೇಷು ಲಕ್ಷಣಮ್ ।**
**ಪಶವಸ್ತ್ರಿವಿಧಾಶ್ಚಾಪಿ ವಿಜ್ಞಾತಾಃ ಕಲಸಂಜ್ಞಕಾಃ ॥ ೧೬ ॥**

**ತಲಪಾಕಲಸಂಜ್ಞಶ್ಚ ಸಕಲಶ್ಚೇತಿ ನಾಮತಃ ।**
**ತತ್ರಾದ್ಯೋ ಮಲಸಂಯುಕ್ತೋ ಮಲಕರ್ಮಯುತಃ ಪರಃ ॥ ೧೭ ॥**

**ಮಲಮಾಯಾಕರ್ಮಯುತಸ್ತೃತೀಯಃ ಪರಿಕೀರ್ತಿತಃ ।**
**ಆದ್ಯಸ್ತು ದ್ವಿವಿಧಸ್ತತ್ರ ಸಮಾಸಕಲುಷಸ್ತಥಾ ॥ ೧೮ ॥**

**ಅಸಮಾಸಮಲಶ್ಚೇತಿ ದ್ವಿತೀಯೋಽಪಿ ಪುನಸ್ತಥಾ ।**
**ಪಕ್ವಾಪಕ್ವಮಲೇನೈವ ದ್ವಿವಿಧಃ ಪರಿಕೀರ್ತಿತಃ ॥ ೧೯ ॥**

**ಶುದ್ಧೇಽಧ್ವನಿಗತಾವೇತೌ ವಿಜ್ಞಾನಪ್ರಳಯೌ ಕಲೌ ।**
**ಕಲಾದಿ ತತ್ವನಿಯತಃ ಸಕಲಃ ಪರ್ಯಟತ್ಯಯಮ್ ॥ ೨೦ ॥**

---

೧೬-೧೭. ಈ ಪಶುಗಳ ಪಾಶವು ಐದು ವಿಧವಾಗಿವೆ. ಪ್ರತ್ಯೇಕವಾಗಿ ಅವುಗಳ ಲಕ್ಷಣವನ್ನು ತಿಳಿ. ತಲ, ಪಾಕಲ, ಸಕಲ ಎಂಬುದಾಗಿ ಸಂಜ್ಞೆಯನ್ನು ಹೊಂದಿರುವ ಮೂರು ವಿಧವಾದ ಪಶುಗಳೂ ಸಹ ಕಲನಾಮಕರಾಗಿರುವರು. ಅವುಗಳಲ್ಲಿ ಮೊದಲನೆಯದು ಮಲಸಂಯುಕ್ತವಾಗಿಗುವುದು. ಎರಡನೆಯದು ಮಲ, ಕರ್ಮಗಳಿಂದ ಕೂಡಿರುವುದು.

೧೮-೧೯. ಮೂರನೆಯದು ಮಲ, ಮಾಯೆ, ಕರ್ಮ ಮೂರರಿಂದ ಕೂಡಿರುವುದೆಂದು ಉಕ್ತವಾಗಿದೆ. ಅದರಲ್ಲಿ ಮೊದಲನೆಯದು ಸಮಾಸಕಲುಷ ಮತ್ತು ಅಸಮಾಸಕಲುಷ ಎಂಬುದಾಗಿ ಎರಡುವಿಧವೆಂದು ಉಕ್ತವಾಗಿದೆ. ಎರಡನೆಯದೂ ಕೂಡ ಪಕ್ವಮಲ, ಅಪಕ್ವಮಲವೆಂಬುದಾಗಿ ಎರಡು ವಿಧವು.

೨೦-೨೨. ಪರಿಶುದ್ಧ ಮಾರ್ಗದಲ್ಲಿ ಹೋದ ಇವೆರಡೂ ಕ್ರಮವಾಗಿ ವಿಜ್ಞಾನ, ಪ್ರಲಯಗಳಿಗೆ ನಿಮಿತ್ತಗಳಾಗುವುವು. ಕಲ ಮುಂತಾದ ತತ್ವಗಳಲ್ಲಿ ನಿಯತವಾದ ಈ ಸಕಲವೆಂಬ ಪಶುವು ಆಯಾಲೋಕಗಳಲ್ಲಿ ತನ್ನ ಕರ್ಮಾನುಗುಣವಾದ ಶರೀರಗಳನ್ನು ಪಡೆದು ತಿರುಗುತ್ತಿರುವನು ಪಾಶವು ಮಲ

ಕರ್ಮಾನುಗಶರೀರೇಷು ತತ್ತದ್ಭುವನಗೇಷು ಚ ।
ಪಾಶಾಃ ಪಂಚ ತಥಾ ತತ್ರ ಪ್ರಥಮೌ ಮಲಕರ್ಮಜೌ ॥ ೨೧ ॥

ಮಾಯೇಯಶ್ಚ ತಿರೋಧಾನಶಕ್ತಿಜೋ ಬಿಂದುಜಃ ಪರಃ ।
ಏಕೋಽಪ್ಯನೇಕಶಕ್ತಿರ್ದೃಕ್ಕ್ರಿಯಾಚ್ಛಾದನಕೋ ಮಲಃ ॥ ೨೨ ||

ತುಷಕಂಚುಕವದ್ದೇಹನಿಮಿತ್ತಂ ಚಾತ್ಮನಾಮಿಹ ।
ಧರ್ಮಾಧರ್ಮಾತ್ಮಕಂ ಕರ್ಮ ವಿಚಿತ್ರಫಲಭೋಗದಮ್ ॥ ೨೩ ||

ಪ್ರವಾಹನಿತ್ಯಂ ತದ್ಬೀಜಾಂಕುರನ್ಯಾಯೇನ ಸಂಸ್ಥಿತಮ್ ।
ಇತ್ಯೇತೌ ಪ್ರಥಮೌ ಚಾಥ ಮಾಯೇಯಾದ್ಯಾನ್ ಶೃಣು ದ್ವಿಜ || ೨೪ ॥

ಸಚ್ಚಿದಾನಂದವಿಭವಃ ಪರಮಾತ್ಮಾ ಸನಾತನಃ ।
ಪತಿರ್ಜಯತಿ ಸರ್ವೇಷಾಮೇಕೋ ಬೀಜಂ ವಿಭುಃ ಪರಮ್ ॥ ೨೫ ॥

---

ಜನ್ಯ, ಕರ್ಮಜನ್ಯ, ಮಾಯೇಯ, ತಿರೋಧಾನಶಕ್ತಿಜನ್ಯ. ಬಿಂದುಜನ್ಯ ಎಂಬುದಾಗಿ ಐದು ವಿಧವಾಗಿದೆ. ಮಲವು ಒಂದೇ ಆಗಿದ್ದಾಗ್ಯೂ ಜ್ಞಾನಕ್ರಿಯೆಗಳನ್ನು ಆಚ್ಛಾದನೆಮಾಡುವ ಅನೇಕ ಶಕ್ತಿಗಳುಳ್ಳದು.

೨೩-೨೪. ಆತ್ಮನಿಗೆ ಇಲ್ಲಿ ಹೊಟ್ಟೆಂಬ ಕವಚದಂತೆ ಶರೀರನಿಮಿತ್ತವಾದ ಧರ್ಮಾಧರ್ಮರೂಪವಾದ ಕರ್ಮವು ವಿಚಿತ್ರವಾದ ಫಲಭೋಗಗಳನ್ನು ಕೊಡುತ್ತದೆ. ಅದು ಪ್ರವಾಹರೂಪದಿಂದ ನಿತ್ಯವಾಗಿ ಬೀಜ ಅಂಕುರಗಳ ಪರಂಪರೆಯಂತೆ ಸುತ್ತುತ್ತಿರುವುದು. ದ್ವಿಜನೇ ! ಈರೀತಿಯಾಗಿ ಮಲಕರ್ಮಗಳಿಂದುತ್ಪನ್ನವಾದುವುಗಳೇ ಮೊದಲನೆಯ ಎರಡುಪಾಶಗಳೆಂದು ತಿಳಿ. ಮುಂದೆ ಮಾಯೇಯಾದಿ ಪಾಶಗಳನ್ನು ವಿವರಿಸುವೆನು ಕೇಳು.

೨೫. ಸಚ್ಚಿದಾನಂದರೂಪವಾದ ಐಶ್ವರ್ಯವಂತನು ಸನಾತನನೂ ಆದ ಪರಮಾತ್ಮನೇ ಪತಿಯು. ಸಮರ್ಥನಾದ ಅವನೊಬ್ಬನೇ ಎಲ್ಲರಿಗೂ ಉತ್ಕೃಷ್ಟ ಬೀಜವಾಗಿದ್ದು ಜಯಿಸುವನು.

ನ ನಶ್ಯತಿ ನ ಚೋದೇತಿ ನಿವೃತ್ತಿಂ ಚ ಪ್ರಯಚ್ಛತಿ ।
ವರ್ತರ್ತಿದೃಕ್ಕ್ರಿಯಾರೂಪಂ ತತ್ತೇಜಃ ಶಾಂಭವಂ ಪರಮ್ ॥ ೨೬ ॥

ಶಕ್ತ್ಯಾ ಯಯಾ ಹತಾ ಭಕ್ತೋ ಮುಕ್ತಃ ಪಶುಗಣಸ್ಯ ಹಿ ।
ತಚ್ಛಕ್ತಿಮಾದ್ಯಾಮೇಕಾಂತಂ ಚಿದ್ರೂಪಾಖ್ಯಾಂ ವದಂತಿ ಹಿ ॥ ೨೭ ॥

ತಯಾ ಚೋಜ್ಜೃಂಭಿತೋ ಬಿಂದುರ್ದೃಕ್ಕ್ರಿಯಾತ್ಮಾ ಶಿವಾಭಿಧಃ ।
ಅಶೇಷತತ್ವಜಾತಸ್ಯ ಕಾರಣಂ ವಿಭುರವ್ಯಯಮ್ ॥ ೨೮ ॥

ಅಸ್ಮಿನ್ನಿಲೀನಾ ನಿಖಿಲಾ ಇಚ್ಛಾ ಯಾಃ ಶಕ್ತಯಃ ಸ್ವಕಮ್ ।
ಕೃತ್ಯಂ ಕುರ್ವಂತಿ ತೇನೇದಂ ಸರ್ವಾನುಗ್ರಾಹಕಂ ಮುನೇ ॥ ೨೯ ॥

---

೨೬. ಅವನು ನಾಶವಾಗುವುದಿಲ್ಲ. ಹುಟ್ಟುವುದಿಲ್ಲ. ನಿವೃತ್ತಿಯನ್ನು ಕೊಡುವನು. ಜ್ಞಾನಕ್ರಿಯಾರೂಪನಾಗಿರುವನು. ಅಂತಹ ಉತ್ಕೃಷ್ಟವಾದ ತೇಜಸ್ಸು ಈಶ್ವರಸಂಬಂಧಿಯಾದುದು.

೨೭. ಯಾವ ಶಕ್ತಿಯಿಂದ ಹರಿಯಲ್ಲಿ ಭಕ್ತಿಯನ್ನು ಮಾಡಿ ಮುಕ್ತನಾಗುವನೋ, ಅಂತಹ ಏಕಾಂತವಾದ ಆದ್ಯ ಶಕ್ತಿಯನ್ನು ಚಿದ್ರೂಪವೆಂಬುದಾಗಿ ಹೇಳುವರು.

೨೮. ಆ ಶಕ್ತಿಯಿಂದ ಪೂರ್ಣವು, ಜ್ಞಾನಕ್ರಿಯಾರೂಪವು, ಶಿವನಾಮಕವೂ ಆಗಿರುವುದೇ ಬಿಂದುವು. ಸಮರ್ಥವಾದ ಆ ಬಿಂದುವೇ ಸಮಸ್ತ ತತ್ವ ಸಮೂಹಕ್ಕೂ ನಾಶರಹಿತವಾದ ಕಾರಣವು.

೨೯. ಇದರಲ್ಲಿ ಅಡಗಿಕೊಂಡಿರುವ ಸಮಸ್ತೇಚ್ಛಾಶಕ್ತಿಗಳೂ ತಮ್ಮ ಕರ್ತವ್ಯವನ್ನು ಮಾಡುವುವು. ನಾರದಮುನಿಯೇ! ಈ ಕಾರಣವೇ ಶಕ್ತಿಯ ಮೂಲಕವಾಗಿ ಎಲ್ಲಕ್ಕೂ ಅನುಗ್ರಹಮಾಡುವುದು.

ಚಿಜ್ಜಡಾನುಗ್ರಹಾರ್ಥಾಯ ಯಸ್ಯ ವಿಶ್ವಂ ಸಿಸೃಕ್ಷತಃ ।
ಆದ್ಯೋನ್ಮೇಷೋಽಸ್ಯ ನಾದಾತ್ಮಾ ಶಾಂತ್ಯಾದಿ ಭುವನಾತ್ಮಕಃ ॥ ೩೦ ॥

ತಚ್ಛಕ್ತಿತತ್ವಂ ವಿಪ್ರೇಂದ್ರ ಪ್ರೋಕ್ತಂ ಸಾವಯವಂ ಪರಂ ।
ತತೋಜ್ಞಾನಕ್ರಿಯಾಶಕ್ತ್ಯೋಸ್ತಥೋತ್ಕರ್ಷಾಪಕರ್ಷಯೋಃ ॥ ೩೧ ॥

ಪ್ರಸರಸ್ಯಾಪ್ಯ ಭಾವೇನ ತತ್ವಂ ಚೈತತ್ಸದಾಶಿವಮ್ ।
ದೃಕ್ ಶಕ್ತಿರ್ಯತ್ರ ನ್ಯಗ್ಭೂತಾ ಕ್ರಿಯಾಶಕ್ತಿರ್ವಿಶಿಷ್ಯತೇ ॥ ೩೨ ॥

ಈಶ್ವರಾಖ್ಯಂ ತು ತತ್ತತ್ವಂ ಪ್ರೋಕ್ತಂ ಸರ್ವಾರ್ಥಕರ್ತೃಕಮ್ ।
ಯತ್ರ ಕ್ರಿಯಾ ಹಿ ನ್ಯಗ್ಭೂತಾ ಜ್ಞಾನಾಖ್ಯೋದ್ರೇಕಮಶ್ನುತೇ ॥ ೩೩ ॥

ತತ್ತತ್ವಂ ಚೈವ ವಿದ್ಯಾಖ್ಯಂ ಜ್ಞಾನರೂಪಂ ಪ್ರಕಾಶಕಮ್ ।
ನಾದೋ ಬಿಂದುಶ್ಚ ಸಕಲಃ ಸದಾಖ್ಯಂ ತತ್ವಮಾಶ್ರಿತೌ ॥ ೩೪ ॥

---

೩೦. ಚೇತನಾಚೇತನರನ್ನು ಉದ್ಧರಿಸುವುದಕ್ಕೋಸ್ಕರ ಪ್ರಪಂಚವನ್ನು ಸೃಷ್ಟಿಸಬೇಕೆಂದು ಬಯಸಿದ ಪರತತ್ವದ ಮೊದಲನೆಯ ಪ್ರವೃತ್ತಿಯು ನಾದಾತ್ಮಕವಾಗಿ ಶಾಂತ್ಯಾದಿಗಳಿಗೆ ನೆಲೆಯಾಗಿದೆ.

೩೧-೩೨. ಅದೇ ಉತ್ಕೃಷ್ಟವಾದ, ಅವಯವವುಳ್ಳ ಶಕ್ತಿತತ್ವವೆಂದು ಹೇಳಲ್ಪಟ್ಟಿದೆ. ಅದರ ದೆಸೆಯಿಂದ, ಜ್ಞಾನಶಕ್ತಿ ಕ್ರಿಯಾಶಕ್ತಿ ಉತ್ಕರ್ಷ ಮತ್ತು ಅಪಕರ್ಷ ಇವುಗಳ ಪ್ರಸಾರವಾಗುವುದಿಲ್ಲವಾದಕಾರಣ ಇದೇ ಸದಾಶಿವ ತತ್ವವಾಗಿದೆ.

೩೨-೩೩. ಜ್ಞಾನಶಕ್ತಿಯು ತಿರಸ್ಕೃತವಾಗಿ ಕ್ರಿಯಾಶಕ್ತಿಮಾತ್ರವಿರುವ ತತ್ವವೇ ಈಶ್ವರನು. ಅವನೇ ಎಲ್ಲುದಕ್ಕೂ ಕರ್ತೃವೆಂದು ಉಕ್ತವಾಗಿದೆ.

೩೩-೩೪. ಕ್ರಿಯಾಶಕ್ತಿಯು ಕಾರ್ಯಮಾಡದೇ ಜ್ಞಾನಶಕ್ತಿಯು ಮಾತ್ರ ಉದ್ರೇಕವಾಗಿರುವ ತತ್ವವೇ ವಿದ್ಯೆಯೆಂಬುದು ; ಅದು ಜ್ಞಾನರೂಪವಾಗಿ ಪ್ರಕಾಶಕ್ಕೆ ಸಾಧನವಾಗುವುದು. ನಾದ, ಕಲಸಹಿತವಾದ ಬಿಂದು ಇವು 'ಸತ್' ಎಂಬ ತತ್ವವನ್ನು ಆಶ್ರಯಿಸಿವೆ.

ವಿದ್ಯೇಶೌ ಪುನರ್ಶೈಶಂ ತು ಮಂತ್ರಂ ವಿದ್ಯಾಭಿಧಂ ಪುನಃ ।
ಇಮಾನಿ ಚೈವ ತತ್ವಾನಿ ಶುದ್ಧಾಧ್ವೇತಿ ಪ್ರಕೀರ್ತಿತಮ್ ॥ ೩೫ ॥

ಸಾಕ್ಷಾನ್ನಿಮಿತ್ತಮಿಾಶೋತ್ರೇತ್ಯುಪಾದಾನಂ ಸಬಿಂದುರಾಟ್ ।
ಪಂಚಾನಾಂ ಕಾಲರಾಹಿತ್ಯಾತ್ಕ್ರಮೋ ನಾಸ್ತೀತಿ ನಿಶ್ಚಿತಮ್ ॥ ೩೬ ॥

ವ್ಯಾಪಾರವಶತೋ ಹ್ಯೇಷಾಂ ವಿವಿಧಾ ಖಲು ಕಲ್ಪನಾ ।
ತತ್ವಂ ವಸ್ತುತ ಏಕಂ ತು ಶಿವಾಖ್ಯಂ ಚಿತ್ರಶಕ್ತಿಕಮ್ ॥ ೩೭ ॥

ಶಕ್ತಿಂ ಯಾಂ ವೃತ್ತಿಭೇದಾತ್ತು ವಿವಿಧಾ ಖಲು ಕಲ್ಪನಾ ।
ಚಿಜ್ಜಡಾನುಗ್ರಹಾರ್ಥಾಯ ಕೃತ್ವಾ ರೂಪಾಣಿ ವೈ ಪ್ರಭುಃ ॥ ೩೮ ॥

ಅನಾದಿಮಲರುದ್ಧಾನಾಂ ಕುರುತೇಽನುಗ್ರಹಂ ಚಿತಾಂ ।
ಮುಕ್ತಿಂ ಭುಕ್ತಿಂ ಚ ವಿಶ್ವೇಷಾಂ ಸ್ವವ್ಯಾಪಾರೇ ಸಮರ್ಥತಾಂ ॥ ೩೯ ॥

---

೩೫. ವಿದ್ಯೆ, ಈಶ ಇವುಗಳಾದರೋ ವಿದ್ಯೆಯೆಂಬ ಈಶಸಂಬಂಧಿಯಾದ ಮಂತ್ರವನ್ನಾಶ್ರಯಿಸಿವೆ. ಈ ತತ್ವಗಳೇ ಶುದ್ಧಾಧ್ವ (ಶುದ್ಧಮಾರ್ಗ) ಎಂಬುದಾಗಿ ಹೇಳಲ್ಪಟ್ಟಿವೆ.

೩೬. ಇದಕ್ಕೆ ಈಶನೇ ಸಾಕ್ಷಾತ್ತಾಗಿ ನಿಮಿತ್ತಕಾರಣನು. ಉತ್ತಮವಾದ ಆ ಬಿಂದುವೇ ಉಪಾದಾನವು ಈ ಐವಕ್ಕೂ ಆರಂಭವೇ ಇಲ್ಲದಿರುವುದರಿಂದ ಮೊದಲು ಆಮೇಲೆ ಎಂಬ ಕ್ರಮವಿಲ್ಲ.

೩೭-೪೦. ಇವುಗಳ ವ್ಯಾಪಾರಾಧೀನವಾಗಿ ಕಲ್ಪನೆಯು ನಾನಾವಿಧವಾಗುವುದು. ಯಾವ ಶಕ್ತಿಯನ್ನು ಭಿನ್ನಭಿನ್ನವ್ಯಾಪಾರಗಳಿಂದ ನಾನಾವಿಧ ಕಲ್ಪನೆಯನ್ನುವರೋ, ಅಂತಹ ವಿಚಿತ್ರ ಶಕ್ತಿಯುಳ್ಳ ಶಿವನೆಂಬುದೊಂದೇ ವಾಸ್ತವಿಕವಾಗಿ ಮೂಲಭೂತವಾದ ತತ್ವವು. ಸ್ವಾಮಿಯು ಚೇತನಾಚೇತನರ ಅನುಗ್ರಹಕ್ಕೋಸ್ಕರ ರೂಪಗಳನ್ನು ಸ್ವೀಕರಿಸಿ ಅನಾದಿಯಾದ ಮಲದಿಂದ ತಡೆದಿರುವ ಸಮಸ್ತಚೇತನರಿಗೂ ಅನುಗ್ರಹಮಾಡಿ ಭುಕ್ತಿಮುಕ್ತಿಗಳನ್ನು ಕೊಡು

ವಿಧತ್ತೇ ಜಡವರ್ಗಸ್ಯ ಸರ್ವಾನುಗ್ರಾಹಕಃ ಶಿವಃ ।
ಶಿವಸಾಮಾನ್ಯರೂಪೋ ಹಿ ಮೋಕ್ಷಸ್ತು ಚಿದನುಗ್ರಹಃ ॥ ೪೦ ॥

ಸೋಽನಾದಿತ್ವಾತ್ಕರ್ಮಣೋ ನ ತತ್ತದ್ಭೋಗಂ ವಿನಾ ಭವೇತ್ ।
ತೇನಾನುಗ್ರಾಹಕಃ ಶಂಭುರ್ಭುಕ್ತ್ಯೈ ಪ್ರಭುರವ್ಯಯಃ ॥ ೪೧ ॥

ಕುರುತೇ ಸೂಕ್ಷ್ಮಕರಣಭುವನೋತ್ಪತ್ತಿಮಂಜಸಾ ।
ಕರ್ತೋಽಪಾದಾನಕರಣೈಃ ವಿನಾ ಕಾರ್ಯಂ ನ ದೃಶ್ಯತೇ ॥ ೪೨ ॥

ಶಕ್ತಯಃ ಕರಣಂ ಚಾತ್ರ ಮಾಯೋಪಾದಾನಮಿಷ್ಯತೇ ।
ನಿತ್ಯೈಕಾ ಚ ಶಿವಾಶಕ್ತಿರ್ಹ್ಯನಾದಿನಿಧನಾ ಸತೀ ॥ ೪೩ ॥

ಸಾಧಾರಣೀ ನರಾಣಾಂ ವೈ ಭವನಾನಾಂ ಚ ಕಾರಣಮ್ ।
ಸ್ವಭಾವಾನ್ಮೋಹಜನನೀ ಸ್ವರ್ಚಿತಾ ಜನ್ಮಕರ್ಮಭಿಃ ॥ ೪೪ ॥

---

ವನು. ಜಡಕ್ಕೆಲ್ಲಾ ಅದರದರ ಕಾರ್ಯವನ್ನು ಮಾಡುವ ಸಾಮರ್ಥ್ಯವನ್ನು ಕೊಡುವನು. ಶಿವನೇ ಎಲ್ಲರಿಗೂ ಅನುಗ್ರಹವನ್ನು ಮಾಡುವವನು. ಶಿವ ಸಾದೃಶ್ಯರೂಪವಾದ ಮೋಕ್ಷವೇ ಚೇತನರಿಗೆ ಅನುಗ್ರಹವು.

೪೧-೪೨. ಕರ್ಮವು ಅನಾದಿಯಾಗಿರುವುದರಿಂದ ಆದರದರ ಫಲವನ್ನನುಭವಿಸಿದ ಹೊರತು ಮೋಕ್ಷವುಂಟಾಗುವುದಿಲ್ಲ. ಆದುದರಿಂದ ನಾಶ ರಹಿತನು, ಪ್ರಭುವೂ ಆದ ಈಶ್ವರನು ಆ ಕರ್ಮಫಲಭೋಗಕ್ಕೋಸ್ಕರ ಅನುಗ್ರಹ ಮಾಡುವವನಾಗಿ, ಸೂಕ್ಷ್ಮಜಗತ್ತು, ಇಂದ್ರಿಯ, ಸ್ಥೂಲಲೋಕ ಇವುಗಳನ್ನು ಸಮೀಚೀನವಾಗಿ ಸೃಷ್ಟಿಮಾಡಿದನು. ಕರ್ತೃ, ಉಪಾದಾನ, ಕರಣ ಇವುಗಳಿಲ್ಲದೇ ಕಾರ್ಯ ಹುಟ್ಟುವುದು ಕಂಡುಬಂದಿಲ್ಲ.

೪೩-೪೭. ಈ ಜಗತ್ಸೃಷ್ಟಿಗೆ ಶಕ್ತಿಗಳು ಕರಣವು. ಮಾಯೆಯೇ ಉಪಾದಾನವೆಂದು ಪ್ರಾಮಾಣಿಕರು ಒಪ್ಪಿರುವರು ನಿತ್ಯವು, ಏಕವು, ಉತ್ಪತ್ತಿ ನಾಶಗಳಿಲ್ಲದುದು, ವಾಸ್ತವಿಕವು, ಮನುಷ್ಯರು ಮತ್ತು ಲೋಕಗಳಿಗೆ ಸಾಧಾರಣ ಕಾರಣವು, ಸ್ವಾಭಾವಿಕವಾಗಿ ಮೋಹಜನಕವು, ಜನಗಳ ಕರ್ಮಗಳಿಂದ

ವಿಭ್ವೀ ಸೂಕ್ಷ್ಮಾ ಪರಾ ಮಾಯಾ ವಿಕೃತ್ಯೈಃ ಪರತಸ್ತು ಸಾ ।
ಕರ್ಮಾಣ್ಯವೇಕ್ಷ್ಯ ವಿದ್ಯೇಶೋ ಮಾಯಾಂ ವಿಕ್ಷೋಭ್ಯ ಶಕ್ತಿಭಿಃ ॥ ೪೫ ॥

ವಿಧತ್ತೇ ಜೀವಭೋಗಾರ್ಥಂ ವಪೂಂಷಿ ಕರಣಾನಿ ಚ ।
ಸೃಜತ್ಯಾದೌ ಕಾಲತತ್ತ್ವಂ ನಾನಾಶಕ್ತಿಮಯೀ ಚ ಸಾ ॥ ೪೬ ॥

ಭಾವಿ ಭೂತಂ ಭವದ್ವೇದಂ ಜಗತ್ಕಲಯತೇ ಲಯಮ್ ।
ಸೂತೇ ಹ್ಯನಂತರಂ ಮಾಯಾ ಶಕ್ತಿಂ ನಿಯಮನಾತ್ಮಿಕಾಂ ॥ ೪೭ ॥

ಸರ್ವಂ ನಿಯಮಯತ್ಯೇಷಾ ತೇನೇಯಂ ನಿಯತಿಸ್ಸ್ಮೃತಾ ।
ಅನಂತರಂ ಚ ಸಾ ಮಾಯಾ ನಿತ್ಯಾ ವಿಶ್ವವಿಮೋಹಿನೀ ॥ ೪೮ ॥

ಅನಾದಿನಿಧನಾ ತತ್ವಂ ಕಲಾಖ್ಯಂ ಜನಯತ್ಯಪಿ ।
ಏಕತಸ್ತು ನೃಣಾಂ ಯೇನ ಕಲಯಿತ್ವ ಮಲಂ ತತಃ ॥ ೪೯ ॥

---

ಚೆನ್ನಾಗಿ ಪೂಜಿಸಲ್ಪಟ್ಟದ್ದೂ ವ್ಯಾಪ್ತವು, ಸೂಕ್ಷ್ಮವು ಮತ್ತು ಉತ್ಕೃಷ್ಟವೂ ಆಗಿರುವ ಶಿವಸಂಬಂಧಿಯಾದ ಶಕ್ತಿಯೇ ಮಾಯೆಯು. ಅದು ವಿಕಾರವನ್ನು ಹೊಂದಿದ ತತ್ವಗಳಿಗಿಂತಲೂ ಉತ್ತಮವಾದುದು. ವಿದ್ಯೆಗೆ ನಿಯಾಮಕನಾದ ಸ್ವಾಮಿಯು ಅವರವರ ಕರ್ಮಗಳನ್ನು ಪರಿಶೀಲಿಸಿ ತನ್ನ ಶಕ್ತಿಗಳಿಂದ ಮಾಯೆಯನ್ನು ಕ್ಷೋಭೆಪಡಿಸಿ, ಜೀವರ ಭೋಗಕ್ಕೋಸ್ಕರ ಶರೀರ ಮತ್ತು ಇಂದ್ರಿಯ ಇವುಗಳನ್ನು ಸೃಷ್ಟಿಸುತ್ತಾರೆ. ನಾನಾಶಕ್ತಿಮಯವಾದ ಆ ಮಾಯೆಯು ಮೊದಲು ಕಾಲತತ್ವವನ್ನು ಸೃಷ್ಟಿಸುತ್ತದೆ.

೪೭. ಅದು ಭವಿಷ್ಯ, ಭೂತ, ವರ್ತಮಾನಗಳಾದ ಈ ಜಗತ್ತಿಗೆ ಲಯವನ್ನುಂಟುಮಾಡುತ್ತದೆ. ಸೃಷ್ಟಿಮಾಡಿದ ತರುವಾಯ ಮಾಯೆಯು ನಿಯಮನ ಮಾಡುವ ಶಕ್ತಿಯನ್ನು ಪಡೆಯುತ್ತದೆ.

೪೮—೫೪. ಈ ಶಕ್ತಿಯು ಸಕಲವನ್ನೂ ಅಧೀನದಲ್ಲಿಟ್ಟುಕೊಂಡಿರುವುದರಿಂದ ನಿಯತಿ ಎನಿಸಿಕೊಂಡಿತು. ಅನಂತರದಲ್ಲಿ ನಿತ್ಯವೂ ಪ್ರಪಂಚಕ್ಕೆ ಮೋಹವನ್ನುಂಟುಮಾಡುವುದು, ಉತ್ಪತ್ತಿನಾಶಗಳಿಲ್ಲದುದೂ ಆಗಿರುವ ಆ ಮಾಯೆಯು ‘ಕಲಾ, ಎಂಬ ತತ್ವವನ್ನು ಹುಟ್ಟಿಸುತ್ತದೆ. ಇದು ಒಂದೇ ಮನುಷ್ಯರ

**ಕರ್ತೃಶಕ್ತಿಂ ವ್ಯಂಜಯತಿ ತೇನೇದಂ ತು ಕಲಾಭಿಧಂ ।**
**ಕಾಲೇನ ಚ ನಿಯತ್ಯೋಪಸರ್ಗತಾಂ ಸಮುಪೇತಯಾ ॥ ೫೦ ॥**

**ವ್ಯಾಪಾರಂ ವಿಧಧಾತ್ಯೇಷಾ ಭೂಪರ್ಯಂತಂ ಸ್ವಕೀಯಕಂ ।**
**ಪ್ರದರ್ಶನಾರ್ಥಂ ವೈ ಪುಂಸೋ ವಿಷಯಾಣಾಂ ಚ ಸಾ ಪುನಃ ॥ ೫೧ ॥**

**ಪ್ರಕಾಶರೂಪಂ ವಿದ್ಯಾಖ್ಯಂ ತತ್ವಂ ಸೂತೇ ಕಲೈವ ಹಿ ।**
**ವಿದ್ಯಾತ್ವಾವರಣಂ ಭಿತ್ವಾ ಜ್ಞಾನಶಕ್ತೇಃ ಸ್ವಕರ್ಮಣಾ ॥ ೫೨ ॥**

**ವಿಷಯಾನ್ದರ್ಶಯತ್ಯೇಷಾಽಽತ್ಮನಾಂ ಸಾ ಕಾರಣಂ ಹ್ಯತಃ ।**
**ಕರೋತಿ ಭೋಗ್ಯಂ ಯೇನಾಸೌ ಕರಣೇನ ಪರೇಣ ವೈ ॥ ೫೩ ॥**

**ಉದ್ಬುದ್ಧಶಕ್ತಿಃ ಪುರುಷಃ ಪ್ರಚೋದ್ಯ ಮಹದಾದಿಕಾನ್ ।**
**ಭೋಗ್ಯೇ ಭೋಗಂ ಚ ಪುನಸ್ತತ್ಪರಂ ಕರಣಂ ತು ಸಾ ॥ ೫೪ ॥**

**ಭೋಕ್ತಾ ಚ ಭೋಗ್ಯಮಾಸಾದ್ಯ ಚಿದ್ವ್ಯಕ್ತಿರ್ಭೋಗ ಉಚ್ಯತೇ ।**
**ಸುಖಾದಿರೂಪಾ ವಿಷಯಾಕಾರಾ ಬುದ್ಧಿಃ ಸಮಾಸತಃ ॥ ೫೫ ॥**

---

ಮಲವನ್ನು ಹೋಗಲಾಡಿಸಿ ಕರ್ತೃಶಕ್ತಿಯನ್ನು ಅವರಲ್ಲಿ ಪ್ರಕಟವಾಗುವಂತೆ ಮಾಡುವುದರಿಂದ ' ಕಲಾ, ಎಂಬ ಹೆಸರನ್ನು ಹೊಂದಿದೆ. ಸ್ವಲ್ಪಕಾಲಕಳೆದ ಮೇಲೆ ಈ ಕರ್ತೃಶಕ್ತಿಯು ಸಹಕಾರಿತ್ವವನ್ನು ಹೊಂದಿದ ನಿಯತಿಯಿಂದ ಭೂಲೋಕಪರ್ಯಂತವಾಗಿ ತನ್ನ ವ್ಯಾಪಾರವನ್ನು ನಡೆಯಿಸುತ್ತದೆ. ಆ ಕಲೆಯೇ ಪುನಃ ಪುರುಷರಿಗೆ ವಿಷಯಗಳನ್ನು ಪ್ರದರ್ಶಿಸುವುದಕ್ಕಾಗಿ ಪ್ರಕಾಶ ರೂಪವಾದ ವಿದ್ಯೆಯೆಂಬ ತತ್ವವನ್ನು ಹುಟ್ಟಿಸುತ್ತದೆ. ವಿದ್ಯೆಯಾದರೋ ಆತ್ಮರ ಜ್ಞಾನಶಕ್ತಿಗೆ ಕಾರಣವಾಗಿರುವುದರಿಂದ ಅದು ಆವರಣವನ್ನು ಭೇದಿಸಿ, ತನ್ನ ವ್ಯಾಪಾರದಿಂದ ವಿಷಯಗಳನ್ನು ತೋರಿಸುತ್ತದೆ. ಉದ್ಬೋಧಹೊಂದಿದ ಶಕ್ತಿ ಯುಳ್ಳ ಈ ಪುರುಷನು ಮಹತ್ವ ಮುಂತಾದವುಗಳನ್ನು ಪ್ರೇರಿಸಿ ಎಂದರೆ ಕಾರ್ಯ ವನ್ನು ಹುಟ್ಟಿಸುವಂತೆಮಾಡಿ ಯಾವ ಉತ್ಕೃಷ್ಟಕಾರಣದಿಂದ ಭೋಗಾರ್ಹವಾದ ವಸ್ತುವನ್ನು ನಿರ್ಮಾಣಮಾಡುವನೋ ಅಂತಹ ಉತ್ಕೃಷ್ಟ ಕರಣವಾದ ಶಕ್ತಿಯೇ ಪುನಃ ಭೋಗಾರ್ಹವಸ್ತುವಿನಲ್ಲಿ ಭೋಗವನ್ನು ಕೊಡುವುದು.

೫೫. ಭೋಕ್ತನು ಭೋಗ್ಯವಿಷಯುವನ್ನು ಹೊಂದಿ ಚೈತನ್ಯವನ್ನು ವ್ಯಕ್ತಪಡಿಸುವುದೇ ಭೋಗವೆನಿಸುವುದು. ಬುದ್ಧಿಯು ಸಂಕ್ಷೇಪವಾಗಿ ಸುಖಾದಿ ಗಳೆಂಬ ವಿಷಯದ ಆಕಾರವುಳ್ಳದು.

ಭೋಗ್ಯಂ ಭೋಕ್ತುಶ್ಚ ಸ್ವೇನೈವ ವಿದ್ಯಾಖ್ಯಂ ಕರಣಂ ತು ತತ್ ।
ಯದ್ಯರ್ಕವತ್ಪ್ರಕಾಶಾ ಧೀಃ ಕರ್ಮತ್ವಾಚ ತಥಾಪಿ ಹ ॥ ೫೬ ॥

ಕರಣಾಂತರಸಾಪೇಕ್ಷಾ ಶಕ್ತಾ ಗ್ರಾಹಯಿತುಂ ಚ ತಾಂ ।
ಸಂಬಂಧಾತ್ಕಾರಣಾದ್ಯೈಸ್ತದ್ಭೋಗೌತ್ಸುಕ್ಯೇನ ಚೋದನಾತ್ ॥ ೫೭ ॥

ತಚ್ಚೇಷ್ಟಾ ಫಲಯೋಗಾಚ್ಚ ಸಂಸಿದ್ಧಾ ಕರ್ತೃತಾಸ್ಯ ತು ।
ಅಕರ್ತೃತ್ವಾಭ್ಯುಪಗಮೇ ಭೋಕ್ತೃತ್ವಾಖ್ಯಾ ವೃಥಾಸ್ಯ ತು ॥ ೫೮ ॥

ಕಿಂಚ ಪ್ರಧಾನಚರಿತಂ ವ್ಯರ್ಥಂ ಸರ್ವಂ ಭವೇತ್ತತಃ ।
ಕರ್ತೃತ್ವರಹಿತೇ ಪುಂಸಿ ಕರಣಾದ್ಯಪ್ರಯೋಜಕೇ ॥ ೫೯ ॥

ಭೋಗಸ್ಯಾಸಂಭವಸ್ತಸ್ಮಾತ್ಸ ಏವಾತ್ರ ಪ್ರವರ್ತಕಃ ।
ಕರಣಾದಿಪ್ರಯೋಕ್ತೃತ್ವಂ ವಿದ್ಯಯೈವಾಸ್ಯ ಸಂಮತಂ ॥ ೬೦ ॥

ಅನಂತರಂ ಕಲಾರಾಗಂ ಸೂತೇ ಭಿದ್ಯಂಗರೂಪಕಂ ।
ಯೇನ ಭೋಗಾಯ ಜನಿತಾ ಭಿದ್ಯಂಗೇ ಪುರುಷೇ ಪುನಃ ॥ ೬೧ ॥

---

೫೬-೫೮. ಭೋಗ್ಯವಸ್ತುವನ್ನು ಸ್ವತಃ ಭೋಗಿಸುವವನಿಗೆ ವಿದ್ಯೆಯೆಂಬುದೇ ಕರಣವು. ಜ್ಞಾನವು ಸೂರ್ಯನಂತೆ ಪ್ರಕಾಶಸ್ವರೂಪವಾದಾಗ್ಯೂ ಜ್ಞಾನವಿಷಯವಾಗಿರುವುದರಿಂದ ಅದು ಭಿನ್ನಕರಣಗಳ ಸಹಾಯದಿಂದ ಜ್ಞಾನವನ್ನು ಗ್ರಹಿಸಲು ಸಮರ್ಥವಾಗುವುದು. ಕರಣ ಮುಂತಾದುವುಗಳ ಸಂಬಂಧದಿಂದ ಉತ್ಸಾಹಯುಕ್ತವಾಗಿ ಭೋಗದಲ್ಲಿ ಪ್ರವರ್ತಿಸುವುದು, ಚೇಷ್ಟೆ ಮತ್ತುಫಲಗಳ ಸಂಪರ್ಕ ಇವುಗಳಿಂದ ಪುರುಷನಿಗೆ ಕರ್ತೃತ್ವವು ಸಿದ್ಧವಾಗುವುದು. ಪುರುಷನು ಕರ್ತೃವಲ್ಲವೆಂದು ಹೇಳಿದರೆ ಇವನಿಗೆ ಭೋಕ್ತಾ ಎಂಬ ಹೆಸರೇ ವ್ಯರ್ಥವಾಗುತ್ತದೆ.

೫೯-೬೦. ಪುರುಷನು ಭೋಕ್ತೃವಲ್ಲದಿದ್ದರೆ ಪ್ರಕೃತಿಯ ಸಮಸ್ತ ವ್ಯಾಪಾರವೂ ನಿಷ್ಫಲವಾಗುವುದು. ಕರ್ತೃತ್ವವಿಲ್ಲದ ಕರಣಾದಿಗಳನ್ನು ಆಯಾಯಾ ವಿಷಯಗಳಲ್ಲಿ ಪ್ರವರ್ತಿಸುವಂತೆ ಮಾಡದಿರುವ ಪುರುಷನಲ್ಲಿ ಭೋಗವು ಸಂಭವಿಸುವುದಿಲ್ಲವಾದಕಾರಣ ಅವನೇ ಪ್ರವರ್ತಕನು. ಇವನಿಗೆ ಕರಣಾದಿ ಪ್ರವರ್ತಕತ್ವವು ವಿದ್ಯೆಯ ಸಹಾಯದಿಂದಲೇ ಸಂಭವಿಸುತ್ತದೆಂದು ಜ್ಞಾನಿಗಳ ಮತವು.

೬೧. ತರುವಾಯ ಕಲೆಯು ಅಂಗಭೇದಕವಾದ ರಾಗವನ್ನು ಹುಟ್ಟಿಸುವುದು. ಈ ರಾಗವು ಭಿನ್ನಾಂಗನಾದ ಪುರುಷನಲ್ಲಿ ಉತ್ಪನ್ನವಾದ ಕ್ರಿಯೆಯನ್ನು ಭೋಗಸಾಧನ ಪ್ರವೃತ್ತಿಯನ್ನಾಗಿ ಮಾಡುವುದರಿಂದ ರಾಗವೆಂದು ಹೆಸರುಳ್ಳದ್ದಾಯಿತು.

ಕ್ರಿಯಾಪ್ರವೃತ್ತಿರ್ಭವತಿ ತೇನೇದಂ ರಾಗಸಂಜ್ಞಿತಂ ।
ಏಭಿಸ್ತತ್ವೈಶ್ಚ ಭೋಕ್ತೃತ್ವದಶಾಯಾಂ ಕಲಿತೋ ಯದಾ ॥ ೬೨ ॥

ನಿತ್ಯಸ್ತದಾಯಮಾತ್ಮಾ ತು ಲಭತೇ ಪುರುಷಾಭಿಧಾಂ ।
ಕಲೈವ ಪಶ್ಚಾದವ್ಯಕ್ತಂ ಸೂತೇ ಭೋಗ್ಯಾಯ ಚಾಸ್ಯ ತು ॥ ೬೩ ॥

ಸಪ್ತಗ್ರಂಥಿವಿಧಾನಸ್ಯ ಯತ್ತದ್ಗೌಣಸ್ಯ ಕಾರಣಂ ।
ಭೂತಾನಾಮವಿಭಾಗೋಽತ್ರ ಹ್ಯಾಧಾರೇಕ್ಷ್ಮಾದಿಭಾಗವತ್ ॥ ೬೪ ॥

ಆಧಾರೋಽಪಿ ಚ ಯಸ್ತೇಷಾಂ ತದವ್ಯಕ್ತಂ ಚ ಗೀಯತೇ ।
ತ್ರಯ ಏವ ಗುಣಾ ಹ್ಯೇಷಾಮವ್ಯಕ್ತಾದೇವಸಂಭವಃ ॥ ೬೫ ||

ಸತ್ವಂ ರಜಸ್ತಮಃ ಪ್ರಖ್ಯಾ ವ್ಯಾಪಾರನಿಯಮಾತ್ಮಿಕಾ ।
ಗುಣತೋ ಧೀಶ್ಚ ವಿಷಯಾಧ್ಯವಸಾಯಸ್ವರೂಪಿಣೀ ॥ ೬೬ ||

ಗುಣತಸ್ತ್ರಿವಿಧಾ ಸಾಽಪಿ ಪ್ರೋಕ್ತಾ ಕರ್ಮಾನುಸಾರತಃ ।
ಮಹತ್ತತ್ವಾದಹಂಕಾರೋ ಜಾತಃ ಸಂರಂಭವೃತ್ತಿಮಾನ್ ॥ ೬೭ ॥

---

೬೨-೬೫ ನಿತ್ಯನಾದ ಈ ಆತ್ಮನು ಭೋಕ್ತೃತ್ವ ಸಮಯ ಎಂದರೆ ಸಂಸಾರಕಾಲದಲ್ಲಿ ಈ ತತ್ವಗಳಿಂದ ಸಂಬದ್ಧನಾದಾಗ "ಪುರುಷ" ಎಂಬ ಹೆಸರನ್ನು ಹೊಂದುವನು. ತರುವಾಯ ಕಲೆಯೇ ಇವನ ಭೋಗಕ್ಕೋಸ್ಕರವಾಗಿ ಗುಣಮಯವಾದ ಸಪ್ತಗ್ರಂಥಿವಿಧಾನಕ್ಕೆ ಕಾರಣವಾದ ಅವ್ಯಕ್ತತತ್ವ (ಪ್ರಕೃತಿ) ವನ್ನು ಪಡೆಯುತ್ತದೆ. ಆಧಾರವಾದ ಈ ತತ್ವದಲ್ಲಿ ಭೂತಗಳು ಅಡಗಿರುವುವು. ಪೃಥಿವೀ ಮುಂತಾದ ಈ ಭೂತಗಳಿಗೆಲ್ಲಾ ಆಧಾರವನ್ನು ಅವ್ಯಕ್ತವೆಂದು ಹೇಳುವರು. ಮೂರುಗುಣಗಳೂ ಅವ್ಯಕ್ತದಿಂದಲೇ ಹುಟ್ಟುವುವು

೬೬. ಆ ಗುಣಗಳು ಸತ್ವ, ರಜಸ್ಸು, ತಮಸ್ಸು ಎಂಬ ಹೆಸರುಳ್ಳುದಾಗಿ ವ್ಯಾಪಾರಗಳಿಗೆ ನಿಯಾಮಕವಾಗುವುವು. ವಿಷಯ ನಿಶ್ಚಯಸ್ವರೂಪವಾದ ಜ್ಞಾನವು ಗುಣಗಳಿಂದುಂಟಾಗುವುದು.

೬೭' ಗುಣತ್ರಯದಿಂದ ಹುಟ್ಟಿದ ಜ್ಞಾನವೂ ಸಹ ಆದರದರ ವ್ಯಾಪಾರಾನುಗುಣವಾಗಿ ಮೂರುವಿಧವೆಂದು ಉಕ್ತವಾಗಿದೆ. ಮಹತ್ತತ್ವದ ದೆಸೆಯಿಂದ ಆಶ್ಚರ್ಯಕರವ್ಯಾಪಾರವುಳ್ಳ ಅಹಂಕಾರತತ್ವವು ಹುಟ್ಟಿತು

ಸಂಭೇದಾದಸ್ಯ ವಿಷಯಃ ಪ್ರಾಪ್ನೋತಿ ವ್ಯವಹಾರ್ಯತಾಂ ।
ಸತ್ವಾದಿಗುಣಭೇದೇನ ಸ ಪ್ರಸಸ್ತ್ರಿವಿಧೋ ಭವೇತ್ ॥ ೬೮ ॥

ತೈಜಸೋ ರಾಜಸಶ್ಚೈವ ತಾಮಸಶ್ಚೇತಿ ನಾಮತಃ ।
ತತ್ರ ತೈಜಸತೋ ಜ್ಞಾನೇಂದ್ರಿಯಾಣಿ ಮನಸಾ ಸಹ ॥ ೬೯ ॥

ಪ್ರಕಾಶಾನ್ವಯತಸ್ತಸ್ಮಾದ್ಬೋಧಕಾನಿ ಭವಂತಿ ಹಿ ।
ರಾಜಸಾಚ್ಚ ಕ್ರಿಯಾಹೇತೋಸ್ತಥಾ ಕರ್ಮೇಂದ್ರಿಯಾಣಿ ತು ॥ ೭೦ ॥

ತಾಮಸಾಚ್ಚೈವ ಜಾಯಂತೇ ತನ್ಮಾತ್ರಾ ಭೂತಯೋನಯಃ ।
ಇಚ್ಛಾರೂಪಂ ಚ ಸಂಕಲ್ಪವ್ಯಾಪಾರಂ ತತ್ರ ವೈ ಮನಃ ॥ ೭೧ ॥

ದ್ವಿಧಾಧಿಕಾರಿ ತಚ್ಚಿತ್ತಂ ಭೋಕ್ತೃಭೋಗೋಪಪಾದಕಂ ।
ಬಹಿಃ ಕರಣಭಾವೇನ ಸ್ವೋಚಿತೇನ ಯುತಃ ಸದಾ ॥ ೭೨ ॥

---

೬೮. ಇದರ ಮಿಶ್ರಣದಿಂದ ವಿಷಯವು ವ್ಯವಹಾರಯೋಗ್ಯವಾಗುವುದು. ಆ ಅಹಂಕಾರವೂ ಸಹ ಸತ್ವಾದಿಗುಣಭೇದದಿಂದ ತೈಜಸ, ರಾಜಸ, ತಾಮಸ ಎಂಬುದಾಗಿ ಮೂರುವಿಧವಾಗುವುದು.

೬೯. ಅವುಗಳಲ್ಲಿ ತೈಜಸಾಹಂಕಾರದಿಂದ ಐದು ಜ್ಞಾನೇಂದ್ರಿಯಗಳು, ಮನಸ್ಸೂ ಸಹ ಉಂಟಾಗುವುವು.

೭೦. ಪ್ರಕಾಶಸಂಬದ್ಧವಾದ ತೈಜಸಾಹಂಕಾರದ ಮಹಿಮೆಯಿಂದ ಇಂದ್ರಿಯಗಳು ಜ್ಞಾನಜನಕಗಳಾಗುತ್ತವೆ. ಕ್ರಿಯೆಗೆ ಕಾರಣವಾದ ರಾಜಸಾಹಂಕಾರದಿಂದ ಕರ್ಮೇಂದ್ರಿಯಗಳು ಹುಟ್ಟುತ್ತವೆ.

೭೧. ಪಂಚಭೂತಗಳಿಗೆ ಕಾರಣವಾದ ಪಂಚತನ್ಮಾತ್ರಗಳು, ತಾಮಸಾಹಂಕಾರದಿಂದ ಹುಟ್ಟುತ್ತವೆ. ಅದರಲ್ಲಿ ಮನಸ್ಸು ಇಚ್ಛಾರೂಪವಾಗಿ ಸಂಕಲ್ಪವೆಂಬ ವ್ಯಾಪಾರವುಳ್ಳದು.

೭೨. ಆ ಚಿತ್ತವು ಎರಡುವಿಧವಾಗಿ ಕಾರ್ಯಕ್ಕೆ ನೆರವಾಗುವುದು. ಅದು ತನಗೆ ಯೋಗ್ಯವಾದ ಬಾಹ್ಯಕರಣರೂಪದಿಂದ ಭೋಕ್ತೃವಿನ ಭೋಗಕ್ಕೆ ಸಾಧನವಾಗುವುದು.

**ಇಂದ್ರಿಯಾಣಾಂ ಚ ಸಾಮರ್ಥ್ಯಂ ಸಂಕಲ್ಪೇನಾತ್ಮವೃತ್ತಿನಾ ।**
**ಕರೋತ್ಯಂತಃ ಸ್ಥಿತಂ ಭೂಯಸ್ತತೋಽಂತಃ ಕರಣಂ ಮನಃ ॥ ೭೩ ॥**

**ಮನೋಽಹಂಕಾರಬುದ್ಧ್ಯಾಖ್ಯಮಸ್ತ್ಯಂತಃಕರಣಂ ತ್ರಿಧಾ ।**
**ಇಚ್ಛಾಸಂರಂಭಬೋಧಾಖ್ಯಾ ವೃತ್ತಯಃ ಕ್ರಮತೋಽಸ್ಯತು ॥ ೭೪ ॥**

**ಜ್ಞಾನೇಂದ್ರಿಯಾಣಿ ಶ್ರೋತ್ರತ್ವಕ್ಚಕ್ಷುರ್ಜಿಹ್ವಾ ಚ ನಾಸಿಕಾ ।**
**ಗ್ರಾಹ್ಯಾಶ್ಚ ವಿಷಯಾ ಹ್ಯೇಷಾಂ ಜ್ಞೇಯಾಃ ಶಬ್ದಾದಯೋ ಮುನೇ॥ ೭೫ ॥**

**ಶಬ್ದಸ್ಪರ್ಶರೂಪರಸಗಂಧಾಃ ಶಬ್ದಾದಯೋ ಮತಾಃ ।**
**ವಾಕ್ಪಾಣಿಪಾದಪಾಯೂಪಸ್ಥಾಸ್ತು ಕರ್ಮೇಂದ್ರಿಯಾಣ್ಯಪಿ ॥ ೭೬ ॥**

**ವಚನಾದಾನಗಮನೋತ್ಸರ್ಗಾನಂದೇಷು ಕರ್ಮಸು ।**
**ಕರಣಾನಿ ಚ ಸಿದ್ಧಾನಿ ನ ಕೃತಿಃ ಕರಣೈರ್ವಿನಾ ॥ ೭೭ ॥**

---

೭೩. ಮನಸ್ಸು ಒಳಗೇ ಇದ್ದು ಆತ್ಮವೃತ್ತಿಯಾದ ಸಂಕಲ್ಪದಿಂದ ಇಂದ್ರಿಯಗಳ ಸಾಮರ್ಥ್ಯವನ್ನು ವ್ಯಕ್ತಗೊಳಿಸುವುದರಿಂದ ಅಂತಃಕರಣವೆನಿಸುವುದು. ಹೀಗೆ ಮನಸ್ಸು ಎರಡುವಿಧವಾದ ವ್ಯಾಪಾರವುಳ್ಳದು.

೭೪. ಮನಸ್ಸು, ಅಹಂಕಾರ, ಬುದ್ಧಿ ಎಂಬುದಾಗಿ ಅಂತಃಕರಣವು ಮೂರುವಿಧವಾಗಿದೆ. ಮನಸ್ಸಿಗೆ ಇಚ್ಛೆ, ಅಹಂಕಾರಕ್ಕೆ ಸಂರಂಭ, ಬುದ್ಧಿಗೆ ಜ್ಞಾನ ಎಂಬುವುಗಳು ವ್ಯಾಪಾರಗಳು.

೭೫. ಶ್ರೋತ್ರ (ಕಿವಿ), ತ್ವಕ್ (ಚರ್ಮ), ಕಣ್ಣು, ನಾಲಿಗೆ, ಮೂಗು ಈ ಐದು ಜ್ಞಾನೇಂದ್ರಿಯಗಳು. ಇವುಗಳಿಗೆ ಶಬ್ದ ಮುಂತಾದ ವಿಷಯಗಳೇ ಗ್ರಾಹ್ಯಗಳು.

೭೬. ಶಬ್ದ. ಸ್ಪರ್ಶ, ರೂಪ, ರಸ ಮತ್ತು ಗಂಧ ಇವುಗಳೇ ಶಬ್ದಾದಿ ವಿಷಯಗಳು. ವಾಕ್ಕು (ಬಾಯಿ), ಕೈ, ಕಾಲು, ಪಾಯು, ಉಪಸ್ಥ ಇವುಗಳು ಕರ್ಮೇಂದ್ರಿಯಗಳು.

೭೭. ಈ ಕರ್ಮೇಂದ್ರಿಯಗಳು ಕ್ರಮವಾಗಿ ಮಾತನಾಡುವುದು, ಸ್ವೀಕರಿಸುವುದು, ಸಂಚಾರ, ಮೂತ್ರಾದಿಗಳ ವಿಸರ್ಜನೆ, ಸಂತೋಷ ಈ ಕರ್ಮಗಳಿಗೆ ಸಾಧಕಗಳಾವುವು. ಕರಣಗಳ ಸಹಾಯವಿಲ್ಲದೇ ಪ್ರಯತ್ನವು ಹುಟ್ಟುವುದಿಲ್ಲ.

ದಶಧಾ ಕರಣೈಶ್ಚೇಷ್ಟಾ ಕಾರ್ಯಮಾವಿಶ್ಯ ಕಾರ್ಯತೇ ।
ಚೇಷ್ಟಂತೇ ಕಾರ್ಯಮಾಲಂಬ್ಯ ವಿಭುತ್ವಾತ್ಕರಣಾನಿ ತು ॥ ೭೮ ॥

ತನ್ಮಾತ್ರೇಭ್ಯಃ ಖಂ ಪವನಸ್ತೇಜೋಂಭಃ ಕ್ಷ್ಮೇತಿ ಪಂಚ ವೈ ।
ತೇಭ್ಯೋ ಭೂತಾನ್ಯೇಕಗುಣಾನ್ಯಾಖ್ಯಾತಾನಿ ಭವಂತಿ ಹಿ ॥ ೭೯ ॥

ಇತಿ ಪಂಚಸು ಶಬ್ದೋಽಯಂ ಸ್ಪರ್ಶೋ ಭೂತಚತುಷ್ಟಯೇ ।
ರೂಪಂ ತ್ರಿಷು ರಸಶ್ಚೈವ ದ್ವಯೋರ್ಗಂಧಃ ಕ್ಷಿತೌ ತಥಾ ॥ ೮೦ ॥

ಕಾರ್ಯಾಣ್ಯೇಷಾಂ ಕ್ರಮೇಣೈವಾವಕಾಶೋ ವ್ಯೂಹಕಲ್ಪನಂ ।
ಪಾಕಶ್ಚ ಸಂಗ್ರಹಶ್ಚೈವ ಧಾರಣಂ ಚೇತಿ ಕಥ್ಯತೇ ॥ ೮೧ ॥

ಅಶೀತೋಷ್ಣೌ ಮಹೀವಾಯೂ ಶೀತೋಷ್ಣೌ ವಾರಿತೇಜಸೌ ।
ಭಾಸ್ವದಗ್ನೌ ಜಲೇ ಶುಕ್ಲಂ ಕ್ಷಿತೌ ಶುಕ್ಲಾದ್ಯನೇಕಧಾ ॥ ೮೨ ॥

---

೭೮. ಕರಣಗಳು ಕಾರ್ಯವನ್ನು ಸಂಬಂಧಿಸಿ ಹತ್ತುವಿಧವಾಗಿ (ವ್ಯಾಪಾರ) ಚೇಷ್ಟೆಗಳನ್ನು ಮಾಡುತ್ತವೆ. ಕರಣಗಳು ವಿಭುವಾದುದರಿಂದ ಕಾರ್ಯವನ್ನವಲಂಬಿಸಿ ವ್ಯಾಪಾರಮಾಡುವುವು.

೭೯. ತನ್ಮಾತ್ರಗಳಿಂದ ಆಕಾಶ, ವಾಯು, ತೇಜಸ್ಸು, ಜಲ, ಪೃಥಿವೀ ಎಂಬ ಪಂಚಭೂತಗಳು ಹುಟ್ಟಿದುವು. ಅವು ಅಸಾಧಾರಣವಾಗಿ ಒಂದೊಂದು ಗುಣವುಳ್ಳವೆಂದು ಉಕ್ತವಾಗಿವೆ.

೮೦. ಮೇಲೆ ಹೇಳಿದ ಐದು ಭೂತಗಳಲ್ಲಿಯೂ ಶಬ್ದವು, ನಾಲ್ಕು ಭೂತಗಳಲ್ಲಿ ಸ್ಪರ್ಶವೂ, ಪೃಥಿವೀ, ಜಲ, ತೇಜಸ್ಸು ಈ ಮೂರರಲ್ಲಿ ರೂಪವೂ, ರಸವು ಪೃಥಿವೀ ಜಲ ಇವೆರಡರಲ್ಲಿಯೂ, ಪೃಥಿವಿಯಲ್ಲಿ ಗಂಧವೂ ಇರುತ್ತದೆ.

೮೧. ಕೈಕಾಲು ನೀಡುವುದು ಮುಂತಾದುವಕ್ಕೆ ಅವಕಾಶ, ಒಟ್ಟುಗೂಡಿಸುವುದು, ಪಚನಮಾಡುವುದು ಸಂಗ್ರಹ (ಮುದ್ದೆಮಾಡುವುದು) ಧರಿಸುವುದು, ಇವು ಕ್ರಮವಾಗಿ ಆಕಾಶಾದಿ ಭೂತಗಳ ಕಾರ್ಯಗಳು.

೮೨. ಪೃಥಿವೀ ವಾಯುಗಳಲ್ಲಿ ಅನುಷ್ಣಾಶೀತಸ್ಪರ್ಶವೂ, ಜಲತೇಜಸ್ಸುಗಳಲ್ಲಿ ಶೀತೋಷ್ಣಸ್ಪರ್ಶಗಳೂ, ತೇಜಸ್ಸಿನಲ್ಲಿ ಭಾಸ್ವರಶುಕ್ಲರೂಪವೂ, ಜಲದಲ್ಲಿ ಅಭಾಸ್ವರ ಶುಕ್ಲರೂಪವೂ, ಪೃಥಿವಿಯಲ್ಲಿ ಶುಕ್ಲಾದಿ ಅನೇಕ ರೂಪಗಳೂ ಇವೆ.

ರೂಪಂ ತ್ರಿಷು ರಸೋಽಂಭಸ್ಸು ಮಧುರಃ ಷಡ್ವಿಧಃ ಕ್ಷಿತೌ ।
ಗಂಧಃ ಕ್ಷಿತಾವಸುರಭಿಃ ಸುರಭಿಶ್ಚ ಪ್ರಕೀರ್ತಿತಃ ॥ ೮೩ ॥

ತನ್ಮಾತ್ರಂ ತದ್ಭೂತಗುಣಂ ಕರಣಂ ಪೋಷಣಂ ತಥಾ ।
ಭೂತಸ್ಯ ತು ವಿಶೇಷೋಽಯಂ ವಿಶೇಷರಹಿತಂ ತು ತತ್ ॥ ೮೪ ॥

ಇಮಾನಿ ಪಂಚ ಭೂತಾನಿ ಸನ್ನಿವಿಷ್ಟಾನಿ ಸರ್ವತಃ ।
ಪಂಚಭೂತಾತ್ಮಕಂ ಸರ್ವಂ ಜಗತ್ಸ್ಥಾವರಜಂಗಮಂ ॥ ೮೫ ॥

ಶರೀರ ಸನ್ನಿವಿಷ್ಟತ್ವಮೇಷಾಂ ತಾವನ್ನಿರೂಪ್ಯತೇ ।
ದೇಹೇಽಸ್ಥಿ ಮಾಂಸಕೇಶತ್ವಙ್ನಖದಂತಾಶ್ಚ ಪಾರ್ಥಿವಾಃ ॥ ೮೬ ॥

ಮೂತ್ರರಕ್ತಕಫಸ್ವೇದಶುಕ್ರಾದಿಷು ಜಲಸ್ಥಿತಿಃ ।
ಹೃದಿ ಪಂಕ್ತೌ ದೃಶೋಃ ಪಿತ್ತೇ ತೇಜಸ್ತದ್ಧರ್ಮದರ್ಶನಾತ್ ॥ ೮೭ ॥

---

೮೩. ಪೃಥಿವೀ, ಜಲ, ತೇಜಸ್ಸುಗಳಲ್ಲಿ ರೂಪವೂ, ಜಲದಲ್ಲಿ ಮಧುರ ರಸವೂ, ಪೃಥಿವಿಯಲ್ಲಿ ಆರುವಿಧರಸವೂ, ಸುರಭಿ ಅಸುರಭಿ ಗಂಧಗಳೆರಡೂ ಪೃಥಿವಿಯಲ್ಲಿ ಇರುತ್ತವೆಯೆಂದು ಉಕ್ತವಾಗಿದೆ.

೮೪. ಆಯಾಯಾ ಭೂತಗುಣವಾದ ತನ್ಮಾತ್ರವು ಆ ಭೂತಕ್ಕೆ ಸಾಧನ ಮತ್ತು ಪೋಷಕವಾಗುವುದು. ತನ್ಮಾತ್ರವೇ ಭೂತದ ವಿಶೇಷಗುಣವು. ತನ್ಮಾತ್ರವಾದರೋ ವಿಶೇಷರಹಿತವಾದುದು.

೮೫. ಈ ಪಂಚಭೂತಗಳು ಎಲ್ಲಾ ಕಡೆಗಳಲ್ಲಿಯೂ ಸೇರಿಕೊಂಡಿವೆ. ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಪಂಚಭೂತಾತ್ಮಕವು.

೮೬. ಈ ಪಂಚಭೂತಗಳು ಶರೀರದಲ್ಲಿ ಹೇಗೆ ಸೇರಿವೆಯೆಂಬುದು ನಿರೂಪಿಸಲ್ಪಡುತ್ತದೆ :—ಶರೀರದಲ್ಲಿನ ಮೂಳೆ, ಮಾಂಸ, ಕೂದಲು, ಚರ್ಮ, ಉಗುರು ಮತ್ತು ಹಲ್ಲು ಇವುಗಳು ಪೃಥಿವೀಮಯವು.

೮೭. ಮೂತ್ರ, ರಕ್ತ, ಶ್ಲೇಷ್ಮ, ಬೆವರು, ವೀರ್ಯ ಮುಂತಾದವುಗಳು ಜಲಮಯವು. ವ-ನಸ್ಸು, ಕಣ್ಣುಗಳು- ಪಿತ್ತ ಇವುಗಳಲ್ಲಿ ತೇಜಸ್ಸಿನ ಧರ್ಮವು ಕಂಡುಬರುವುದರಿಂದ ಅವು ತೇಜೋಮಯವು.

ಪ್ರಾಣಾದಿವೃತ್ತಿಭೇದೇನ ವಾಯುಶ್ಚೈವಾತ್ರ ಸಂಸ್ಥಿತಃ ।
ವಿಯತ್ಸರ್ವಾಸು ನಾಡೀಷು ಗರ್ಭವೃತ್ತ್ಯನುಷಂಗತಃ ॥ ೮೮ ॥

ವಿಯದಾದಿಮಹೀಪ್ರಾಂತಮೇತದಂಡಾರ್ಥಸಾಧನಂ ।
ಪ್ರತ್ಯಾತ್ಮ ನಿಯತಂ ಭೋಗಭೇದತೋ ವ್ಯವಸೀಯತೇ ॥ ೮೯ ॥

ತತ್ವಾನ್ಯೇವಂ ಕಲಾದ್ಯಾನಿ ಪ್ರತಿಪುಂನಿಯತಾನಿ ಹಿ ।
ದೇಹೇಷು ಕರ್ಮವಶತಃ ಸರ್ವೇಷು ವಿಚರಂತಿ ಹಿ ॥ ೯೦ ॥

ಮಾಯೇಯಶ್ಚೈವ ಪಾಶೋಯಂ ಯೇನಾವೃತಮಿದಂ ಜಗತ್ ।
ಅಶುದ್ಧಾಧ್ವಾಮತೋಹ್ಯೇಷ ಧರಣ್ಯಾದಿಕಲಾವಧಿಃ ॥ ೯೧ ॥

ತತ್ರ ಭೂಮಂಡಲಸ್ಥೋಸೌ ಸ್ಥಾವರೋ ಜಂಗಮಾತ್ಮಕಃ ।
ಸ್ಥಾವರಾ ಗಿರಿವೃಕ್ಷಾದ್ಯಾ ಜಂಗಮಸ್ತ್ರಿವಿಧಃ ಪುನಃ ॥ ೯೨ ॥

---

೮೮. ಪ್ರಾಣಾದಿ ವಾಯುಗಳು ಈ ಶರೀರದ ಹೃದಯಾದಿ ಭಿನ್ನಭಿನ್ನ ಸ್ಥಾನಗಳಲ್ಲಿರುತ್ತವೆ. ಆಕಾಶವು ಕುಕ್ಷಿದೇಶದ ಸಂಬಂಧದಿಂದ ಸಕಲ ನಾಡಿಗಳಲ್ಲಿಯೂ ಇರುತ್ತದೆ.

೮೯. ಆಕಾಶಾದಿ ಪೃಥಿವೀಪರ್ಯಂತವಾದ ಭೂತವು ಈರೀತಿ ಬ್ರಹ್ಮಾಂಡಕ್ಕೆ ಕಾರಣವಾಗಿದೆ ಅದು ಪ್ರತಿಯೊಬ್ಬ ಆತ್ಮನಲ್ಲಿಯೂ ನಿಯತವಾಗಿರುವ ಅಂಶವನ್ನು ಭಿನ್ನ ಭಿನ್ನ ಭೋಗಗಳಿಂದ ವಿಶೇಷಾಕಾರವಾಗಿ ನಿರ್ಣಯಿಸಬೇಕು.

೯೦. ಈರೀತಿ ಕಲಾ ಮುಂತಾದ ತತ್ವಗಳು ಪ್ರತಿಪುರುಷನಲ್ಲಿಯೂ ನಿಯತವಾಗಿರುವುವು. ಅವು ಕರ್ಮಾಧೀನವಾಗಿ ಸಕಲ ದೇಹಗಳಲ್ಲಿಯೂ ಸಂಚರಿಸುತ್ತವೆ.

೯೧. ಮಾಯೆಯೆಂಬ ಈ ಪಾಶದಿಂದಲೇ ಈ ಜಗತ್ತೆಲ್ಲವೂ ಮುಚ್ಚಲ್ಪಟ್ಟಿದೆ. ಭೂಮಿಯಿಂದ ಕಲೆಯವರೆಗಿನ ಈ ಸೃಷ್ಟಿಯು ಅಶುದ್ಧಮಾರ್ಗವೆಂದು ಜ್ಞಾನಿಗಳ ಅಭಿಪ್ರಾಯ.

೯೨. ಅದರಲ್ಲಿ ಚರಾಚರಾತ್ಮಕವಾದುದು ಈ ಭೂಮಂಡಲದಲ್ಲಿರುತ್ತದೆ. ಪರ್ವತ, ವೃಕ್ಷ ಮುಂತಾದವು ಸ್ಥಾವರವೆನಿಸುವುವು. ಚರವು ಸ್ವೇದಜ, ಅಂಡಜ, ಜರಾಯುಜ, ಎಂದು ಮೂರುವಿಧವು.

ಸ್ವೇದಜಾಶ್ಚಾಂಡಜಾಶ್ಚೈವ ತಥೈವ ಚ ಜರಾಯುಜಾಃ ।
ಚರಾಚರೇಷು ಲಕ್ಷಾಣಾಂ ಚತುರಾಶೀತಿಯೋನಯಃ ॥ ೯೩ ॥

ಭ್ರಮಯಾಣಸ್ತೇಷು ಜೀವಃ ಕದಾಚಿನ್ಮಾನುಷಂ ವಪುಃ ।
ಪ್ರಾಪ್ನೋತಿ ಕರ್ಮವಶತಃ ಪರಂ ಸರ್ವಾರ್ಥ ಸಾಧಕಂ ॥ ೯೪ ॥

ತತ್ರಾಪಿ ಭಾರತೇ ಖಂಡೇ ಬ್ರಾಹ್ಮಣಾದಿಕುಲೇಷು ಚ ।
ಮಹಾಪುಣ್ಯವಶೇನೈವ ಜನಿರ್ಭವತಿ ದುರ್ಲಭಾ ॥ ೯೫ ॥

ಜನಿಶ್ಚ ಪುಂಸ್ತ್ರಿಯೋರ್ಯೋಗೇ ಶುಕ್ರಶೋಣಿತ ಯೋಗತಃ ।
ಬಿಂದುರೇಕಃ ಪ್ರವಿಶತಿ ಯದಾ ಗರ್ಭೇ ದ್ವಯಾತ್ಮಕಃ ॥ ೯೬ ॥

ತದಾ ರಜೋಧಿಕೇ ನಾರೀ ಭವೇದ್ರೇತೋಽಧಿಕೇ ಪುಮಾನ್ ।
ಮಲ ಕರ್ಮಾದಿಪಾಶೇನ ಕಶ್ಚಿದಾತ್ಮಾ ನಿಯಂತ್ರಿತಃ ॥ ೯೭ ॥

---

೯೩. ಚರಾಚರಗಳಲ್ಲಿ ಒಟ್ಟು ಎಂಭತ್ತುನಾಲ್ಕು ಲಕ್ಷ ಯೋನಿಗಳಿವೆ.

೯೪. ಜೀವನು ಅವುಗಳಲ್ಲಿ ತಿರುಗುತ್ತಾ, ಒಂದಾನೊಂದು ಕಾಲದಲ್ಲಿ ಸಕಲಪುರುಷಾರ್ಥಗಳಿಗೆ ಸಾಧಕವಾದ, ಉತ್ಕೃಷ್ಟವಾದ ಮನುಷ್ಯಶರೀರವನ್ನು ಹೊಂದುವನು.

೯೫. ಆದರಲ್ಲಿಯೂ ಭರತಖಂಡದಲ್ಲಿ ಬ್ರಾಹ್ಮಣ, ಕ್ಷತ್ರಿಯ ಮುಂತಾದ ವಂಶಗಳಲ್ಲಿ ಹುಟ್ಟುವುದು ದುರ್ಲಭವು. ಅತ್ಯಂತ ಪುಣ್ಯಮಾಡಿದ್ದರೇ ಅಂತಹ ಉತ್ಪತ್ತಿಯು ಲಭಿಸುವುದು.

೯೬. ಸ್ತ್ರೀಪುರುಷರ ಸಮಾಗಮದಲ್ಲಿ ಶುಕ್ರಶೋಣಿತವು ಮಿಶ್ರವಾಗಿ ಉಭಯಾತ್ಮಕವಾದ ಒಂದು ತೊಟ್ಟು ಗರ್ಭಕೋಶದಲ್ಲಿ ಪ್ರವೇಶಿಸಿದಾಗ ಶರೀರವು ಉತ್ಪನ್ನವಾಗುವುದು.

೯೭. ಆಗ ಶುಕ್ರಶೋಣಿತಗಳಲ್ಲಿ ಶೋಣಿತದ ಭಾಗವು ಹೆಚ್ಚಾಗಿದ್ದರೆ ಹೆಣ್ಣು ಹುಟ್ಟುವುದು. ರೇತಸ್ಸು ಅಧಿಕವಾಗಿದ್ದರೆ ಗಂಡು ಹುಟ್ಟುವುದು. ಮಲ, ಕರ್ಮಗಳ ಪಾಶದಿಂದ ಬದ್ಧನಾದ ಯಾವನೋ ಒಬ್ಬ ಆತ್ಮನು ಆಗ ಕಲೆಯಿಂದ ಸಹಿತನಾಗಿ ಜೀವಭಾವವನ್ನು ಹೊಂದುವನು.

ಜೀವಭಾವಂ ತದಾ ತಸ್ಮಿನ್ ಸಕಲಃ ಪ್ರತಿಪದ್ಯತೇ ।
ಅಥ ತತ್ರಾಹೃತೈರ್ಮಾತ್ರಾ ಪಾನಾನ್ನಾದ್ಯೈಶ್ಚ ಪೋಷಿತಃ ॥ ೯೮ ॥

ಪಕ್ಷಮಾಸಾದಿಕಾಲೇನ ವರ್ಧತೇ ದೇಹಮತ್ರ ಹಿ ।
ದುಃಖಾದ್ಯೈಃ ಪೀಡಿತಶ್ಚೈವಾಚ್ಛನ್ನದೇಹೋ ಜರಾಯುಣಾ ॥ ೯೯ ॥

ಏವಂ ತತ್ರ ಸ್ಥಿತೋ ಗರ್ಭೇ ಪ್ರಾಗ್ಜನ್ಮೋತ್ಥಂ ಶುಭಾಶುಭಂ ।
ಸ್ಮರಂಸ್ತಿಷ್ಠತಿ ದುಃಖಾತ್ಮಾ ಪೀಡ್ಯಮಾನೋ ಮುಹುರ್ಮುಹುಃ ॥ ೧೦೦ ॥

ಕಾಲಕ್ರಮೇಣ ಬಾಲೋಽಸೌ ಮಾತರಂ ಪೀಡಯನ್ನಪಿ ।
ಸಂಪೀಡಿತೋ ನಿಸ್ಸರತಿ ಯೋನಿಯಂತ್ರಾದವಾಙ್ಮುಖಃ ॥ ೧೦೧ ॥

ಕ್ಷಣಂ ತಿಷ್ಠತಿ ನಿಶ್ಚೇಷ್ಟಸ್ತತೋ ರೋದಿತು ಮಿಚ್ಛತಿ ।
ತತಃ ಕ್ರಮೇಣ ಸ ಶಿಶುರ್ವರ್ಧಮಾನೋ ದಿನೇದಿನೇ ॥ ೧೦೨ ॥

---

೯೮-೧೦೦. ಅನಂತರ ದೇಹವು ತಾಯಿಯಿಂದ ಸೇವಿಸಲ್ಪಟ್ಟ ನೀರು, ಅನ್ನ ಮುಂತಾದುವುಗಳಿಂದ ಪೋಷಿಸಲ್ಪಟ್ಟು ಈ ಗರ್ಭದಲ್ಲಿ ಪಕ್ಷ, ತಿಂಗಳು ಮುಂತಾದ ಕಾಲಕ್ರಮವಾಗಿ ಬೆಳೆಯುತ್ತದೆ. ಜೀವನು ದುಃಖ ಮುಂತಾದುವುಗಳಿಂದ ಬಾಧೆಪಡುತ್ತಾ ಜರಾಯು (ಗರ್ಭದ ಹೊದಿಕೆ) ವಿನಿಂದ ಆವರಿಸಲ್ಪಟ್ಟ ಶರೀರವುಳ್ಳವನಾಗಿ, ಆ ಗರ್ಭದಲ್ಲಿ ಪೂರ್ವಜನ್ಮದಲ್ಲಿನ ಶುಭಾಶುಭಗಳನ್ನು ಸ್ಮರಿಸಿಕೊಳ್ಳುತ್ತಾ ತಿರುಗಿತಿರುಗಿ ಬಾಧಿಸಲ್ಪಡುತ್ತಾ ದುಃಖಸ್ವರೂಪನಾಗಿರುವನು.

೧೦೧. ಕಾಲಕ್ರಮದಿಂದ ಈ ಶಿಶುವು ತಾಯಿಯನ್ನು ಹಿಂಸಿಸುತ್ತಾ, ತಾನೂ ಪೀಡಿತನಾಗಿ ಯೋನಿಯೆಂಬ ಯಂತ್ರದಿಂದ ಇಳಿಮುಖವಾಗಿ ಹೊರಗೆ ಬರುವನು.

೧೦೨-೧೦೩. ಹೊರಗೆ ಬಂದಮೇಲೆ ಒಂದು ಕ್ಷಣಕಾಲ ವ್ಯಾಪಾರವಿಲ್ಲದವನಾಗಿದ್ದು, ಅನಂತರ ಅಳಲಾರಂಭಿಸುತ್ತಾನೆ. ತರುವಾಯ ಆ ಶಿಶುವು ಕ್ರಮವಾಗಿ ದಿನದಿನಕ್ಕೆ ಅಭಿವೃದ್ಧಿಹೊಂದುತ್ತಾ ಬಾಲ್ಯ, ಅವಯವ ನ್ಯೂನತೆ ಇವು

ಬಾಲಪೌಗಂಡ ಭೇದೇನ ಯುವತ್ವಂ ಪ್ರತಿಪದ್ಯತೇ ।
ಏವಂ ಕ್ರಮೇಣ ಲೋಕೇಽಸ್ಮಿನ್ ದೇಹಿನಾಂ ದೇಹಸಂಭವಃ ॥ ೧೦೩ ॥

ಮಾನುಷ್ಯಂ ದುರ್ಲಭಂ ಪ್ರಾಪ್ಯ ಸರ್ವಲೋಕೋಪಕಾರಕಂ ।
ಯಸ್ತಾರಯತಿ ನಾತ್ಮಾನಂ ತಸ್ಮಾತ್ಪಾಪತರೋಽತ್ರಕಃ ॥ ೧೦೪ ॥

ಆಹಾರಶ್ಚೈವ ನಿದ್ರಾ ಚ ಭಯಂ ಮೈಥುನಮೇವ ಚ ।
ಪಶ್ವಾದೀನಾಂ ಚ ಸರ್ವೇಷಾಂ ಸಾಧಾರಣಮಿತೀರಿತಂ ॥ ೧೦೫ ॥

ಚತುಷ್ವೇವಾನುರಕ್ತೋ ಯಃ ಸ ಮೂರ್ಖೋಹ್ಯಾತ್ಮಘಾತಕಃ ।
ಮನುಷ್ಯಾಣಾಮಯಂ ಧರ್ಮಸ್ಸ್ವಬಂಧಚ್ಛೇದನಾತ್ಮಕಃ ॥ ೧೦೬ ॥

ಪಾಶಬಂಧನವಿಚ್ಛೇದೋ ದೀಕ್ಷಯೈವ ಪ್ರಜಾಯತೇ ।
ಅತೋ ಬಂಧನ ವಿಚ್ಛಿತ್ತ್ಯೈ ಮಂತ್ರದೀಕ್ಷಾಂ ಸಮಾಚರೇತ್ ॥ ೧೦೭ ॥

---

ಗಳನ್ನು ಭೇದಿಸಿಕೊಂಡು ಯೌವನವನ್ನು ಹೊಂದುವನು. ಈರೀತಿಯಾಗಿಯೇ ಲೋಕದಲ್ಲಿ ಪ್ರಾಣಿಗಳಿಗೆ ದೇಹವು ಹುಟ್ಟುವುದು.

೧೦೪. ಲೋಕಕ್ಕೆಲ್ಲಾ ಉಪಕಾರಮಾಡುವುದಕ್ಕೆ ಅನುಕೂಲವಾದ, ದುರ್ಲಭ ಮನುಷ್ಯಜನ್ಮವನ್ನು ತಾಳಿದಾಗ ಆತ್ಮೋದ್ಧಾರ ಮಾಡಿಕೊಳ್ಳದಿರುವವನಿಗಿಂತಲೂ ಹೆಚ್ಚು ಪಾಪಿಯು ಈ ಲೋಕದಲ್ಲಿ ಯಾರು ?

೧೦೫. ಆಹಾರ ತಿನ್ನುವುದು, ನಿದ್ರೆ, ಭಯ, ಸಂಭೋಗ, ಇವು ಪಶುಗಳೇ ಮುಂತಾಗಿ ಮನುಷ್ಯರವರೆಗೆ ಸರ್ವರಿಗೂ ಸಮಾನವು.

೧೦೬. ಆಹಾರ ಮುಂತಾದ ನಾಲ್ಕರಲ್ಲಿಯೇ ಅನುರಾಗವುಳ್ಳವನು ಮೂರ್ಖನು ಮತ್ತು ಆತ್ಮಘಾತಕನು. ತನ್ನ ಬಂಧವನ್ನು ನಾಶಪಡಿಸಿಕೊಳ್ಳುವುದೇ ಮನುಷ್ಯರ ಧರ್ಮವು.

೧೦೭. ದೀಕ್ಷೆಯಿಂದಲೇ ಪಾಶವೆಂಬ ಬಂಧನದ ಭೇದನವಾಗುವುದು. ಆದಕಾರಣ ಬಂಧನವಿಚ್ಛೇದಕ್ಕೋಸ್ಕರ ಮಂತ್ರ ದೀಕ್ಷೆಯನ್ನಾಚರಿಸಬೇಕು.

ದೀಕ್ಷಾಜ್ಞಾನಾಖ್ಯಯಾ ಶಕ್ತ್ಯಾ ಹ್ಯಪಧ್ವಂಸಿತಬಂಧನಃ ।
ಶುದ್ಧಾತ್ಮತತ್ವನಾಮ್ನಾಸೌ ನಿರ್ವಾಣಪದಮಶ್ನುತೇ ॥ ೧೦೮ ॥

ಸ್ವಶಕ್ತ್ಯಾತ್ಮಿಕಯಾ ದೃಷ್ಟ್ಯಾ ಶಿವಂ ಧ್ಯಾಯತಿ ಪಶ್ಯತಿ ।
ಯಜತೇ ಶಿವಮಂತ್ರೈಶ್ಚ ಸ್ವಪರೇಷಾಂ ಹಿತಾಯ ಸಃ ॥ ೧೦೯ ॥

ಶಿವಾರ್ಕಶಕ್ತಿದೀಧಿತ್ಯಾ ಸಮರ್ಥೀಕೃತಚಿದ್ದೃಶಾ ।
ಶಿವಂ ಶಕ್ತ್ಯಾದಿಭಿಃ ಸಾರ್ಧಂ ಪಶ್ಯತ್ಯತ್ಮಗತಾವೃತಿಃ ॥ ೧೧೦ ॥

ಅಂತಃ ಕರಣವೃತ್ತಿರ್ಯಾ ಬೋಧಾಖ್ಯಾ ಸಾ ಮಹೇಶ್ವರಂ ।
ನ ಪ್ರಕಾಶಯಿತುಂ ಶಕ್ತಾ ಪಾಶತ್ವಾನ್ನಿಗಡಾದಿವತ್ ॥ ೧೧೧ ॥

ದೀಕ್ಷೈವ ಪರಮೋ ಹೇತುಃ ಪಾಶವಿಚ್ಛೇದನೇ ಪುನಃ ।
ಅತಃ ಶಾಸ್ತ್ರೋಕ್ತವಿಧಿನಾ ಮಂತ್ರದೀಕ್ಷಾಂ ಸಮಾಚರೇತ್ ॥ ೧೧೨ ॥

---

೧೦೮. ದೀಕ್ಷೆಯ ಜ್ಞಾನವೆಂಬ ಶಕ್ತಿಯಿಂದ ನಾಶಪಡಿಸಲ್ಪಟ್ಟ ಬಂಧನವುಳ್ಳ ಈ ಪುರುಷನು ಪರಿಶುದ್ಧವಾದ ಆತ್ಮತತ್ವವೆನಿಸಿ ನಿರ್ವಾಣ (ಮುಕ್ತಿ) ಪದವಿಯನ್ನು ಹೊಂದುವನು.

೧೦೯. ಅವನು ತನ್ನ ನೈಜಶಕ್ತಿರೂಪವಾದ ಜ್ಞಾನದಿಂದ ಈಶ್ವರನನ್ನು ಧ್ಯಾನಮಾಡುವನು, ಸಾಕ್ಷಾತ್ಕರಿಸುವನು ಮತ್ತು ಸ್ವಪರಹಿತಕ್ಕೋಸ್ಕರವಾಗಿ ಶಿವ ಮಂತ್ರಗಳಿಂದ ಈಶ್ವರನನ್ನು ಪೂಜಿಸುವನು.

೧೧೦. ಆತ್ಮಸ್ವರೂಪಜ್ಞಾನವು ಈಶ್ವರನೆಂಬ ಸೂರ್ಯನ ಶಕ್ತಿಯೆಂಬ ಕಿರಣದಿಂದ ಶಕ್ತಿಯುಳ್ಳದಾಗಿ ಮಾಡಲ್ಪಟ್ಟ ಚೈತನ್ಯವೆಂಬ ದೃಷ್ಟಿಯಿಂದ ಶಕ್ತ್ಯಾದಿಗಳ ಸಹಿತವಾಗಿ ಈಶ್ವರನನ್ನು ನೋಡುವನು.

೧೧೧. ಬೋಧವೆಂಬ ಅಂತಃಕರಣವೃತ್ತಿಯು ಬೇಡಿ ಮುಂತಾದುವುಗಳಂತೆ ಪಾಶರೂಪವಾಗಿರುವುದರಿಂದ ಮಹೇಶ್ವರನನ್ನು ಪ್ರಕಾಶಪಡಿಸಲು ಸಮರ್ಥವಾಗುವುದಿಲ್ಲ.

೧೧೨. ಸಂಸಾರಪಾಶವನ್ನು ಬಿಡಿಸಿಕೊಳ್ಳಲು ದೀಕ್ಷೆಯೇ ಉತ್ತಮವಾದ ಸಾಧನವು. ಆದಕಾರಣ ಶಾಸ್ತ್ರೋಕ್ತವಿಧಾನಪ್ರಕಾರ ಮಂತ್ರದೀಕ್ಷೆಯನ್ನವಲಂಬಿಸಬೇಕು.

ದೀಕ್ಷಿತಸ್ತಂತ್ರವಿಧಿನಾ ಸ್ವವರ್ಣಾಚಾರತತ್ಪರಃ ।
ಅನುಷ್ಠಾನಂ ಪ್ರಕುರ್ವೀತ ನಿತ್ಯನೈಮಿತ್ತಿಕಾತ್ಮಕಂ ॥ ೧೧೩ ॥

ನಿಜವರ್ಣಾಶ್ರಮಾಚಾರಾನ್ಮನಸಾಽಪಿ ನ ಲಂಘಯೇತ್ ।
ಯೋ ಯಸ್ಮಿನ್ನಾಶ್ರಮೇ ತಿಷ್ಠನ್ ದೀಕ್ಷಾಂ ಪ್ರಾಪ್ನೋತಿ ಮಾನವಃ ॥೧೧೪॥

ಸ ತಸ್ಮಿನ್ನಾಶ್ರಮೇ ತಿಷ್ಠೇತ್ತದ್ಧರ್ಮಾನನುಪಾಲಯೇತ್ ।
ಕೃತಾನ್ಯಪಿ ನ ಕರ್ಮಾಣಿ ಬಂಧನಾಯ ಭವಂತಿ ಹಿ ॥ ೧೧೫ ॥

ಏಕೈಕಫಲದಂ ಕರ್ಮ ಮಂತ್ರಾನುಷ್ಠಾನಸಂಭವಂ ।
ದೀಕ್ಷಿತೋಽಭಿಲಷೇದ್ಭೋಗಾನ್ಯದ್ಯಲ್ಲೋಕಗತಾನಸೌ ॥ ೧೧೬ ॥

ಮಂತ್ರಾರಾಧನ ಸಾಮರ್ಥ್ಯಾತ್ತದ್ಭುಕ್ತ್ವಾ ಮೋಕ್ಷಮಶ್ನುತೇ ।
ತಸ್ಮಾತ್ತು ದೀಕ್ಷಿತಃ ಕುರ್ಯಾನ್ನಿತ್ಯನೈಮಿತ್ತಿಕಾದಿಕಂ ॥ ೧೧೭ ॥

---

೧೧೩. ದೀಕ್ಷಿತನು ತಂತ್ರದಲ್ಲಿ ಹೇಳಿರುವ ಮೇರೆಗೆ ತನ್ನ ಜಾತಿಧರ್ಮದಲ್ಲಾಸಕ್ತನಾಗಿ ನಿತ್ಯ ನೈಮಿತ್ತಿಕ ಕರ್ಮಗಳ ಅನುಷ್ಠಾನವನ್ನು ಮಾಡಬೇಕು.

೧೧೪-೧೧೫. ತನ್ನ ಜಾತಿ, ಆಶ್ರಮಗಳಿಗೆ ವಿಹಿತವಾಗಿರುವ ಧರ್ಮವನ್ನು ಮನಸ್ಸಿನಲ್ಲಿಯೂ ಸಹ ಉಲ್ಲಂಘಿಸುವ ಯೋಚನೆ ಮಾಡಬಾರದು. ಮನುಷ್ಯನು ಯಾವ ಆಶ್ರಮದಲ್ಲಿದ್ದು ದೀಕ್ಷೆಯನ್ನು ಪಡೆಯುವನೋ ಅವನು ಅದೇ ಆಶ್ರಮದಲ್ಲಿದ್ದು ಅದರ ಧರ್ಮಗಳನ್ನು ಕಾಪಾಡಿಕೊಳ್ಳಬೇಕು. ಅಂತಹವನಿಂದ ಕರ್ಮಗಳು ಮಾಡಲ್ಪಟ್ಟಾಗ್ಯೂ ಅವು ಅವನಿಗೆ ಬಂಧಕವಾಗುವುದಿಲ್ಲ.

೧೧೬-೧೧೭. ದೀಕ್ಷೆಯು ಮಂತ್ರಾನುಷ್ಠಾನದಿಂದುಂಟಾದ ಧರ್ಮವನ್ನೇ ಫಲಪ್ರದವನ್ನಾಗಿ ಮಾಡುವುದು. ಈ ದೀಕ್ಷಿತನು ಯಾವಯಾವಲೋಕಗಳಲ್ಲಿನ ಭೋಗಗಳನ್ನಪೇಕ್ಷಿಸುವನೋ ಅಂತಹ ಭೋಗಗಳೆಲ್ಲವನ್ನೂ ಮಂತ್ರಾರಾಧನೆಯ ಶಕ್ತಿಯಿಂದ ಅನುಭವಿಸಿ ಅನಂತರ ಮೋಕ್ಷವನ್ನು ಪಡೆಯುವನು. ದೀಕ್ಷೆಯನ್ನು ಹೊಂದಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಆಚರಿಸದಿರುವ ಮನುಷ್ಯನು ಸ್ವಲ್ಪ ಕಾಲ ಪಿಶಾಚವಾಗಿದ್ದು ಕೊನೆಯಲ್ಲಿ ಮೋಕ್ಷವನ್ನು ಹೊಂದುವನು. ಆದಕಾರಣ ದೀಕ್ಷಿತನು ನಿತ್ಯ ನೈಮಿತ್ತಿಕಗಳನ್ನು ಆಚರಿಸಬೇಕು.

ಅನುಷ್ಠಾನಂ ಚ ತೇನಾಸ್ಯ ದೀಕ್ಷಾಂ ಪ್ರಾಪ್ಯಾನುಮೀಯತೇ ।
ನಿತ್ಯನೈಮಿತ್ತಿಕಾಚಾರಪಾಲಕಸ್ಯ ನರಸ್ಯ ತು ॥ ೧೧೯ ॥

ದೀಕ್ಷಾವೈಕಲ್ಯವಿರಹಾತ್ಸದ್ಯೋ ಮುಕ್ತಿಸ್ತು ಜಾಯತೇ ।
ತತ್ರಾಪಿ ಗುರುಭಕ್ತಸ್ಯ ಗತಿರ್ಭವತಿ ನಾನ್ಯಥಾ ॥ ೧೨೦ ॥

ದೀಕ್ಷಯಾಗುರುಮೂರ್ತಿಸ್ಥಃ ಸರ್ವಾನುಗ್ರಾಹಕಃ ಶಿವಃ ।
ದೃಷ್ಟಾದ್ಯರ್ಥತಯಾ ಯಸ್ಯ ಗುರುಭಕ್ತಿಸ್ತು ಕೃತ್ರಿಮಾ ॥ ೧೨೧ ॥

ಕೃತೇಽಪಿ ವಿಫಲಂ ತಸ್ಯ ಪ್ರಾಯಶ್ಚಿತ್ತಂ ಪದೇ ಪದೇ ।
ಕಾಯೇನ ಮನಸಾ ವಾಚಾ ಗುರುಭಕ್ತಿಪರಸ್ಯ ಚ ॥ ೧೨೨ ॥

ಪ್ರಾಯಶ್ಚಿತ್ತಂ ಭವೇನ್ನೈವ ಸಿದ್ಧಿಸ್ತಸ್ಯ ಪದೇ ಪದೇ ।
ಗುರುಭಕ್ತಿಯುತೇ ಶಿಷ್ಯೇ ಸರ್ವಸ್ಯ ವಿನಿವೇದಕೇ ॥ ೧೨೩ ॥

---

೧೧೯. ನಿತ್ಯ ನೈಮಿತ್ತಿಕ ಧರ್ಮಗಳನ್ನು ಪಾಲಿಸುತ್ತಿರುವ ಈ ಮನುಷ್ಯನ ಅನುಷ್ಠಾನವು ದೀಕ್ಷೆಯನ್ನು ಸ್ವೀಕರಿಸಿದಮೇಲೆ ಅದರಿಂದ ಗಣನೆಗೆ ಬರುತ್ತದೆ.

೧೨೦-೧೨೪. ಅಂಗಲೋಪಬರದಂತೆ ದೀಕ್ಷೆಯನ್ನು ವಹಿಸಿರುವವನಿಗೆ ತಕ್ಷಣದಲ್ಲಿಯೇ ಮೋಕ್ಷವಾಗುವುದು. ಅದರಲ್ಲಿಯೂ ಗುರುಭಕ್ತನ ದೀಕ್ಷೆಯಿಂದ ಗುರುಮೂರ್ತ್ಯಂತರ್ಗತನಾದ, ಸರ್ವರಿಗೂ ಅನುಗ್ರಹಮಾಡುವ ಈಶ್ವರನು ಸದ್ಗತಿಯನ್ನು ಕೊಡುವನು. ಬೇರೆ ಮಾರ್ಗವಿಲ್ಲ ಐಹಿಕ ಪ್ರಯೋಜನಕ್ಕಾಗಿ ಕಪಟದಿಂದ ಗುರುಭಕ್ತಿಮಾಡುವವನು ಕರ್ಮಮಾಡಿದಾಗ್ಯೂ ಅದು ನಿಷ್ಫಲವಾಗುವುದು. ಅಂತಹವನಿಗೆ ಪ್ರತಿಯೊಂದು ಹೆಜ್ಜೆಗೂ ಪ್ರಾಯಶ್ಚಿತ್ತವಾಗುವುದು. ಶರೀರ ಮನಸ್ಸು ವಾಕ್ಕುಗಳೆಂಬ ತ್ರಿಕರಣಗಳಿಂದಲೂ ಗುರುಭಕ್ತಿನಿಷ್ಠನಾದವನಿಗೆ ಪ್ರಾಯಶ್ಚಿತ್ತವಾಗುವುದೇ ಇಲ್ಲ. ಹೆಜ್ಜೆಹೆಜ್ಜೆಗೂ ಸಿದ್ಧಿಯಾಗುವುದು. ಗುರು

ಮಿಥ್ಯಾಪ್ರಯುಕ್ತ ಮಂತ್ರಸ್ತು ಪ್ರಾಯಶ್ಚಿತ್ತೀ ಭವೇದ್ಗುರುಃ ॥ ೧೨೪ ॥

ಇತಿ ನಾರದೀಯ ಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ತ್ರಿಷಷ್ಟಿತಮೋಽಧ್ಯಾಯಃ

---

ಭಕ್ತಿಯುಳ್ಳವನಾಗಿ ಸರ್ವಸ್ವವನ್ನೂ ನಿವೇದಿಸುತ್ತಿರುವ ಶಿಷ್ಯನಿಗೆ ವಿಪರೀತವಾಗಿ ಮಂತ್ರವನ್ನುಪದೇಶಿಸುವ ಗುರುವು ಪ್ರಾಯಶ್ಚಿತ್ತಮಾಡಿಕೊಳ್ಳಬೇಕು.

ಇಂತು ಶ್ರೀ ನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾ
ಖ್ಯಾನವೆಂಬ ತೃತೀಯ ಪಾದದಲ್ಲಿ ಅರವತ್ತುಮೂರನೆಯ
ಅಧ್ಯಾಯವು ಮುಗಿದುದು.

---

## ಕಥಾಸಂಗ್ರಹ

ಸರ್ವದೇವೇಶ್ವರನಾದ ವಿಷ್ಣುವು ವೇದ ತಂತ್ರಾದಿಗಳಲ್ಲಿ ಪ್ರತಿಪಾದ್ಯನು. ಯಾವ ಮಂತ್ರಗಳಿಂದ ಅವನನ್ನು ಆರಾಧಿಸಬೇಕು? ಪ್ರಾತಃಕಾಲದಿಂದ ಮನುಷ್ಯನ ಕರ್ತವ್ಯಗಳೇನು? ಇತ್ಯಾದಿ ವಿಷಯಗಳನ್ನು ನಾರದನು ಕೇಳಲಾಗಿ ಸನತ್ಕುಮಾರನು ಭಗವತ್ಸಂಬಂಧಿಯಾದ ತಂತ್ರವನ್ನು ವಿವರಿಸಿರುವನು. ಮಹಾತಂತ್ರಸ್ವರೂಪವನ್ನು ನಿರೂಪಿಸಿ, ನಾಲ್ಕುಪಾದ, ಪಶುಪತಿ, ಪಶು, ಪಾಶ ಎಂಬ ಪದಾರ್ಥಗಳು ವಿಸ್ತಾರವಾಗಿ ಉಕ್ತವಾಗಿವೆ. ಸೃಷ್ಟಿಕ್ರಮ, ತತ್ವ, ದೀಕ್ಷೆಯ ಪ್ರಾಶಸ್ತ್ಯ ಪುರುಷನ ಉತ್ಪತ್ತಿಕ್ರಮ ಮುಂತಾದುವು ವಿಶದಪಡಿಸಲ್ಪಟ್ಟಿವೆ.

---

# ಚತುಷ್ಷಷ್ಟಿತಮೋಽಧ್ಯಾಯಃ

ಸನತ್ಕುಮಾರ ಉವಾಚ

ಅಥ ಜೀವಸ್ಯ ಪಾಶೌಘಚ್ಛೇದನಾಯೇಷ್ಟಸಿದ್ಧಿದಂ ।
ದೀಕ್ಷಾವಿಧಿಂ ಪ್ರವಕ್ಷ್ಯಾಮಿ ಮಂತ್ರಸಾಮರ್ಥ್ಯದಾಯಕಂ ॥ ೧ ॥

ದಿವ್ಯಂ ಭಾವಂ ಯತೋ ದದ್ಯಾತ್ಕ್ಷಿಣುಯಾದ್ದುರಿತಾನಿ ಚ ।
ಅತೋ ದೀಕ್ಷೇತಿ ಸಾ ಪ್ರೋಕ್ತಾ ಸರ್ವಾಗಮವಿಶಾರದೈಃ ॥ ೨ ॥

ಮನನಂ ಸರ್ವವೇದಿತ್ವಂ ತ್ರಾಣಂ ಸಂಸಾರ್ಯನುಗ್ರಹಃ ।
ಮನನಾತ್ತ್ರಾಣಧರ್ಮತ್ವಾನ್ಮಂತ್ರ ಇತ್ಯಭಿಧೀಯತೇ ॥ ೩ ॥

---

## ಅರವತ್ತನಾಲ್ಕನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಈಗ ಜೀವನ ಪಾಶಸಮುದಾಯವನ್ನು ನಾಶಪಡಿಸುವುದಕ್ಕಾಗಿ ಇಷ್ಟಸಿದ್ಧಿಪ್ರದವಾದ, ಮಂತ್ರಗಳಿಗೆ ಸಾಮರ್ಥ್ಯವನ್ನು ಕೊಡುವ ದೀಕ್ಷಾವಿಧಾನವನ್ನು ಹೇಳುತ್ತೇನೆ ಕೇಳು.

೨. ದಿವ್ಯಭಾವವನ್ನು ಕೊಡುವುದರಿಂದಲೂ, ಪಾಪಗಳನ್ನು ನಾಶಪಡಿಸುವುದರಿಂದಲೂ ಅದು ಆಗಮಾಭಿಜ್ಞರಿಂದ ದೀಕ್ಷೆ ಎಂಬುದಾಗಿ ಉಕ್ತವಾಗಿದೆ.

೩. ಮನನವೆಂದರೆ ಜ್ಞಾನವು. ಸಂಸಾರಿಗಳಾದ ಆತ್ಮರಿಗೆ ಅನುಗ್ರಹಮಾಡುವುದೇ ತ್ರಾಣವು. ಜ್ಞಾನ, ತ್ರಾಣಸಾಧಕವಾದುದು ಮಂತ್ರವೆಂದು ಉಕ್ತವಾಗಿದೆ.

ಸ್ತ್ರೀಪುಂನಪುಂಸಕಾತ್ಮಾನಸ್ತೇ ಮಂತ್ರಾಸ್ತು ತ್ರಿಧಾ ಮತಾಃ ।
ಸ್ತ್ರೀಮಂತ್ರಾಸ್ತು ದ್ವಿಠಾಂತಾಸ್ಸ್ಯುಃ ಪುಂಮಂತ್ರಾ ಹುಂ ಫಡಂತಕಾಃ ॥ ೪ ॥

ಕ್ಲೀಬಾಶ್ಚೈವ ನಮೋಂತಾಸ್ಸ್ಯುರ್ಮಂತ್ರಾಣಾಂ ಜಾತಯಃ ಸ್ಮೃತಾಃ ।
ಪುಂದೈವತಾಸ್ತು ಮಂತ್ರಾಸ್ಸ್ಯುರ್ವಿದ್ಯಾಃ ಸ್ತ್ರೀದೈವತಾ ಮತಾಃ ॥ ೫ ॥

ಷಟ್ಕರ್ಮಸು ಪ್ರಶಸ್ತಾಸ್ತೇ ಮನವಸ್ತ್ರಿವಿಧಾಃ ಪುನಃ ।
ತಾರಾಂತ್ಯರೇಫಸ್ವಾಹಾಸ್ತು ತತ್ರಾಗ್ನೇಯಾಸ್ಸಮೀರಿತಾಃ ॥ ೬ ॥

ಸೌಮ್ಯಾಸ್ತು ಭೃಗುಪೀಯೂಷಬೀಜಾದ್ಯಾಃ ಕಥಿತಾ ಮುನೇ ।
ಅಗ್ನೀಷೋಮಾತ್ಮಕಾ ಹ್ಯೇವಂ ಮಂತ್ರಾ ಜ್ಞೇಯಾ ಮನೀಷಿಭಿಃ ॥ ೭ ॥

---

೪-೫. ಆ ಮಂತ್ರಗಳು ಸ್ತ್ರೀಮಂತ್ರ, ಪುರುಷಮಂತ್ರ, ನಪುಂಸಕ ಮಂತ್ರ ಎಂಬುದಾಗಿ ಮೂರು ವಿಧವು. 'ದ್ವಿಠ್' ಎಂಬ ಶಬ್ದವೇ ಕೊನೆಯಲ್ಲುಳ್ಳ ಮಂತ್ರಗಳು ಸ್ತ್ರೀಮಂತ್ರಗಳಾಗುವುವು. ಕೊನೆಯಲ್ಲಿ 'ಹುಂ, ಫಟ್' ಎಂಬ ಶಬ್ದಗಳುಳ್ಳ ಮಂತ್ರಗಳು ಪುರುಷಮಂತ್ರಗಳು. "ನಮಃ" ಎಂಬ ಶಬ್ದವೇ ಅಂತ್ಯದಲ್ಲಿರುವ ಮಂತ್ರಗಳು ನಪುಂಸಕಮಂತ್ರಗಳು ಎಂಬುದಾಗಿ ಮಂತ್ರಗಳ ಜಾತಿಗಳು ಉಕ್ತವಾಗಿವೆ. ಮಂತ್ರಗಳಿಗೆ ಪುರುಷದೇವತೆಗಳೂ, ವಿದ್ಯೆಗಳಿಗೆ ಸ್ತ್ರೀದೇವತೆಗಳೂ ದೇವತೆಗಳಾಗುವರೆಂದು ಜ್ಞಾನಿಗಳ ಮತವು.

೬. ಆ ಮೂರು ವಿಧವಾದ ಮಂತ್ರಗಳೂ ಯಜನಾದಿ ಷಟ್ಕರ್ಮಗಳಲ್ಲಿ ಶ್ಲಾಘ್ಯವು. ಅದರಲ್ಲಿ ತಾರ ಎಂದರೆ ಪ್ರಣವಮಂತ್ರ, ಕೊನೆಯಲ್ಲಿ ರೇಫ ಅಥವಾ 'ಸ್ವಾಹಾ' ಶಬ್ದವಿರುವ ಮಂತ್ರ ಇವು ಅಗ್ನಿದೇವತಾಕಗಳೆಂದು ಹೇಳಲ್ಪಟ್ಟಿವೆ.

೭. ನಾರದಾ! ಭೃಗು, ಪೀಯೂಷ, ಬೀಜಮಂತ್ರ ಮುಂತಾದುವು ಸೋಮದೇವತಾಕಗಳೆಂದು ಉಕ್ತವಾಗಿವೆ. ಈ ಪ್ರಕಾರವಾಗಿ ಮಂತ್ರಗಳು ಅಗ್ನಿಸೋಮದೇವತಾಕಗಳೆಂದು ಜ್ಞಾನಿಗಳು ತಿಳಿಯಬೇಕು.

ಬೋಧಮಾಯಾಂತಿ ಚಾಗ್ನೇಯಾಃ ಶ್ವಸನೇ ಪಿಂಗಲಾಶ್ರಿತೇ ।
ಸೌಮ್ಯಾಶ್ಚೈವ ಪ್ರಬುಧ್ಯಂತೇ ವಾಮೇ ವಹತಿ ಮಾರುತೇ ॥ ೮ ॥

ಸರ್ವೇ ಮಂತ್ರಾಃ ಪ್ರಬುಧ್ಯಂತೇ ವಾಯೌ ನಾಡೀದ್ವಯಾಶ್ರಿತೇ ।
ಸ್ವಾಪಕಾಲೇ ತು ಮಂತ್ರಸ್ಯ ಜಪೋಽನರ್ಥಫಲಪ್ರದಃ ॥ ೯ ॥

ಪ್ರತ್ಯೇಕಂ ಮಂತ್ರಮುಚ್ಚಾರ್ಯ ಮಾಲಯಾ ತಾನ್ಸಮುಚ್ಚರೇತ್ ।
ಅನುಲೋಮೇ ಬಿಂದುಯುಕ್ತಾನ್ವಿಲೋಮೇ ಸರ್ಗಸಂಯುತಾನ್ ॥೧೦॥

ಜಪ್ತೋ ಯದಿ ಸ ವೈ ದೈವಂ ಪ್ರಬುದ್ಧಃ ಕ್ಷಿಪ್ರಸಿದ್ಧಿದಃ ।
ಅನಯಾ ಮಾಲಯಾ ಜಪ್ತೋ ದುಷ್ಟಮಂತ್ರೋಽಪಿ ಸಿದ್ಧ್ಯತಿ ॥ ೧೧ ॥

ಕ್ರೂರೇ ಕರ್ಮಣಿ ಚಾಗ್ನೇಯ್ಯಾಃ ಸೌಮ್ಯಾಃ ಸೌಮ್ಯೇ ಫಲಪ್ರದಾಃ ।
ಶಾಂತತಾಮೇತಿ ರೌದ್ರೇ ಯಃ ಶಾಂತಿಜಾತಿಸಮನ್ವಿತಃ ॥ ೧೨ ॥

---

೮. ವಾಯುವು ಪಿಂಗಳಾ ಎಂಬ ನಾಡಿಯಲ್ಲಿ ಸಂಚರಿಸುವಾಗ ಅಗ್ನಿದೇವತಾಕಮಂತ್ರಗಳು ಜ್ಞಾತವಾಗುವುವು. ವಾಯುವು ಎಡಭಾಗದಲ್ಲಿನ ನಾಡಿಯಲ್ಲಿ ಸಂಚರಿಸುವಾಗ ಸೋಮದೇವತಾಕಮಂತ್ರಗಳು ತಿಳಿಯಲ್ಪಡುತ್ತವೆ.

೯. ಈ ರೀತಿ ವಾಯುವು ಎರಡು ನಾಡಿಗಳನ್ನೂ ಆಶ್ರಯಿಸಿರುವಾಗ ಸಕಲ ಮಂತ್ರಗಳೂ ಜ್ಞಾತವಾಗುವುವು. ನಿದ್ರೆಯನ್ನು ಮಾಡುವ ಕಾಲದಲ್ಲಿ ಆಚರಿಸಿದ ಮಂತ್ರಜಪವು ಅನರ್ಥಫಲಕಾರಿಯಾಗುವುದು.

೧೦. ಪ್ರತ್ಯೇಕವಾಗಿ ಮಂತ್ರವನ್ನು ಹೇಳಿ. ಅನುಲೋಮಕ್ರಮದಲ್ಲಿ ಹೇಳುವಾಗ ಅನುಸ್ವಾರಸಹಿತವಾಗಿಯೂ, ಪ್ರತಿಲೋಮರೀತಿಯಿಂದ ಹೇಳುವಾಗ ವಿಸರ್ಗಸಹಿತವಾಗಿಯೂ ಅವುಗಳನ್ನು ಮಾಲಾಕಾರವಾಗಿ ಹೇಳಬೇಕು.

೧೧. ಈ ಪ್ರಕಾರ ಮಂತ್ರವನ್ನು ಜಪಿಸಿದರೆ ಅದು ದೈವಪ್ರಬೋಧಪೂರ್ವಕವಾಗಿ ಶೀಘ್ರಸಿದ್ಧಿಪ್ರದವಾಗುವುದು. ಈರೀತಿ ಮಾಲಾಕಾರವಾಗಿ ದುಷ್ಟಮಂತ್ರವನ್ನು ಜಪಿಸಿದರೆ ಅದೂ ಸಹ ಸಿದ್ಧಿಯನ್ನು ಕೊಡುತ್ತದೆ.

೧೨. ಉಗ್ರಕರ್ಮಗಳಲ್ಲಿ ಆಗ್ನೇಯ ಮಂತ್ರಗಳೂ, ಸೌಮ್ಯಕರ್ಮಗಳಲ್ಲಿ ಸೋಮದೇವತಾಕ ಮಂತ್ರಗಳೂ ಫಲಪ್ರದವಾಗುವುವು. 'ಹುಂ, ಫಟ್'

ಶಾಂತೋಽಪಿ ರೌದ್ರತಾಮೇತಿ ಹುಂ ಫಟ್ ಪಲ್ಲವಯೋಜನಾತ್ ।
ಛಿನ್ನಾದಿದೋಷಯುಕ್ತಾಸ್ತೇ ನೈವ ರಕ್ಷಂತಿ ಸಾಧಕಂ ॥ ೧೩ ॥

ಛಿನ್ನೋ ರುದ್ಧಃ ಶಕ್ತಿಹೀನಸ್ತತಶ್ಚೈವ ಪರಾಙ್ಮುಖಃ ।
ಕರ್ಣಹೀನೋ ನೇತ್ರಹೀನಃ ಕೀಲಿತಸ್ತಂಭಿತಸ್ತಥಾ ॥ ೧೪ ॥

ದಗ್ಧಃ ಸ್ರಸ್ತಶ್ಚ ಭೀತಶ್ಚ ಮಲಿನಶ್ಚ ತಿರಸ್ಕೃತಃ ।
ಭೇದಿತಶ್ಚ ಸುಷುಪ್ತಶ್ಚ ಮದೋನ್ಮತ್ತಶ್ಚ ಮೂರ್ಛಿತಃ ॥ ೧೫ ॥

ಹತವೀರ್ಯೋ ಭ್ರಾಂತಸಂಜ್ಞಃ ಪ್ರಧ್ವಸ್ತೋ ಬಾಲಕಸ್ತಥಾ ।
ಕುಮಾರೋಽಥಯುವಾ ಪ್ರೌಢೋ ವೃದ್ಧೋ ನಿಸ್ತ್ರಿಂಶಕಸ್ತಥಾ ॥ ೧೬ ॥

ನಿರ್ಬೀಜಸ್ಸಿದ್ಧಿಹೀನಶ್ಚ ಮಂದಃ ಕೂಟೋ ನಿರಂಶಕಃ ।
ಸತ್ವಹೀನಃ ಕೇಕರಶ್ಚ ಬೀಜಹೀನಶ್ಚ ಧೂಮಿತಃ ॥ ೧೭ ॥

ಆಲಿಂಗಿತೋ ಮೋಹಿತಶ್ಚ ಕ್ಷುಧಾರ್ತಶ್ಚಾತಿದೀಪ್ತಕಃ ।
ಅಂಗಹೀನೋಽತಿಕೃದ್ಧಶ್ಚಾತಿಕ್ರೂರೋ ವ್ರೀಡಿತಸ್ತಥಾ ॥ ೧೮ ॥

---

ಎಂಬ ಪಲ್ಲವ (ಚಿಗುರು) ವನ್ನು ಸಂಯೋಜನೆಮಾಡುವುದರಿಂದ ಕ್ರೂರನು ಶಾಂತನಾಗುವನು. ಶಾಂತಜಾತಿಯುಕ್ತನಾದ ಸೌಮ್ಯಪುರುಷನು ಭಯಂಕರ ನಾಗುವನು.

೧೩. ಆ ಮಂತ್ರಗಳು ಛಿನ್ನ ಮುಂತಾದ ದೋಷಗಳಿಂದ ಸಹಿತವಾದರೆ ಅವು ಸಾಧಕನನ್ನು ಕಾಪಾಡುವುದಿಲ್ಲ.

೧೪-೨೦. ಛಿನ್ನ, ರುದ್ಧ, ಶಕ್ತಿಹೀನ, ಪರಾಙ್ಮುಖ, ಕರ್ಣಹೀನ, ನೇತ್ರಹೀನ, ಕೀಲಿತ, ಸ್ತಂಭಿತ, ದಗ್ಧ, ಸ್ರಸ್ತ, ಭೀತ, ಮಲಿನ, ತಿರಸ್ಕೃತ, ಭೇದಿತ, ಸುಷುಪ್ತ, ಮದೋನ್ಮತ್ತ, ಮೂರ್ಛಿತ, ಹತವೀರ್ಯ, ಭ್ರಾಂತ, ಪ್ರಧ್ವಸ್ತ, ಬಾಲಕ, ಕುಮಾರ, ಊಢ, ಯುವಾ, ಪ್ರೌಢ, ವೃದ್ಧ, ನಿಸ್ತ್ರಿಂಶಕ, ನಿರ್ಬೀಜ, ಸಿದ್ಧಿಹೀನ, ಮಂದ, ಕೂಟ, ನಿರಂಶಕ, ಸತ್ವಹೀನ, ಕೇಕರ, ಬೀಜ ಹೀನ, ಧೂಮಿತ, ಆಲಿಂಗಿತ, ಮೋಹಿತ- ಕ್ಷುಧಾರ್ತ, ಅತಿದೀಪ್ತ, ಅಂಗಹೀನ,

**ಪ್ರಶಾಂತಮಾನಸಃ ಸ್ಥಾನಭ್ರಷ್ಟಶ್ಚ ವಿಕಲಸ್ತಥಾ ।**
**ಅತಿವೃದ್ಧೋಽತಿಸ್ನೇಹಃ ಪೀಡಿತಶ್ಚ ತಥಾ ಪುನಃ ॥ ೧೯ ॥**

**ದೋಷಾ ಹ್ಯೇತೇ ಸಮಾಖ್ಯಾತಾ ವಕ್ಷ್ಯಾಮ್ಯೇಷಾಂ ಚ ಲಕ್ಷಣಂ ।**
**ಸಂಯುಕ್ತಂ ವಾ ವಿಯುಕ್ತಂ ವಾ ತ್ರಿಧಾಽನುಸ್ವಾರಸಂಯುತಃ ॥ ೨೦ ॥**

**ಮನೋರ್ಯಸ್ಯಾದಿಮಧ್ಯಾಂತೇ ವಹ್ನಿಬೀಜಂ ತಥೋಚ್ಯತೇ ।**
**ಚತುರ್ಧಾ ಪಂಚಧಾ ವಾಽಪಿ ಸ ಮಂತ್ರಶ್ಛಿನ್ನಸಂಜ್ಞಕಃ ॥ ೨೧ ॥**

**ಮನೋರ್ಯಸ್ಯಾದಿಮಧ್ಯಾಂತೇ ಭೂಬೀಜದ್ವಯಮುಚ್ಯತೇ ।**
**ಸ ತು ರುದ್ಧೋ ಮನುರ್ಜ್ಞೇಯೋ ಹ್ಯತಿಕ್ಲೇಶೇನ ಸಿದ್ಧಿದಃ ॥ ೨೨ ॥**

**ತಾರವರ್ಣತ್ರಯಾ ಲಕ್ಷ್ಮೀರೇವಂ ಹೀನಸ್ತು ಯೋ ಮನುಃ ।**
**ಶಕ್ತಿಹೀನಸ್ಸ ವಿಜ್ಞೇಯಶ್ಚಿರಕಾಲಫಲಪ್ರದಃ ॥ ೨೩ ॥**

---

ಅತಿಕ್ರುದ್ಧ, ಅತಿಕ್ರೂರ, ವ್ರೀಡಿತ, ಪ್ರಶಾಂತಮಾನಸ, ಸ್ಥಾನಭ್ರಷ್ಟ, ವಿಕಲ, ಅತಿವೃದ್ಧ, ಅತಿನಿಃಸ್ನೇಹ ಮತ್ತು ಪೀಡಿತ ಇವುಗಳು ಮಂತ್ರದೋಷಗಳೆಂದು ಉಕ್ತವಾಗಿವೆ. ಇವುಗಳಿಗೆ ಪ್ರತ್ಯೇಕವಾಗಿ ಲಕ್ಷಣಗಳನ್ನು ಹೇಳುತ್ತೇನೆ; ಕೇಳು.

೨೦-೨೧. ಮೊದಲು, ಮಧ್ಯ, ಕೊನೆಗಳಲ್ಲಿ ಒಟ್ಟಿಗೆ ಅಥವಾ ಬೇರೆಯಾಗಿ ಮೂರು ಅಥವಾ ನಾಲ್ಕು ಇಲ್ಲವೇ ಐದು ಅನುಸ್ವಾರಸಹಿತವಾದ ವಹ್ನಿಬೀಜ (ರ) ವುಳ್ಳ ಮಂತ್ರವು ಛಿನ್ನವೆನಿಸುವುದು.

೨೨. ಆದಿ, ಮಧ್ಯ, ಅವಸಾನಗಳಲ್ಲಿ ಎರಡು ಭೂಬೀಜಗಳುಳ್ಳ ಮಂತ್ರವು ರುದ್ಧ ಎನಿಸುವುದು. ಅದು ಬಹು ಕಷ್ಟದಿಂದ ಸಿದ್ಧಿಪ್ರದವಾಗುವುದು.

೨೩. ಪ್ರಣವಮಂತ್ರದಲ್ಲಿ ಮೂರು ವರ್ಣಗಳುಳ್ಳುದು ಲಕ್ಷ್ಮೀ ಎನಿಸುವುದು. ಇಂತಹ ಲಕ್ಷ್ಮಿಯಿಲ್ಲದಿರುವ ಮಂತ್ರವು ಶಕ್ತಿಹೀನವೆನಿಸುವುದು. ಅದು ಬಹುಕಾಲ ಜಪಿಸಿದಮೇಲೆ ಫಲದಾಯಕವಾಗುವುದು.

ಕಾಮಬೀಜಂ ಮುಖೇ ಮಾಯಾ ಹ್ಯಂತೇ ಚೈವಾಂಕುಶಂ ತಥಾ ।
ಅಸೌ ಪರಾಙ್ಮುಖೋ ಜ್ಞೇಯೋ ಭಜತಾಂ ಚಿರಸಿದ್ಧಿದಃ ॥ ೨೪ ॥

ಆದಿಮಧ್ಯಾವಸಾನೇಷು ಸಕಾರೋ ದೃಶ್ಯತೇ ಯದಿ ।
ಸ ಮಂತ್ರೋ ಬಧಿರಃ ಪ್ರೋಕ್ತಃ ಕಷ್ಟೇ ನಾಲ್ಪಫಲಪ್ರದಃ ॥ ೨೫ ॥

ಪಂಚಾರ್ಣೋ ಯದಿ ರೇಫಾರ್ಕಬಿಂದುವರ್ಜಿತವಿಗ್ರಹಃ ।
ನೇತ್ರಹೀನಸ್ತು ವಿಜ್ಞೇಯಃ ಕ್ಲೇಶೇನಾಪಿ ನ ಸಿದ್ಧಿದಃ ॥ ೨೬ ||

ಆದಿಮಧ್ಯಾವಸಾನೇಷು ಹಂಸಃ ಪ್ರಾಸಾದವಾಗ್ಭವಾಃ ।
ಹಕಾರೋ ಬಿಂದುಮಾನ್ ಜೀವೋ ರಾವಂ ವಾಪಿ ಚತುಷ್ಕಲಂ ॥ ೨೭ ||

ಮಾಯಾ ನಮಾಮಿ ಚ ಪದಂ ನಾಸ್ತಿ ಯಸ್ಮಿನ್ಸ ಕೀಲಿತಃ ।
ಏಕಂ ಮಧ್ಯೇ ದ್ವಯಂ ಮೂರ್ಧ್ನಿ ಯಸ್ಮಿನ್ನಸ್ತ್ರಲಕಾರಕೌ || ೨೮ ॥

ವಿದ್ಯೇತೇ ಸ ತು ಮಂತ್ರಸ್ತು ಸ್ತಂಭಿತಃ ಸಿದ್ಧಿರೋಧಕೃತ್ ।
ಅಗ್ನಿಃ ಪವನಸಂಯುಕ್ತೋ ಮನೋರ್ಯಸ್ಯ ತು ಮೂರ್ಧನಿ || ೨೯ ||

---

೨೪. ಆದಿಯಲ್ಲಿ ಕಾಮಬೀಜವು ಅಂತ್ಯದಲ್ಲಿ ಮಾಯೆ ಮತ್ತು ಅಂಕುಶಗಳು ಇರುವ ಮಂತ್ರವು ಪರಾಙ್ಮುಖವೆನಿಸುವುದು. ಇದು ಬಹುಕಾಲದಮೇಲೆ ಸಿದ್ಧಿಪ್ರದವು.

೨೫. ಆದಿಮಧ್ಯಾಂತಗಳಲ್ಲಿ ಸಕಾರವು ಕಂಡು ಬಂದಲ್ಲಿ ಆ ಮಂತ್ರವು ಬಧಿರವೆನಿಸುವುದು. ಅದು ಕಷ್ಟಪಡಿಸಿ ಫಲಕೊಡುತ್ತದೆ.

೨೬. ರೇಫ ಮತ್ತು ಅರ್ಕಬಿಂದುಗಳಿಲ್ಲದೇ ಐದು ವರ್ಣಗಳುಳ್ಳ ಮಂತ್ರಕ್ಕೆ ನೇತ್ರಹೀನವೆಂದು ಹೆಸರು. ಅದು ಕ್ಲೇಶಪಡಿಸುತ್ತದೆ; ಸಿದ್ಧಿದಾಯಕವೂ ಆಗುವುದಿಲ್ಲ.

೨೭-೨೮. ಹಂಸ, ಪ್ರಾಸಾದ=ಹೌಂ, ವಾಗ್ಭವ=ಐಂ, ಹಕಾರೋ ಬಿಂದುಮಾನ್ ಜೀವಃ=ಸ್ ಹೋಂ, ರಾವ=ಫ್ರೇಂ, ಚತುಷ್ಕಲ=ಹೂಂ, ಮಾಯಾ=ಶಕ್ತಿಬೀಜ (ಹ್ರೀಂ) ನಮಾಮಿ ಎಂಬೀ ಪದಗಳು ಆದಿ ಮಧ್ಯ ಕೊನೆಗಳಲ್ಲಿಲ್ಲದಿರುವ ಮಂತ್ರವು ಕೀಲಿತವೆನಿಸುವುದು.

೨೮-೨೯. ಅಸ್ತ್ರ=ಫಟ್. ಮಧ್ಯದಲ್ಲಿ ಒಂದು 'ಫಟ್' ಅಥವಾ ಲಕಾರವೂ, ಕೊನೆಯಲ್ಲಿ ಎರಡು 'ಫಟ್' ಅಥವಾ ಎರಡು ಲಕಾರಗಳು ಇರುವ ಮಂತ್ರವು ಸ್ತಂಭಿತವೆನಿಸುವುದು. ಅದು ಸಿದ್ಧಿ ಪ್ರತಿಬಂಧಕವು.

**ಸಪ್ತಧಾ ದೃಶ್ಯತೇ ಯಸ್ತು ಸ ಮಂತ್ರೋ ದಗ್ಧಸಂಜ್ಞಕಃ ।**
**ಅಸ್ತ್ರಂ ದ್ವಾಭ್ಯಾಂ ತ್ರಿಭಿಃ ಷಡ್ಭಿರಷ್ಟಾಭಿರ್ದೃಶ್ಯತೇಽಕ್ಷರೈಃ ॥ ೩೦ ॥**

**ತ್ರಸ್ತಃ ಸ ಮಂತ್ರೋ ವಿಜ್ಞೇಯೋ ಮುಖೇ ತಾರವಿವರ್ಜಿತಃ ।**
**ಹಕಾರಃ ಶಕ್ತಿರಥವಾ ಭೀತೋ ಮಂತ್ರಸ್ಸ ಏವ ಹಿ ॥ ೩೧ ॥**

**ಮನೋರ್ಯಸ್ಯಾದಿಮಧ್ಯಾಂತೇ ಸ್ಯಾನ್ಮಕಾರಚತುಷ್ಟಯಂ ।**
**ಮಲಿನಸ್ತು ಸ ವಿಜ್ಞೇಯೋ ಹ್ಯತಿಕ್ಲೇಶೇನ ಸಿದ್ಧಿದಃ ॥ ೩೨ ॥**

**ದಾರ್ಣೋ ಯಸ್ಯ ಮನೋರ್ಮಧ್ಯೇ ಮೂರ್ಧ್ನಿ ಕ್ರೋಧಯುಗಂ ತಥಾ ।**
**ಅಸ್ತ್ರಂ ಚಾಸ್ತಿ ಸ ಮಂತ್ರಸ್ತು ತಿರಸ್ಕೃತ ಉದೀರಿತಃ ॥ ೩೩ ॥**

**ಭ್ಯೋದ್ವಯಂ ಹೃದಯೇ ಶೀರ್ಷೇ ವಷಡ್ವಾಷಟ್ಚ ಮಧ್ಯಮಃ ।**
**ಯಸ್ಯ ಸ್ಯಾದ್ಭೇದಿತೋ ಮಂತ್ರಸ್ತ್ಯಾಜ್ಯಃ ಕ್ಲಿಷ್ಟಫಲಪ್ರದಃ ॥ ೩೪ ॥**

---

೨೯-೩೦. ಅಗ್ನಿ=ರ. ಪವನ= ಯ. ಯ ವರ್ಣಸಹಿತವಾದ ರ ಎಂಬ ವರ್ಣವು ಏಳುವಿಧವಾಗಿ ಕಂಡುಬರುವ ಮಂತ್ರಕ್ಕೆ ದಗ್ಧವೆಂದು ಹೆಸರು.

೩೦-೩೧. ಮಂತ್ರದ ಎರಡು, ಮೂರು, ಆರು ಅಥವಾ ಎಂಟು ಅಕ್ಷರಗಳಿಂದ ಫಟ್ ಎಂಬುದು ಕಂಡುಬಂದಲ್ಲಿ ಆ ಮಂತ್ರವು ತ್ರಸ್ತವೆನಿಸುವುದು.

೩೧. (ತಾರ= ಓಂ, ಶಕ್ತಿ= ಸ.) ಮಂತ್ರದ ಆದಿಯಲ್ಲಿ ಓಂಕಾರವಿಲ್ಲದೆ ಹ ಅಥವಾ ಸ ಎಂಬ ವರ್ಣವಿದ್ದರೆ ಆ ಮಂತ್ರಕ್ಕೆ ಭೀತವೆಂದು ಹೆಸರು.

೩೨. ಯಾವ ಮಂತ್ರದ ಮೊದಲು, ಮಧ್ಯ, ಕೊನೆಗಳಲ್ಲಿ ನಾಲ್ಕು ಮ ಎಂಬ ಅಕ್ಷರಗಳು ಇರುವುವೋ ಆ ಮಂತ್ರವನ್ನು ಮಲಿನವೆಂದು ತಿಳಿಯಬೇಕು. ಅದು ಬಹು ಪ್ರಯಾಸಪಟ್ಟರೆ ಸಿದ್ಧಿಯನ್ನು ಕೊಡುವುದು.

೩೩. ಮಂತ್ರ ಮಧ್ಯದಲ್ಲಿ ದ ಎಂಬ ವರ್ಣವು, ಕೊನೆಯಲ್ಲಿ ಕ್ರೋಧ= ಹಂ ಎಂಬ ಬೀಜಾಕ್ಷರಗಳೆರಡು, ಅಸ್ತ್ರ= ಫಟ್ ಎಂಬುದು ಇದ್ದರೆ ಆ ಮಂತ್ರವು ತಿರಸ್ಕೃತವೆನಿಸುವುದು.

೩೪. ಮಂತ್ರದ ಆದಿಯಲ್ಲಿ ಭ್ಯೋ ದ್ವಯವು, ಕೊನೆಯಲ್ಲಿ ವಷಟ್ ಎಂಬುದು, ಮಧ್ಯದಲ್ಲಿ ವೌಷಟ್ ಎಂಬುದೂ ಇರುವ ಮಂತ್ರವು ಭೇದಿತವು. ಅದು ಕ್ಲೇಶಕರವು. ಆದುದರಿಂದ ತ್ಯಾಜ್ಯವು.

ತ್ರ್ಯಕ್ಷರೋ ಹಂಸಹೀನೋ ಯಃ ಸುಷುಪ್ತಃ ಕೀರ್ತಿತಸ್ತು ಸಃ ।
ವಿದ್ಯಾ ವಾಽಪ್ಯಥವಾ ಮಂತ್ರೋ ಭವೇತ್ಸಪ್ತದಶಾಕ್ಷರಃ ॥ ೩೫ ॥

ಫಟ್ಕಾರಪಂಚಕಾದಿರ್ಯೋ ಮದೋನ್ಮತ್ತಸ್ತು ಸ ಸ್ಮೃತಃ ।
ಯಸ್ಯ ಮಧ್ಯೇ ಸ್ಥಿತಂ ಚಾಸ್ತ್ರಂ ಸ ಮಂತ್ರೋ ಮೂರ್ಛಿತಃ ಸ್ಮೃತಃ ॥ ೩೬

ವಿರಾಮಸ್ಥಾನಗಂ ಚಾಸ್ತ್ರಂ ಹತವೀರ್ಯಃ ಸ ಉಚ್ಯತೇ ।
ಮಂತ್ರಸ್ಯಾದೌ ಚ ಮಧ್ಯೇ ಚ ಮೂರ್ಧ್ನಿ ಚಾಸ್ತ್ರಚತುಷ್ಟಯಂ ॥ ೩೭ ॥

ಜ್ಞಾತವ್ಯೋ ಭ್ರಾಂತ ಇತ್ಯೇಷ ಯಃ ಸ್ಯಾದಷ್ಟಾದಶಾಕ್ಷರಃ ।
ಏಕೋನವಿಂಶತ್ಯರ್ಣೋ ವಾ ಯೋ ಮಂತ್ರಸ್ತಾರಸಂಯುತಃ ॥ ೩೮ ॥

ಹೃಲ್ಲೇಖಾಂಕುಶಬೀಜಾಢ್ಯಃ ಪ್ರಧ್ವಸ್ತಃ ಸ ತು ಕಥ್ಯತೇ ।
ಸಪ್ತಾರ್ಣೋ ಬಾಲಮಂತ್ರಸ್ತು ಕುಮಾರೋ ವಸುವರ್ಣವಾನ್ ॥ ೩೯ ॥

---

೩೫-೩೬. ಹಂಸವರ್ಜಿತವಾಗಿ ಮೂರು ಅಕ್ಷರಗಳುಳ್ಳ ಮಂತ್ರವು ಸುಷುಪ್ತವೆನಿಸುವುದು

ವಿದ್ಯೆ ಅಥವಾ ಮಂತ್ರವು ಹದಿನೇಳು ಅಕ್ಷರಗಳುಳ್ಳುದಾಗಿ ಆದಿಯಲ್ಲಿ ಐದು ಫಟ್ಕಾರಗಳನ್ನೊಳಗೊಂಡಿದ್ದರೆ ಅದು ಮದೋನ್ಮತ್ತವೆಂದು ಉಕ್ತವಾಗಿದೆ.

ಅಂತೆಯೇ ಮಂತ್ರ ಮಧ್ಯದಲ್ಲಿ ಫಟ್ ಎಂಬುದಿದ್ದರೆ ಆ ಮಂತ್ರವು ಮೂರ್ಛಿತವೆನಿಸುವುದು.

೩೭-೩೯. ಮಂತ್ರದ ಕೊನೆಯಲ್ಲಿ ಫಟ್ ಎಂಬುದಿದ್ದರೆ ಆ ಮಂತ್ರವು ಹತವೀರ್ಯ ಎಂಬುದಾಗಿ ಉಕ್ತವಾಗುವುದು.

ಮಂತ್ರದ ಮೊದಲು, ಮಧ್ಯ, ಕೊನೆಗಳಲ್ಲಿ ನಾಲ್ಕು ನಾಲ್ಕು ಫಟ್ಕಾರಗಳಿರುವ ಹದಿನೆಂಟು ಅಕ್ಷರಗಳ ಮಂತ್ರವು ಭ್ರಾಂತವೆನಿಸುವುದು.

ಹದಿನೆಂಟು ಅಥವಾ ಹತ್ತೊಂಬತ್ತು ವರ್ಣಗಳುಳ್ಳ ಮಂತ್ರವು ಪ್ರಣವ, ಹೃಲ್ಲೇಖಾ= ಹ್ರೀಂ, ಅಂಕುಶಬೀಜ= ಕ್ರೋಂ ಇವುಗಳಿಂದ ಕೂಡಿದ್ದರೆ ಅದು ಪ್ರಧ್ವಸ್ತವೆನಿಸುವುದು.

ಏಳು ಅಕ್ಷರಗಳುಳ್ಳುದು ಬಾಲಮಂತ್ರವು.

ಎಂಟು ಅಕ್ಷರಗಳುಳ್ಳುದು ಕುಮಾರಮಂತ್ರವು.

**ಷೋಡಶಾರ್ಣೋ ಯುವಾ ಪ್ರೋಢಶ್ಚತ್ವಾರಿಂಶತಿವರ್ಣಕಃ ।**
**ತ್ರಿಂಶದ್ವರ್ಣಶ್ಚತುಃಷಷ್ಟಿವರ್ಣಶ್ಚಾಪಿ ಶತಾಕ್ಷರಃ ॥ ೪೦ ॥**

**ಚತುಃಶತಾಕ್ಷರೋ ಮಂತ್ರೋ ವೃದ್ಧ ಇತ್ಯಭಿಧೀಯತೇ ।**
**ನವಾರ್ಣಸ್ತಾರಸಂಯುಕ್ತೋ ಮಂತ್ರೋ ನಿಸ್ತ್ರಿಂಶ ಉಚ್ಯತೇ ॥ ೪೧ ॥**

**ಯಸ್ಯಾಂತೇ ಹೃದಯಂ ಪ್ರೋಕ್ತಂ ಶಿರೋಮಂತ್ರಶ್ಚ ಮಧ್ಯತಃ ।**
**ಶಿಖಾ ವರ್ಮ ಚ ನ ಸ್ಯಾತಾಂ ನೇತ್ರಮಸ್ತ್ರಂ ಚ ದೃಶ್ಯತೇ ॥ ೪೨ ॥**

**ಶಿವಶಕ್ತ್ಯರ್ಣಹೀನೋ ನಿರ್ಬೀಜಮನುರರ್ಥತಃ ।**
**ಆದ್ಯಂತಮಧ್ಯೇ ಫಟ್ಕಾರಃ ಷೋಢಾ ಯಸ್ಮಿನ್ಪ್ರದೃಶ್ಯತೇ ॥ ೪೩ ॥**

---

೪೦-೪೧. ಹದಿನಾರು ಅಕ್ಷರಗಳ ಮಂತ್ರವು 'ಯುವಾ' ಎಂದು ಉಕ್ತವಾಗಿದೆ.

ಇಪ್ಪತ್ತುನಾಲ್ಕು ಅಕ್ಷರಗಳುಳ್ಳ ಮಂತ್ರವು ಪ್ರೌಢವೆನಿಸುವುದು.

ಮೂವತ್ತು ವರ್ಣಗಳು, ಅರವತ್ತುನಾಲ್ಕು ವರ್ಣಗಳು, ನೂರಕ್ಷರ, ನೂರುನಾಲ್ಕು ಅಕ್ಷರ ಈರೀತಿ ವರ್ಣಗಳುಳ್ಳ ಮಂತ್ರವು ವೃದ್ಧವೆಂದು ಉಕ್ತವಾಗಿದೆ.

ಒಂಬತ್ತು ವರ್ಣಗಳುಳ್ಳ, 'ಓಂ' ಕಾರಸಹಿತವಾದ ಮಂತ್ರವು 'ನಿಸ್ತ್ರಿಂಶ' ಎಂಬುದಾಗಿ ಹೇಳಲ್ಪಟ್ಟಿದೆ.

೪೨-೪೩. (ಹೃದಯಂ = ನಮಃ. ಶಿರೋಮಂತ್ರಃ = ಸ್ವಾಹ. ಶಿಖಾ= ವಷಟ್. ನೇತ್ರ= ಔಷಟ್. ಅಸ್ತ್ರ= ಫಟ್. ವರ್ಮ= ಹುಂ. ಶಿವ= ಹಂ. ಶಕ್ತ್ಯರ್ಣ= ಸ)

ಅಂತ್ಯದಲ್ಲಿ ನಮಃ, ಮಧ್ಯದಲ್ಲಿ ಸ್ವಾಹಾ ಎಂಬ ಪದಗಳಿದ್ದು ವಷಟ್, ಹುಂ ಎಂಬ ಪದಗಳಿಲ್ಲದೆ ಔಷಟ್, ಫಟ್ ಎಂಬ ಪದಗಳುಳ್ಳುದಾಗಿ, ಹಂ, ಸ ಎಂಬ ವರ್ಣಗಳಿಲ್ಲದಿರುವ ಮಂತ್ರವು ನಿರ್ಬೀಜವೆನಿಸುವುದು.

ಸ ಮನುಃ ಸಿದ್ಧಿಹೀನಸ್ಸ್ಯಾನ್ಮಂದಃ ಪಂಕ್ತ್ಯಕ್ಷರೋ ಮನುಃ ।
ಕೂಟ ಏಕಾಕ್ಷರೋ ಮಂತ್ರಃ ಸ ಏವೋಕ್ತೋ ನಿರಂಶಕಃ ॥ ೪೪ ॥

ದ್ವಿವರ್ಣಃ ಸತ್ವಹೀನಸ್ಸ್ಯಾತ್ಕೇಕರಶ್ಚತುರಕ್ಷರಃ ।
ಷಡ್ವರ್ಣೋ ಬೀಜಹೀನೋ ವಾ ಸಾರ್ಧಸಪ್ತಾಕ್ಷರೋಽಪಿ ವಾ ॥ ೪೫ ॥

ಸಾರ್ಧದ್ವಾದಶವರ್ಣೋ ವಾ ಧೂಮಿತೋ ನಿಂದಿತಸ್ತು ಸಃ ।
ಸಾರ್ಧಬೀಜತ್ರಯಯುತೋ ಮಂತ್ರೋ ವಿಂಶತಿವರ್ಣವಾನ್ ॥ ೪೬ ॥

ತ್ರಿಂಶದ್ವರ್ಣಶ್ಚೈಕವಿಂಶತ್ಯರ್ಣಶ್ಚಾಲಿಂಗಿತಸ್ತು ಸಃ ।
ಯೋ ಮಂತ್ರೋ ದಂತವರ್ಣಸ್ತು ಮೋಹಿತಸ್ಸ ತು ಕೀರ್ತಿತಃ ॥ ೪೭ ॥

ಚತುರ್ವಿಂಶತಿವರ್ಣೋ ವಾ ಸಪ್ತವಿಂಶತಿವರ್ಣವಾನ್ ।
ಕ್ಷುಧಾರ್ತಸ್ಸ ತು ವಿಜ್ಞೇಯೋ ಮಂತ್ರಸಿದ್ಧಿವಿವರ್ಜಿತಃ ॥ ೪೮ ॥

---

೪೩-೪೪. ಮೊದಲು ಕೊನೆ ಮಧ್ಯಗಳಲ್ಲಿ ಆರುಬಾರಿ ಫಟ್ ಎಂಬುದ ಕಂಡುಬರುವ ಮಂತ್ರವು ಸಿದ್ಧಿಹೀನವೆನಿಸುವುದು.

ಹತ್ತು ಅಕ್ಷರಗಳುಳ್ಳ ಮಂತ್ರಕ್ಕೆ ಮಂದವೆಂದು ಹೆಸರು.

ಒಂದೇ ಅಕ್ಷರವುಳ್ಳ ಮಂತ್ರವು ಕೂಟವೆನಿಸುವುದು. ಅದಕ್ಕೆ ನಿರಂಶಕ ವೆಂಬುದಾಗಿ ಮತ್ತೊಂದು ಹೆಸರಿರುವುದು.

೪೫-೪೭. ಎರಡು ವರ್ಣಗಳುಳ್ಳುದು ಸತ್ವಹೀನವು.

ನಾಲ್ಕಕ್ಷರಗಳುಳ್ಳುದು 'ಕೇಕರ'ವು. ಆರು ವರ್ಣಗಳುಳ್ಳುದಾಗಿ ಬೀಜಾಕ್ಷರರಹಿತವಾದುದು ಅಥವಾ ಏಳೂವರೆ ಅಕ್ಷರಗಳುಳ್ಳುದು ಅಥವಾ ಹನ್ನೆರಡೂವರೆ ಅಕ್ಷರಗಳುಳ್ಳುದೂ ಇಲ್ಲವೇ ಮೂರುವರೆ ವರ್ಣಗಳುಳ್ಳುದೂ ಸಹ ಧೂಮಿತವೆನಿಸುವುದು. ಅದು ನಿಂದಿತವೆಂದೂ ಕರೆಯಲ್ಪಡುವುದು.

ಇಪ್ಪತ್ತು ವರ್ಣಗಳುಳ್ಳ ಮಂತ್ರವು, ಮೂವತ್ತು ಮತ್ತು ಇಪ್ಪತ್ತೊಂದು ವರ್ಣಗಳುಳ್ಳ ಮಂತ್ರವೂ ಸಹ ಆಲಿಂಗಿತವೆನಿಸುವುದು.

ಮೂವತ್ತೆರಡು ಅಕ್ಷರಗಳುಳ್ಳ ಮಂತ್ರವು ಮೋಹಿತವೆಂದು ಉಕ್ತವಾಗಿದೆ.

೪೮. ಇಪ್ಪತ್ತುನಾಲ್ಕು ಅಥವಾ ಇಪ್ಪತ್ತೇಳು ಅಕ್ಷರಗಳುಳ್ಳ ಮಂತ್ರವು 'ಕ್ಷುಧಾರ್ತ'ವೆಂದು ತಿಳಿಯಬೇಕು. ಅದು ಸಿದ್ಧಿದಾಯಕವಾಗುವುದಿಲ್ಲ.

ಏಕಾದಶಾಕ್ಷರೋ ವಾಽಪಿ ಪಂಚವಿಂಶತಿವರ್ಣಕಃ ।
ತ್ರಯೋವಿಂಶತಿವರ್ಣೋ ವಾ ಸ ಮನುರ್ದೃಪ್ತಸಂಜ್ಞಕಃ ॥ ೪೯ ॥

ಷಡ್ವಿಂಶತ್ಯಕ್ಷರೋ ವಾಽಪಿ ಷಟ್ತ್ರಿಂಶದ್ವರ್ಣಕೋಽಪಿ ವಾ ।
ಏಕೋನತ್ರಿಂಶದ್ವರ್ಣೋ ವಾ ಮಂತ್ರೋ ಹೀನಾಂಗಕಸ್ಮೃತಃ ॥ ೫೦ ॥

ಅಷ್ಟಾವಿಂಶತಿವರ್ಣೋ ವಾ ತಥೈಕತ್ರಿಂಶದರ್ಣಕಃ ।
ಅತಿಕ್ರೂರಸ್ಸ ವಿಜ್ಞೇಯೋಽಖಿಲಕರ್ಮಸು ಗರ್ಹಿತಃ ॥ ೫೧ ॥

ಚತ್ವಾರಿಂಶತ್ಸಮಾರಭ್ಯ ತ್ರಿಷಷ್ಟ್ಯಂತಸ್ತು ಯೋ ಮನುಃ ।
ವ್ರೀಡಿತಸ್ಸ ತು ವಿಜ್ಞೇಯಃ ಸರ್ವಕರ್ಮಸು ನ ಕ್ಷಮಃ ॥ ೫೨ ॥

ಪಂಚಷಷ್ಟ್ಯಕ್ಷರಾ ಮಂತ್ರಾ ಜ್ಞೇಯಾ ವೈ ಶಾಂತಮಾನಸಾಃ ।
ಪಂಚಷಷ್ಟ್ಯರ್ಣಮಾರಭ್ಯ ನವನಂದಾಕ್ಷರಾವಧಿ ॥ ೫೩ ॥

---

೪೯. ಹನ್ನೊಂದು ಅಥವಾ ಇಪ್ಪತ್ತೈದು ಅಥವಾ ಇಪ್ಪತ್ತುಮೂರು ವರ್ಣಗಳುಳ್ಳ ಮಂತ್ರವು 'ದೃಪ್ತ' ನಾಮಕವು.

೫೦. ಇಪ್ಪತ್ತಾರು ಅಥವಾ ಮೂವತ್ತಾರು ಅಥವಾ ಇಪ್ಪತ್ತೊಂಬತ್ತು ವರ್ಣಗಳುಳ್ಳ ಮಂತ್ರವು 'ಹೀನಾಂಗಕ' ವು.

೫೧. ಇಪ್ಪತ್ತೆಂಟು ಅಥವಾ ಮೂವತ್ತೊಂದು ವರ್ಣಗಳುಳ್ಳ ಮಂತ್ರವು ಅತಿಕ್ರೂರವು. ಅದು ಸಕಲ ಕರ್ಮಗಳಲ್ಲಿಯೂ ನಿಂದಿತವೆಂದು ತಿಳಿಯಬೇಕು.

೫೨. ನಲವತ್ತರಿಂದ ಅರವತ್ತುಮೂರು ವರ್ಣಗಳವರೆಗಿನ ಮಂತ್ರವು 'ವ್ರೀಡಿತ' ವೆನಿಸುವುದು. ಅದು ಯಾವ ಕರ್ಮಗಳಲ್ಲಿಯೂ ಸಾಧಕ ವಾಗಲಾರದು.

೫೩-೫೬. ಅರವತ್ತೈದು ಅಕ್ಷರಗಳುಳ್ಳ ಮಂತ್ರಗಳನ್ನು 'ಶಾಂತ ಮಾನಸ' ಗಳೆಂದು ತಿಳಿಯಬೇಕು.

ಅರವತ್ತೈದರಿಂದ ತೊಂಬತ್ತೊಂಬತ್ತು ಅಕ್ಷರಗಳವರೆಗೆ ವರ್ಣಗಳನ್ನೊಳ ಗೊಂಡ ಮಂತ್ರಗಳನ್ನು 'ಸ್ಥಾನಭ್ರಷ್ಟಗಳು' ಎಂದು ತಿಳಿಯಬೇಕು.

ಯೇ ಮಂತ್ರಾಸ್ತೇ ತು ವಿಜ್ಞೇಯಾಃ ಸ್ಥಾನಭ್ರಷ್ಟಾ ಮುನೀಶ್ವರ ।
ತ್ರಯೋದಶಾರ್ಣಾ ಯೇ ಮಂತ್ರಾಸ್ತಿಥ್ಯರ್ಣಾಶ್ಚ ತಥಾ ಪುನಃ ॥ ೫೪ ॥

ವಿಕಲಾಸ್ತೇ ಸಮಾಖ್ಯಾತಾಸ್ಸರ್ವತಂತ್ರವಿಶಾರದೈಃ ।
ಶತಂ ಸಾರ್ಧಂ ಶತಂ ವಾಽಪಿ ಶತದ್ವಯಮಥಾಪಿ ವಾ । ೫೫ ॥

ದ್ವಿನವತ್ಯೇಕಹೀನಾ ವಾ ಶತತ್ರಯಮಥಾಪಿ ವಾ ।
ಯೇ ಮಂತ್ರಾ ವರ್ಣಸಂಖ್ಯಾಕಾ ನಿಸ್ಸ್ನೇಹಾಸ್ತೇ ಪ್ರಕೀರ್ತಿತಾಃ ॥ ೫೬ ॥

ಚತುಶ್ಶತಂ ಸಮಾರಭ್ಯ ಸಹಸ್ರಾರ್ಣಾವಧಿ ದ್ವಿಜ ।
ಅತಿವೃದ್ಧಾಃ ಪ್ರಯೋಗೇಷು ಶಿಥಿಲಾಸ್ತೇ ಸಮೀರಿತಾಃ ॥ ೫೭ ॥

ಸಹಸ್ರವರ್ಣಾದಧಿಕಾ ಮಂತ್ರಾಸ್ತೇ ಪೀಡಿತಾಹ್ವಯಾಃ ।
ತದೂರ್ಧ್ವಂ ಚೈವ ಯೇ ಮಂತ್ರಾಃ ಸ್ತೋತ್ರರೂಪಾಸ್ತು ತೇ ಸ್ಮೃತಾಃ॥೫೮

---

ಹದಿಮೂರು ಅಥವಾ ಹದಿನೈದು ವರ್ಣಗಳುಳ್ಳ ಮಂತ್ರಗಳು 'ವಿಕಲ' ಗಳೆಂದು ತಂತ್ರಾಭಿಜ್ಞರಿಂದ ಉಕ್ತವಾಗಿದೆ.

ನೂರು, ನೂರೈವತ್ತು, ಇನ್ನೂರೈವತ್ತು, ತೊಂಬತ್ತೊಂದು, ಮುನ್ನೂರು ಈರೀತಿ ವರ್ಣಸಂಖ್ಯೆಯುಳ್ಳ ಮಂತ್ರಗಳು ನಿಃಸ್ನೇಹಗಳೆಂದು ಹೇಳಲ್ಪಟ್ಟಿವೆ.

೫೭. ದ್ವಿಜನಾದ ನಾರದನೇ! ನಾನೂರು ವರ್ಣಗಳಿಂದ ಸಾವಿರದ ವರೆಗೆ ವರ್ಣಗಳುಳ್ಳ ಮಂತ್ರಗಳು ಅತಿವೃದ್ಧಗಳೆನಿಸುವುವು. ಅವು ಪ್ರಯೋಗ ಗಳಿಗೆ ಸಾಧಕವಲ್ಲ.

೫೮. ಸಾವಿರಕ್ಕಿಂತ ಹೆಚ್ಚಾಗಿ ವರ್ಣಗಳುಳ್ಳ ಮಂತ್ರಗಳು ಪೀಡಿತ ನಾಮಕಗಳು.

ಅದಕ್ಕಿಂತಲೂ ಹೆಚ್ಚಾಗಿ ವರ್ಣಗಳುಳ್ಳ ಮಂತ್ರಗಳಿಗೆ ಸ್ತೋತ್ರ ಗಳೆಂದು ಹೆಸರು.

ಏವಂ ವಿಧಾಃ ಸಮಾಖ್ಯಾತಾ ಮನವೋ ದೋಷಸಂಯುತಾಃ ।
ದೋಷಾನೇತಾನವಿಜ್ಞಾಯ ಮಂತ್ರಾನೇತಾನ್ಜಪಂತಿ ಯೇ ॥ ೫೯ ॥

ಸಿದ್ಧಿರ್ನ ಜಾಯತೇ ತೇಷಾಂ ಕಲ್ಪಕೋಟಿಶತೈರಪಿ ।
ಛಿನ್ನಾದಿದೋಷದುಷ್ಟಾನಾಂ ಮಂತ್ರಾಣಾಂ ಸಾಧನಂ ಬ್ರುವೇ ॥ ೬೦ ॥

ಯೋನಿಮುದ್ರಾಸನೇ ಸ್ಥಿತ್ವಾ ಪ್ರಜಪೇದ್ಯಃ ಸಮಾಹಿತಃ ।
ಯಂ ಕಂಚಿದಪಿ ವಾ ಮಂತ್ರಂ ತಸ್ಯ ಸ್ಯುಃ ಸರ್ವಸಿದ್ಧಯಃ ॥ ೬೧ ॥

ಸವ್ಯಪಾರ್ಷ್ಣಿಂ ಗುದೇ ಸ್ಥಾಪ್ಯ ದಕ್ಷಿಣಂ ಚ ಧ್ವಜೋಪರಿ ।
ಯೋನಿಮುದ್ರಾಬಂಧ ಏವಂ ಭವೇದಾಸನಮುತ್ತಮಂ ॥ ೬೨ ॥

ಅನ್ಯೋಽಪ್ಯತ್ರ ಪ್ರಕಾರೋಽಸ್ತಿ ಯೋನಿಮುದ್ರಾನಿಬಂಧನೇ ।
ತದಗ್ರೇ ಸರಹಸ್ಯಂ ತೇ ಕಥಯಿಷ್ಯಾಮಿ ನಾರದ ॥ ೬೩ ॥

---

೫೯-೬೦. ಈರೀತಿಯಾಗಿ ದೋಷಸಹಿತವಾದ ಮಂತ್ರಗಳು ಉಕ್ತವಾಗಿವೆ. ಈ ದೋಷಗಳನ್ನು ತಿಳಿಯದೆ ಈ ಮಂತ್ರಗಳನ್ನು ಜಪಿಸುವವರಿಗೆ ನೂರಾರು ಕೋಟಿ ಕಲ್ಪಗಳಾದಾಗ್ಯೂ ಸಿದ್ಧಿಯುಂಟಾಗುವುದಿಲ್ಲ. ಛಿನ್ನ ಮುಂತಾದ ದೋಷಯುಕ್ತವಾದ ಮಂತ್ರಗಳಿಗೆ ಸಾಧನವನ್ನು ಹೇಳುವೆನು.

೬೧. ಯೋನಿಮುದ್ರೆಯೆಂಬ ಆಸನದಲ್ಲಿ ಕುಳಿತು, ಸಮಾಧಾನ ಚಿತ್ತನಾಗಿ ಯಾವ ಮಂತ್ರವನ್ನು ಜಪಿಸಿದರೂ ಅವನಿಗೆ ಸರ್ವಸಿದ್ಧಿಗಳೂ ಉಂಟಾಗುವುವು.

೬೨. ಎಡಗಾಲಿನ ಹಿಮ್ಮಡಿಯನ್ನು ಪೃಷ್ಠದಲ್ಲಿಟ್ಟು, ಬಲ ಹಿಮ್ಮಡಿಯನ್ನು ಧ್ವಜದಮೇಲೆ ಸ್ಥಾಪಿಸಿ ಕೂಡುವುದಕ್ಕೆ 'ಯೋನಿ ಮುದ್ರಾಬಂಧಾಸನ'ವೆಂದು ಹೆಸರು. ಅದು ಉತ್ತಮವಾದ ಆಸನವಾಗುವುದು.

೬೩. ಯೋನಿಮುದ್ರೆಯನ್ನು ಬೇರೆ ವಿಧವಾಗಿಯೂ ವಿನ್ಯಾಸಮಾಡಬಹುದು. ನಾರದ! ನಿನಗೆ ಅದನ್ನು ರಹಸ್ಯಸಹಿತವಾಗಿ ಮುಂದೆ ಹೇಳುವೆನು.

**ಪಾರಂಪರ್ಯಕ್ರಮಪ್ರಾಪ್ತೋ ನಿತ್ಯಾನುಷ್ಠಾನತತ್ಪರಃ ।**
**ಗುರ್ವನುಜ್ಞಾರತಃ ಶ್ರೀಮಾನಭಿಷೇಕಸಮನ್ವಿತಃ ॥ ೬೪ ॥**

**ಸುಂದರಃ ಸುಮುಖಃ ಶಾಂತಃ ಕುಲೀನಸ್ಸುಲಭೋ ವಶೀ ।**
**ಮಂತ್ರತಂತ್ರಾರ್ಥತತ್ವಜ್ಞೋ ನಿಗ್ರಹಾನುಗ್ರಹಕ್ಷಮಃ ॥ ೬೫ ॥**

**ನಿರಪೇಕ್ಷೋ ಮುನಿರ್ದಾಂತೋ ಹಿತವಾದೀ ವಿಚಕ್ಷಣಃ ।**
**ತತ್ವನಿಷ್ಕಾಲನೇ ದಕ್ಷೋ ವಿನಯೀ ಚ ಸುವೇಷವಾನ್ ॥ ೬೬ ॥**

**ಆಶ್ರಮೀ ಧ್ಯಾನನಿರತಃ ಸಂಶಯಚ್ಛಿತ್ಸ ಬುದ್ಧಿಮಾನ್ ।**
**ನಿತ್ಯಾನುಷ್ಠಾನಸಂಯುಕ್ತಸ್ತ್ವಾಚಾರ್ಯಃ ಪರಿಕೀರ್ತಿತಃ ॥ ೬೭ ॥**

**ಶಾಂತೋ ವಿನೀತಶ್ಶುದ್ಧಾತ್ಮಾ ಸರ್ವಲಕ್ಷಣಸಂಯುತಃ ।**
**ಶಮಾದಿಸಾಧನೋಪೇತಃ ಶ್ರದ್ಧಾವಾನ್ಸುಸ್ಥಿರಾಶಯಃ ॥ ೬೮ ॥**

---

೬೪-೬೭. ಕ್ರಮವಾಗಿ ಸಂಪ್ರದಾಯಲಬ್ಧಜ್ಞಾನಿಯು, ನಿತ್ಯಕರ್ಮಗಳ ಅನುಷ್ಠಾನದಲ್ಲಿ ನಿರತನು, ಗುರುಗಳ ಆಜ್ಞೆಯನ್ನು ಪಾಲಿಸುವವನು, ಶ್ರೀಮಂತನು, ಅಭಿಷಿಕ್ತನು, ಸುಂದರನು, ಸೌಮ್ಯಮುಖವುಳ್ಳವನು, ಶಾಂತನು, ಸತ್ಕುಲಪ್ರಸೂತನು, ಸುಲಭನು, ಅಧೀನನು, ಮಂತ್ರ ತಂತ್ರ ಇವುಗಳ ಅರ್ಥ ತತ್ವಾಭಿಜ್ಞನು, ನಿಗ್ರಹಾನುಗ್ರಹಸಮರ್ಥನು, ಆಶೆಯಿಲ್ಲದವನು, ಮನನ ಶೀಲನು, ನಿಗೃಹೀತೇಂದ್ರಿಯನು, ಹಿತವಾಗಿ ನುಡಿಯುವವನು, ವಿವೇಚನ ಶೀಲನು, ತತ್ವನಿರ್ಣಯವನ್ನು ಮಾಡಲು ಸಮರ್ಥನು, ವಿನೀತನು, ಸಮೀಚೀನವಾದ ವೇಷವನ್ನು ಧರಿಸಿರುವವನು, ಆಶ್ರಮಧರ್ಮನಿಷ್ಠನು, ಧ್ಯಾನಪರನು, ಸಂಶಯಪರಿಹಾರಕನು, ಜ್ಞಾನಿಯು ಮತ್ತು ಯಾವಾಗಲೂ ವಿಹಿತಾನುಷ್ಠಾನದಲ್ಲಾಸಕ್ತನೂ ಆಗಿರುವವನು ಆಚಾರ್ಯನು (ಗುರು) ಎಂದು ಉಕ್ತವಾಗಿದೆ.

೬೮-೭೦. ಶಾಂತಿಮಂತನು, ವಿನೀತನು, ಶುದ್ಧಾತ್ಮನು, ಸಮಸ್ತ ಲಕ್ಷಣಸಂಪನ್ನನು, ಶಮ ಮುಂತಾದ ಸಾಧನಗಳುಳ್ಳವನು, ಆಸ್ತಿಕನು, ಸ್ಥಿರವಾದ ಅಭಿಪ್ರಾಯವುಳ್ಳವನು, ಅನ್ನಪಾನಾದಿಗಳಿಂದ ಶುದ್ಧಶರೀರವುಳ್ಳವನು, ಧರ್ಮಿಷ್ಠನು, ನಿರ್ಮಲಚಿತ್ತನು, ಧೃಢವಾದ ವ್ರತ, ಆಚಾರಗಳುಳ್ಳವನು, ಕೃತಜ್ಞನು,

**ಶುದ್ಧದೇಹೋನ್ನಪಾನಾದ್ಯೈರ್ಧಾರ್ಮಿಕಶುದ್ಧಮಾನಸಃ ।**
**ಧೃಡವ್ರತಸಮಾಚಾರಃ ಕೃತಜ್ಞಃ ಪಾಪಭೀರುಕಃ　　　　॥ ೬೯ ॥**

**ಗುರುಧ್ಯಾನಸ್ತುತಿಕಥಾಸೇವನಾಸಕ್ತಮಾನಸಃ ।**
**ಏವಂ ವಿಧೋ ಭವೇಚ್ಛಿಷ್ಯಸ್ತ್ವನ್ಯಥಾ ಗುರುದುಃಖದಃ　　　　॥ ೭೦ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ಚತುಷಷ್ಟಿತಮೋಽಧ್ಯಾಯಃ**

---

ಪಾಪಕ್ಕೆ ಭಯಪಡುವವನು ಮತ್ತು ಗುರುಗಳ ಧ್ಯಾನ, ಸ್ತುತಿ, ಕಥೆ, ಇವುಗಳನ್ನು ಸೇವಿಸುವುದರಲ್ಲಿ ಆಸಕ್ತವಾದ ಚಿತ್ತವುಳ್ಳವನೂ ಆಗಿರುವವನು ಶಿಷ್ಯನಾಗಲರ್ಹನು. ಈ ರೀತಿಯಿಲ್ಲದಿರುವ ಶಿಷ್ಯನು ಗುರುಗಳಿಗೆ ದುಃಖವನ್ನು ಕೊಡುವವನಾಗುತ್ತಾನೆ.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ಮೂರನೆಯ ಪಾದದಲ್ಲಿ ಅರವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

## ಕಥಾಸಂಗ್ರಹ

ದೀಕ್ಷೆ, ಮಂತ್ರ, ಇವುಗಳ ಅವಯವಾರ್ಥವನ್ನು ಹೇಳಿ, ಮಂತ್ರಗಳ ಪ್ರಭೇದ, ಅವುಗಳ ಸ್ವರೂಪ, ದೇವತೆ, ವಿನಿಯೋಗ ಇವುಗಳನ್ನು ನಿರೂಪಿಸಿ, ಮಂತ್ರದೋಷಗಳನ್ನೂ ಅವುಗಳ ಸ್ವರೂಪವನ್ನೂ ವಿಶದಪಡಿಸಿ, ಗುರುಶಿಷ್ಯರ ಲಕ್ಷಣಗಳನ್ನೂ ವಿಸ್ತರಿಸಿದೆ.

---

# ಪಂಚಷಷ್ಟಿತಮೋಽಧ್ಯಾಯಃ

---

**ಸನತ್ಕುಮಾರ ಉವಾಚ**

**ಪರೀಕ್ಷ್ಯ ಶಿಷ್ಯಂ ತು ಗುರುರ್ಮಂತ್ರಶೋಧನಮಾಚರೇತ್ ।**
**ಪ್ರಾಕ್ಪ್ರತ್ಯಗ್ದಕ್ಷಿಣೋದಕ್ಚ ಪಂಚಸೂತ್ರಾಣಿ ಪಾತಯೇತ್ ॥ ೧ ॥**

**ಚತುಷ್ಟಯಂ ಚತುಷ್ಕಾನಾಂ ಸ್ಯಾದೇವಂ ನೃಪಕೋಽಷ್ಟಕೇ ।**
**ತತ್ರಾದ್ಯಪ್ರಥಮೇ ತ್ವಾದ್ಯಂ ದ್ವಿತೀಯಾದ್ಯೇ ದ್ವಿತೀಯಕಂ ॥ ೨ ॥**

**ತೃತೀಯಾದ್ಯೇ ತೃತೀಯಂ ಸ್ಯಾಚ್ಚತುರ್ಥಾದ್ಯೇ ತುರೀಯಕಂ ।**
**ತತ್ತದಾಗ್ನೇಯಕೋಷ್ಠೇಷು ತತ್ತತ್ಪಂಚಮಮಕ್ಷರಂ ॥ ೩ ॥**

**ವಿಲಿಖ್ಯ ಕ್ರಮತೋ ಧೀಮಾನ್ಮನುಂ ಸಂಶೋಧಯೇತ್ತತಃ ।**
**ನಾಮಾದ್ಯಕ್ಷರಮಾರಭ್ಯ ಯಾವನ್ಮಂತ್ರಾದಿವರ್ಣಕಂ ॥ ೪ ॥**

---

## ಅರವತ್ತೈದನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಗುರುವು ಶಿಷ್ಯನನ್ನು ಪರೀಕ್ಷಿಸಿ ಮಂತ್ರಶೋಧನೆಯನ್ನು ಮಾಡಬೇಕು. ಅದಕ್ಕಾಗಿ ಪೂರ್ವದಿಂದ ಪಶ್ಚಿಮಕ್ಕೂ, ದಕ್ಷಿಣದಿಂದ ಉತ್ತರಕ್ಕೂ ಐದೈದು ರೇಖೆಗಳನ್ನು ಹಾಕಬೇಕು.

೨-೪. ಹಾಗೆ ಉಲ್ಲೇಖಿಸಿದ ಕೋಷ್ಟಕದಲ್ಲಿ ನಾಲ್ಕು ಮನೆಗಳುಳ್ಳ ನಾಲ್ಕು ಸಾಲುಗಳಾಗುವುವು. ಅದರಲ್ಲಿ ಮೊದಲನೆಯ ಸಾಲಿನ ಮೊದಲನೆಯ ಮನೆಯಲ್ಲಿ ಮೊದಲನೆಯ ಅಕ್ಷರವನ್ನೂ, ಎರಡನೆಯದರ ಮೊದಲನೆಯದರಲ್ಲಿ ಎರಡನೆಯ ಅಕ್ಷರವನ್ನೂ, ಮೂರನೆಯದರ ಮೊದಲನೆಯದರಲ್ಲಿ ಮೂರನೆಯದನ್ನೂ, ನಾಲ್ಕನೆಯ ಮೊದಲನೆಯದರಲ್ಲಿ ನಾಲ್ಕನೆಯದನ್ನೂ ಬರೆದು, ಆಯಾಯಾ ಮನೆಯ ಆಗ್ನೇಯ ದಿಗ್ಭಾಗದ ಕೋಷ್ಠಗಳಲ್ಲಿ ಅದರದರ ಐದನೆಯ ಅಕ್ಷರವನ್ನೂ ಕ್ರಮವಾಗಿ ಬರೆದು ಆಮೇಲೆ ಬುದ್ಧಿವಂತನಾದವನು ತನ್ನ ಹೆಸರಿನ ಆದ್ಯಕ್ಷರವಿರುವ ಕೋಷ್ಟದಿಂದ ಮಂತ್ರಾದ್ಯವರ್ಣವಿರುವ ಕೋಷ್ಟದ ವರೆಗೂ ನಿರೀಕ್ಷಿಸಿ ಮಂತ್ರವನ್ನು ಶೋಧಿಸಬೇಕು.

ಚತುಷ್ಕೇ ಯತ್ರ ನಾಮಾರ್ಣಸ್ತತ್ಸ್ಯಾತ್ಸಿದ್ಧಚತುಷ್ಕಕಂ ।
ಪ್ರಾದಕ್ಷಿಣ್ಯಾತ್ತದ್ದ್ವಿತೀಯಂ ಸಾಧ್ಯಾಖ್ಯಂ ಪರಿಕೀರ್ತಿತಂ ॥ ೫ ॥

ತೃತೀಯಂ ತು ಸುಸಿದ್ಧಾಖ್ಯಂ ತುರೀಯಮರಿಸಂಜ್ಞಕಂ ।
ದ್ವಯೋರ್ವರ್ಣಾನೇಕಕೋಷ್ಠೇ ಸಿದ್ಧಸಿದ್ಧೇತಿ ತನ್ಮತಂ ॥ ೬ ॥

ತದ್ದ್ವಿತೀಯೇ ತು ಮಂತ್ರಾರ್ಣೇ ಸಿದ್ಧಸಾಧ್ಯಃ ಪ್ರಕೀರ್ತಿತಃ ।
ತೃತೀಯೇ ತತ್ಸುಸಿದ್ಧಃ ಸ್ಯಾತ್ಸಿದ್ಧಾರಿಸ್ತಚ್ಚತುರ್ಥಕೇ ॥ ೭ ॥

ನಾಮಾರ್ಣಾದ್ಯಚತುಷ್ಕಾತ್ತು ದ್ವಿತೀಯೇ ಮಂತ್ರವರ್ಣಕೇ ।
ಚತುಷ್ಕೇ ಚೇತ್ತದಾ ಪೂರ್ವಂ ಯತ್ರ ನಾಮಾಕ್ಷರಂ ಸ್ಥಿತಂ ॥ ೮ ॥

ತತ್ರ ತತ್ಕೋಷ್ಠಮಾರಭ್ಯ ಗಣಯೇತ್ಪೂರ್ವವತ್ಕ್ರಮಾತ್ ।
ಸಾಧ್ಯಸಿದ್ಧಃ ಸಾಧ್ಯಸಾಧ್ಯಸ್ತತ್ಸುಸಿದ್ಧಶ್ಚ ತದ್ರಿಪುಃ ॥ ೯ ॥

---

೫. ಯಾವ ಚತುಷ್ಕದಲ್ಲಿ ನಾಮವರ್ಣವಿರುವುದೋ ಅದು ‘ಸಿದ್ಧ ಚತುಷ್ಕ’ ವೆನಿಸುವುದು. ಪ್ರದಕ್ಷಿಣಾಕಾರವಾಗಿ ನೋಡಿದರೆ ಅದರ ಎರಡನೆಯದಾಗಿ ಕಂಡುಬರುವುದೇ ಸಾಧ್ಯನಾಮಕವೆಂದು ಉಕ್ತವಾಗಿದೆ.

೬. ಮೂರನೆಯದು ‘ಸುಸಿದ್ಧನಾಮಕವು.’ ನಾಲ್ಕನೆಯದು ಅರಿ (ಶತ್ರು) ಎಂದು ಹೆಸರುಳ್ಳುದು. ಒಂದು ಕೋಷ್ಠದಲ್ಲಿ ನಾಮಮಂತ್ರವೆರಡರ ಮೊದಲಿನ ವರ್ಣಗಳು ಸೇರಿದ್ದರೆ ಅದು ‘ಸಿದ್ಧಸಿದ್ಧವೆನಿಸುವುದು’ ಎಂದು ಅಭಿಪ್ರಾಯವು.

೭. ಅದರ ಎರಡನೆಯ ಕೋಷ್ಠವು ಸಿದ್ಧಸಾಧ್ಯವೆನಿಸುವುದು. ಮೂರನೆಯದು ಸಿದ್ಧಸುಸಿದ್ಧವು. ನಾಲ್ಕನೆಯದು ಸಿದ್ಧಾರಿಯೂ ಆಗುವುದು.

೮–೯. ಹೆಸರಿನ ಮೊದಲನೆಯ ಅಕ್ಷರವಿರುವ ಚತುಷ್ಕದ (ಸಾಲಿನ) ಎರಡನೆಯ ಚತುಷ್ಕದಲ್ಲಿ ಮಂತ್ರವರ್ಣವಿದ್ದರೆ ಆಗ ನಾಮಾಕ್ಷರವಿರುವ ಸಾಲಿನಿಂದ ಕ್ರಮವಾಗಿ ಹಿಂದಿನಂತೆ ಪರಿಗಣಿಸಬೇಕು. ಅದರಲ್ಲಿ ಮೊದಲನೆಯ ಸಾಲು ‘ಸಾಧ್ಯಸಿದ್ಧವು.’ ಎರಡನೆಯದು ಸಾಧ್ಯಸಾಧ್ಯವು. ಮೂರನೆಯದು ಸಾಧ್ಯಸುಸಿದ್ಧವು. ನಾಲ್ಕನೆಯದು ಸಾಧ್ಯಾರಿಯು.

ತೃತೀಯೇ ಚೇಚ್ಚತುಷ್ಕೇ ತು ಯದಿ ಸ್ಯಾನ್ಮಂತ್ರವರ್ಣಕಃ ।
ತದಾ ಪೂರ್ವೋಕ್ತರೀತ್ಯಾ ತು ಕ್ರಮಾದ್ಜ್ಞೇಯಂ ಮನೀಷಿಭಿಃ ॥ ೧೦ ॥

ಸುಸಿದ್ಧಸಿದ್ಧಸ್ತತ್ಸಾಧ್ಯಸ್ತತ್ಸುಸಿದ್ಧಶ್ಚ ತದ್ರಿಪುಃ ।
ತುರೀಯೇ ಚೇಚ್ಚತುಷ್ಕೇ ತು ತದ್ವೈವಂ ಗಣಯೇತ್ಸುಧೀಃ ॥ ೧೧ ॥

ಅರಿಸಿದ್ಧೋಽರಿಸಾಧ್ಯಶ್ಚ ತತ್ಸುಸಿದ್ಧಶ್ಚ ತದ್ರಿಪುಃ ।
ಸಿದ್ಧಸಿದ್ಧೋ ಯಥೋಕ್ತೇನ ದ್ವಿಗುಣಾತ್ಸಿದ್ಧಸಾಧ್ಯಕಃ ॥ ೧೨ ॥

ಸಿದ್ಧಸುಸಿದ್ಧೋಽರ್ಧತಯಾ ಸಿದ್ಧಾರಿರ್ಹಂತಿ ಗೋತ್ರಜಾನ್ ।
ದ್ವಿಗುಣಾತ್ಸಾಧ್ಯಸಿದ್ಧಸ್ತು ಸಾಧ್ಯಸಾಧ್ಯೋ ವಿಲಂಬತಃ ॥ ೧೩ ॥

ಸಾಧ್ಯಸುಸಿದ್ಧೋ ದ್ವಿಗುಣಾತ್ಸಾಧ್ಯಾರಿರ್ಹಂತಿ ಬಾಂಧವಾನ್ ।
ಸುಸಿದ್ಧಸಿದ್ಧೋಽರ್ಧತಯಾ ತತ್ಸಾಧ್ಯೋ ದ್ವಿಗುಣಾಜ್ಜಪಾತ್ ॥ ೧೪ ॥

---

೧೦-೧೧. ನಾಮಾದ್ಯವರ್ಣವುಳ್ಳ ಸಾಲಿನಿಂದ ಮೂರನೆಯ ಚತುಷ್ಕದಲ್ಲಿ ಮಂತ್ರವರ್ಣವಿದ್ದರೆ ಹಿಂದೆ ಹೇಳಿದ ಪ್ರಕಾರ ಕ್ರಮವಾಗಿ 'ಸುಸಿದ್ಧಸಿದ್ಧ' ಸುಸಿದ್ಧಸಾಧ್ಯ, ಸುಸಿದ್ಧಸುಸಿದ್ಧ, ಸುಸಿದ್ಧಾರಿ ಎಂಬುದಾಗಿ ಜ್ಞಾನಿಗಳು ತಿಳಿಯಬೇಕು.

೧೧-೧೨. ನಾಮಾದ್ಯವರ್ಣವುಳ್ಳ ಸಾಲಿನಿಂದ ನಾಲ್ಕನೆಯ ಚತುಷ್ಕದಲ್ಲಿ ಮಂತ್ರಾದ್ಯವರ್ಣವಿದ್ದರೆ ಜ್ಞಾನಿಯು ಅರಿಸಿದ್ಧ, ಅರಿಸಾಧ್ಯ, ಅರಸುಸಿದ್ಧ, ಅರಿರಿಪು ಎಂಬುದಾಗಿ ಪರಿಗಣಿಸಬೇಕು.

೧೨-೧೩. ಸಿದ್ಧಸಿದ್ಧಮಂತ್ರವು ವಿಹಿತವಾದಷ್ಟು ಜಪಮಾಡುವುದರಿಂದಲೂ, ಸಿದ್ಧಸಾಧ್ಯ ಅದರ ಎರಡರಷ್ಟು ಜಪಮಾಡುವುದರಿಂದಲೂ, ಸಿದ್ಧಸುಸಿದ್ಧವು ವಿಹಿತದಲ್ಲಿ ಅರ್ಧದಷ್ಟು ಮಾತ್ರ ಜಪಿಸುವುದರಿಂದಲೂ ಫಲಕೊಡುವುದು. ಸಿದ್ಧಾರಿಯನ್ನು ಜಪಿಸಿದರೆ ಅದು ಬಂಧುಗಳನ್ನು ಕೊಲ್ಲುತ್ತದೆ.

೧೩-೧೪. ವಿಹಿತವಾಗಿರುವುದಕ್ಕೆರಡರಷ್ಟು ಜಪಿಸುವುದರಿಂದ ಸಾಧ್ಯಸಿದ್ಧವೂ, ಸಾವಕಾಶವಾಗಿ ಸಾಧ್ಯಸಾಧ್ಯವೂ ಫಲಕೊಡುತ್ತದೆ. ಸಾಧ್ಯಸುಸಿದ್ಧವು ದ್ವಿಗುಣಿತವಾದ ಜಪದಿಂದ ಫಲಪ್ರದವಾಗುವುದು. ಸಾಧ್ಯಾರಿಯು ನಂಟರನ್ನು ಕೊಲ್ಲುವುದು.

ತತ್ಸುಸಿದ್ಧಪ್ರಾಪ್ತಿಮಾತ್ರಾತ್ಸುಸಿದ್ಧಾರಿಃ ಕುಟುಂಬಹೃತ್ ।
ಅರಿಸಿದ್ಧಸ್ತು ಪುತ್ರಘ್ನೋಽರಿಸಾಧ್ಯಃ ಕನ್ಯಕಾಪಹಃ ॥ ೧೫ ॥

ತತ್ಸುಸಿದ್ಧಃ ಕಲತ್ರಘ್ನಃ ಸಾಧಕಘ್ನೋಽಪ್ಯರಿಃ ಸ್ಮೃತಃ ।
ಅನ್ಯೇಽಪ್ಯತ್ರ ಪ್ರಕಾರಾ ಹಿ ಸಂತಿ ವೈ ಬಹವೋ ಮುನೇ ॥ ೧೬ ॥

ಸರ್ವೇಷು ತೇಽತ್ರ ಮುಖ್ಯಾಯೇ ಕಥಿತಾಃ ಫಲಸಂಯುತಾಃ ।
ಏವಂ ಸಂಶೋಧ್ಯ ಮಂತ್ರಂ ತು ಶುದ್ಧೇ ಕಾಲೇ ಸ್ಥಲೇ ತಥಾ ॥ ೧೭ ॥

ದೀಕ್ಷಯೇಚ್ಚ ಗುರುಃ ಶಿಷ್ಯಂ ತದ್ವಿಧಾನಮುದೀರ್ಯತೇ ।
ನಿತ್ಯಕೃತ್ಯಂ ವಿಧಾಯಾಥ ಪ್ರಣಮ್ಯ ಗುರುಪಾದುಕಾಂ ॥ ೧೮ ॥

ಪ್ರಾರ್ಥಯೇತ್ಸದ್ಗುರುಂ ಭಕ್ತ್ಯಾಽಭೀಷ್ಟಮಂತ್ರಾರ್ಥಮುದ್ಯತಃ ।
ಸಂಪೂಜ್ಯ ವಸ್ತ್ರಾಲಂಕಾರಗೋಹಿರಣ್ಯಧರಾದಿಭಿಃ ॥ ೧೯ ॥

---

೧೪-೧೫. ಸುಸಿದ್ಧಸಿದ್ಧವು ಅರ್ಧಜಪದಿಂದಲೂ, ಸುಸಿದ್ಧಸಾಧ್ಯವು ಎರಡರಷ್ಟು ಜಪದಿಂದಲೂ ಇಷ್ಟಾರ್ಥವನ್ನು ಕೊಡುತ್ತವೆ. ಸುಸಿದ್ಧಸುಸಿದ್ಧವು ಗ್ರಹಣಮಾತ್ರದಿಂದ ಇಷ್ಟಾರ್ಥದಾಯಕವು. ಸುಸಿದ್ಧಾರಿಯು ಕುಟುಂಬ ನಾಶಕವು.

೧೫-೧೬. ಅರಿಸಿದ್ಧವು ಮಗನನ್ನೂ, ಅರಿಸಾಧ್ಯವು ಮಗಳನ್ನೂ ನಾಶ ಪಡಿಸುತ್ತದೆ. ಅರಿಸುಸಿದ್ಧವು ಪತ್ನಿಯನ್ನೂ, ಅರಿರಿಪುವು ಮಂತ್ರಜಪಾನು ಷ್ಠಾತೃವನ್ನೂ ಸಂಹರಿಸುವುದೆಂದು ಉಕ್ತವಾಗಿದೆ. ನಾರದಮುನಿಯೇ! ಈ ಮಂತ್ರದಲ್ಲಿ ಇನ್ನೂ ಬಹಳ ವಿಧಗಳಿವೆ.

೧೭-೧೮. ಅವುಗಳಲ್ಲೆಲ್ಲಾ ಮುಖ್ಯವಾದುವುಗಳನ್ನು ಮಾತ್ರ ಫಲ ಸಹಿತವಾಗಿ ಹೇಳಿರುವೆನು. ಪರಿಶುದ್ಧವಾದ ದೇಶಕಾಲಗಳಲ್ಲಿ ಈರೀತಿಯಾಗಿ ಮಂತ್ರವನ್ನು ಶೋಧನೆಮಾಡಿ, ಗುರುವು ಶಿಷ್ಯನಿಗೆ ದೀಕ್ಷೆಯನ್ನು ಕೊಡಬೇಕು. ಅಂತಹ ದೀಕ್ಷೆಯ ವಿಧಾನವನ್ನು ಹೇಳುವೆನು ಕೇಳು.

೧೮-೧೯. ನಿತ್ಯಾಹ್ನಿಕವನ್ನು ಅನುಷ್ಠಾನಮಾಡಿದ ತರುವಾಯ ಶಿಷ್ಯನು ಗುರುಗಳ ಪಾದುಕೆಯನ್ನು ನಮಸ್ಕರಿಸಿ, ಇಷ್ಟಮಂತ್ರದ ಸಿದ್ಧಿಯನ್ನು ಪಡೆಯು

ಕೃತ್ವಾ ಸ್ವಸ್ತಿವಿಧಾನಂ ತು ಮಂಡಲಾದಿ ಚ ತುಷ್ಟಿಮಾನ್ ।
ಗುರುಃ ಶಿಷ್ಯೇಣ ಸಹಿತಃ ಶುಚಿರ್ಯಾಗಗೃಹಂ ವಿಶೇತ್ ॥ ೨೦ ॥

ಸಾಮಾನ್ಯಾರ್ಘ್ಯೋದಕೇನಾಥ ಸಂಪ್ರೋಕ್ಷ್ಯ ದ್ವಾರಮಸ್ತ್ರತಃ ।
ದಿವ್ಯಾನುತ್ಸಾರಯೇದ್ವಿಘ್ನಾನ್ನಭಸ್ಥಾನರ್ಘ್ಯವಾರಿಣಾ ॥ ೨೧ ॥

ಪಾರ್ಷ್ಣಿಘಾತೈಸ್ತ್ರಿಭಿರ್ಭೌಮಾಂಸ್ತತಃ ಕರ್ಮ ಸಮಾಚರೇತ್ ।
ವರ್ಣಕೈಃ ಸರ್ವತೋಭದ್ರೇ ಯಥೋಕ್ತಪರಿಕಲ್ಪಿತೇ ॥ ೨೨ ॥

ವಹ್ನಿಮಂಡಲಮಭ್ಯರ್ಚ್ಯ ತತ್ಕಲಾಃ ಪರಿಪೂಜ್ಯ ಚ ।
ವಸ್ತ್ರಪ್ರಚ್ಛಾದಿತಂ ಕುಂಭಂ ಯಥಾಶಕ್ತಿವಿನಿರ್ಮಿತಂ ॥ ೨೩ ॥

ತತ್ರ ಸಂಸ್ಥಾಪ್ಯ ವಿಧಿವತ್ತತ್ರ ಭಾನೋಃ ಕಲಾಂ ಯಜೇತ್ ।
ವಿಲೋಮಮಾತೃಕಾಮೂಲಮುಚ್ಚರನ್ ಶುದ್ಧವಾರಿಣಾ ॥ ೨೪ ॥

---

ಲುದ್ಯುಕ್ತನಾಗಿ, ಭಕ್ತಿಯಿಂದ ವಸ್ತ್ರ, ಆಭರಣ, ಗೋವು, ಸುವರ್ಣ, ಭೂಮಿ ಮುಂತಾದ ಪೂಜಾಸಾಧನದ್ರವ್ಯಗಳನ್ನು ಅರ್ಪಿಸಿ, ಗುರುಗಳನ್ನು ಪ್ರಾರ್ಥಿಸಬೇಕು.

೨೦. ಸಂತೋಷಚಿತ್ತನಾಗಿ ಮಂಡಲ ಮುಂತಾದ ಸ್ವಸ್ತಿವಿಧಾನಗಳನ್ನು ಮಾಡಿ ಶುದ್ಧನಾದ ಗುರುವು ಶಿಷ್ಯನೊಡನೆ ಯಾಗಶಾಲೆಯನ್ನು ಪ್ರವೇಶಿಸಬೇಕು.

೨೧-೨೨. ಅನಂತರ ಸಾಧಾರಣವಾದ ಅರ್ಘ್ಯೋದಕದಿಂದ ಬಾಗಿಲನ್ನು ಪ್ರೋಕ್ಷಣೆಮಾಡಿ, ಅಸ್ತ್ರಮಂತ್ರದಿಂದ (ಫಟ್) ಅಂತರಿಕ್ಷಸಂಬಂಧಿಯಾದ ವಿಘ್ನಗಳನ್ನೂ, ಅರ್ಘ್ಯಜಲದಿಂದ ಆಕಾಶಗತವಾದ ವಿಘ್ನಗಳನ್ನೂ, ಮೂರು ಚಪ್ಪಾಳೆಗಳನ್ನು ಹೊಡೆದು ಭೂಸಂಬಂಧಿಯಾದ ವಿಘ್ನಗಳನ್ನೂ ಸಹ ಹೋಗಲಾಡಿಸಬೇಕು. ತರುವಾಯ ಕರ್ಮವನ್ನು ಆಚರಿಸಬೇಕು.

೨೨-೨೪. ವಿಧಾನೋಕ್ತಪ್ರಕಾರವಾಗಿ ನಿರ್ಮಿಸಿದ ಸರ್ವತೋಭದ್ರಮಂಡಲದಲ್ಲಿ ವರ್ಣಕಗಳಿಂದ ಅಗ್ನಿಮಂಡಲವನ್ನು ಪೂಜಿಸಿ, ಅಗ್ನಿಕಲೆಗಳನ್ನೂ ಸಹ ಪೂಜೆಮಾಡಿ, ಅಲ್ಲಿ ತನ್ನ ಶಕ್ತ್ಯನುಸಾರವಾಗಿ ನಿರ್ಮಾಣಮಾಡಿದ, ಬಟ್ಟೆಯನ್ನು ಹೊದಿಸಿದ ಕಲಶವನ್ನು ಸ್ಥಾಪಿಸಿ, ವಿಧಾನೋಕ್ತಪ್ರಕಾರವಾಗಿ ಅಲ್ಲಿ ಸೂರ್ಯಕಲೆಯನ್ನು ಪೂಜಿಸಬೇಕು.

ಆಪೂರ್ಯ ಕುಂಭಂ ತತ್ರಾರ್ಚೇತ್ಸೋಮಸ್ಯ ವಿಧಿವತ್ಕಲಾಃ ।
ಧೂಮ್ರಾರ್ಚಿರೂಷ್ಮಾ ಜ್ವಲಿನೀ ಜ್ವಾಲಿನೀ ವಿಸ್ಫುಲಿಂಗಿನೀ ॥ ೨೫ ॥

ಸುಶ್ರೀಃ ಸುರೂಪಾ ಕಪಿಲಾ ಹವ್ಯಕವ್ಯವಹಾ ತಥಾ ।
ವಹ್ನೇರ್ದಶಕಲಾಃ ಪ್ರೋಕ್ತಾಃ ಪ್ರೋಚ್ಯಂತೇಽಥ ರವೇಃ ಕಲಾಃ ॥ ೨೬ ॥

ತಪಿನೀ ತಾಪಿನೀ ಧೂಮ್ರಾ ಮರೀಚಿರ್ಜ್ವಾಲಿನೀ ರುಚಿಃ ।
ಸುಷುಮ್ನಾ ಭೋಗದಾ ವಿಶ್ವಾ ಬೋಧಿನೀ ಧಾರಿಣೀ ಕ್ಷಮಾ ॥ ೨೭ ॥

ಅಥೇಂದೋಶ್ಚ ಕಲಾಜ್ಞೇಯಾ ಹ್ಯಮೂರ್ತಾ ಮಾನದಾ ಪುನಃ ।
ಪೂಷಾ ತುಷ್ಟಿಶ್ಚ ಪುಷ್ಟಿಶ್ಚ ರತಿಶ್ಚ ಧೃತಿಸಂಜ್ಞಿಕಾ ॥ ೨೮ ॥

ಶಶಿನೀ ಚಂದ್ರಿಕಾ ಕಾಂತಿರ್ಜ್ಯೋತ್ಸ್ನಾ ಶ್ರೀಃ ಪ್ರಾತಿರಂಗದಾ ।
ಪೂರ್ಣಾಽಪೂರ್ಣಾಽಮೃತಾ ಚೇತಿ ಪ್ರೋಕ್ತಾಶ್ಚಂದ್ರಮಸಃ ಕಲಾಃ ೨೯ ॥

---

೨೪-೨೫. ವಿಲೋಮರೀತಿಯಿಂದ ಮಾತೃಕಾಮೂಲಮಂತ್ರವನ್ನು ಹೇಳುತ್ತಾ, ಆ ಕಲಶದಲ್ಲಿ ಶುದ್ಧೋದಕವನ್ನು ತುಂಬಿಸಿ, ಅಲ್ಲಿ ಚಂದ್ರಕಲೆಗಳನ್ನು ವಿಧಿವತ್ತಾಗಿ ಪೂಜಿಸಬೇಕು.

೨೫-೨೬. ಧೂಮ್ರ, ಅರ್ಚಿ, ಊಷ್ಮಾ, ಜ್ವಲಿನೀ, ಜ್ವಾಲಿನೀ, ವಿಸ್ಫುಲಿಂಗಿನೀ, ಸುಶ್ರೀ, ಸುರೂಪಾ, ಕಪಿಲಾ ಮತ್ತು ಹವ್ಯಕವ್ಯವಹಾ ಎಂಬ ಹತ್ತೂ ಅಗ್ನಿಯ ಕಲೆಗಳೆಂದು ಉಕ್ತವಾಗಿವೆ. ಇನ್ನು ಸೂರ್ಯಕಲೆಗಳನ್ನು ಹೇಳುವೆನು.

೨೭. ತಪಿನೀ, ತಾಪಿನೀ, ಧೂಮ್ರಾ, ಮರೀಚಿ, ಜ್ವಾಲಿನೀ, ರುಚಿ, ಸುಷುಮ್ನಾ, ಭೋಗದಾ, ವಿಶ್ವಾ, ಬೋಧಿನೀ, ಧಾರಿಣೀ ಮತ್ತು ಕ್ಷಮಾ ಎಂಬ ಹನ್ನೆರಡೂ ಸೂರ್ಯಕಲೆಗಳು.

೨೮-೨೯. ಹೀಗೆಯೇ ಚಂದ್ರಕಲೆಗಳು ಅಮೂರ್ತ, ಮಾನದಾ, ಪೂಷಾ, ತುಷ್ಟಿ, ಪುಷ್ಟಿ, ರತಿ, ಧೃತಿ, ಶಶಿನೀ, ಚಂದ್ರಿಕಾ, ಕಾಂತಿ, ಜ್ಯೋತ್ಸ್ನಾ, ಶ್ರೀ, ಪ್ರಾತಿರಂಗದಾ, ಪೂರ್ಣಾ, ಅಪೂರ್ಣಾ ಮತ್ತು ಅಮೃತ—ಎಂಬಿವು ಚಂದ್ರಕಲೆಗಳು—ಎಂದು ತಿಳಿಯಬೇಕು.

ವಸ್ತ್ರಯುಗ್ಮೇನ ಸಂವೇಷ್ಟ್ಯ ತಸ್ಮಿನ್ಸರ್ವೌಷಧೀಃ ಕ್ಷಿಪೇತ್ ।
ನವರತ್ನಾನಿ ನಿಕ್ಷಿಪ್ಯ ವಿನ್ಯಸೇತ್ಪಂಚಪಲ್ಲವಾನ್ ॥ ೩೦ ॥

ಪನಸಾಮ್ರವಟಾಶ್ವತ್ಥಬಕುಲೇತಿ ಚ ತಾನ್ವಿದುಃ ।
ಮುಕ್ತಾಮಾಣಿಕ್ಯವೈಡೂರ್ಯಗೋಮೇದಾನ್ವಜ್ರವಿದ್ರುಮೌ ॥ ೩೧ ॥

ಪದ್ಮರಾಗಂ ಮರಕತಂ ನೀಲಂ ಚೇತಿ ಯಥಾಕ್ರಮಂ ।
ಏವಂ ರತ್ನಾನಿ ನಿಕ್ಷಿಪ್ಯ ತತ್ರಾವಾಹ್ಯೇಷ್ಟದೇವತಾಂ ॥ ೩೨ ॥

ಸಂಪೂಜ್ಯ ವಿಧಿವನ್ಮಂತ್ರಂ ತತಃ ಶಿಷ್ಯಂ ಸ್ವಲಂಕೃತಂ ।
ವೇದ್ಯಾಂ ಸಂವೇಶ್ಯ ಸಂಪ್ರೋಕ್ಷ್ಯ ಪ್ರೋಕ್ಷಣೀಸ್ಥೇನ ವಾರಿಣಾಂ ॥ ೩೩ ॥

ಭೂತಶುದ್ಧ್ಯಾದಿಕಂ ಕೃತ್ವಾ ತಚ್ಛರೀರೇ ವಿಧಾನತಃ ।
ನ್ಯಾಸಜಾಲೇನ ಸಂಶೋಧ್ಯ ಮೂರ್ಧ್ನಿ ವಿನ್ಯಸ್ಯ ಪಲ್ಲವಾನ್ ॥ ೩೪ ॥

---

೩೦. ಆ ಕಲಶಕ್ಕೆ ಒಂದು ಜೊತೆ ಪಂಚೆಯನ್ನು ಹೊದಿಸಿ, ಆ ಕಲಶದಲ್ಲಿ ಸಕಲ ಮೂಲಿಕೆಗಳನ್ನು ಹಾಕಬೇಕು. ನವರತ್ನಗಳನ್ನಿಟ್ಟು ಐದು ಚಿಗುರುಗಳನ್ನು ಅದರಲ್ಲಿ ಇಡಬೇಕು.

೩೧-೩೨. ಹಲಸು, ಮಾವು, ಆಲ, ಅರಳಿ ಮತ್ತು ಬಕುಲ ಇವುಗಳ ಚಿಗರೇ ಪಂಚಪಲ್ಲವಗಳು. ಮುತ್ತು, ಮಾಣಿಕ್ಯ, ವೈಡೂರ್ಯ, ಗೋಮೇಧಿಕಾ, ವಜ್ರ, ಹವಳ, ಪದ್ಮರಾಗ, ಮರಕತ ಮತ್ತು ನೀಲ ಎಂಬ ನವರತ್ನಗಳನ್ನೂ ಕಲಶದಲ್ಲಿ ಇಟ್ಟು ಅಲ್ಲಿ ಇಷ್ಟದೇವತೆಯನ್ನು ಆವಾಹನೆಮಾಡಬೇಕು.

೩೩-೩೭. ವಿಧಿವತ್ತಾಗಿ ಮಂತ್ರದೇವತೆಯನ್ನು ಪೂಜಿಸಿ. ತರುವಾಯ ಚೆನ್ನಾಗಿ ಅಲಂಕಾರಮಾಡಿಕೊಂಡ ಶಿಷ್ಯನನ್ನು ವೇದಿಕೆಯಲ್ಲಿ ಕೂಡಿಸಿ, ಪ್ರೋಕ್ಷಿಣೀಪಾತ್ರೆಯಲ್ಲಿದ್ದ ನೀರಿನಿಂದ ಪ್ರೋಕ್ಷಿಸಿ, ಭೂತೋಚ್ಚಾಟನೆಯನ್ನು ಮಾಡಿ, ಆ ಶಿಷ್ಯನ ದೇಹದಲ್ಲಿ ಭೂತಶುದ್ಧ್ಯಾದಿಗಳನ್ನು ವಿಧಿವತ್ತಾಗಿ ಮಾಡಿ, ನ್ಯಾಸಸಮೂಹದಿಂದ ಚೆನ್ನಾಗಿ ಪರಿಶೋಧಿಸಿ, ಶಿರಸ್ಸಿನಮೇಲೆ ಚಿಗುರುಗಳನ್ನಿಟ್ಟು, ತರುವಾಯ ಮನದಲ್ಲಿ ಮೂಲಮಂತ್ರವನ್ನು ಜಪಿಸುತ್ತಾ, ಮೂಲ

ಅಷ್ಟೋತ್ತರಶತೇನಾಥ ಮೂಲಮಂತ್ರೇಣ ಮಂತ್ರಿತೈಃ ।
ಅಭಿಷಿಂಚೇತ್ಪ್ರಿಯಂ ಶಿಷ್ಯಂ ಜಪನ್ಮೂಲಮನುಂ ಹೃದಿ ॥ ೩೫ ॥

ಶಿಷ್ಯೋದಕೇನ ವಾಽಽಚಮ್ಯ ಪರಿಧಾಯಾಂಬರಂ ಶಿಶುಃ ।
ಗುರುಂ ಪ್ರಣಮ್ಯ ವಿಧಿವತ್ಸಂವಿಶೇತ್ಪುರತಃ ಶುಚಿಃ ॥ ೩೬ ॥

ಅಥ ಶಿಷ್ಯಸ್ಯ ಶಿರಸಿ ಹಸ್ತಂ ದತ್ವಾ ಗುರುಸ್ತತಃ ।
ಜಪೇದಷ್ಟೋತ್ತರಶತಂ ದೇಯಮಂತ್ರಂ ವಿಧಾನತಃ ॥ ೩೭ ॥

ನಮೋಽಸ್ತ್ವಿತ್ಯಕ್ಷರಾನ್ದದ್ಯಾತ್ತತಃ ಶಿಷ್ಯೋಽರ್ಚಯೇದ್ಗುರುಂ ।
ತತಃ ಸಚಂದನಂ ಹಸ್ತಂ ದತ್ವಾ ಶಿಷ್ಯಸ್ಯ ಮಸ್ತಕೇ ॥ ೩೮ ॥

ತತ್ಕರ್ಣೇ ಪ್ರವದೇದ್ವಿದ್ಯಾಮಷ್ಟವಾರಂ ಸಮಾಹಿತಃ ।
ಸಂಪ್ರಾಪ್ತವಿದ್ಯಃ ಶಿಷ್ಯೋಽಪಿ ನಿಪತೇದ್ಗುರುಪಾದಯೋಃ ॥ ೩೯ ॥

---

ಮಂತ್ರದಿಂದ ನೂರೆಂಟಾವರ್ತಿ ಅಭಿಮಂತ್ರಿಸಲ್ಪಟ್ಟ ಉದಕದಿಂದ ಪ್ರೀತಿಪಾತ್ರನಾದ ಶಿಷ್ಯನಿಗೆ ಅಭಿಷೇಕಮಾಡಬೇಕು.

೩೬. ಅಭಿಷೇಕಮಾಡಿ ಮಿಕ್ಕ ನೀರಿನಿಂದ ಶಿಷ್ಯನು ಆಚಮನೆಮಾಡಿ, ವಸ್ತ್ರವನ್ನು ಧರಿಸಿ, ಗುರುವಿಗೆ ನಮಸ್ಕರಿಸಿ, ಪರಿಶುದ್ಧನಾಗಿ ಮುಂಭಾಗದಲ್ಲಿ ಕುಳಿತುಕೊಳ್ಳಬೇಕು.

೩೭. ತರುವಾಯ ಗುರುವು ಶಿಷ್ಯನ ತಲೆಯ ಮೇಲೆ ಕೈಯಿಟ್ಟು ಉಪದೇಶಿಸಬೇಕಾದ ಮಂತ್ರವನ್ನು ವಿಧಾನೋಕ್ತಪ್ರಕಾರ ನೂರೆಂಟಾವರ್ತಿ ಜಪಿಸಬೇಕು.

೩೮-೩೯. ಅನಂತರ ' ನಮೋಽಸ್ತು ' ಎಂಬ ಅಕ್ಷರಪ್ರದಾನಮಾಡಬೇಕು. ಆಮೇಲೆ ಶಿಷ್ಯನು ಗುರುವನ್ನು ಪೂಜಿಸಬೇಕು. ತರುವಾಯ ಆ ಗುರುವು ಶಿಷ್ಯನ ತಲೆಯ ಮೇಲೆ ಗಂಧಸಹಿತವಾದ ಹಸ್ತವನ್ನಿಟ್ಟು, ಸಮಾಧಾನ ಮನಸ್ಕನಾಗಿ ಅವನ ಕಿವಿಯಲ್ಲಿ ಎಂಟಾವರ್ತಿ ವಿದ್ಯೆಯನ್ನು ಹೇಳಬೇಕು. ಈರೀತಿ ವಿದ್ಯೆಯನ್ನು ಸ್ವೀಕರಿಸಿದ ಮೇಲೆ ಶಿಷ್ಯನು ಗುರುಗಳ ಪಾದಗಳ ಮೇಲೆ ಬೀಳಬೇಕು.

ಉತ್ತಿಷ್ಠ ವತ್ಸ ಮುಕ್ತೋಽಸಿ ಸಮ್ಯಗಾಚಾರವಾನ್ ಭವ ।
ಕೀರ್ತಿಶ್ರೀಕಾಂತಿಪುತ್ರಾಯುರ್ಬಲಾರೋಗ್ಯಂ ಸದಾಽಸ್ತು ತೇ ॥ ೪೦ ॥

ತತಃ ಶಿಷ್ಯಸ್ಸಮುತ್ಥಾಯ ಗಂಧಾದ್ಯೈರ್ಗುರುಮರ್ಚಯೇತ್ ।
ದದ್ಯಾಚ್ಚ ದಕ್ಷಿಣಾಂ ತಸ್ಮೈ ವಿತ್ತಶಾಠ್ಯವಿವರ್ಜಿತಃ ॥ ೪೧ ॥

ಸಂಪ್ರಾಪ್ಯೈವಂ ಗುರೋರ್ಮಂತ್ರಂ ತದಾರಭ್ಯ ಧನಾದಿಭಿಃ ।
ದೇಹಪುತ್ರಕಲತ್ರೈಶ್ಚ ಗುರುಸೇವಾಪರೊ ಭವೇತ್ ॥ ೪೨ ॥

ಸ್ವೇಷ್ಟದೇವಂ ಯಜೇನ್ಮಧ್ಯೇ ದತ್ವಾ ಪುಷ್ಪಾಂಜಲಿಂ ತತಃ ।
ಅಗ್ನಿನೈಋತಿ ವಾಗೀಶಾನ್ಕ್ರಮೇಣ ಪರಿಪೂಜಯೇತ್ ॥ ೪೩ ॥

ಯದಾ ಮಧ್ಯೇ ಯಜೇದ್ವಿಷ್ಣುಂ ಬಾಹ್ಯಾದಿಷು ವಿನಾಯಕಂ ।
ರವಿಂ ಶಿವಾಂ ಶಿವಂ ಚೈವ ಯದಾ ಮಧ್ಯೇ ತು ಶಂಕರಂ ॥ ೪೪ ॥

---

೪೦. ವತ್ಸ! ಏಳು. ಮುಕ್ತನಾಗಿರುವೆ, ಸಮಿಾಚೀನವಾದ ಆಚಾರವುಳ್ಳವನಾಗು. ನಿನಗೆ ಯಾವಾಗಲೂ ಕೀರ್ತಿ, ಸಂಪತ್ತು, ಕಾಂತಿ, ಪುತ್ರ, ಆಯುಸ್ಸು, ಶಕ್ತಿ ಮತ್ತು ಆರೋಗ್ಯ ಇವುಗಳು ಲಭಿಸಲಿ'' ಎಂದು ಗುರುವು ಆಶೀರ್ವದಿಸಬೇಕು.

೪೧ ಅನಂತರ ಶಿಷ್ಯನು ಎದ್ದು ಗಂಧಪುಷ್ಪಾದಿಗಳಿಂದ ಗುರುವನ್ನು ಪೂಜಿಸಬೇಕು ಮತ್ತು ಧನಲೋಭಮಾಡದೆ ಗುರುವಿಗೆ ದಕ್ಷಿಣೆಯನ್ನೂ ಕೊಡಬೇಕು.

೪೨. ಈ ಪ್ರಕಾರ ಗುರುಗಳಿಂದ ಮಂತ್ರೋಪದೇಶವನ್ನು ಪಡೆದಂದಿನಿಂದ ಧನ ಮುಂತಾದುವುಗಳಿಂದಲೂ, ದೇಹಾಯಾಸದಿಂದಲೂ, ಪುತ್ರ, ಪತ್ನೀ ಸಹಿತನಾಗಿ ಗುರುಸೇವೆಯಲ್ಲಿ ನಿರತನಾಗಬೇಕು.

೪೩. ತನ್ನ ಇಷ್ಟದೇವತೆಯನ್ನು ಮಧ್ಯದಲ್ಲಿಟ್ಟು ಪುಷ್ಪಾಂಜಲಿಯನ್ನು ಸಮರ್ಪಿಸಿ ಪೂಜಿಸಬೇಕು. ಅನಂತರ ಕ್ರಮವಾಗಿ ಅಗ್ನಿ, ನೈಋತಿ, ವಾಗೀಶರನ್ನು ಪೂಜಿಸಬೇಕು.

೪೪-೪೫. ಮಧ್ಯದಲ್ಲಿ ವಿಷ್ಣುವನ್ನು ಸ್ಥಾಪಿಸಿ ಪೂಜಿಸುವಾಗ ಸುತ್ತಲೂ ಗಣೇಶ, ಸೂರ್ಯ, ಪಾರ್ವತೀ, ಶಿವ ಇವರನ್ನು ಸ್ಥಾಪಿಸಬೇಕು. ಮಧ್ಯದಲ್ಲಿ

ರವಿಂ ಗಣೇಶಮಂಬಾಂ ಚ ಹರಿಂ ಚಾಥ ಯದಾ ಶಿವಾಂ ।
ಈಶಂ ವಿಘ್ನಾರ್ಕಗೋವಿಂದಾನ್ಮಧ್ಯೇ ಚೇದ್ಗಣನಾಯಕಂ ॥ ೪೫ ॥

ಶಿವಂ ಶಿವಾಂ ರವಿಂ ವಿಷ್ಣುಂ ರವೌ ಮಧ್ಯಗತೇ ಪುನಃ ।
ಗಣೇಶಂ ವಿಷ್ಣುಮಂಬಾಂ ಚ ಶಿವಂ ಚೇತಿ ಯಥಾಕ್ರಮಂ ॥ ೪೬ ॥

ಏವಂ ನಿತ್ಯಂ ಸಮಭ್ಯರ್ಚ್ಯ ದೇವಪಂಚಕಮಾದೃತಃ ।
ಬ್ರಾಹ್ಮೇ ಮುಹೂರ್ತೇ ಹ್ಯುತ್ಥಾಯ ಕೃತ್ವಾ ಚಾವಶ್ಯಕಂ ಬುಧಃ ॥ ೪೭ ॥

ಅಶಂಕಿತೋ ವಾ ಶಯ್ಯಾಯಾಂ ಸ್ವಕೀಯಶಿರಸಿ ಸ್ಮರೇತ್ ।
ಸಹಸ್ರದಳಶುಕ್ಲಾಬ್ಜಕರ್ಣಿಕಾಸ್ಥೇಂದುಮಂಡಲೇ ॥ ೪೮ ॥

ಅಕಥಾದಿತ್ರಿಕೋಣಸ್ಥಂ ವರಾಭಯಕರಂ ಗುರುಂ
ದ್ವಿನೇತ್ರಂ ದ್ವಿಭುಜಂ ಶುಕ್ಲಗಂಧಮಾಲ್ಯಾನುಲೇಪನಂ ॥ ೪೯ ॥

---

ಈಶ್ವರನನ್ನು ಸ್ಥಾಪಿಸಿ ಪೂಜಿಸುವಾಗ ಸುತ್ತಲೂ ಸೂರ್ಯ, ಗಣೇಶ, ಅಂಬಿಕೆ, ಹರಿ ಇವರನ್ನು ಸ್ಥಾಪಿಸಬೇಕು.

೪೫-೪೬. ಪಾರ್ವತಿಯನ್ನು ಮಧ್ಯದಲ್ಲಿಟ್ಟು ಪೂಜಿಸುವಾಗ ಈಶ್ವರ, ವಿಘ್ನೇಶ, ಸೂರ್ಯ, ಗೋವಿಂದ ಇವರನ್ನು ಸುತ್ತಲೂ ಸ್ಥಾಪಿಸಬೇಕು. ಮಧ್ಯದಲ್ಲಿ ಗಣಪತಿಯನ್ನು ಪೂಜಿಸಬೇಕಾದರೆ ಸುತ್ತಲೂ ಈಶ್ವರ, ಪಾರ್ವತೀ, ಸೂರ್ಯ, ವಿಷ್ಣು ಇವರನ್ನು ಸ್ಥಾಪಿಸಿ ಪೂಜಿಸಬೇಕು. ಸೂರ್ಯನನ್ನು ಮಧ್ಯದಲ್ಲಿ ಇಟ್ಟು ಪೂಜಿಸಬೇಕಾದರೆ ಕ್ರಮವಾಗಿ ಗಣೇಶ, ವಿಷ್ಣು, ಅಂಬಿಕೆ ಮತ್ತು ಈಶ್ವರ ಇವರನ್ನು ಸ್ಥಾಪಿಸಬೇಕು.

೪೭-೪೮. ಈ ಪ್ರಕಾರವಾಗಿ ನಿತ್ಯವೂ ದೇವಪಂಚಾಯತನವನ್ನು ಆದರದಿಂದ ಪೂಜಿಸಿ, ಜ್ಞಾನಿಯು ಬ್ರಾಹ್ಮಮುಹೂರ್ತದಲ್ಲೆದ್ದು ಶೌಚಾದಿಗಳನ್ನು ಮಾಡಿಕೊಂಡು ಶಂಕೆಯಿಲ್ಲದೆ ಹಾಸಿಗೆಯಮೇಲೆ ಕುಳಿತು ತನ್ನ ಮನಸ್ಸಿನಲ್ಲಿ ದೇವರನ್ನು ಸ್ಮರಿಸಬೇಕು.

೪೮-೫೦. ಜ್ಞಾನಿಯಾದವನು ಸಾವಿರದಳಗಳುಳ್ಳ ಬಿಳಿಯ ಕಮಲ ಕರ್ಣಿಕಾಗತವಾದ ಚಂದ್ರಮಂಡಲದಲ್ಲಿ ಅಕಥಾದಿ ತ್ರಿಕೋಣದಲ್ಲಿರುವ, ವರ

ವಾಮೇ ಶಕ್ತ್ಯಾ ಯುತಂ ಧ್ಯಾತ್ವಾ ಮಾನಸೈರುಪಚಾರಕೈಃ ।
ಆರಾಧ್ಯ ಪಾದುಕಾಂ ಮಂತ್ರಂ ದಶಧಾ ಪ್ರಜಪೇತ್ಸುಧೀಃ ॥ ೫೦ ॥

ವಾಙ್ಮಾಯಾ ಶ್ರೀರ್ಭಗೇಂದ್ವಾಢ್ಯಾ ವಿಯದ್ಧಂಸಖಗಾಗ್ನಯಃ ।
ಹಸಕ್ಷಮಲವಾರ್ಕ್ಯಗ್ನಿ ವಾಮಕರ್ಣೇಂದುಯುಙ್ಮರುತ್ ॥ ೫೧ ॥

ತತೋ ಭೃಗ್ವಾಕಾಶಖಾಗ್ನಿ ಭಗೇಂದ್ವಾಢ್ಯಾಃ ಪರಂತಿಮಃ ।
ಸಹಕ್ಷಮಲತೋಯಾಗ್ನಿ ಚಂದ್ರಶಾಂತಿಯುತೋ ಮರುತ್ ॥ ೫೨ ॥

---

ಅಭಯಹಸ್ತನಾದ, ನೇತ್ರದ್ವಯ, ಭುಜದ್ವಯಗಳುಳ್ಳ, ಶುಕ್ಲ ಗಂಧಮಾಲ್ಯ ಯುಕ್ತನಾದ, ಎಡಭಾಗದಲ್ಲಿ ಶಕ್ತಿಸಹಿತನಾದ ಗುರುವನ್ನು ಧ್ಯಾನಿಸಿ, ಮಾನಸಿಕೋಪಚಾರಗಳಿಂದ ಆರಾಧಿಸಿ, ಪಾದುಕಾಮಂತ್ರವನ್ನು ಹತ್ತಾವರ್ತಿ ಜಪಿಸಬೇಕು.

೫೧-೫೩. ಈ ಮೂರು ಶ್ಲೋಕಗಳಲ್ಲಿ ಶ್ರೀಪಾದುಕಾಮಂತ್ರವು ಉಕ್ತವಾಗಿದೆ. ಈ ಮಂತ್ರವು ಕಾಲೀಮತದಲ್ಲಿ ಶ್ರೀವಿದ್ಯಾಪ್ರಕರಣದಲ್ಲಿ ಐದು ವಿಧವಾಗಿ ಉದಹರಿಸಲ್ಪಟ್ಟಿದೆ:—

(೧) ಓಂ ಐಂ ಹ್ರೀಂ ಶ್ರೀಂ ಹಸಖಫ್ರೇಂ ಹಸೌಃ ಹಸ್ರೂಂ ಹಸಕ್ಷಮಲವಯರಾಂ ಹಸಕ್ಷಮಲವಯರೂಂ ಹಸಕ್ಷಮಲವರಿಂ (ರೀಂ ?) ಶ್ರೀಪರಪಾವಕಸರ್ವಾರಾಧ್ಯ ಸರ್ವಗುರುನಾಥ ಸರ್ವಗುರು ಗುರು ಶ್ರೀಗುರುನಾಥ ರಂಹಸಕ್ಷಮಲವಯರೂಂ ಹಸ್ರೂಂ ಹಸಕ್ಷಮಲವಯರಾಂ ಹಸಕ್ಷಮಲವಯರೂಂ ಹಸಕ್ಷಮಲವಯರಿಂ ಶ್ರೀ ಶಂಭುಗುರುಂ ಹಸ್ರೂಂ ಹಸ್ರೂಂ ಹಸಕ್ಷಮಲವಯರಾಂ ಹಸಕ್ಷಮಲವಯರೂಂ ಹಸಕ್ಷಮಲವಯರೀಂ ಹಸ್ರೂಂ ಹಸಕ್ಷಮಲವಯರೂಂ. ಇದು ಸ್ಥೂಲಪಾದುಕಾಮಂತ್ರವು.

(೨) ಓಂ ಐಂ ಹ್ರೀಂ ಶ್ರೀಂ ಹಸೌಂ ಸ್ಹಕ್ಷಮಲಯರೂಂ ಸ್ಹಕ್ಷಮಲವಯರೂಂ ಹಸ್ರೌಃ ಸಹಕ್ಷಮಲವಯರೀಃ ಹಸ್ರೌಃ ಶ್ರೀಪರಪಾವಕಸರ್ವಾರಾಧ್ಯ ಸರ್ವಗುರುನಾಥ ಸರ್ವಗುರುಸ್ವಯಂ ಗುರು ಶ್ರೀಗುರನಾಥ ರಂ ಹಸಕ್ಷಮಲವಯರೂಂ ಹಸೌಂ ಸಹಕ್ಷಮಲವಯರೀಂ ಸಹಕ್ಷಮಲವಯರೂಂ ಸಹಕ್ಷಮಲವಯರಾಂ ಶ್ರೀಶಂಭುಗುರುಂ ಹಸ್ರೌಂ ಸಹಕ್ಷಮಲವಯರೂಂ ಶ್ರೀ ಅಮುಕಾನಂದನಾಥಾಮುಕ ಶಕ್ತಿದೇವ್ಯಂಬಾ ಶ್ರೀಪಾದುಕಾಂ ಪೂಜಯಾಮಿ. ಎಂಬುದು ಮಧ್ಯಮಪಾದುಕಾಮಂತ್ರವು.

ತತಶ್ಶ್ರೀಶ್ಚಾಮುಕಾಂತೇ ತು ನಂದನಾಥಾಮುಕೇ ಪುನಃ ।
ದೇವ್ಯಂಬಾಂತೇ ಶ್ರೀ ಪಾದುಕಾಂ ಪೂಜಯಾಮಿ ಹೃದಂತಿಮೋ ॥ ೫೩

ಅಯಂ ಶ್ರೀಪಾದುಕಾಮಂತ್ರಃ ಸರ್ವಸಿದ್ಧಿಪ್ರದೋ ನೃಣಾಂ ।
ಗುಹ್ಯೇತಿ ಚ ಸಮುಪ್ಯಾರ್ಥ ಮಂತ್ರೈರೇತೈರ್ನಮೇತ್ಸುಧೀಃ ॥ ೫೪ ॥

ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಂ ।
ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ॥ ೫೫ ॥

---

(೩) ಓಂ ಐಂ ಹ್ರೀಂ ಶ್ರೀಂ ಹಸಖಫ್ರೇಂ ಹಸೌಃ ಹಸಕ್ಷಮಲ ವರಯೂ ಶ್ರೀ ಅಮುಕಾನಂದನಾಥ ಓಂ ಐಂ ಹ್ರೀಂ ಶ್ರೀಂ ಸಹಖಫ್ರೇಂ ಸ್ಹೌಃ ಸಹಕ್ಷಮಲವರಯೀಂ ಅಮುಕದೇವ್ಯಂಬಾ ಶ್ರೀಪಾದುಕಾಂ ಪೂಜಯಾಮಿ ನಮಃ— ಇದು ಲಘುಪಾದುಕಾಮಂತ್ರವು.

(೪) ಓಂ ಐಂ ಹ್ರೀಂ ಶ್ರೀಂ ಅಮುಕಾನಂದನಾಥಾಮುಕ ಶಕ್ತ್ಯಂಬಾ ಶ್ರೀಪಾದುಕಾಂ ಪೂಜಯಾಮಿ— ಎಂಬುದು ಲಘುತರ ಪಾದುಕಾ ಮಂತ್ರವು.

(೫) ಓಂ ಐಂ ಹ್ರೀಂ ಶ್ರೀಂ ಅಮುಕಾನಂದನಾಥ ಶ್ರೀಪಾದಕಾಂ ಪೂಜಯಾಮಿ— ಇದು ಸಾಮಾನ್ಯ ಪಾದುಕಾಮಂತ್ರವು.

ಇವುಗಳಲ್ಲಿ ಲಘುಪಾದುಕಾಮಂತ್ರವೆಂಬ ಮೂರನೆಯ ಪ್ರಭೇದವನ್ನು ಈ ಮೂರು ಶ್ಲೋಕಗಳಿಂದ ಸಂಗ್ರಹಿಸಿದೆಯೆಂದು ತಿಳಿಯಬೇಕು.

೫೪. ಈ ಶ್ರೀಪಾದುಕಾಮಂತ್ರವು ಮನುಷ್ಯರಿಗೆ ಸಕಲಸಿದ್ಧಿದಾಯಕವು. ಇದನ್ನು 'ಗುಹ್ಯ' ಇತ್ಯಾದಿ ಮಂತ್ರದಿಂದ ದೇವತೆಗೆ ಸಮರ್ಪಿಸಿ ಬಳಿಕ ಜ್ಞಾನಿಯು ಮುಂದಿನ ಮಂತ್ರಗಳಿಂದ ನಮಸ್ಕರಿಸಬೇಕು.

೫೫. ಚರಾಚರಾತ್ಮಕವಾದ ಈ ಅಖಂಡ ಭೂಮಂಡಲವನ್ನು ವ್ಯಾಪಿಸಿರುವ ಭಗವಂತನ ಸ್ವರೂಪವನ್ನು ತಿಳಿಸಿಕೊಟ್ಟ ಶ್ರೀಗುರುವಿಗೆ ನಮಸ್ಕಾರವು.

ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ॥ ೫೬ ॥

ನಮೋಽಸ್ತು ಗುರವೇ ತಸ್ಮಾ ಇಷ್ಟದೇವಸ್ವರೂಪಿಣೇ ।
ಯಸ್ಯ ವಾಗಮೃತಂ ಹಂತಿ ವಿಷಂ ಸಂಸಾರಸಂಜ್ಞಕಂ ॥ ೫೭ ॥

ಇತಿ ನತ್ವಾ ಪಠೇತ್ ಸ್ತೋತ್ರಂ ಸದ್ಯಃ ಪ್ರತ್ಯಯಕಾರಕಂ ।
ಓಂ ನಮಸ್ತೇ ನಾಥ ಭಗವನ್ ಶಿವಾಯ ಗುರುರೂಪಿಣೇ ॥ ೫೮ ॥

ವಿದ್ಯಾವತಾರ ಸಂಸಿದ್ಧ್ಯೈ ಸ್ವೀಕೃತಾನೇಕವಿಗ್ರಹ ।
ನವಾಯತನರೂಪಾಯ ಪರಮಾರ್ಥೈಕರೂಪಿಣೇ ॥ ೫೯ ॥

ಸರ್ವಜ್ಞಾನತಮೋಭೇದಭಾನವೇ ಚಿದ್ಘನಾಯ ತೇ ।
ಸ್ವತಂತ್ರಾಯ ದಯಾಕ್ಲುಪ್ತ ವಿಗ್ರಹಾಯ ಶಿವಾತ್ಮನೇ ॥ ೬೦ ॥

೫೬. ಅಜ್ಞಾನವೆಂಬ ಅಂಧಕಾರದಲ್ಲಿ ಸಿಲುಕಿ ಕುರುಡನಂತಿರುವ ಮನುಷ್ಯನಿಗೆ ಜ್ಞಾನಾಖ್ಯವಾದ ಅಂಜನವೆಂಬ ಸಲಾಕೆಯಿಂದ ಕಣ್ಣುಗಳನ್ನು ಬಿಡಿಸಿದ ಶ್ರೀಗುರುಪಾದಕ್ಕೆ ನಮಸ್ಕಾರವು.

೫೭. ಇಷ್ಟದೇವತಾರೂಪಿಯೂ, ಸಂಸಾರವೆಂಬ ಸರ್ಪದವಿಷವನ್ನು ನಾಶಮಾಡುವಂತಹ ವಾಗಮೃತವನ್ನು ಪಾನಮಾಡಿಸುವವನೂ ಆದ ಶ್ರೀಗುರುವಿನ ಪಾದಕ್ಕೆರಗುವೆನು.

೫೮-೬೨. ಈರೀತಿ ನಮಸ್ಕಾರವನ್ನು ಮಾಡಿದ ಕೂಡಲೆ ಭಕ್ತಿಯಿಂದ ಸ್ತೋತ್ರವನ್ನು ಮಾಡಬೇಕು. ವಿದ್ಯೆಯ ಸಿದ್ಧಿಗಾಗಿ ಅನೇಕ ಶರೀರಗಳನ್ನು ಸ್ವೀಕರಿಸಿರುವ, ಸ್ವಾಮಿಯಾದ ಭಗವಂತನೇ! ಗುರುರೂಪಿಯಾದ ಶಿವನಾಮಕನಾದ ನಿನಗೆ ನಮಸ್ಕಾರವು. ನವಾಯತನರೂಪನು, ಪರಮಾರ್ಥೈಕಸ್ವರೂಪನು, ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡುವ ವಿಷಯದಲ್ಲಿ ಸೂರ್ಯನು, ಜ್ಞಾನಮಯನು, ಸ್ವತಂತ್ರನು, ದಯಾಪೂರ್ಣನು, ಮಂಗಳಸ್ವರೂಪನು, ಭಕ್ತ

ಪರತಂತ್ರಾಯ ಭಕ್ತಾನಾಂ ಭವ್ಯಾನಾಂ ಭಾವರೂಪಿಣೇ ।
ವಿವೇಕಿನಾಂ ವಿವೇಕಾಯ ವಿಮರ್ಶಾಯ ವಿಮರ್ಶಿನಾಂ ॥ ೬೧ ॥

ಪ್ರಕಾಶಾನಾಂ ಪ್ರಕಾಶಾಯ ಜ್ಞಾನಿನಾಂ ಜ್ಞಾನರೂಪಿಣೇ ।
ಪುರಸ್ತಾತ್ಪಾರ್ಶ್ವಯೋಃ ಪೃಷ್ಠೇ ನಮಸ್ತುಭ್ಯಮುಪರ್ಯಧಃ ॥ ೬೨ ॥

ಸದಾ ಸಚ್ಚಿತ್ಸ್ವರೂಪೇಣ ವಿಧೇಹಿ ಭವದಾಸನಂ ।
ತ್ವತ್ಪ್ರಸಾದಾದಹಂ ದೇವ ಕೃತಕೃತ್ಯೋಽಸ್ಮಿ ಸರ್ವತಃ ॥ ೬೩ ॥

ಮಾಯಾಮೃತ್ಯುಮಹಾಪಾಶಾದ್ವಿಮುಕ್ತೋಽಸ್ಮಿ ಶಿವೋಽಸ್ಮಿ ವಃ ।
ಇತಿ ಸ್ತುತ್ವಾ ತತಃ ಸರ್ವಂ ಗುರವೇ ವಿನಿವೇದಯೇತ್ ॥ ೬೪ ॥

ಪ್ರಾತಃ ಪ್ರಭೃತಿ ಸಾಯಾಂತಂ ಸಾಯಾದಿ ಪ್ರಾತರಂತತಃ ।
ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಂ ॥ ೬೫ ॥

---

ಧೀನನು, ಭವ್ಯಗಳಲ್ಲಿ ಭಾವಸ್ವರೂಪನು, ವಿವೇಕಿಗಳಲ್ಲಿ ವಿವೇಕನು, ವಿಮರ್ಶಕರಲ್ಲಿ ವಿಮರ್ಶಕನು, ಪ್ರಕಾಶಗಳಲ್ಲಿ ಪ್ರಕಾಶನು, ಜ್ಞಾನಿಗಳಲ್ಲಿ ಜ್ಞಾನಸ್ವರೂಪನೂ ಆಗಿರುವ ನಿನಗೆ ಹಿಂದೆ, ಮುಂದೆ, ಉಭಯಪಾರ್ಶ್ವ ಮತ್ತು ಉಪರಿ ಅಧೋಭಾಗಗಳಲ್ಲಿಯೂ ನಮಸ್ಕಾರವು.

೬೩. ದೇವಾ! ಯಾವಾಗಲೂ ಸದ್‌ಜ್ಞಾನಸ್ವರೂಪವಾದ ನಿನ್ನ ಪಾದವನ್ನು ತೋರಿಸು. ಅದರ ಅನುಗ್ರಹದಿಂದ ನಾನು ಸಕಲವಿಷಯಗಳಲ್ಲಿಯೂ ಕೃತಕೃತ್ಯನಾಗುವೆನು.

೬೪. ಮಾಯೆಯೆಂಬ ಮೃತ್ಯುರೂಪವಾದ ಮಹಾಪಾಶದಿಂದ ಮುಕ್ತನಾಗುವೆನು ಮತ್ತು ಶಿವಸಾಯುಜ್ಯವನ್ನು ಪಡೆಯುವೆನು—ಎಂಬುದಾಗಿ ಸ್ತುತಿಸಿ ಬಳಿಕ ಸಕಲಕೃತ್ಯಗಳನ್ನೂ ಗುರುಗಳಿಗೆ ನಿವೇದಿಸಬೇಕು.

೬೫. ಜಗದೊಡೆಯನಾದ ದೇವನೇ! ಬೆಳಗಿನಿಂದ ಸಂಜೆ ಮತ್ತು ಸಂಜೆಯಿಂದ ಬೆಳಗಿನವರೆಗೂ ನಾನು ಮಾಡಿದುದೆಲ್ಲವೂ ನಿನ್ನ ಪೂಜೆಯಾಗಲಿ.

**ತತಶ್ಚ ಗುರುಪಾದಾಬ್ಜಗಲಿತಾಮೃತಧಾರಯಾ ।**
**ಕ್ಷಾಲಿತಂ ನಿಜಮಾತ್ಮಾನಂ ನಿರ್ಮಲಂ ಭಾವಯೇತ್ಸುಧೀಃ ॥ ೬೬ ॥**

**ಮೂಲಾದಿ ಬ್ರಹ್ಮರಂಧ್ರಾಂತಂ ಮೂಲವಿದ್ಯಾಂ ವಿಭಾವಯೇತ್ ।**
**ಮೂಲಾಧಾರಾದಧೋಭಾಗೇ ವರ್ತುಲಂ ವಾಯುಮಂಡಲಂ ॥ ೬೭ ॥**

**ತತ್ರಸ್ಥವಾಯುಬೀಜೋತ್ಥವಾಯುನಾ ಚ ತದೂರ್ಧ್ವಕಂ ।**
**ತ್ರಿಕೋಣಂ ಮಂಡಲಂ ವಹ್ನೇಸ್ತತ್ರಸ್ಥಾದ್ವಹ್ನಿಬೀಜತಃ ॥ ೬೮ ॥**

**ಉತ್ಪನ್ನೇನಾಗ್ನಿನಾ ಮೂಲಾಧಾರಾವಸ್ಥಿತವಿಗ್ರಹಾಂ ।**
**ಪ್ರಸುಪ್ತಭುಜಗಾಕಾರಾಂ ಸ್ವಯಂಭೂಲಿಂಗವೇಷ್ಟಿನೀಂ ॥ ೬೯ ॥**

**ಬಿಸತಂತುನಿಭಾಂ ಕೋಟಿವಿದ್ಯುದಾಭಾಂ ತನೀಯಸೀಂ ।**
**ಕುಲಕುಂಡಲಿನೀಂ ಧ್ಯಾತ್ವಾ ಕೂರ್ಚೇನೋತ್ಥಾಪಯೇಚ್ಚ ತಾಂ ॥ ೭೦ ॥**

೬೬. ಬಳಿಕ ಜ್ಞಾನಿಯು ಗುರುಪಾದಕಮಲದಿಂದ ಉತ್ಪನ್ನವಾದ ಅಮೃತಧಾರೆಯಿಂದ ತೊಳೆಯಲ್ಪಟ್ಟ ತನ್ನ ಸ್ವರೂಪವನ್ನು ಪರಿಶುದ್ಧವಾಯಿತೆಂದು ಭಾವಿಸಬೇಕು.

೬೭. ಮೂಲಾಧಾರದಿಂದ ಬ್ರಹ್ಮರಂಧ್ರದವರೆಗೆ ಮೂಲವಿದ್ಯೆಯನ್ನು ಪರಿಭಾವನೆಮಾಡಬೇಕು. ಮೂಲಾಧಾರದ ಕೆಳಭಾಗದಲ್ಲಿ ಗುಂಡಗಿರುವ ವಾಯುಮಂಡಲವಿದೆ.

೬೮-೭೦. ಅಲ್ಲಿರುವ ವಾಯುಬೀಜದಿಂದ ಹುಟ್ಟಿದ ವಾಯುವಿನಿಂದ ಅದರ ಮೇಲಿರುವ ತ್ರಿಕೋಣಾಕಾರವಾದ ಅಗ್ನಿಮಂಡಲವೂ, ಅಲ್ಲಿರುವ ಅಗ್ನಿಬೀಜದಿಂದ ಹುಟ್ಟಿದ ಅಗ್ನಿಯಿಂದ ಮೂಲಾಧಾರದಲ್ಲಿರುವ ವಿಗ್ರಹವುಳ್ಳ, ಮಲಗಿರುವ ಸರ್ಪದ ಆಕಾರವಾಗಿರುವ, ಸ್ವಯಂಭೂಲಿಂಗವನ್ನು ಸುತ್ತಿಕೊಂಡಿರುವ, ಪ್ರಕಾಶಮಾನವಾದ ಕಮಲ ತಂತು (ಕಮಲದ ನಾಳ) ವಿಗೆ ಸಮಾನವಾದ, ಕೋಟಿ ಮಿಂಚುಗಳಂತೆ ಕಾಂತಿಯುಳ್ಳ, ಸೂಕ್ಷ್ಮವಾದ, ಕುಲಕುಂಡಲಿನೀ ಶಕ್ತಿಯನ್ನು ಧ್ಯಾನಿಸಿ, ಅದನ್ನು 'ಹಂ' ಎಂಬ ಕೂರ್ಚಬೀಜೋಚ್ಚಾರಣದಿಂದ ಎಬ್ಬಿಸಬೇಕು.

ಸುಷುಮ್ನಾ ವರ್ತ್ಮನಾ ತಾಂ ಚ ಷಟ್ಚಕ್ರಕ್ರಮಭೇದಿನೀಂ ।
ಗುರೂಪದಿಷ್ಟವಿಧಿನಾ ಬ್ರಹ್ಮರಂಧ್ರಂ ನಯೇತ್ಸುಧೀಃ ॥ ೭೧ ॥

ತತ್ರಸ್ಥಾಮೃತಸಂಮಗ್ನಂ ಕೃತ್ವಾತ್ಮಾನಂ ವಿಭಾವಯೇತ್ ।
ತತ್ಪ್ರಭಾಪಟಲವ್ಯಾಪ್ತಂ ವಿಮಲಂ ಚಿನ್ಮಯಂ ಪರಂ ॥ ೭೨ ॥

ಪುನಸ್ತಾಂ ಸ್ವಸ್ಥಲಂ ನೀತ್ವಾ ಹೃದಿ ದೇವಂ ವಿಚಿಂತಯನ್ ।
ದೃಷ್ಟ್ವಾ ಚ ಮಾನಸೈರ್ದ್ರವ್ಯೈಃ ಪ್ರಾರ್ಥಯೇನ್ಮನುನಾ ಮುನಿಂ ॥ ೭೩ ॥

ತ್ರೈಲೋಕ್ಯ ಚೈತನ್ಯಮಯಾದಿದೇವ
ಶ್ರೀನಾಥ ವಿಷ್ಣೋ ಭವದಾಜ್ಞಯೈವ ।
ಪ್ರಾತಸ್ಸಮುತ್ಥಾಯ ತವ ಪ್ರಿಯಾರ್ಥಂ
ಸಂಸಾರಯಾತ್ರಾಂ ತ್ವನುವರ್ತಯಿಷ್ಯೇ ॥ ೭೪ ॥

---

೭೧. ಜ್ಞಾನಿಯು ಗುರುಗಳು ಉಪದೇಶಮಾಡಿದ ಪ್ರಕಾರ ಷಟ್ಚಕ್ರ ಕ್ರಮವನ್ನು ಭೇದಿಸುವಂತಹ ಆ ಕುಂಡಲಿನಿಯನ್ನು 'ಸುಷುಮ್ನಾ' ನಾಡಿಯ ಮಾರ್ಗವಾಗಿ ಬ್ರಹ್ಮರಂಧ್ರಕ್ಕೆ ಒಯ್ಯಬೇಕು.

೭೨. ಆತ್ಮನನ್ನು ಅಲ್ಲಿರುವ ಅಮೃತದಲ್ಲಿ ಮುಳುಗಿಸಿ, ಅದರ ಕಾಂತಿ ಪುಂಜದಿಂದ ವ್ಯಾಪಿಸಲ್ಪಟ್ಟ, ನಿರ್ಮಲ ಮತ್ತು ಜ್ಞಾನಮಯನೂ ಆದ ಪರಮಾತ್ಮನನ್ನು ಚಿಂತಿಸಬೇಕು.

೭೩. ಆ ಕುಂಡಲಿನಿಯನ್ನು ಪುನಃ ಅದರ ಸ್ಥಾನದಲ್ಲಿ ಹೊಂದಿಸಿ, ಮನಸ್ಸಿನಲ್ಲಿ ದೇವರನ್ನು ಚಿಂತಿಸಿ, ಮಾನಸಿಕವಾಸನಾಮಯದ್ರವ್ಯಗಳಿಂದ ಸಾಕ್ಷಾತ್ತಾಗಿ ನೋಡಿ, ಮುಂದಿನ ಮಂತ್ರದಿಂದ ಪ್ರಾರ್ಥಿಸಬೇಕು.

೭೪. ಲೋಕತ್ರಯಗಳಲ್ಲಿಯೂ ಜ್ಞಾನಮಯನಾಗಿ ಆದಿದೇವನಾಗಿರುವ, ಶ್ರೀಪತಿಯಾದ ವಿಷ್ಣುವೇ! ನಿನ್ನ ಅಪ್ಪಣೆಯಿಂದಲೇ ಬೆಳಗ್ಗೆ ಎದ್ದು, ನಿನ್ನ ಪ್ರೀತಿಗಾಗಿ ಸಂಸಾರಯಾತ್ರೆಯನ್ನು ನಡೆಯಿಸುವೆನು.

ವಿಷ್ಣೋರಿತಿ ಸ್ಥಲೇ ವಿಪ್ರ ಕಾರ್ಯಊಹೋನ್ಯ ದೈವತೇ ।
ತತಃ ಕುರ್ಯಾತ್ಸರ್ವಸಿಧ್ಯೈ ತ್ವಜಪಾಯಾ ನಿವೇದನಂ ॥ ೭೫ ॥

ಷಟ್ಶತಾನಿ ದಿವಾರಾತ್ರೌ ಸಹಸ್ರಾಣ್ಯೇಕವಿಂಶತಿಃ ।
ಅಜಪಾಖ್ಯಂ ತು ಗಾಯತ್ರೀಂ ಜೀವೋ ಜಪತಿ ಸರ್ವದಾ ॥ ೭೬ ॥

ಋಷಿರ್ಹಂಸಸ್ತಥಾ ವ್ಯಕ್ತ ಗಾಯತ್ರೀ ಛಂದ ಈರಿತಂ ।
ದೇವತಾ ಪರಮೋ ಹಂಸಶ್ಚಾದ್ಯಂತೇ ಬೀಜಶಕ್ತಿಕಂ ॥ ೭೭ ॥

ತತಃ ಷಡಂಗಂ ಕುರ್ವೀತ ಸೂರ್ಯಸ್ಸೋಮೋ ನಿರಂಜನಃ ।
ನಿರಾಭಾಸಶ್ಚ ಧರ್ಮಶ್ಚ ಜ್ಞಾನಂ ಚೇತಿ ತಥಾ ಪುನಃ ॥ ೭೮ ॥

ಕ್ರಮಾದೇವಂ ಹಂಸಪೂರ್ವಾನಾತ್ಮನೇಪದಪಶ್ಚಿಮಾನ್ ।
ಜಾತಿಯುಕ್ತಾನ್ಸಾಧಕೇಂದ್ರ ಷಡಂಗೇಷು ನಿಯೋಜಯೇತ್ ॥ ೭೯ ॥

---

೭೫. ಬ್ರಾಹ್ಮಣನೇ! ಈ ಮಂತ್ರದಲ್ಲಿ ವಿಷ್ಣು ಎಂಬುದಕ್ಕೆ ಬದಲಾಗಿ ಇತರ ದೇವತೆಗಳ ಹೆಸರನ್ನು ಊಹೆಮಾಡಿ ಅನ್ಯದೇವತೆಗಳನ್ನೂ ಹೀಗೆಯೇ ಪ್ರಾರ್ಥಿಸಬೇಕು. ಅನಂತರ ಸರ್ವಸಿದ್ಧಿಗೋಸ್ಕರ 'ಅಜಪಾ' ಎಂದರೆ ಹಂಸ ಗಾಯತ್ರೀ ಮಂತ್ರವನ್ನು ನಿವೇದನೆಮಾಡಬೇಕು.

೭೬. ಜೀವನು ಯಾವಾಗಲೂ ಅಹೋರಾತ್ರಿಗಳಲ್ಲಿ ಇಪ್ಪತ್ತೊಂದು ಸಾವಿರದ ಆರುನೂರು ಅಜಪಾ ಎಂಬ ಗಾಯತ್ರಿಯನ್ನು (ಹಂಸ) ಜಪಿಸುತ್ತಾನೆ.

೭೭. ಆ ಮಂತ್ರಕ್ಕೆ ಹಂಸನು ಋಷಿಯು; ಗಾಯತ್ರೀ ಛಂದಸ್ಸು, ಶ್ರೇಷ್ಠನಾದ ಹಂಸನೇ ದೇವತೆಯು; ಮೊದಲು ಕೊನೆಗಳಲ್ಲಿ ಬೀಜ ಮತ್ತು ಶಕ್ತಿಗಳಿವೆಯೆಂದು ಉಕ್ತವಾಗಿದೆ.

೭೮-೭೯. ಅನಂತರ ಷಡಂಗನ್ಯಾಸವನ್ನು ಮಾಡಬೇಕು. ಕ್ರಮವಾಗಿ ಸೂರ್ಯ, ಸೋಮ, ನಿರಂಜನ, ನಿರಾಭಾಸ, ಧರ್ಮ ಮತ್ತು ಜ್ಞಾನ ಎಂಬಿವುಗಳನ್ನು ನಮಃಸ್ವಾಹೇತ್ಯಾದಿ ಜಾತಿಗಳಿಂದ ಸಹಿತವಾದ, ಆದಿಯಲ್ಲಿ ಹಂಸಪದ, ಆಮೇಲೆ 'ಆತ್ಮನೇ' ಎಂಬ ಪದ ಎಂದರೆ 'ಹಂಸಾತ್ಮನೇ' ಎಂಬ ಪದವನ್ನೂ ಸಂಯೋಜನೆಮಾಡಿ, "ಹಂಸಾತ್ಮನೇ ನಿರಂಜನಾಯ ಹೃದಯಾಯ ನಮಃ,

ಹಕಾರಃ ಸೂರ್ಯಸಂಕಾಶತೇಜಾಸ್ಸಂಗಚ್ಛತೇ ಬಹಿಃ ।
ಸಕಾರಸ್ತ್ವಾದೃಶಶ್ಚೈವ ಪ್ರವೇಶೇ ಧ್ಯಾನಮೀರಿತಂ ॥ ೮೦ ॥

ಏವಂ ಧ್ಯಾತ್ವಾsರ್ಪಯೇದ್ಧೀಮಾನ್ವಹ್ನ್ಯರ್ಕೇಷು ವಿಭಾಗಶಃ ।
ಮೂಲಾಧಾರೇ ವಾದಿಸಾಂತ ಬೀಜಯುಕ್ತೇ ಚತುರ್ದಲೇ ॥ ೮೧ ॥

ಬಂಧೂಕಾಭೇ ಸ್ವಶಕ್ತ್ಯಾ ತು ಸಹಿತಾಯಾಖುಗಾಯ ಚ ।
ಪಾಶಾಂಕುಶಸುಧಾಪಾತ್ರ ಮೋದಕೋಲ್ಲಾಸಪಾಣಯೇ ॥ ೮೨ ॥

ಷಟ್ಶತಂ ತು ಗಣೇಶಾಯ ಪಾಗಧೀಶಾಯ ಚಾರ್ಪಯೇತ್ ।
ಸ್ವಾಧಿಷ್ಠಾನೇ ವಿದ್ರುಮಾಭೇ ವಾದಿ ಲಾಂತಾರ್ಣಸಂಯುತೇ ॥ ೮೩ ॥

---

ಹಂಸಾತ್ಮನೇ ನಿರಾಭಾಸಾಯ ಶಿರಸೇ ಸ್ವಾಹಾ" ಮುಂತಾದರೀತಿಯಿಂದ ಸಾಧಕವರ್ಯನು ಷಡಂಗಗಳಲ್ಲಿ ನಿಯೋಜನೆಮಾಡಿ ನ್ಯಾಸಮಾಡಬೇಕು.

೮೦. ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಹಕಾರವು ಬಾಹ್ಯದಲ್ಲಿ ಸಂಬದ್ಧವಾಗುವುದು. ಸಕಾರವೂ ಅಂತಹುದೇ ಆಗಿ ಪ್ರವಿಷ್ಟವಾದರೆ ಧ್ಯಾನವೆಂದು ಉಕ್ತವಾಗಿದೆ.

೮೧-೮೪. ಈರೀತಿಯಾಗಿ ಧ್ಯಾನಿಸಿ ಜ್ಞಾನಿಯು ಅಗ್ನಿಸೂರ್ಯರಲ್ಲಿ ಪ್ರತ್ಯೇಕಿಸಿ ಸಮರ್ಪಿಸಬೇಕು. ಬಂಧೂಕಪುಷ್ಪದಂತೆ ಪ್ರಕಾಶಮಾನವಾದ, ನಾಲ್ಕುದಳಗಳುಳ್ಳ, ವ, ಶ, ಷ, ಸ, ಎಂಬ ಬೀಜಾಕ್ಷರಯುಕ್ತವಾದ ಮೂಲಾಧಾರ ಚಕ್ರದಲ್ಲಿರುವ ಶಕ್ತಿಸಹಿತನು, ಮೂಷಕವಾಹನನು, ಪಾಶ, ಅಂಕುಶ, ಸುಧಾಪಾತ್ರೆ, ಮೋದಕ (ಕಡಬು) ಇವುಗಳಿಂದ ಹೊಳೆಯುತ್ತಿರುವ ಕೈಗಳುಳ್ಳವನು, ವಾಙ್ಮಯಾಮುಕನೂ ಆಗಿರುವ ಗಣೇಶನಿಗೆ ದಿನವೂ ಆಚರಿಸುತ್ತಿರುವ ಇಪ್ಪತ್ತೊಂದು ಸಾವಿರದ ಆರನೂರು ಹಂಸಮಂತ್ರಗಳ ಪೈಕಿ ಆರುನೂರನ್ನು ಸಮರ್ಪಿಸಬೇಕು. ಹವಳದಂತೆ ಹೊಳೆಯುತ್ತಿರುವ, ವ, ಭ, ಮ, ಯ, ರ, ಲ, ಎಂಬ ಆರು ವರ್ಣಗಳಿಂದ ಕೂಡಿದ, ಸ್ವಾಧಿಷ್ಠಾನಚಕ್ರದಲ್ಲಿರುವ, ಎಡಭಾಗದಲ್ಲಿ ಶಕ್ತಿಯುಕ್ತನು, ವಿದ್ಯಾಪತಿಯು, ಸ್ರುವ, ಅಕ್ಷಮಾಲೆಗಳಿಂದ ಪ್ರಕಾಶಮಾನ

ವಾಮಾಂಗಶಕ್ತಿಯುಕ್ತಾಯ ವಿದ್ಯಾಧಿಪತಯೇ ತಥಾ ।
ಸ್ರುವಾಕ್ಷಮಾಲಾಲಸಿತಬಾಹವೇ ಪದ್ಮಜನ್ಮನೇ ॥ ೮೪ ॥

ಬ್ರಾಹ್ಮಣೇ ಷಟ್ಸಹಸ್ರಂ ತು ಹಂಸಾರೂಢಾಯ ಚಾರ್ಪಯೇತ್ ।
ವಿದ್ಯುಲ್ಲಸಿತಮೇಘಾಭೇ ಡಾದಿಫಾಂತಾರ್ಣಪತ್ರಕೇ ॥ ೮೫ ॥

ಮಣಿಪೂರೇ ಶಂಖಚಕ್ರಗದಾಪಂಕಜಧಾರಿಣೇ ।
ಸ ಶ್ರಿಯೇ ಷಟ್ಸಹಸ್ರಂ ಚ ವಿಷ್ಣವೇ ವಿನಿವೇದಯೇತ್ ॥ ೮೬ ॥

ಅನಾಹತೇಽರ್ಕಪತ್ರೇ ಚ ಕಾದಿಠಾಂತಾರ್ಣಸಂಯುತೇ ।
ಶುಕ್ಲೇ ಶೂಲಾಭಯವರಸುಧಾಕಲಶಧಾರಿಣೇ ॥ ೮೭ ॥

ವಾಮಾಂಗೇ ಶಕ್ತಿಯುಕ್ತಾಯ ವಿದ್ಯಾಧಿಪತಯೇ ಸುಧೀಃ ।
ವೃಷಾರೂಢಾಯ ರುದ್ರಾಯ ಷಟ್ಸಹಸ್ರಂ ನಿವೇದಯೇತ್ ॥ ೮೮ ॥

---

ವಾದ ಬಾಹುಗಳುಳ್ಳವನು, ನಾಭಿಕಮಲದಲ್ಲಿ ಉತ್ಪನ್ನನೂ ಆಗಿರುವ ಹಂಸಾರೂಢನಾದ ಬ್ರಹ್ಮನಿಗೆ ಆರುಸಾವಿರ ಹಂಸಮಂತ್ರ ಜಪಗಳನ್ನು ಸಮರ್ಪಿಸಬೇಕು.

೮೫–೮೬. ಮಿಂಚಿನಿಂದ ಪ್ರಕಾಶಿಸಲ್ಪಟ್ಟ ಮೇಘದೋಪಾದಿಯಲ್ಲಿ ಕಾಂತಿಯುಳ್ಳ ಡ, ಢ, ಣ, ತ, ಥ, ದ, ಧ, ನ, ಪ, ಫ ಎಂಬ ವರ್ಣಗಳುಳ್ಳ ದಶದಳೋಪೇತವಾದ, ಮಣಿಪೂರ ಚಕ್ರದಲ್ಲಿರುವ, ಶಂಖ, ಚಕ್ರ, ಗದಾ, ಪದ್ಮಧಾರಿಯೂ, ಶ್ರೀದೇವಿಯಿಂದ ಸಹಿತನೂ ಆಗಿರುವ ವಿಷ್ಣುವಿಗೆ ಆರುಸಾವಿರ ಹಂಸಮಂತ್ರ ಜಪವನ್ನು ಸಮರ್ಪಿಸಬೇಕು.

೮೭–೮೮. ಹನ್ನೆರಡು ದಳಗಳುಳ್ಳದು, ಕಕಾರಾದಿ ಠಕಾರಾಂತ ಹನ್ನೆರಡು ಅಕ್ಷರಗಳನ್ನೊಳಗೊಂಡಿರುವುದು, ಶುಕ್ಲವೂ ಆಗಿರುವ ಅನಾಹತವೆಂಬ ಚಕ್ರದಲ್ಲಿರುವ, ಶೂಲ, ಅಭಯಮುದ್ರೆ, ವರಮುದ್ರೆ, ಅಮೃತಕಲಶ ಇವುಗಳನ್ನು ಧರಿಸಿರುವ, ವಾಮಾವಯವದಲ್ಲಿ ಶಕ್ತಿಯುಳ್ಳ, ವಿದ್ಯಾಧಿದೇವತೆಯು, ವೃಷಭಾರೂಢನೂ ಆಗಿರುವ ರುದ್ರನಿಗೆ ಆರು ಸಾವಿರ ಹಂಸಮಂತ್ರಜಪವನ್ನು ನಿವೇದಿಸಬೇಕು.

ವಿಶುದ್ಧೇ ಷೋಡಶದಲೇ ಸ್ವರಾಢ್ಯೇ ಶುಕ್ಲವರ್ಣಕೇ ।
ಮಹಾಜ್ಯೋತಿಪ್ರಕಾಶಾಯೇಂದ್ರಿಯಾಧಿಪತಯೇ ತತಃ ॥ ೮೯ ॥

ಸಹಸ್ರಮರ್ಪಯೇತ್ಪ್ರಾಣಶಕ್ತ್ಯಾ ಯುಕ್ತೇಶ್ವರಾಯ ಚ ।
ಆಜ್ಞಾಚಕ್ರೇ ಹಕ್ಷಯುಕ್ತೇ ದ್ವಿದಲೇಬ್ಜೇ ಸಹಸ್ರಕಂ ॥ ೯೦ ॥

ಸದಾಶಿವಾಯ ಗುರವೇ ಪರಶಕ್ತಿಯುತಾಯ ವೈ ।
ಸಹಸ್ರಾರೇ ಮಹಾಪದ್ಮೇ ನಾದಬಿಂದುದ್ವಯಾನ್ವಿತೇ ॥ ೯೧ ॥

ವಿಲಸನ್ಮಾತೃಕಾವರ್ಣೇ ವರಾಭಯಕರಾಯ ಚ ।
ಪರಮಾದ್ಯೇ ಚ ಗುರವೇ ಸಹಸ್ರಂ ವಿನಿವೇದಯೇತ್ ॥ ೯೨ ॥

---

೮೯-೯೧. ತರುವಾಯ ಹದಿನಾರು ದಳಗಳುಳ್ಳದೂ, ಸ್ವರಾಕ್ಷರಯುಕ್ತವೂ, ಬಿಳಿಯ ಬಣ್ಣವುಳ್ಳದೂ ಆಗಿರುವ ವಿಶುದ್ಧವೆಂಬ ಚಕ್ರದಲ್ಲಿರುವ, ಮಹಾತೇಜಸ್ಸಿನ ಪ್ರಕಾಶದಂತೆ ಪ್ರಕಾಶವುಳ್ಳ, ಇಂದ್ರಿಯನಿಯಾಮಕನಾದ, ಪ್ರಾಣಶಕ್ತಿ ವಿಶಿಷ್ಟನಾದ ಈಶ್ವರನಿಗೆ ಒಂದುಸಾವಿರ ಹಂಸಮಂತ್ರಜಪವನ್ನು ಸಮರ್ಪಿಸಬೇಕು. ಹ, ಕ್ಷ ಎಂಬ ವರ್ಣದ್ವಯಯುಕ್ತವಾದ, ದ್ವಿದಳಪದ್ಮರೂಪವಾದ, ಆಜ್ಞಾಚಕ್ರದಲ್ಲಿರುವ, ಪರಶಕ್ತಿಸಹಿತನಾದ ಸದಾಶಿವಗುರುವಿಗೆ ಒಂದುಸಾವಿರ ಹಂಸಮಂತ್ರಜಪವನ್ನು ಅರ್ಪಿಸಬೇಕು.

೯೧-೯೨. ಮಾತೃಕಾವರ್ಣಗಳಿಂದ ಶೋಭಿಸುತ್ತಿರುವ, ನಾದ, ಬಿಂದು ಉಭಯಯುಕ್ತವಾದ, ಸಹಸ್ರದಳ ಮಹಾಪದ್ಮದಲ್ಲಿರುವ, ವರಾಭಯಹಸ್ತನಾದ, ಉತ್ತಮನಾದ ಆದಿಗುರುವಿಗೆ ಒಂದುಸಾವಿರ ಹಂಸಮಂತ್ರಜಪವನ್ನು ಅರ್ಪಿಸಬೇಕು. ಈ ರೀತಿಯಾಗಿ ಆತ್ಮನು ಪ್ರತಿದಿನವೂ ಮಾಡುತ್ತಿರುವ ಇಪ್ಪತ್ತೊಂದು ಸಾವಿರದ ಆರುನೂರು ಹಂಸಮಂತ್ರಜಪವನ್ನು ದೇವತೆಗಳಿಗೆ ಸಮರ್ಪಣೆಮಾಡಬೇಕು.

ಚುಲಕೇಂಬು ಪುನರ್ಧೃತ್ವಾ ಸ್ವಭಾವಾದೇವ ಸಿಧ್ಯತಃ ।
ಏಕವಿಂಶತಿಸಾಹಸ್ರಪ್ರಮಿತಸ್ಯ ಜಪಸ್ಯ ಚ ॥ ೯೩ ॥

ಷಟ್ಶತಾಧಿಕಸಂಖ್ಯಾ ಸ್ಯಾದಜಪಾಯಾ ವಿಭಾಗಶಃ ।
ಸಂಕಲ್ಪೇನ ಮೋಕ್ಷದಾತಾ ವಿಷ್ಣುರ್ಮೇ ಪ್ರೀಯತಾಮಿತಿ ॥ ೯೪ ॥

ಅಸ್ಯಾಸ್ಸಂಕಲ್ಪಮಾತ್ರೇಣ ಮಹಾಪಾಪೈಃ ಪ್ರಮುಚ್ಯತೇ ।
ಬ್ರಹ್ಮೈವಾಹಂ ನ ಸಂಸಾರೀ ನಿತ್ಯಮುಕ್ತೋ ನ ಶೋಕಭಾಕ್ ॥ ೯೫ ॥

ಸಚ್ಚಿದಾನಂದರೂಪೋಽಹಮಾತ್ಮಾನಮಿತಿ ಭಾವಯೇತ್ ।
ತತಸ್ಸಮಾಚರೇದ್ದೇಹಕೃತ್ಯಂ ದೇವಾರ್ಚನಂ ತಥಾ ॥ ೯೬ ॥
ತದ್ವಿಧಾನಂ ಪ್ರವಕ್ಷ್ಯಾಮಿ ಸದಾಚಾರಸ್ಯ ಲಕ್ಷಣಂ ॥ ೯೭ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ಪಂಚಷಷ್ಟಿತಮೋಽಧ್ಯಾಯಃ

---

೯೩-೯೪. ಅಂಗೈಯಲ್ಲಿ ನೀರನ್ನು ಹಾಕಿಕೊಂಡು ಸ್ವಭಾವಸಿದ್ಧವಾದ ಇಪ್ಪತ್ತೊಂದುಸಾವಿರದ ಆರುನೂರು ಅಜಪಾಖ್ಯ ಗಾಯತ್ರೀಯೆಂಬ ಹಂಸಮಂತ್ರ ಜಪದಿಂದ ವಿಷ್ಣುವು ಸಂತುಷ್ಟನಾಗಲಿ ಎಂದು ಸಂಕಲ್ಪಮಾಡುವುದರಿಂದ ವಿಷ್ಣುವು ಮೋಕ್ಷಪ್ರದನಾಗುವನು.

೯೫-೯೭. ಈ ಗಾಯತ್ರಿಯ ಜಪಸಂಕಲ್ಪಮಾತ್ರದಿಂದಲೇ ಮಹಾಪಾಪಗಳಿಂದ ಮುಕ್ತನಾಗುವನು. ನಾನು ಬ್ರಹ್ಮನೇ ಎಂದರೆ ಮುಕ್ತನು ಸಂಸಾರಿಯಲ್ಲ. ನಿತ್ಯಮುಕ್ತನು. ದುಃಖಭಾಗಿಯಲ್ಲ. ನಾನು ಸಜ್ಜ್ಞಾನಾನಂದರೂಪನು' ಎಂಬುದಾಗಿ ಆತ್ಮನನ್ನು ಭಾವಿಸಬೇಕು. ಅನಂತರ ನಿತ್ಯಕರ್ತವ್ಯವನ್ನೂ ಮತ್ತು ದೇವತಾಪೂಜೆಯನ್ನೂ ಆಚರಿಸಬೇಕು. ಪೂಜೆಯ ವಿಧಾನ, ಸದಾಚಾರದ ಲಕ್ಷಣ ಇವುಗಳನ್ನು ಹೇಳುವೆನು.

ಇಂತು ಶ್ರೀ ನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ಮೂರನೆಯ ಪಾದದಲ್ಲಿ ಅರವತ್ತೈದನೆಯ ಅಧ್ಯಾಯವು
ಮುಗಿದುದು.

## ಕಥಾಸಂಗ್ರಹ

ಶಿಷ್ಯಪರೀಕ್ಷೆ ಮತ್ತು ಮಂತ್ರಶೋಧನ ಕ್ರಮಗಳನ್ನು ವಿವರಿಸಿ, ಮಂತ್ರಪ್ರಭೇದಗಳನ್ನೂ, ಅವುಗಳ ಫಲಾಫಲಗಳನ್ನೂ ಸಹ ಹೇಳಿ, ದೀಕ್ಷಾವಿಧಾನವನ್ನು ವಿಶದಪಡಿಸಿ, ಮಂತ್ರೋಪದೇಶಕ್ರಮವನ್ನು ನಿರೂಪಿಸಿರುತ್ತಾರೆ. ಉಪದೇಶಾನಂತರ ಶಿಷ್ಯನು ಗುರುಗಳ ಪಾದಪೂಜೆಯನ್ನು ಮಾಡಬೇಕೆಂದು ಹೇಳಿ ಅದರ ಕ್ರಮವೂ ನಿರೂಪಿತವಾಗಿದೆ. ಅನಂತರ ಪಾದುಕಾಮಂತ್ರ, ಹಂಸಮಂತ್ರಗಳನ್ನು ಸಪರಿಕರವಾಗಿ ನಿರೂಪಿಸಿ, ಹಂಸಮಂತ್ರಜಪವನ್ನು ಷಟ್ಚಕ್ರಸ್ಥಿತ ದೇವತೆಗಳಿಗೆ ಕೆಲಕೆಲವು ಭಾಗವನ್ನು ಸಮರ್ಪಿಸಬೇಕೆಂದು ಹೇಳಿ, ಸದಾಚಾರವನ್ನು ಮುಂದಿನ ಅಧ್ಯಾಯದಲ್ಲಿ ನಿರೂಪಿಸುತ್ತೇವೆಂದು ಪ್ರತಿಜ್ಞೆಮಾಡಿರುವರು.



# ಷಟ್ಷಷ್ಟಿತಮೋಽಧ್ಯಾಯಃ

## ಸನತ್ಕುಮಾರ ಉವಾಚ

ತತಃ ಶ್ವಾಸಾನುಸಾರೇಣ ದತ್ವಾ ಪಾದಂ ಮಹೀತಲೇ ।
ಸಮುದ್ರಮೇಖಲೇ ದೇವಿ ಪರ್ವತಸ್ತನಮಂಡಿತೇ ॥ ೧ ॥

ವಿಷ್ಣುಪತ್ನಿ ನಮಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೇ ।
ಇತಿ ಭೂಮಿಂ ತು ಸಂಪ್ರಾರ್ಥ್ಯ ವಿಹರೇಚ್ಚ ಯಥಾವಿಧಿ ॥ ೨ ॥

ರಕ್ಷಃ ಕೋಣೆ ತತೋ ಗ್ರಾಮಾದ್ಗತ್ವಾ ಮಂತ್ರಮುದೀರಯೇತ್ ।
ಗಚ್ಛಂತು ಋಷಯೋ ದೇವಾಃ ಪಿಶಾಚಾ ಯೇ ಚ ಗುಹ್ಯಕಾಃ ॥ ೩ ॥

ಪಿತೃಭೂತಗಣಾಸ್ಸರ್ವೇ ಕರಿಷ್ಯೇ ಮಲಮೋಚನಂ ।
ಇತಿ ತಾಲತ್ರಯಂ ದತ್ವಾ ಶಿರಃ ಪ್ರಾವೃತ್ಯ ವಾಸಸಾ ॥ ೪ ॥

---

## ಅರವತ್ತಾರನೆಯ ಅಧ್ಯಾಯವು

೧-೨. ಸನತ್ಕುಮಾರನು ಹೇಳಿದನು:—ಅನಂತರ ಶ್ವಾಸಾನುಸಾರವಾಗಿ ಭೂಮಿಯಮೇಲೆ ಪಾದವನ್ನಿಟ್ಟು, ಸಮುದ್ರವೆಂಬ ಮೇಖಲ (ಡಾಬು) ಪರ್ವತವೆಂಬ ಸ್ತನಗಳು ಇವುಗಳಿಂದ ಅಲಂಕೃತಳೂ, ವಿಷ್ಣುಪತ್ನಿಯೂ ಆದ ಭೂದೇವಿಯೇ! ನಿನಗೆ ನಮಸ್ಕಾರವು. ನನ್ನ ಪಾದಸ್ಪರ್ಶ (ನಿನ್ನ ಮೇಲೆ ಕಾಲಿಟ್ಟಿರುವುದನ್ನು) ವನ್ನು ಕ್ಷಮಿಸಬೇಕು. ಎಂಬುದಾಗಿ ಭೂಮಿಯನ್ನು ಪ್ರಾರ್ಥಿಸಿ ವಿಧಾನೋಕ್ತಪ್ರಕಾರ ಸಂಚರಿಸಬೇಕು,

೩-೬. ತರುವಾಯ ಗ್ರಾಮದಿಂದ ಹೊರಗೆ ನೈಋತ್ಯದಿಕ್ಕಿಗೆ ಹೋಗಿ 'ನಾನು ಮಲವಿಸರ್ಜನೆಯನ್ನು ಮಾಡುವೆನು. ಋಷಿಗಳು, ದೇವತೆಗಳು ಪಿಶಾಚಿಗಳು, ನಿಧಿಪಾಲಕರು, ಪಿತೃಭೂತಗಣಗಳು ಇವರೆಲ್ಲರೂ, ಈ ಸ್ಥಳದಿಂದ ದೂರ ಹೋಗಲಿ ಎಂದು ಮಂತ್ರವನ್ನುಹೇಳಿ ಮೂರಾವರ್ತಿ ಚಪ್ಪಾಳೆಯನ್ನು ಹೊಡೆದು, ತಲೆಗೆ ಬಟ್ಟೆಯನ್ನುಸುತ್ತಿ, ರಾತ್ರಿಕಾಲದಲ್ಲಿ ದಕ್ಷಿಣದಿಕ್ಕಿಗೆ

ದಕ್ಷಿಣಾಭಿಮುಖಂ ರಾತ್ರೌ ದಿವಾ ಸ್ಥಿತ್ವಾ ಹ್ಯುದಙ್ಮುಖಃ ।
ಮಲಂ ವಿಸೃಜ್ಯ ಶೌಚಂ ತು ಮೃದಾದ್ಭಿಃ ಸಮುಪಾಚರೇತ್ ॥ ೫ ॥

ಏಕಾ ಲಿಂಗೇ ಗುದೇ ತಿಸ್ರೋ ದಶ ವಾಮಕರೇ ಮೃದಃ ।
ಕರಯೋಸ್ಸಪ್ತ ವೈ ದದ್ಯಾತ್ತ್ರಿತ್ರಿವಾರಂ ಚ ಪಾದಯೋಃ ॥ ೬ ॥

ಏವಂ ಶೌಚಂ ವಿಧಾಯಾಥ ಗಂಡೂಷಾನ್ದ್ವಾದಶೈವ ತು ।
ಕೃತ್ವಾ ವನಸ್ಪತಿಂ ಚಾಥ ಪ್ರಾರ್ಥಯೇನ್ಮನುನಾಮುನಾ ॥ ೭ ॥

ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶುವಸೂನಿ ಚ ।
ಶ್ರಿಯಂ ಪ್ರಜ್ಞಾಂ ಚ ಮೇಧಾಂ ಚ ತ್ವಂ ನೋ ದೇಹಿ ವನಸ್ಪತೇ ॥ ೮ ॥

ಸಂಪ್ರಾರ್ಥ್ಯೈವಂ ದಂತಕಾಷ್ಠಂ ದ್ವಾದಶಾಂಗುಲಸಂಮಿತಂ ।
ಗೃಹೀತ್ವಾ ಕಾಮಮಂತ್ರೇಣ ಕುರ್ಯಾನ್ಮಂತ್ರೀ ಸಮಾಹಿತಃ ॥ ೯ ॥

---

ಅಭಿಮುಖವಾಗಿಯೂ, ಹಗಲಿನಲ್ಲಿ ಉತ್ತರಾಭಿಮುಖವಾಗಿಯೂ ಕುಳಿತು, ಮಲವನ್ನು ವಿಸರ್ಜನೆಮಾಡಿ ಮಣ್ಣುನೀರುಗಳಿಂದ ಶೌಚವನ್ನು ಮಾಡಿಕೊಳ್ಳಬೇಕು. ಶಿಶ್ನದಲ್ಲಿ ಒಂದಾವರ್ತಿಯೂ, ಗುದದಲ್ಲಿ ಮೂರು ಸಾರಿಯೂ, ಎಡಗೈಯಲ್ಲಿ ಹತ್ತು ಸಾರಿಯೂ, ಎರಡು ಕೈಗಳಿಗೆ ಒಟ್ಟಿಗೆ ಐದಾವರ್ತಿಯೂ, ಒಂದೊಂದು ಪಾದದಲ್ಲಿಯೂ ಮೂರು ಮೂರಾವರ್ತಿಯೂ ಮಣ್ಣನ್ನು ಹಚ್ಚಿ ತೊಳೆಯಬೇಕು

೭. ಈ ರೀತಿಯಾಗಿ ಮಣ್ಣುನೀರುಗಳಿಂದ ತೊಳೆದು ಶುದ್ಧಿಮಾಡಿಕೊಂಡು ಅನಂತರ ಹನ್ನೆರಡಾವರ್ತಿ ಗಂಡೂಷ ಎಂದರೆ ಬಾಯಿ ಮುಕ್ಕಳಿಸಿ ಮುಂದಿನ ಮಂತ್ರದಿಂದ ವನಸ್ಪತಿಯನ್ನು ಪ್ರಾರ್ಥಿಸಬೇಕು.

೮. ವನಸ್ಪತಿಯೇ! ಎಂದರೆ ಮೂಲಿಕೆಯ ಅಭಿಮಾನಿದೇವತೆಯೇ ! ನೀನು ಆಯುಸ್ಸು, ಬಲ, ಕೀರ್ತಿ, ವರ್ಚಸ್ಸು, ಸಂತಾನ, ಪಶು, ದ್ರವ್ಯ, ಸಂಪತ್ತು, ಪ್ರಜ್ಞೆ, ಮತ್ತು ಮೇಧೆ ಇವುಗಳನ್ನು ನನಗೆ ಕೊಡು.

೯-೧೦. ಹೀಗೆ ಪ್ರಾರ್ಥನೆಯನ್ನು ಮಾಡಿ ಹನ್ನೆರಡು ಅಂಗುಲ ಪರಿಮಾಣವುಳ್ಳ ದಂತಧಾವನಮಾಡುವ ಕಾಷ್ಠವನ್ನು ಕಾಮಮಂತ್ರದಿಂದ ಸ್ವೀಕರಿಸಿ, ಮಂತ್ರಜಪಮಾಡುವವನು ಸಮಾಧಾನಚಿತ್ತನಾಗಿ ಸಕಲ ಜನಪ್ರಿಯವು, ಕಾಮ

ಕಾಮದೇವಪದಂ ಜೇಂತಂ ತಥಾ ಸರ್ವಜನಪ್ರಿಯಂ ।
ಹೃದಂತಃ ಕಾಮಬೀಜಾಢ್ಯಂ ದಂತಾಂಶ್ಚಾನೇನ ಶೋಧಯೇತ್ ॥ ೧೦ ॥

ಜಿಹ್ವೋಲ್ಲೇಖೋ ವಾಗ್ಭವೇನ ಮೂಲೇನ ಕ್ಷಾಲಯೇನ್ಮುಖಂ ।
ದೇವಾಗಾರಂ ತತೋ ಗತ್ವಾ ನಿರ್ಮಾಲ್ಯಮುಪಸಾರ್ಯ ಚ ॥ ೧೧ ॥

ಪರಿಧಾಯಾಂಬರಂ ಶುದ್ಧಂ ಮಂಗಳಾರಾರ್ತಿಕಂ ಚರೇತ್ ।
ಅಸ್ತ್ರೇಣ ಪಾತ್ರಂ ಸಂಪ್ರೋಕ್ಷ್ಯ ಮೂಲೇನ ಜ್ವಾಲಯೇಚ್ಚ ತಂ ॥ ೧೨ ॥

ಸಂಪೂಜ್ಯ ಪಾತ್ರಮಾದಾಯೋತ್ಥಾಯ ಘಂಟಾಂ ಚ ವಾದಯೇತ್ ।
ಸುಗೋಘೃತಪ್ರದೀಪೇನ ಭ್ರಾಮಿತೇನ ಸಮಂತತಃ ॥ ೧೩ ॥

ವಾದ್ಯೈರ್ಗೀತೈರ್ಮನೋಜ್ಞೈಶ್ಚ ದೇವಸ್ಯಾರಾರ್ತಿಕಂ ಭವೇತ್ ।
ಇತಿ ನೀರಾಜನಂ ಕೃತ್ವಾ ಪ್ರಾರ್ಥಯಿತ್ವಾ ನಿಜೇಶ್ವರಂ ॥ ೧೪ ॥

ಸ್ನಾತುಂ ಯಾಯಾನ್ನಿಮ್ನಗಾದೌ ಕೀರ್ತಯನ್ದೇವತಾಗುಣಾನ್ ।
ಗತ್ವಾ ತೀರ್ಥಂ ನಮಸ್ಕೃತ್ಯ ಸ್ನಾನೀಯಂ ಚ ನಿಧಾಯ ವೈ ॥ ೧೫ ॥

---

ಬೀಜಯುಕ್ತವೂ ಆಗಿರುವ ಕಾಮದೇವಪದವನ್ನು ಚತುರ್ಥ್ಯಂತವಾಗಿ ಎಂದರೆ "ಕಂ ಕಾಮದೇವಾಯ ನಮಃ" ಎಂಬುದಾಗಿ ಮನಸ್ಸಿನೊಳಗೆ ಅನುಸಂಧಾನ ವನ್ನು ಮಾಡುತ್ತಾ, ಈ ಕಾಷ್ಠದಿಂದ ಹಲ್ಲುಜ್ಜಿ ಶುದ್ಧಿಮಾಡಿಕ್ಕೊಳ್ಳಬೇಕು.

೧೧-೧೨. 'ಐಂ, ಎಂಬ ಬೀಜಾಕ್ಷರವನ್ನು ಅನುಸಂಧಾನಮಾಡುತ್ತಾ ಆ ಕಾಷ್ಠಮೂಲದಿಂದ ನಾಲಗೆಯನ್ನು ಉಜ್ಜಿ ತೊಳೆದುಕೊಂಡು, ಮುಖವನ್ನು ತೊಳೆದುಕೊಳ್ಳಬೇಕು. ಅನಂತರ ದೇವರ ಮನೆಗೆ ಹೋಗಿ ನಿರ್ಮಾಲ್ಯವನ್ನು ತೆಗೆದುಹಾಕಿ, ಶುದ್ಧವಸ್ತ್ರವನ್ನು ಹೊದಿಸಿ ಮಂಗಳಾರತಿಯನ್ನು ಮಾಡಬೇಕು. ಅಸ್ತ್ರದಿಂದ (ಫಟ್ ಎಂದು ಹೇಳಿ) ಪಾತ್ರೆಯನ್ನು ಪ್ರೋಕ್ಷಿಸಿ ಮೂಲಮಂತ್ರದಿಂದ ದೀಪವನ್ನು ಹತ್ತಿಸಬೇಕು.

೧೩-೧೬. ಅನಂತರ ಅದನ್ನು ಪೂಜಿಸಿ ಪಾತ್ರೆಯನ್ನು ತೆಗೆದುಕೊಂಡು ಎದ್ದು ನಿಂತು ಘಂಟೆಯನ್ನು ಬಾರಿಸಬೇಕು. ಸಮೀಚೀನವಾದ ಹಸುವಿನ ತುಪ್ಪದ ದೀಪ ಮತ್ತು ಮನೋಹರವಾದ ವಾದ್ಯ, ಗಾನ ಇವುಗಳಿಂದ ದೇವರಿಗೆ ಆರತಿಮಾಡಿ ತನ್ನ ಸ್ವಾಮಿಯನ್ನು ಪ್ರಾರ್ಥಿಸಿ ಸ್ನಾನಕ್ಕಾಗಿ ನದೀ ಮುಂತಾದುವುಗಳಿಗೆ ಹೋಗಬೇಕು. ದೇವರಸ್ತೋತ್ರಗಳನ್ನು ಹೇಳುತ್ತಾ ಹೋಗಿ ತೀರ್ಥವನ್ನು

ಮೂಲಾಭಿಮಂತ್ರಿತಾಂ ಮೃದಮಾದಾಯ ಕಟಿದೇಶತಃ ।
ವಿಲಿಪ್ಯ ಪಾದಪರ್ಯಂತಂ ಕ್ಷಾಲಯೇತ್ತೀರ್ಥವಾರಿಣಾ ॥ ೧೬ ॥

ತತಶ್ಚ ಪಂಚಭಿಃ ಪಾದೌ ಪ್ರಕ್ಷಾಲ್ಯಾಂತರ್ಜಲೇ ಪುನಃ ।
ಪ್ರವಿಶ್ಯ ನಾಭಿಮಾತ್ರೇ ತು ಮೃದಂ ವಾಮಕರಸ್ಯ ಚ ॥ ೧೭ ॥

ಮಣಿಬಂಧೇ ಹಸ್ತತಲೇ ತದಗ್ರೇ ಚ ತಥಾ ಪುನಃ ।
ಕೃತ್ವಾಂಗುಲ್ಯಾ ಗಾಂಗಮೃದಮಾದಾಯಾಸ್ತ್ರೇಣ ತತ್ಪುನಃ ॥ ೧೮ ॥

ನಿಜೋಪರಿ ಚ ಮಂತ್ರಜ್ಞೋ ಭ್ರಾಮಯಿತ್ವಾ ತ್ಯಜೇತ್ಸುಧೀಃ ।
ತಲಸ್ಥಂ ಚ ಷಡಂಗೇಷು ತನ್ಮಂತ್ರೈಃ ಪ್ರವಿಲೇಪಯೇತ್ ॥ ೧೯ ॥

ನಿಮಜ್ಯ ಕ್ಷಾಲಯೇತ್ಸಮ್ಯಕ್ ಮಲಸ್ನಾನಮಿತೀರಿತಂ ।
ವಿಭಾವ್ಯೇಷ್ಟಮಯಂ ಸರ್ವಮಾತರಂ ಸ್ನಾನಮಾಚರೇತ್ ॥ ೨೦ ॥

---

ನಮಸ್ಕರಿಸಿ ಸ್ನಾನಾಂಗವಸ್ತುಗಳನ್ನು ದಂಡೆಯಮೇಲಿಟ್ಟು ಮೂಲ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಮೃತ್ತಿಕೆಯನ್ನು ತೆಗೆದುಕೊಂಡು ಅದನ್ನು ನಡುವಿನಿಂದ ಪಾದದವರೆಗೂ ಹಚ್ಚಿಕೊಂಡು ತೀರ್ಥೋದಕದಿಂದ ತೊಳೆಯಬೇಕು.

೧೭-೧೯. ಆಮೇಲೆ ಐದಾವರ್ತಿ ಪಾದಗಳನ್ನು ತೊಳೆದುಕೊಂಡು ಪುನಃ ನಾಭಿಯವರೆಗಿನ ಆಳದ ನೀರಿನಲ್ಲಿ ನಿಂತು ಎಡಗೈಯಿನ ಮಣಿಬಂಧ, ಅಂಗೈ, ಅದರ ಅಗ್ರಭಾಗ ಇವುಗಳಲ್ಲಿ ಪುನಃ ಮೃತ್ತಿಕೆಯನ್ನು ಲೇಪಿಸಿ, ಬೆಟ್ಟಿನಿಂದ ಗಂಗೆಯ ಮೃತ್ತಿಕೆಯನ್ನು ತೆಗೆದುಕೊಂಡು ಮಂತ್ರಜ್ಞಾನಿಯು ಅದನ್ನು ಪುನಃ ಅಸ್ತ್ರದಿಂದ (ಫಟ್) ತನ್ನ ಮೇಲೆ ತಿರುಗಿಸಿ, ತ್ಯಜಿಸಬೇಕು. ತಳದಲ್ಲಿದ್ದುದನ್ನು ಷಡಂಗಗಳಲ್ಲಿ ಆ ಮಂತ್ರಗಳಿಂದ ಲೇಪನೆಮಾಡಿಕೊಳ್ಳಬೇಕು.

೨೦. ಈ ರೀತಿಯಾಗಿ ಮೃತ್ತಿಕೆಯನ್ನು ಹಚ್ಚಿಕೊಂಡನಂತರ ನೀರಿನಲ್ಲಿ ಮುಳುಗಿ ಚೆನ್ನಾಗಿ ತೊಳೆಯಬೇಕು. ಎಂಬುದಾಗಿ ಮಲಸ್ನಾನವು ಉಕ್ತವಾಗಿದೆ ಅತ್ಯಂತೇಷ್ಟರಾದ ಸಕಲ ಮಾತೃಗಳನ್ನೂ ಸ್ಮರಿಸಿ ಸ್ನಾನಮಾಡಬೇಕು.

ಅನಂತಾದಿತ್ಯಸಂಕಾಶಂ ನಿಜಭೂಷಾಯುಧೈರ್ಯುತಂ ।
ಮಂತ್ರಮೂರ್ತಿಂ ಪ್ರಭುಂ ಸ್ಮೃತ್ವಾ ತತ್ಪಾದೋದಕಸಂಭವಾಂ ॥ ೨೧ ॥

ಧಾರಾಂ ಚ ಬ್ರಹ್ಮರಂಧ್ರೇಣ ಪ್ರವಿಶಂತೀಂ ನಿಜಾಂ ತನುಂ ।
ತಯಾ ಸಂಕ್ಷಾಲಯೇತ್ಸರ್ವಮಂತರ್ದೇಹಗತಂ ಮಲಂ ॥ ೨೨ ॥

ತತ್ ಕ್ಷಣಾದ್ವಿರಜಾ ಮಂತ್ರೀ ಜಾಯತೇ ಸ್ಫಟಿಕೋಪಮಃ ।
ತತಃ ಶ್ರೌತೋಕ್ತವಿಧಿನಾ ಸ್ನಾತ್ವಾ ಮಂತ್ರೀ ಸಮಾಹಿತಃ ॥ ೨೩ ॥

ಮಂತ್ರಸ್ನಾನಂ ತತಃ ಕುರ್ಯಾತ್ತದ್ವಿಧಾನಮಥೋಚ್ಯತೇ ।
ದೇಶಕಾಲೌ ಚ ಸಂಕೀರ್ತ್ಯ ಪ್ರಾಣಾಯಾಮಂ ಷಡಂಗಕೈಃ ॥ ೨೪ ॥

ಕೃತ್ವಾರ್ಕಮಂಡಲಾತ್ತೀರ್ಥಾನ್ಯಾಹ್ವಯೇನ್ಮುಷ್ಟಿಮುದ್ರಯಾ ।
ಬ್ರಹ್ಮಾಂಡೋದರ ತೀರ್ಥಾನಿ ಕರೈಃ ಸ್ಪೃಷ್ಟಾನಿ ತೇ ರವೇ ॥ ೨೫ ॥

ತೇನ ಸತ್ಯೇನ ಮೇ ದೇವ ದೇಹಿ ತೀರ್ಥಂ ದಿವಾಕರ ॥ ೨೬ ॥

---

೨೧-೨೨. ಅಸಂಖ್ಯಾಕ ಸೂರ್ಯರಂತೆ ಪ್ರಕಾಶಿಸುವ, ತನ್ನ ಆಭರಣ, ಆಯುಧಗಳನ್ನು ಧರಿಸಿರುವ, ಮಂತ್ರಮೂರ್ತಿಸ್ವಾಮಿಯನ್ನು ಧ್ಯಾನಿಸಿ, ಆ ಸ್ವಾಮಿಯ ಪಾದೋದಕಸಂಭೂತವಾದ ಧಾರೆಯನ್ನು ಬ್ರಹ್ಮರಂಧ್ರದಿಂದ ತನ್ನ ಶರೀರದಲ್ಲಿ ಪ್ರವೇಶಿಸುತ್ತಿರುವುದಾಗಿ ಅನುಸಂಧಾನ ಮಾಡಿಕೊಂಡು ಆ ಪಾದೋದಕದ ಧಾರೆಯಿಂದ ದೇಹದೊಳಗಿರುವ ಮಲವನ್ನೆಲ್ಲಾ ತೊಳೆಯಬೇಕು.

೨೩. ಮಂತ್ರಜಪಕರ್ತನು ತಕ್ಷಣದಲ್ಲಿಯೇ ನಿರ್ಮಲನಾಗಿ ಸ್ಫಟಿಕಕ್ಕೆ ಸಮಾನನಾಗುವನು. ತರುವಾಯ ವೇದೋಕ್ತ ವಿಧಾನದಿಂದ ಸ್ನಾನಮಾಡಿ ಮಂತ್ರಾನುಷ್ಠಾತೃವು ಸಮಾಧಾನ ಚಿತ್ತನಾಗಬೇಕು.

೨೪-೨೬. ಆಮೇಲೆ ಮಂತ್ರಸ್ನಾನಮಾಡಬೇಕು: ಮುಂದೆ ಅದರ ವಿಧಾನವು ಹೇಳಲ್ಪಡುತ್ತದೆ. ದೇಶಕಾಲಗಳನ್ನು ಕೀರ್ತನೆಮಾಡಿ ಆರು ಅಂಗಗಳಿಂದ ಪ್ರಾಣಾಯಾಮಮಾಡಿ ಮುಷ್ಟಿಮುದ್ರೆಯನ್ನು ಪ್ರದರ್ಶಿಸಿ ತೀರ್ಥಗಳನ್ನು ಸೂರ್ಯಮಂಡಲದಿಂದ ಆಹ್ವಾನಮಾಡಬೇಕು. ಸೂರ್ಯನೇ! ಬ್ರಹ್ಮಕುಂಡದೊಳಗಿನ ತೀರ್ಥಗಳು ನಿನ್ನ ಕಿರಣಗಳಿಂದ ವ್ಯಾಪಿಸಲ್ಪಟ್ಟಿರುವುದು ಶಕ್ಯವು. ಆದುದರಿಂದ ನೀನು ಪ್ರಸನ್ನನಾಗಿ ತೀರ್ಥವನ್ನು ಕರುಣಿಸು.

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ಸನ್ನಿಧಿಂ ಕುರು ॥ ೨೭ ॥

ಇತ್ಯಾವಾಹ್ಯ ಜಲೇ ತಾನಿ ಸುಧಾಬೀಜೇನ ಯೋಜಯೇತ್ ।
ಗೋಮುದ್ರಯಾಽಮೃತೀಕೃತ್ಯ ಕವಚೇನಾವಗುಂಠ್ಯ ಚ ॥ ೨೮ ॥

ಸಂರಕ್ಷ್ಯಾಸ್ತ್ರೇಣ ತತ್ಪಶ್ಚಾಚ್ಚಕ್ರಮುದ್ರಾಂ ಪ್ರದರ್ಶಯೇತ್ ।
ವಹ್ನ್ಯರ್ಕೇಂದು ಮಂಡಲಾನಿ ತತ್ರ ಸಂಚಿಂತಯೇದ್ಬುಧಃ ॥ ೨೯ ॥

ಮಂತ್ರಯೇದರ್ಕಮಂತ್ರೇಣ ಸುಧಾಬೀಜೇನ ತಜ್ಜಲಂ ।
ಮೂಲೇನ ಚೈಕಾದಶಧಾ ತತ್ರ ಸಂಮಂತ್ರ್ಯ ಭಾವಯೇತ್ ॥ ೩೦ ॥

ಪೂಜಾಯಂತ್ರಂ ಚ ತನ್ಮಧ್ಯೇ ಸ್ವಾಂತಾದಾವಾಹ್ಯ ದೇವತಾಂ ।
ಸ್ನಾಪಯಿತ್ವಾರ್ಚಯೇತ್ತಾಂ ಚ ಮಾನಸೈರುಪಚಾರಕೈಃ ॥ ೩೧ ॥

---

೨೭. ಗಂಗೆ ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು, ಮತ್ತು ಕಾವೇರಿ ಈ ನದಿಗಳ ಅಭಿಮಾನಿದೇವತೆಗಳೆಲ್ಲರೂ ಈ ನೀರಿನಲ್ಲಿ ಸನ್ನಿಹಿತರಾಗಬೇಕೆಂದು ಪ್ರಾರ್ಥಿಸಬೇಕು.

೨೮-೨೯. ಈ ರೀತಿ ಜಲದಲ್ಲಿ ದೇವತೆಗಳನ್ನು ಆವಾಹನೆಮಾಡಿ ಅವುಗಳನ್ನು ಸುಧಾಬೀಜದಿಂದ ಸಂಯೋಜನೆಮಾಡಬೇಕು. ಗೋಮುದ್ರೆಯನ್ನು ತೋರಿಸಿ ಅಮೃತವಾದಂತೆ ಭಾವಿಸಿ ಕವಚ (ಹುಂ) ದಿಂದ ಆಚ್ಛಾದನೆಮಾಡಿ, ಅಸ್ತ್ರ (ಫಟ್) ದಿಂದ ಸಂರಕ್ಷಿಸಿ, ಆದರ ಮುಂದೆ ಚಕ್ರಮುದ್ರೆಯನ್ನು ತೋರಿಸಬೇಕು. ಜ್ಞಾನಿಯು ಅದರಲ್ಲಿ ಅಗ್ನಿ ಸೂರ್ಯ ಚಂದ್ರಮಂಡಲಗಳನ್ನು ಚಿಂತಿಸಬೇಕು.

೩೦-೩೧. ಅಮೃತಬೀಜಯುಕ್ತವಾದ ಸೂರ್ಯಮಂತ್ರದಿಂದ ಆ ನೀರನ್ನು ಅಭಿಮಂತ್ರಿಸಬೇಕು. ಮೂಲಮಂತ್ರದಿಂದ ಹನ್ನೊಂದಾವರ್ತಿ ಮಂತ್ರಿಸಿ, ಅಲ್ಲಿ ಪೂಜಾಯಂತ್ರವನ್ನು ಭಾವಿಸಬೇಕು. ಆದರ ಮಧ್ಯದಲ್ಲಿ ತನ್ನ ಹೃದಯದಿಂದ ದೇವತೆಯನ್ನು ಆವಾಹನೆಮಾಡಿ, ಸ್ನಾನಮಾಡಿಸಿ ಮಾನಸಿಕವಾದ ಉಪಚಾರಗಳಿಂದ ಅದನ್ನು ಪೂಜಿಸಬೇಕು.

ಸಿಂಹಾಸನಸ್ಥಾಂ ತಾಂ ನತ್ವಾ ತಜ್ಜಲಂ ಪ್ರಣಮೇತ್ಸುಧೀಃ |
ಆಧಾರಃ ಸರ್ವಭೂತಾನಾಂ ವಿಷ್ಣೋರತುಲತೇಜಸಃ ॥ ೩೨ ॥

ತದ್ರೂಪಾಶ್ಚ ತತೋ ಜಾತಾ ಆಪಸ್ತಾಃ ಪ್ರಣಮಾಮ್ಯಹಂ |
ಇತಿ ನತ್ವಾ ಸಮಾರುಂಧ್ಯ ಸಪ್ತಛಿದ್ರಾಣಿ ಸಾಧಕಃ ॥ ೩೩ ॥

ನಿಮಜ್ಯ ಸಲಿಲೇ ತಸ್ಮಿನ್ಮೂಲಂ ದೇವ್ಯಾಕೃತಿಂ ಸ್ಮರೇತ್ |
ನಿಮಜ್ಯೋನ್ಮಜ್ಯ ತ್ರಿಶ್ಚೈವಂ ಸಿಂಚೇತ್ಕಂ ಕುಂಭಮುದ್ರಯಾ ॥ ೩೪ ॥

ತ್ರಿರ್ಮೂಲೇನ ಚತುರ್ಮಂತ್ರೈರಭಿಷಿಂಚೇನ್ನಿಜಾಂ ತನುಂ |
ಚತ್ವಾರೋ ಮನವಸ್ತೇಽತ್ರ ಕಥ್ಯಂತೇ ತಾಂತ್ರಿಕಾ ಮುನೇ ॥ ೩೫ ॥

ಸಿಸೃಕ್ಷೋರ್ನಿಖಿಲಂ ವಿಶ್ವಂ ಮುಹುಃ ಶುಕ್ರಂ ಪ್ರಜಾಪತೇಃ |
ಮಾತರಸ್ಸರ್ವಭೂತಾನಾಮಾಪೋದೇವ್ಯಃ ಪುನಂತು ಮಾಂ ॥ ೩೬ ॥

---

೩೨-೩೪. ಸಿಂಹಾಸನಗತವಾದ ಆ ದೇವತೆಗೆ ನಮಸ್ಕಾರಮಾಡಿ ಆ ಜಲವನ್ನೂ ನಮಸ್ಕರಿಸಬೇಕು. ಸಕಲ ಭೂತಗಳಿಗೂ ಆಧಾರಗಳಾದ ಅಪರಿಮಿತ ತೇಜಸ್ಸುಳ್ಳ ವಿಷ್ಣುವಿನ ಆ ರೂಪಗಳು ಆ ಜಲದಿಂದಲೇ ಹುಟ್ಟಿದುವು. ಅಂತಹ ಜಲವನ್ನು ನಾನು ನಮಸ್ಕರಿಸುವೆನು. ಎಂದು ಹೇಳಿ ಮಂತ್ರಸಾಧಕನು ನಮಸ್ಕರಿಸಿ ಏಳು ಛಿದ್ರಗಳನ್ನು ಮುಚ್ಚಿ ಆ ನೀರಿನಲ್ಲಿ ಮುಳುಗಿ ದೇವತೆಯ ಆಕಾರವಾದ ಮೂಲವನ್ನು ಸ್ಮರಿಸಬೇಕು. ಈ ಪ್ರಕಾರ ಮೂರಾವರ್ತಿ ಮುಳುಗಿ ಎದ್ದು, ಕುಂಭ ಮುದ್ರೆಯಿಂದ ನೀರನ್ನು ಪ್ರೋಕ್ಷಿಸಿಕೊಳ್ಳಬೇಕು.

೩೫. ಮೂಲಮಂತ್ರ ಮತ್ತು ಮುಂದೆ ಹೇಳುವ ನಾಲ್ಕು ಮಂತ್ರಗಳು ಇವುಗಳಿಂದ ಆ ನೀರನ್ನು ತನ್ನ ಶರೀರಕ್ಕೆ ಮೂರಾವರ್ತಿ ಪ್ರೋಕ್ಷಿಸಿಕೊಳ್ಳಬೇಕು. ನಾರದಮುನಿಯೇ ! ತಂತ್ರೋಕ್ತವಾದ ಆ ನಾಲ್ಕು ಮಂತ್ರಗಳು ಇಲ್ಲಿ ಹೇಳಲ್ಪಡುತ್ತವೆ.

೩೬. ಈ ಸಮಸ್ತ ಜಗತ್ತನ್ನು ಪುನಃ ಸೃಷ್ಟಿಸಬೇಕೆಂದು ಬಯಸುವ ಬ್ರಹ್ಮನ ವೀರ್ಯವು ಮತ್ತು ಸಕಲ ಭೂತಗಳಿಗೂ ಜನನಿಯರಾದ ಜಲಾಭಿಮಾನಿತೆಗಳೂ ಸಹ ನನ್ನನ್ನು ಪರಿಶುದ್ಧಿಗೊಳಿಸಲಿ. ಎಂಬುದು ಒಂದು ಮಂತ್ರವು.

ಅಲಕ್ಷ್ಮೀರ್ಮಲರೂಪಾ ಯಾ ಸರ್ವಭೂತೇಷು ಸಂಸ್ಥಿತಾ ।
ಕ್ಷಾಲಯಂತಿ ಚ ತಾಂ ಸ್ಪರ್ಶಾದಾಪೋದೇವ್ಯಃ ಪುನಂತು ಮಾಂ ॥ ೩೭ ॥

ಯನ್ಮೇ ಕೇಶೇಷು ದೌರ್ಭಾಗ್ಯಂ ಸೀಮಂತೇ ಯಚ್ಚ ಮೂರ್ಧನಿ ।
ಲಲಾಟೇ ಕರ್ಣಯೋರಕ್ಷ್ಣೋರಾಪಸ್ತದ್ಘ್ನಂತು ವೋ ನಮಃ ॥ ೩೮ ॥

ಆಯುರಾರೋಗ್ಯಮೈಶ್ವರ್ಯಮರಿಪಕ್ಷಕ್ಷಯಂ ಶುಭಂ ।
ಸಂತೋಷಃ ಕ್ಷಾಂತಿರಾಸ್ತಿಕ್ಯಂ ವಿದ್ಯಾ ಭವತು ವೋ ನಮಃ ॥ ೩೯ ॥

ವಿಪ್ರಪಾದೋದಕಂ ಪೀತ್ವಾ ಸಾಲಗ್ರಾಮಶಿಲಾಜಲಂ ।
ಪಿಬೇನ್ನಿರುದ್ಧಂ ನೋ ಕುರ್ಯಾದೇಷಾಂ ತು ನಿಯತೋ ವಿಧಿಃ ॥ ೪೦ ॥

ಪೃಥಿವ್ಯಾಂ ಯಾನಿ ತೀರ್ಥಾನಿ ದಕ್ಷಾಂಘ್ರೌ ತಾನಿ ಭೂಸುರೇ ।
ಸ್ವೇಷ್ಟದೇವಂ ಸಮುದ್ವಾಸ್ಯ ಮಂತ್ರೀ ಮಾರ್ತಂಡಮಂಡಲೇ ॥ ೪೧ ॥

---

೩೭. ಸಕಲಪ್ರಾಣಿಗಳಲ್ಲಿಯೂ ನೆಲಸಿರುವ, ಮಲರೂಪವಾದ ದರಿದ್ರ ದೇವತೆಯನ್ನು ಸ್ಪರ್ಶಮಾತ್ರದಿಂದ ತೊಳೆಯುವ ಜಲದೇವತೆಗಳು ನನ್ನನ್ನು ಪರಿಶುದ್ಧಗೊಳಿಸಲಿ ಎಂಬುದೇ ಎರಡನೆಯ ಮಂತ್ರವು.

೩೮. ಕೂದಲು, ಬೈತಲೆ, ಶಿರಸ್ಸು, ಹಣೆ, ಕಿವಿಗಳು ಮತ್ತು ಕಣ್ಣುಗಳು ಇವುಗಳಲ್ಲಿರುವ ನನ್ನ ದೌರ್ಭಾಗ್ಯವನ್ನು ಜಲದೇವತೆಗಳು ನಾಶಪಡಿಸಲಿ ಅಂತಹ ನಿಮಗೆ ನಮಸ್ಕಾರ ಎಂಬುದೇ ಮೂರನೆಯ ಮಂತ್ರವು.

೩೯. ಜಲದೇವತೆಗಳಿರಾ! ನಿಮಗೆ ನಮಸ್ಕಾರವು. ಆಯುಸ್ಸು, ಆರೋಗ್ಯ ಐಶ್ವರ್ಯ, ಶತ್ರುಪಕ್ಷನಾಶ, ಶ್ರೇಯಸ್ಸು, ಸಂತೋಷ, ಸಹಿಷ್ಣುತೆ, ಆಸ್ತಿಕ್ಯ, (ಧರ್ಮಬುದ್ಧಿ) ಮತ್ತುವಿದ್ಯೆ ಇವುಗಳು ನನಗೆ ಲಭಿಸುವಂತೆ ಅನುಗ್ರಹಮಾಡಿರಿ. ಎಂಬುದೇ ನಾಲ್ಕನೆಯ ಮಂತ್ರವು.

೪೦. ಬ್ರಾಹ್ಮಣರ ಪಾದೋದಕವನ್ನು ಪಾನಮಾಡಿ ಸಾಲಿಗ್ರಾಮ ತೀರ್ಥವನ್ನು ಪ್ರಾಶನಮಾಡಬೇಕು. ನಿಷಿದ್ಧವನ್ನು ಮಾಡಬಾರದು. ಎಂಬುದೇ ವಿಧಿನಿಯಮವು.

೪೧-೪೩. ಭೂಮಿಯಲ್ಲಿರುವ ತೀರ್ಥಗಳೆಲ್ಲವೂ ಬ್ರಾಹ್ಮಣನ ಬಲಗಾಲಿನಲ್ಲಿ ಸನ್ನಿಹಿತವಾಗಿರುವುವು. ಮಂತ್ರ ಜಪಕರ್ತನಾದ ಜ್ಞಾನಿಯು ತನ್ನ ಇಷ್ಟ

ತತಸ್ತೀರಂ ಸಮಾಗತ್ಯ ವಸ್ತ್ರಂ ಸಂಕ್ಷಾಲ್ಯ ಯತ್ನತಃ ।
ವಾಸಸೀಪರಿಧಾಯಾಥ ಕುರ್ಯಾತ್ಸಂಧ್ಯಾದಿಕಂ ಸುಧೀಃ ॥ ೪೨ ॥

ರೋಗಾದ್ಯಶಕ್ತೋ ಮನುಜಃ ಕುರ್ಯಾತ್ತತ್ರಾಘಮರ್ಷಣಂ ।
ಅಥವಾ ಭಸ್ಮನಾ ಸ್ನಾತೋ ರಜೋಭಿಶ್ಚೈವ ವಾ ಕ್ಷಮಃ ॥ ೪೩ ॥

ಅಥ ಸಂಧ್ಯಾದಿಕಂ ಕುರ್ಯಾತ್ ಸ್ಥಿತ್ವಾ ಚೈವಾಸನೇ ಶುಭೇ ।
ಕೇಶವೇನ ತಥಾ ನಾರಾಯಣೇನ ಮಾಧವೇನ ಚ ॥ ೪೪ ॥

ಸಂಪ್ರಾಶ್ಯ ತೋಯಂ ಗೋವಿಂದ ವಿಷ್ಣುಭ್ಯಾಂ ಕ್ಷಾಲಯೇತ್ಕರೌ ।
ಮಧುಸೂದನತ್ರಿವಿಕ್ರಮಾಭ್ಯಾಮೋಷ್ಠೌ ಚ ಮಾರ್ಜಯೇತ್ ॥ ೪೫ ॥

ವಾಮನಶ್ರೀಧರಾಭ್ಯಾಂ ಚ ಮುಖಂ ಹಸ್ತೌ ಸ್ಪೃಶೇತ್ತತಃ ।
ಹೃಷೀಕೇಶಪದ್ಮನಾಭಾಭ್ಯಾಂ ಸ್ಪೃಶೇಚ್ಚರಣೌ ತತಃ ॥ ೪೬ ॥

---

ದೇವತೆಯನ್ನು ಸೂರ್ಯ ಮಂಡಲದಲ್ಲಿ ಸ್ಥಾಪಿಸಿ, ಅನತಂರ ತೀರಕ್ಕೆ (ದಡಕ್ಕೆ) ಬಂದು ಪ್ರಯತ್ನಪೂರ್ವಕವಾಗಿ ಬಟ್ಟೆಯನ್ನು ಪ್ರೋಕ್ಷಿಸಿ, ಒಂದು ವಸ್ತ್ರವನ್ನು ಉಟ್ಟು ಇನ್ನೊಂದನ್ನು ಹೊದೆದುಕೊಂಡು, ಸಂಧ್ಯಾದಿಗಳನ್ನು ಮಾಡಬೇಕು.

೪೩. ರೋಗಾದಿಗಳಿಂದ ಅಶಕ್ತನಾದ ಮನುಷ್ಯನು ಅಘಮರ್ಷಣವನ್ನು ಮಾಡಬೇಕು ಎಂದರೆ ಸ್ನಾನಕ್ಕೆ ಬದಲಾಗಿ ಮಂತ್ರದಿಂದ ನೀರನ್ನು ಪ್ರೋಕ್ಷಿಸಿ ಕೊಳ್ಳಬೇಕು, ಅದಕ್ಕೂ ಸಾಧ್ಯವಾಗದಿದ್ದರೆ ಭಸ್ಮ ಅಥವಾ ರಜಸ್ಸುಗಳಿಂದ ಲೇಪನೆ ಮಾಡಿಕೊಳ್ಳಬೇಕು.

೪೪-೪೫. ಅನಂತರ ಶುಭಾಸನದಲ್ಲಿ ಕುಳಿತು ಸಂಧ್ಯಾವಂದನೆ ಮುಂತಾದುವನ್ನು ಮಾಡಬೇಕು. ಕೇಶವ, ನಾರಾಯಣ ಮತ್ತು ಮಾಧವ ನಾಮುಗಳನ್ನು ಉಚ್ಚರಿಸುತ್ತಾ ನೀರನ್ನು ಕುಡಿದು (ಅಚಮನವನ್ನು ಮಾಡಿ) ಆಮೇಲೆ ಗೋವಿಂದ, ವಿಷ್ಣು, ನಾಮುಗಳಿಂದ ಕೈಯ್ಯನ್ನು ತೊಳೆಯಬೇಕು. ಮಧುಸೂದನ ತ್ರಿವಿಕ್ರಮನಾಮುಗಳಿಂದ ತುಟಿಗಳನ್ನು ನೀರಿನಿಂದ ಒರಸಿಕೊಳ್ಳಬೇಕು.

೪೬. ತರುವಾಯ ವಾಮನ, ಶ್ರೀಧರ ನಾಮುಗಳಿಂದ ಮುಖ, ಹಸ್ತ ಇವುಗಳನ್ನು ಮುಟ್ಟಬೇಕು. ಆಮೇಲೆ ಹೃಷೀಕೇಶ ಪದ್ಮನಾಭ ನಾಮುಗಳಿಂದ ಕಾಲುಗಳನ್ನು ಮುಟ್ಟಬೇಕು.

ದಾಮೋದರೇಣ ಮೂರ್ಧಾನಂ ಮುಖಂ ಸಂಕರ್ಷಣೇನ ಚ ।
ವಾಸುದೇವೇನ ಪ್ರದ್ಯುಮ್ನೇನ ಸ್ಪೃಶೇನ್ನಾಸಿಕೇ ತತಃ ॥ ೪೭ ॥

ಅನಿರುದ್ಧ ಪುರುಷೋತ್ತಮಾಭ್ಯಾಂ ನೇತ್ರೇ ಸ್ಪೃಶೇತ್ತತಃ ।
ಅಧೋಕ್ಷಜ ನೃಸಿಂಹಾಭ್ಯಾಂ ಶ್ರವಣೇ ಸಂಸ್ಪೃಶೇತ್ತಥಾ ॥ ೪೮ ॥

ನಾಭಿಂ ಸ್ಪೃಶೇದಚ್ಯುತೇನ ಜನಾರ್ದನೇನ ವಕ್ಷಸಿ ।
ಹರಿಣಾ ವಿಷ್ಣುನಾಂಸೌ ಚ ವೈಷ್ಣವಾಚಮನಂ ತ್ವಿದಂ ॥ ೪೯ ॥

ಪ್ರಣವಾದ್ಯೈ ಚತುರ್ಥ್ಯಂತೈರ್ನಮೋಂತೈಃ ಕೇಶವಾದಿಕನಾಮಭಿಃ ।
ಮುಖೇ ನಸೋಃ ಪ್ರದೇಶಿನ್ಯಾSನಾಮಯಾ ನೇತ್ರಕರ್ಣಯೋಃ ॥ ೫೦ ॥

---

೪೭. ದಾಮೋದರ ನಾಮವನ್ನು ಹೇಳಿ ಶಿರಸ್ಸನ್ನೂ, ಸಂಕರ್ಷಣನಾಮದಿಂದ ಮುಖವನ್ನೂ, ವಾಸುದೇವಪ್ರದ್ಯುಮ್ನನಾಮಗಳಿಂದ ಮೂಗಿನ ಎರಡು ಭಾಗಗಳನ್ನೂ ಸ್ಪರ್ಶಮಾಡಬೇಕು.

೪೮. ಅನಿರುದ್ಧ, ಪುರುಷೋತ್ತಮ ನಾಮಗಳಿಂದ ಎರಡು ಕಣ್ಣುಗಳನ್ನು ಮುಟ್ಟಬೇಕು. ಹಾಗೆಯೇ ಅಧೋಕ್ಷಜ, ನೃಸಿಂಹ ನಾಮಗಳಿಂದ ಕಿವಿಗಳನ್ನು ಮುಟ್ಟಬೇಕು.

೪೯. ಅಚ್ಯುತನಾಮದಿಂದ ಹೊಕ್ಕಳನ್ನೂ, ಜನಾರ್ದನ ನಾಮದಿಂದ ವಕ್ಷಃಸ್ಥಲವನ್ನೂ, ಹರಿ, ವಿಷ್ಣುನಾಮಗಳಿಂದ ಭುಜಗಳನ್ನೂ ಸ್ಪರ್ಶಮಾಡಬೇಕು. ಈ ರೀತಿಯಾಗಿಮಾಡುವುದು ವೈಷ್ಣವಾಚಮನ ವಿಧಾನವು.

೫೦-೫೧. ಆಚಮನ ಮತ್ತು ನ್ಯಾಸ ಮಾಡುವಾಗ ಆದಿಯಲ್ಲಿ "ಓಂ" ಎಂದು ಹೇಳಿ ಬಳಿಕ ಹಿಂದೆ ಹೇಳಿದ ಕೇಶವಾದಿನಾಮಗಳನ್ನು ಚತುರ್ಥೀವಿಭಕ್ತ್ಯಂತವಾಗಿ ಸಂಯೋಜನೆಮಾಡಿ 'ನಮಃ' ಎಂಬ ಪದವನ್ನು ಕೊನೆಯಲ್ಲಿ ಸೇರಿಸಿ "ಓಂ ಕೇಶವಾಯ ನಮಃ 'ಓಂ ನಾರಾಯಣಾಯ ನಮಃ ಇತ್ಯಾದಿ ರೀತಿಯಾಗಿ ಉಚ್ಚರಿಸಬೇಕು. ನ್ಯಾಸಮಾಡುವಾಗ ಮುಖ (ಬಾಯಿ) ನಾಸಿಕಗಳಲ್ಲಿ ತರ್ಜನೀ

**ಕನಿಷ್ಠಯಾ ನಾಭಿದೇಶಂ ಸರ್ವತ್ರಾಂಗುಷ್ಠಯೋಜನಂ |**
**ಆತ್ಮವಿದ್ಯಾ ಶಿವೈಸ್ತತ್ತ್ವೈಃ ಸ್ವಾಹಾಂತೈಃ ಶೈವಮೀರಿತಂ || ೫೧ ||**

**ದೀರ್ಘತ್ರಯೇಂದುಯುಗ್ವ್ಯೋಮಪೂರ್ವಕೈಶ್ಚ ಪಿಬೇಜ್ಜಲಂ |**
**ಆತ್ಮವಿದ್ಯಾ ಶಿವೈರೇವ ಶೈವಂ ಸ್ವಾಹಾವಸಾನಕೈಃ || ೫೨ ||**
**ವಾಗ್ಲಜ್ಜಾ ಶ್ರೀಮುಖೈಃ ಪ್ರೋಕ್ತಂ ಶಾಕ್ತಂ ಸ್ವಾಹಾವಸಾನಕೈಃ || ೫೩ ||**

**ತಿಲಕಂ ಚ ತತಃ ಕುರ್ಯಾದ್ಭಾಲೇ ಸುಷ್ಠು ಗದಾಕೃತಿ |**
**ನಂದಕಂ ಹೃದಯೇ ಶಂಖಚಕ್ರೇ ಚೈವ ಭುಜದ್ವಯೇ || ೫೪ ||**

(ಹೆಬ್ಬೆರಳಿನಮುಗ್ಗುಲ) ಬೆರಳಿನಿಂದಲೂ, ಕಣ್ಣುಕಿವಿಗಳಲ್ಲಿ ಅನಾಮಿಕಾ (ಕಿರುಬೆರಳಿನಮುಗ್ಗುಲ)ಬೆರಳಿನಿಂದಲೂ, ಕಿರುಬೆರಳಿನಿಂದ ನಾಭಿಯಲ್ಲಿಯೂ ಹೆಬ್ಬೆರಳಿನ ಸಹಿತವಾಗಿ ಸ್ಪರ್ಶಮಾಡಬೇಕು.

೫೧-೫೨. (ದೀರ್ಘತ್ರಯ= ಆ, ಈ, ಊ, ಇಂದು= ಂ. ವ್ಯೋಮ = ಹ.) 'ಹಾಂ ಆತ್ಮತತ್ತ್ವಾಯ ಸ್ವಾಹಾ' ಹೀಂ ವಿದ್ಯಾತತ್ತ್ವಾಯ ಸ್ವಾಹಾ, ಹೂಂ ಶಿವತತ್ತ್ವಾಯ ಸ್ವಾಹಾ' ಎಂಬುದಾಗಿ ಹೇಳುತ್ತಾ ಮೂರುಬಾರಿ ಆಚಮನಮಾಡಬೇಕು. ಇದೇ ಶೈವಾಚಮನವಿಧಾನವು.

೫೩. (ವಾಕ್= ಐಂ. ಲಜ್ಜಾ= ಹ್ರೀಂ.) 'ಐಂ ಆತ್ಮತತ್ತ್ವಾಯಸ್ವಾಹಾ ಹ್ರೀಂ ವಿದ್ಯಾತತ್ತ್ವಾಯ ಸ್ವಾಹಾ, ಶ್ರೀಂ ಶಿವತತ್ತ್ವಾಯ ಸ್ವಾಹಾ' ಎಂಬುದಾಗಿ ಹೇಳುತ್ತಾ ಮೂರು ಬಾರಿ ಆಚಮನಮಾಡಬೇಕು. ಇದು ಶಾಕ್ತಾಚಮನ ವಿಧಾನವು.

೫೪. ಬಳಿಕ ಹಣೆಯಮೇಲೆ ಗದಾಕಾರವಾಗಿ ತಿಲಕವನ್ನು ಚೆನ್ನಾಗಿ ಹಚ್ಚಬೇಕು. ಹೃದಯಪ್ರದೇಶದಲ್ಲಿ ನಂದಕ (ಖಡ್ಗ)ವನ್ನೂ, ಎರಡು ಭುಜಗಳಲ್ಲಿ ಶಂಖಚಕ್ರಗಳನ್ನೂ ಧರಿಸಬೇಕು. ಎಂದರೆ ಅವುಗಳ ಚಿಹ್ನೆಯಿಂದ ಅಂಕಿತನಾಗಬೇಕು.

ಶಾಂಙ್ರ್ಗಬಾಣಂ ಮಸ್ತಕೇ ಚ ವಿನ್ಯಸೇತ್ಕ್ರಮಶಃ ಸುಧೀಃ ।
ಕರ್ಣಮೂಲೇ ಪಾರ್ಶ್ವಯೋಶ್ಚ ಪೃಷ್ಠೇ ನಾಭೌ ಕಕುದ್ಯಪಿ ॥ ೫೫ ॥

ಏವಂತು ವೈಷ್ಣವಃ ಕುರ್ಯಾನ್ಮೃದ್ಭಿಸ್ತೀರ್ಥೋದ್ಭವಾದಿಭಿಃ ।
ಅಗ್ನಿಹೋತ್ರೋದ್ಭವಂ ಭಸ್ಮ ಗೃಹೀತ್ವಾ ತ್ರ್ಯಂಬಕೇಣ ತು ॥ ೫೬ ॥

ಕಿಂ ವಾಗ್ನಿರಿತಿ ಮಂತ್ರೇಣಾಭಿಮಂತ್ರ್ಯ ಪಂಚ ಮಂತ್ರಕೈಃ ।
ಕ್ರಮಾತ್ತತ್ಪುರುಷಾ ಘೋರ ಸದ್ಯೋಜಾತಾದಿ ನಾಮಭಿಃ ॥ ೫೭ ॥

ಪಂಚ ಕುರ್ಯಾತ್ತ್ರಿಪುಂಡ್ರಾಣಿ ಭಾಲಾಂಸೋದರಹೃತ್ಸು ಚ ।
ಶೈವಃ ಶಾಕ್ತಸ್ತ್ರಿಕೋಣಾಭಂ ನಾರೀವದ್ವಾ ಸಮಾಚರೇತ್ ॥ ೫೮ ॥

ಕೃತ್ವಾ ತು ವೈದಿಕೀಂ ಸಂಧ್ಯಾಂ ತಾಂತ್ರಿಕೀಂ ಚ ಸಮಾಚರೇತ್ ।
ಆಚಮ್ಯ ವಿಧಿವನ್ಮಂತ್ರೀ ತೀರ್ಥಾನ್ಯಾವಾಹ್ಯ ಪೂರ್ವವತ್ ॥ ೫೯ ॥

೫೫-೫೬. ಶಾಙ್ರ್ಗಬಾಣಗಳ ಚಿಹ್ನೆಯನ್ನು ತಲೆಯ ಮೇಲೆಯೂ ಕ್ರಮವಾಗಿ ಗುರ್ತಿಸಬೇಕು. ಕಿವಿಗಳ ಕೆಳಭಾಗದಲ್ಲಿ ಎರಡು ಪಾರ್ಶ್ವಗಳಲ್ಲಿಯೂ, ಬೆನ್ನಿನ ಕೆಳಗೆ ನಾಭಿಯ ಹಿಂಭಾಗದಲ್ಲಿಯೂ ಸಹ ತಿಲಕವನ್ನು ಧರಿಸಬೇಕು. ಈ ಪ್ರಕಾರ ವೈಷ್ಣವನು ತೀರ್ಥದಲ್ಲಿನ ಮೃತ್ತಿಕೆಯಿಂದ ನಾಮಧಾರಣೆಯನ್ನು ಮಾಡಬೇಕು.

೫೬-೫೮. ಶೈವನು 'ಅಗ್ನಿಃ, ತ್ರ್ಯಂಬಕ' ಎಂಬ ಈ ಮಂತ್ರಗಳಿಂದ ಅಗ್ನಿಹೋತ್ರದ ಭಸ್ಮವನ್ನು ತೆಗೆದುಕೊಂಡು ಅಭಿಮಂತ್ರಿಸಿ ಹಣೆ, ಭುಜದ್ವಯ ಉದರ ಮತ್ತು ಹೃದಯ ಎಂಬ ಐದುಸ್ಥಾನಗಳಲ್ಲಿ ಕ್ರಮವಾಗಿ ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ ಮತ್ತು ಈಶಾನ ಈ ನಾಮಗಳನ್ನುಚ್ಚರಿಸುತ್ತಾ ಐದು ತ್ರಿಪುಂಡ್ರಗಳನ್ನು ಧರಿಸಬೇಕು. ಶಾಕ್ತೇಯನು ಪುಂಡ್ರವನ್ನು ತ್ರಿಕೋಣಾಕಾರವಾಗಿ ಧರಿಸಬೇಕು.

೫೯-೬೦. ವೇದೋಕ್ತ ಸಂಧ್ಯೆಯನ್ನು ಮಾಡಿ, ತಾಂತ್ರಿಕ ಸಂಧ್ಯೆಯನ್ನೂ ಆಚರಿಸಬೇಕು. ಮಂತ್ರಜಪಕರ್ತನು ವಿಧ್ಯುಕ್ತಪ್ರಕಾರ ಆಚಮನವನ್ನು

ತತಸ್ತ್ರಿವಾರಂ ದರ್ಭೇಣ ಭೂಮೌ ತೋಯಂ ವಿನಿಕ್ಷಿಪೇತ್ ।
ಸಪ್ತಧಾ ತಜ್ಜಲೇನಾಥ ಮೂರ್ಧಾನಮಭಿಷೇಚಯೇತ್ ॥ ೬೦ ॥

ತತಶ್ಚ ಪ್ರಾಣಾನಾಯಮ್ಯ ಕೃತ್ವಾ ನ್ಯಾಸಂ ಷಡಂಗಕಂ ॥
ಆದಾಯ ವಾಮಹಸ್ತೇಽಂಬು ದಕ್ಷೇಣಾಚ್ಛಾದ್ಯ ಪಾಣಿನಾ ॥ ೬೧ ॥

ವಿಯದ್ವಾಯ್ವಗ್ನಿತೋಯಕ್ಷ್ಮಾಬೀಜೈಸ್ಸಂಮಂತ್ರ್ಯ ಮಂತ್ರವಿತ್ ।
ಮೂಲೇನ ತಸ್ಮಾತ್ಸ್ರವದ್ಭಿರ್ಬಿಂದುಭಿಸ್ತತ್ವಮುದ್ರಯಾ ॥ ೬೨ ॥

ಸ್ವಶಿರಸ್ಸಪ್ತಧಾ ಪ್ರೋಕ್ಷ್ಯಾವಶಿಷ್ಟಂ ತತ್ಪುನರ್ಜಲೇ ।
ಕೃತ್ವಾ ತದಕ್ಷರಂ ಮಂತ್ರೀ ನಾಸಿಕಾಂತಿಕಮಾನಯೇತ್ ॥ ೬೩ ॥

ಜಲಂ ತೇಜೋಮಯಂ ತಚ್ಚಾಕೃಷ್ಯಾಂತಶ್ಚೇಡಯಾ ಪುನಃ ।
ಪ್ರಕ್ಷಾಲ್ಯಾಂತರ್ಗತಂ ತೇನ ಕಲ್ಮಷಂ ತಜ್ಜಲಂ ಪುನಃ ॥ ೬೪ ॥

---

ಮಾಡಿ, ಹಿಂದೆ ಹೇಳಿದಂತೆ ತೀರ್ಥಗಳನ್ನು ಆವಾಹನೆಮಾಡಿ, ದರ್ಭೆಯಿಂದ ಮೂರಾವರ್ತಿ ನೀರನ್ನು ಭೂಮಿಯಲ್ಲಿ ಹಾಕಬೇಕು. ತರುವಾಯ ಆ ನೀರಿನಿಂದ ಏಳಾವರ್ತಿ ಶಿರಸ್ಸನ್ನು ಪ್ರೋಕ್ಷಿಸಿಕೊಳ್ಳಬೇಕು.

೬೧-೬೩. ಅನಂತರ ಪ್ರಾಣಾಯಾಮವನ್ನು ಮಾಡಿ ಷಡಂಗನ್ಯಾಸವನ್ನು ಆಚರಿಸಿ, ಎಡಗೈಯಲ್ಲಿ ನೀರನ್ನು ಹಾಕಿಕೊಂಡು, ಅದರಮೇಲೆ ಬಲಗೈಯಿಂದ ಮುಚ್ಚಿ, ಮಂತ್ರಜ್ಞನು ಅದನ್ನು ಆಕಾಶ, ವಾಯು, ಅಗ್ನಿ, ಜಲ, ಮತ್ತು ಪೃಥ್ವಿಗಳ ಬೀಜಾಕ್ಷರದಿಂದ ಅಭಿಮಂತ್ರಿಸಿ, ಮೂಲಮಂತ್ರವನ್ನು ಹೇಳಿ ತತ್ವಮುದ್ರಾಯುತನಾಗಿ ಅದರಿಂದ ಸುರಿಯುತ್ತಿರುವ ಬಿಂದುಗಳಿಂದ ತನ್ನ ತಲೆಯನ್ನು ಏಳಾವರ್ತಿ ಪ್ರೋಕ್ಷಿಸಿ ಪುನಃ ಉಳಿದ ನೀರಿನಲ್ಲಿ ಅಕ್ಷರವನ್ನು ಬರೆದು ಅದನ್ನು ಮೂಗಿನ ಸಮೀಪಕ್ಕೆ ತೆಗೆದುಕೊಂಡುಹೋಗಬೇಕು.

೬೪-೬೫. ತೇಜೋಮಯವಾದ ಆ ಜಲವನ್ನು 'ಇಡಾ, ಎಂಬ ನಾಡಿಯಿಂದ ದೇಹದ ಒಳಭಾಗಕ್ಕೆ ಸೆಳೆದುಕೊಂಡು ಒಳಗಿದ್ದ ಕಲ್ಮಷವನ್ನು ಅದರಿಂದ ತೊಳೆದು, ಪುನಃ ಕಪ್ಪಾಗಿದ್ದ ಆ ನೀರನ್ನು 'ಪಿಂಗಳಾ' ಎಂಬನಾಡಿಯಿಂದ ತನ್ನ

ಕೃಷ್ಣವರ್ಣಂ ಪಿಂಗಲಯಾ ರೇಚಯೇತ್ತಂ ಸ್ವಾಗ್ರತಸ್ತಥಾ ।
ಕ್ಷಿಪೇದಸ್ತ್ರೇಣ ತತ್ಪಶ್ಚಾತ್ಕಲ್ಪಿತೇ ಕುಲಿಶೋಪಮೇ ॥ ೬೫ ॥

ಏತದ್ಧಿ ಸರ್ವಪಾಪಘ್ನಂ ಪ್ರೋಕ್ತಂ ಚೈವಾಘಮರ್ಷಣಂ ।
ತತಶ್ಚ ಹಸ್ತೌ ಪ್ರಕ್ಷಾಲ್ಯ ಪ್ರಾಗ್ವದಾಚಮ್ಯ ಮಂತ್ರವಿತ್ ॥ ೬೬ ॥

ಸಮುತ್ಥಾಯ ಚ ಮಂತ್ರಜ್ಞಸ್ತಾಮ್ರಪಾತ್ರೇ ಸುಮಾದಿಕಂ ।
ಪ್ರಕ್ಷಿಪ್ಯಾರ್ಘ್ಯಂ ಪ್ರದದ್ಯಾದ್ವೈ ಮೂಲಾಂತೈರ್ಮಂತ್ರಮುಚ್ಚರನ್ ॥ ೬೭ ॥

ರವಿಮಂಡಲಸಂಸ್ಥಾಯ ದೇವಾಯಾರ್ಘ್ಯಂ ಪ್ರಕಲ್ಪಯೇತ್ ।
ದತ್ವಾऽರ್ಘ್ಯಂ ತ್ರಿರನೇನಾಥ ದೇವಂ ರವಿಗತಂ ಸ್ಮರೇತ್ ॥ ೬೮ ॥

ಸ್ವಕಲ್ಪೋಕ್ತಾಂ ಚ ಗಾಯತ್ರೀಂ ಜಪೇದಷ್ಟೋತ್ತರಂ ಶತಂ ।
ಅಷ್ಟಾವಿಂಶತಿವಾರಂ ವಾ ಗುಹ್ಯೇತಿ ಮನುನಾऽರ್ಪಯೇತ್ ॥ ೬೯ ॥

---

ಮುಂಭಾಗದಲ್ಲಿ ಹೊರಬೀಳುವಂತೆ ಮಾಡಬೇಕು. ತರುವಾಯ ಕಲ್ಪಿತವಾದ ವಜ್ರಾಯುಧಕ್ಕೆ ಸದೃಶವಾದ ಫಟ್‌ಕಾರಮಾಡಿ ಆ ಜಲವನ್ನು ಎಸಚಬೇಕು.

೬೬-೬೭. ಇದೇ ಸಮಸ್ತಪಾಪಪರಿಹಾರಕವಾದ 'ಅಘಮರ್ಷಣ' ಎಂದು ಉಕ್ತವಾಗಿದೆ. ಅನಂತರ ಮಂತ್ರಜ್ಞನು ಕೈಯನ್ನು ತೊಳೆದುಕೊಂಡು ಹಿಂದಿನಂತೆ ಆಚಮನಮಾಡಿ ಎದ್ದುನಿಂತು ತಾಮ್ರದ ಪಾತ್ರೆಯಲ್ಲಿ ಹೂವು ಮುಂತಾದುವನ್ನು ಹಾಕಿ ಮೊದಲಿನಿಂದ ಕೊನೆಯುವರೆಗೂ ಮಂತ್ರವನ್ನು ಹೇಳುತ್ತಾ ಅರ್ಘ್ಯವನ್ನು ಕೊಡಬೇಕು.

೬೮. ಸೂರ್ಯಮಂಡಲಮಧ್ಯವರ್ತಿಯಾದ ನಾರಾಯಣದೇವನಿಗೆ ಅರ್ಘ್ಯವನ್ನು ಸಮರ್ಪಿಸಬೇಕು. ಈ ಮಂತ್ರದಿಂದ ಮೂರಾವರ್ತಿ ಅರ್ಘ್ಯಯನ್ನು ಕೊಟ್ಟು ಸೂರ್ಯಾಂತರ್ಗತನಾದ ದೇವರನ್ನು ಧ್ಯಾನಿಸಬೇಕು.

೬೯. ತನಗೆ ವಿಹಿತಕಲ್ಪೋಕ್ತವಾದ ಗಾಯತ್ರೀಮಂತ್ರವನ್ನು ನೂರೆಂಟಾವರ್ತಿ ಅಥವಾ ಇಪ್ಪತ್ತೆಂಟಾವರ್ತಿ ಜಪಿಸಬೇಕು. ಆ ಜಪವನ್ನು 'ಗುಹ್ಯ' ಎಂಬ ಮಂತ್ರದಿಂದ ಸೂರ್ಯಾಂತರ್ಗತನಾದ ದೇವರಿಗೆ ಸಮರ್ಪಿಸಬೇಕು.

**ಉದ್ಯದಾದಿತ್ಯಸಂಕಾಶಾಂ ಪುಸ್ತಕಾಕ್ಷಕರಾಂಬುಜಾಂ ।**
**ಕೃಷ್ಣಾಜಿನಾಂಬರಾಂ ಬ್ರಾಹ್ಮೀಂ ಧ್ಯಾಯೇತ್ತಾರಾಂಕಿತೇಂಬರೇ ॥ ೭೦ ॥**

**ಮಧ್ಯಾಹ್ನೇ ವರದಾಂ ದೇವೀಂ ಪಾರ್ವತೀಂ ಸಂಸ್ಮರೇತ್ಪರಾಂ ।**
**ಶುಕ್ಲಾಂಬರಾಂ ವೃಷಾರೂಢಾಂ ತ್ರಿನೇತ್ರಾಂ ರವಿಬಿಂಬಗಾಂ ॥ ೭೧ ॥**

**ವರಂ ಪಾಶಂ ಚ ಶೂಲಂ ಚ ದಧಾನಾಂ ನೃಕರೋಟಿಕಾಂ ।**
**ಸಾಯಾಹ್ನೇ ರತ್ನಭೂಷಾಢ್ಯಾಂ ಪೀತಕೌಶೇಯವಾಸಸಾಂ ॥ ೭೨ ॥**

**ಶ್ಯಾಮಲಾಂಗಾಂ ಚತುರ್ಹಸ್ತಾಂ ಶಂಖಚಕ್ರಲಸತ್ಕರಾಂ ।**
**ಗದಾಪದ್ಮಧರಾಂ ದೇವೀಂ ಸೂರ್ಯಾಸನ ಕೃತಾಶ್ರಯಾಂ ॥ ೭೩ ॥**

೭೦. ಆಕಾಶವು ನಕ್ಷತ್ರಯುಕ್ತವಾಗಿರುವ ಕಾಲದಲ್ಲಿ ಉದಯಿಸುವ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ, ಹಸ್ತಕಮಲದಲ್ಲಿ ಪುಸ್ತಕ ಮತ್ತು ಅಕ್ಷ ಮಾಲೆಯನ್ನು ಧರಿಸಿರುವ ಕೃಷ್ಣಾಜಿನಧಾರಿಯಾದ ಬ್ರಹ್ಮಸಂಬಂಧಿ ಗಾಯತ್ರಿ ಯನ್ನು ಧ್ಯಾನಿಸಬೇಕು.

೭೧-೭೩. ಮಧ್ಯಾಹ್ನಕಾಲದಲ್ಲಿ ವರದಾತೃವು, ಉತ್ತಮಳೂ, ಶ್ವೇತ ವಸ್ತ್ರಧಾರಿಯೂ, ವೃಕ್ಷದ ಮೇಲೆ ಕುಳಿತಿರುವವಳೂ, ಮೂರು ಕಣ್ಣುಳ್ಳವಳೂ, ಸೂರ್ಯಮಂಡಲಸ್ಥಿತಳೂ, ವರ, ಪಾಶ, ಶೂಲ ಇವುಗಳನ್ನು ಧರಿಸಿರುವವಳೂ ಆದ ಮನುಷ್ಯರಂತೆ ತಲೆಯಲ್ಲಿ ಮೂಳೆಗಳುಳ್ಳ ಪಾರ್ವತೀದೇವಿಯನ್ನು ಧ್ಯಾನಿಸಬೇಕು. ಸಾಯಂಕಾಲದಲ್ಲಿ ರತ್ನಾಭರಣಗಳಿಂದ ಅಲಂಕೃತಳೂ, ಹಳದಿಯಬಣ್ಣದ ಪಟ್ಟೆ ವಸ್ತ್ರವನ್ನು ಧರಿಸಿರುವವಳೂ, ಶ್ಯಾಮವರ್ಣದ ಅವಯವಗಳುಳ್ಳವಳೂ, ನಾಲ್ಕು ಕೈಗಳುಳ್ಳವಳೂ, ಶಂಖ, ಚಕ್ರ, ಗದಾ, ಪದ್ಮ ಇವುಗಳಿಂದ ಶೋಭಿಸುತ್ತಿರುವ ಕೈಗಳುಳ್ಳವಳೂ, ಸೂರ್ಯಮಂಡಲಾವಾಸಳೂ ಆಗಿರುವ ದೇವಿಯನ್ನು ಧ್ಯಾನಿಸ ಬೇಕು.

ತತೋ ದೇವಾನೃಷೀಂಶ್ಚೈವ ಪಿತೄಂಶ್ಚಾಪಿ ವಿಧಾನವಿತ್ ।
ತರ್ಪಯಿತ್ವಾ ಸ್ವೇಷ್ಟದೇವಂ ತರ್ಪಯೇತ್ಕಲ್ಪಮಾರ್ಗತಃ ॥ ೭೪ ॥

ಗುರುಪಂಕ್ತಿಂ ಚ ಸಂತರ್ಪ್ಯ ಸಾಂಗಂ ಸಾವರಣಂ ತಥಾ ।
ಸಾಯುಧಂ ವೈನತೇಯಂ ಸಂತರ್ಪಯಾಮೀತಿ ತರ್ಪಯೇತ್ ॥ ೭೫ ॥

ನಾರದಂ ಪರ್ವತಂ ಜಿಷ್ಣುಂ ನಿಶಠೋದ್ಧವದಾರುಕಾನ್ ।
ವಿಷ್ವಕ್ಸೇನಂ ಚ ಶೈಲೇಯಂ ವೈಷ್ಣವಃ ಪರಿತರ್ಪಯೇತ್ ॥ ೭೬ ॥

ಏವಂ ಸಂತರ್ಪ್ಯ ವಿಪ್ರೇಂದ್ರ ದತ್ವಾಽರ್ಘ್ಯಂ ಚ ವಿವಸ್ವತೇ ।
ಪೂಜಾಗಾರಂ ಸಮಾಗತ್ಯ ಪ್ರಕ್ಷಾಲ್ಯಾಂಘ್ರೀ ಉಪಸ್ಪೃಶೇತ್ ॥ ೭೭ ॥

ಅಗ್ನಿಹೋತ್ರಸ್ಥಿತಾನಗ್ನೀನ್ಸ್ಥುತ್ವೋಪಸ್ಥಾಯ ಯತ್ನತಃ ।
ಪೂಜಾಸ್ಥಲಂ ಸಮಾಗತ್ಯ ದ್ವಾರಪೂಜಾಂ ಸಮಾಚರೇತ್ ॥ ೭೮ ॥

---

೭೪. ಅನಂತರ ವಿಧಾನಜ್ಞನು ಕಲ್ಪೋಕ್ತಪ್ರಕಾರವಾಗಿ ದೇವತೆಗಳು, ಋಷಿಗಳು, ಪಿತೃಗಳು, ಮತ್ತು ತನ್ನ ಇಷ್ಟದೇವತೆ ಇವರಿಗೆ ತರ್ಪಣಕೊಡಬೇಕು.

೭೫. ಗುರುಪರಂಪರೆಗೂ ಸಹ ತರ್ಪಣಕೊಟ್ಟು ಹಾಗೆಯೇ ಅಂಗ, ಆವರಣ, ಆಯುಧಗಳಿಂದ ಸಹಿತನಾದ, ವಿನತೆಯ ಪುತ್ರನಾದ ಗರುಡನನ್ನು ತರ್ಪಿಸುವೆನೆಂದು (ತರ್ಪಣ ಕೊಡುವೆನೆಂದು) ಹೇಳುತ್ತಾ ತರ್ಪಣಕೊಡಬೇಕು.

೭೬. ವೈಷ್ಣವನು ನಾರದ, ಪರ್ವತ, ಇಂದ್ರ, ನಿಶಠ, ಉದ್ಧವ, ದಾರುಕ ಶೈಲಪುತ್ರನಾದ ವಿಷ್ವಕ್ಸೇನ ಇವರಿಗೆ ತರ್ಪಣಕೊಡಬೇಕು.

೭೭. ಬ್ರಾಹ್ಮಣವರ್ಯಾ! ಈ ರೀತಿಯಾಗಿ ತರ್ಪಣಕೊಟ್ಟು, ಸೂರ್ಯನಿಗೆ ಅರ್ಘ್ಯಪ್ರದಾನಮಾಡಿ ಕಾಲುಗಳನ್ನು ತೊಳೆದುಕೊಂಡು ಪೂಜಾಗೃಹಕ್ಕೆ ಬಂದು ಆಚಮನಮಾಡಬೇಕು.

೭೮. ಅಗ್ನಿಹೋತ್ರಗತವಾದ ಅಗ್ನಿಯನ್ನು ಪ್ರಜ್ವಲಿಸಿ, ಎದ್ದು ಪ್ರಯತ್ನ ಪೂರ್ವಕವಾಗಿ ಪೂಜೆಯಸ್ಥಳಕ್ಕೆ ಬಂದು ದ್ವಾರಪೂಜೆಯನ್ನು ಮಾಡಬೇಕು.

ಗಣೇಶಂ ಚೋರ್ಧ್ವಶಾಖಾಯಾಂ ಮಹಾಲಕ್ಷ್ಮೀಂ ಚ ದಕ್ಷಿಣೇ ।
ಸರಸ್ವತೀಂ ವಾಮಭಾಗೇ ದಕ್ಷೇ ವಿಘ್ನೇಶ್ವರಂ ಪುನಃ ॥ ೭೯ ॥

ಕ್ಷೇತ್ರಪಾಲಂ ತಥಾ ವಾಮೇ ದಕ್ಷೇ ಗಂಗಾಂ ಪ್ರಪೂಜಯೇತ್ ।
ವಾಮೇ ಚ ಯಮುನಾಂ ದಕ್ಷೇ ಧಾತಾರಂ ವಾಮತಸ್ತಥಾ ॥ ೮೦ ॥

ವಿಧಾತಾರಂ ಶಂಖಪದ್ಮನಿಧೀಂಶ್ಚ ವಾಮದಕ್ಷಯೋಃ ।
ದ್ವಾರಪಾಲಾಂಸ್ತತೋಽಭ್ಯರ್ಚೇತ್ತತ್ತತ್ಕಲ್ಪೋದಿತಾನ್ಸುಧೀಃ ॥ ೮೧ ॥

ನಂದಸ್ಸುನಂದಶ್ಚಂಡಶ್ಚ ಪ್ರಚಂಡಃ ಪ್ರಬಲೋ ಬಲಃ ।
ಭದ್ರಸ್ಸುಭದ್ರಶ್ಚೇತ್ಯಾದ್ಯಾ ವೈಷ್ಣವಾ ದ್ವಾರಪಾಲಕಾಃ ॥ ೮೨ ॥

ನಂದೀ ಭೃಂಗೀ ರಟಿಃ ಸ್ಕಂಧೋ ಗಣೇಶೋಮಾಮಹೇಶ್ವರಾಃ ।
ವೃಷಭಶ್ಚ ಮಹಾಕಾಲಃ ಶೈವಾ ವೈ ದ್ವಾರಪಾಲಕಾಃ ॥ ೮೩ ॥

---

೭೯-೮೧. ಮೇಲಿನ ಶಾಖೆಯಲ್ಲಿ ಗಣೇಶನನ್ನು, ಬಲಗಡೆಯಲ್ಲಿ ಮಹಾಲಕ್ಷ್ಮಿಯನ್ನೂ, ಎಡಗಡೆಯಲ್ಲಿ ಸರಸ್ವತಿಯನ್ನೂ, ಪುನಃ ಬಲಭಾಗದಲ್ಲಿ ವಿಘ್ನೇಶ್ವರನನ್ನೂ, ಹಾಗೆಯೇ ಎಡಭಾಗದಲ್ಲಿ ಕ್ಷೇತ್ರಪಾಲನನ್ನೂ, ಬಲಪಾರ್ಶ್ವದಲ್ಲಿ ಗಂಗೆಯನ್ನೂ, ಎಡಪಾರ್ಶ್ವದಲ್ಲಿ ಯಮುನೆಯನ್ನೂ, ಬಲದಲ್ಲಿ ಧಾತೃವನ್ನೂ, ಎಡದಲ್ಲಿ ವಿಧಾತೃವನ್ನೂ, ಎಡಬಲಭಾಗಗಳಲ್ಲಿ ಶಂಖಪದ್ಮನಿಧಿಗಳನ್ನೂ ಪೂಜಿಸಬೇಕು. ತೆರುವಾಯ ಜ್ಞಾನಿಯು ಆಯಾಯಾ ಕಲ್ಪಗಳಲ್ಲಿ ಹೇಳಿರುವಂತೆ ದ್ವಾರಪಾಲಕರನ್ನು ಪೂಜಿಸಬೇಕು.

೮೨. ನಂದ, ಸುನಂದ, ಚಂಡ, ಪ್ರಚಂಡ, ಪ್ರಬಲ, ಬಲ, ಭದ್ರ, ಮತ್ತು ಸುಭದ್ರ, ಮುಂತಾದವರು ವಿಷ್ಣುದ್ವಾರಪಾಲಕರು.

೮೩. ನಂದೀ, ಭೃಂಗೀ, ರಟಿ, ಸ್ಕಂದ, ಗಣೇಶ, ಪಾರ್ವತೀ, ಮಹೇಶ್ವರ, ವೃಷಭ, ಮತ್ತು ಮಹಾಕಾಲ ಇವರು ಶಿವದ್ವಾರಪಾಲಕರು.

ಬ್ರಾಹ್ಮ್ಯಾದ್ಯಾ ಮಾತರೋಽಷ್ಟೌ ತು ಶಕ್ತಯೋ ದ್ವಾಃಸ್ಥಿತಾಸ್ಸ್ವಯಂ ।
ಸೇಂದುಸ್ಸ್ವನಾಮಾದ್ಯವರ್ಣಾದ್ಯಾ ಚತುರ್ಥ್ಯಂತನಮೋಂತಾ ಇಮೇ ಸ್ಮೃತಾಃ॥ ೮೪ ॥

ತತಃ ಸ್ಥಿತ್ವಾಽಽಸನೇ ಧೀಮಾನಾಚಮ್ಯ ಪ್ರಯತಃ ಶುಚಿಃ ।
ದಿವ್ಯಾಂತರಿಕ್ಷ ಭೌಮಾಂಶ್ಚ ವಿಘ್ನಾನುತ್ಸಾರ್ಯ ಯತ್ನತಃ ॥ ೮೫ ॥

ಕೇಶವಾದ್ಯಾಂ ಮಾತೃಕಾಂ ತು ನ್ಯಸೇದ್ವೈಷ್ಣವಸತ್ತಮಃ ।
ಕೇಶವಃ ಕೀರ್ತಿಸಂಯುಕ್ತಃ ಕಾಂತ್ಯಾ ನಾರಾಯಣಸ್ತಥಾ ॥ ೮೬ ॥

ಮಾಧವಸ್ತುಷ್ಟಿಸಹಿತೋ ಗೋವಿಂದಃ ಪುಷ್ಟಿಸಂಯುತಃ ।
ವಿಷ್ಣುಸ್ತು ಧೃತಿಸಂಯುಕ್ತಃ ಶಾಂತಿಯುಙ್ಮಧುಸೂದನಃ ॥ ೮೭ ॥

ತ್ರಿವಿಕ್ರಮಃ ಕ್ರಿಯಾಯುಕ್ತೋ ವಾಮನೋ ದಯಯಾಯುತಃ ।
ಶ್ರೀಧರೋ ಮೇಧಯಾ ಯುಕ್ತೋ ಹೃಷೀಕೇಶಶ್ಚ ಹರ್ಷಯಾ ॥ ೮೮ ॥

---

೮೪. ಬ್ರಾಹ್ಮೀ, ಮಾಹೇಶ್ವರಿ ಮುಂತಾದ ಮಾತೃಗಳು, ಅಷ್ಟಶಕ್ತಿಗಳೂ ಸಹ ಸ್ವತಃ ದ್ವಾರದಲ್ಲಿರುವರು. ಅನುಸ್ವಾರಸಹಿತವಾದ ನಾಮದ ಪ್ರಥಮವರ್ಣವನ್ನು ಮಂತ್ರದ ಆದಿಯಲ್ಲಿಯೂ, ನಾಮಪದವನ್ನು ಚತುರ್ಥೀ ವಿಭಕ್ತ್ಯಂತವಾಗಿ ಹೇಳಿ ಅದರ ಮುಂದೆ ನಮಃ ಎಂಬುದನ್ನು ಸೇರಿಸಿ ಎಂದರೆ ನಂ ನಂದಾಯನಮಃ ಇತ್ಯಾದಿಗಳಾಗಿ ಪರಿಣಮಿಸಿ ಇವುಗಳೇ ಮಂತ್ರಗಳೆಂದು ಸ್ಮೃತವಾಗಿವೆ

೮೫-೮೬. ಅನಂತರ ಬುದ್ಧಿವಂತನು ಆಸನದಲ್ಲಿ ಕುಳಿತು ನಿಯಮದಿಂದ ಆಚಮನ ಮಾಡಿ ಪರಿಶುದ್ಧನಾಗಿ ದೇವಲೋಕ, ಅಂತರಿಕ್ಷ ಮತ್ತು ಭೂಮಿ ಸಂಬಂಧಿಗಳಾದ ವಿಘ್ನಗಳ ್ನ ಪ್ರಯತ್ನಪೂರ್ವಕವಾಗಿ ಓಡಿಸಿ ವೈಷ್ಣವೋತ್ತಮನು ಕೇಶವಾದಿ ಮಾತೃಕೆಗಳನ್ನು ನ್ಯಾಸಮಾಡಬೇಕು.

೮೬-೯೮. ಕೀರ್ತಿಯೆಂಬ ಮಾತೃಕಾಸಹಿತನಾದ ಕೇಶವ, ಕಾಂತಿಯುಕ್ತನಾದ ನಾರಾಯಣ, ತುಷ್ಟಿಸಹಿತನಾದ ಮಾಧವ, ಪುಷ್ಟಿಯುಕ್ತನಾದ ಗೋವಿಂದ, ಧೃತಿಯುಕ್ತನಾದ ವಿಷ್ಣು, ಶಾಂತಿಯುಕ್ತನಾದ ಮಧುಸೂದನ, ಕ್ರಿಯಾ ಸಹಿತನಾದ ತ್ರಿವಿಕ್ರಮ, ದಯೆಯುಕ್ತನಾದ ವಾಮನ, ಮೇಧೆಯಿಂದ ಸಹಿತ

ಪದ್ಮನಾಭಯುತಾ ಶ್ರದ್ಧಾ ಲಜ್ಜಾ ದಾಮೋದರಾನ್ವಿತಾ ।
ವಾಸುದೇವಶ್ಚ ಲಕ್ಷ್ಮೀಯುಕ್ ಸಂಕರ್ಷಣ ಸರಸ್ವತೀ ॥ ೮೯ ॥

ಪ್ರದ್ಯುಮ್ನಃ ಪ್ರೀತಿಸಂಯುಕ್ತೋಽನಿರುದ್ಧೋ ರತಿಸಂಯುತಃ ।
ಚಕ್ರೀ ಜಯಾಯುತಃ ಪಶ್ಚಾದ್ಗದೀ ದುರ್ಗಾಸಮನ್ವಿತಃ ॥ ೯೦ ॥

ಶಾರ್ಙ್ಗೀ ತು ಪ್ರಭಯಾ ಯುಕ್ತಃ ಖಡ್ಗೀ ಯುಕ್ತಸ್ತು ಸತ್ಯಯಾ ।
ಶಂಖೀ ಚಂಡಾಸಮಾಯುಕ್ತೋ ಹಲೀ ವಾಣೀಸಮಾಯುತಃ ॥ ೯೧ ॥

ಮುಸಲೀ ಚ ವಿಲಾಸಿನ್ಯಾ ಶೂಲೀ ವಿಜಯಯಾಽನ್ವಿತಃ ।
ಪಾಶೀ ವಿರಜಯಾ ಯುಕ್ತೋಽಂಕುಶೀ ವಿಶ್ವಾಸಮನ್ವಿತಃ ॥ ೯೨

ಮುಕುಂದೋ ವಿನತಾಯುಕ್ತೋ ನಂದಜಶ್ಚ ಸುನಂದಯಾ ।
ನಂದೀ ಸತ್ಯಾ ಸಮಾಯುಕ್ತೋ ನರೋ ಋದ್ಧ್ಯಾ ಸಮನ್ವಿತಃ ॥ ೯೩ ॥

---

ನಾದ ಶ್ರೀಧರ, ಹರ್ಷಾದೇವಿಯಿಂದ ಯುಕ್ತನಾದ ಹೃಷಿಕೇಶ, ಪದ್ಮನಾಭಸಹಿತ ಶ್ರದ್ಧಾದೇವಿ, ದಾಮೋದರಯುಕ್ತ ಲಜ್ಜೆ, ಲಕ್ಷ್ಮೀಸಹಿತನಾದ ವಾಸುದೇವ, ಸರಸ್ವತಿಯಿಂದ ಕೂಡಿದ ಸಂಕರ್ಷಣ, ಪ್ರೀತಿಯಿಂದ ಒಡಗೂಡಿದ ಪ್ರದ್ಯುಮ್ನ, ರತಿಯುತನಾದ ಅನಿರುದ್ಧ, ಚಕ್ರಿಯುಕ್ತಳಾದ ಜಯಾದೇವಿ ಆಮೇಲೆ ಗದೀಸಹಿತಳಾದ ದುರ್ಗೆ, ಶಾರ್ಙ್ಗಪಾಣಿಯುಕ್ತ ಪ್ರಭೆ, ಸತ್ಯಾದೇವಿಯಿಂದ ಕೂಡಿದ ಖಡ್ಗಿ, ಶಂಖೀಯುಕ್ತ ಚಂಡಿಯು, ಹಲಧರಯುಕ್ತವಾಣಿ, ಮುಸಲಧಾರೀಯುಕ್ತ ವಿಲಾಸಿನಿ, ಶೂಲೀಯುಕ್ತ ವಿಜಯೆ, ಪಾಶಧಾರೀಯುಕ್ತ ವಿರಜಾದೇವಿ, ಅಂಕುಶೀಯುಕ್ತ ವಿಶ್ವೆಯು, ವಿನತಾದೇವಿಯುಕ್ತನಾದ ಮುಕುಂದ, ಸುನಂದೆಯಿಂದ ಸಹಿತನಾದ ನಂದ, ಸ್ಮೃತಿಯಿಂದ ಕೂಡಿದ ನಂದೀ, ಋದ್ಧಿಯಿಂದ ಯುಕ್ತನಾದ ನರ, ಸಮೃದ್ಧಿಯುಕ್ತನಾದ ನರಕಜಿತ್ತು, ಶುದ್ಧಿಯುಕ್ತನಾದ ಹರಿ, ಬುದ್ಧಿಯುಕ್ತನಾದ ಕೃಷ್ಣ, ಭುಕ್ತಿಯುಕ್ತನಾದ ಸತ್ಯ, ಮತಿಯುಕ್ತನಾದ ಸಾತ್ವದ, ಸೌರಿಕ್ಷಮೆಗಳು, ಸೂರರಮೆಗಳು, ಉಮಾಸಹಿತನಾದ ಜನಾರ್ದನ

ಸಮೃದ್ಧಿಯುಙ್ನರಕಜಿಚ್ಛುದ್ಧಿಯುಕ್ ಹರಿಃ ಸ್ಮೃತಃ ।
ಕೃಷ್ಣೋ ಬುದ್ಧ್ಯಾಯುತಃ ಸತ್ಯೋ ಭುಕ್ತ್ಯಾ ಮತ್ಯಾ ಚ ಸಾತ್ವತಃ ॥ ೯೪ ॥

ಸೌರಿಕ್ಷಮೋ ಸೂರರಮೋ ಉಮಾಯುಕ್ತೋ ಜನಾರ್ದನಃ ।
ಭೂಧರಃ ಕ್ಲೇದಿನೀ ಯುಕ್ತೋ ವಿಶ್ವಮೂರ್ತಿಶ್ಚ ಕ್ಲಿನ್ನಯಾ ॥ ೯೫ ॥

ವೈಕುಠೋ ವಸುಧಾಯುಕ್ತೋ ವಸುಧಾಪುರುಷೋತ್ತಮಾ ।
ಬಲೀ ತು ಪರಯಾ ಯುಕ್ತೋ ಬಲಾನುಜ ಪರಾಯಣೋ ॥ ೯೬ ॥

ಬಲಸೂಕ್ಷ್ಮೇ ವೃಷಘ್ನಸ್ತು ಸಂಧ್ಯಾಯುಕ್ತ್ಪಜ್ಞಯಾ ವೃಷಃ ।
ಹಂಸಃ ಪ್ರಭಾಸಮಾಯುಕ್ತೋ ವರಾಹೋ ನಿಶಯಾಯುತಃ ॥ ೯೭ ॥

ವಿಮಲೋ ಮೋಘಾಯಾ ಯುಕ್ತೋ ನೃಸಿಂಹೋ ವಿದ್ಯುತಾ ಯುತಃ ।
ಕೇಶವಾದಿಮಾತೃಕಾಯಾ ಮುನಿರ್ನಾರಾಯಣೋ ಮತಃ ॥ ೯೮ ॥

ಅಮೃತಾದ್ಯಾ ಚ ಗಾಯತ್ರೀ ಛಂದೋ ವಿಷ್ಣುಶ್ಚ ದೇವತಾ ।
ಚಕ್ರಾದ್ಯಾಯುಧಸಂಯುಕ್ತಂ ಕುಂಭಾದರ್ಶಧರಂ ಹರಿಂ ॥ ೯೯ ॥

---

ಕ್ಲೇದಿನೀ ಯುಕ್ತನಾದ ಭೂಧರ, ಕ್ಲಿನ್ನಾಸಹಿತನಾದ ವಿಶ್ವಮೂರ್ತಿ, ವಸುಧೆಯಿಂದ ಸಹಿತನಾದ ವೈಕುಂಠ. ವಸುಧೆ ಪುರುಷೋತ್ತಮರು, ಪರಾದೇವಿಯಿಂದ ಕೂಡಿದಬಲಿ, ಪರಾಯಣೆಯುಕ್ತನಾದ ಬಲಾನುಜನು. ಬಲಯುಕ್ತ ಸೂಕ್ಷ್ಮೆಯು, ಸಂಧ್ಯೆಯಿಂದ ಕೂಡಿದ ವೃಷಘ್ನನು, ಪ್ರಜ್ಞೆಯಿಂದ ಕೂಡಿದ ವೃಷನು, ಪ್ರಭೆಯಿಂದ ಸಹಿತನಾದ ಹಂಸ, ನಿಶೆಯಿಂದ ಸಹಿತನಾದ ವರಾಹ, ಮೋಘೆಯಿಂದ ಕೂಡಿದ ವಿಮಲ, ವಿದ್ಯುತ್ತಿನಿಂದ ಕೂಡಿದ ನೃಸಿಂಹ ಎಂಬೀ ಕೇಶವಾದಿ ಮಾತೃಕಾದೇವತೆಗಳನ್ನು ನ್ಯಾಸಮಾಡಬೇಕು. ಕೇಶವಾದಿ ಮಾತೃಕಾ ಮಂತ್ರಕ್ಕೆ ನಾರಾಯಣನು ಋಷಿಯು.

೯೯-೧೦೦. ಅಮೃತಾದಿ ಗಾಯತ್ರಿಯೇ ಛಂದಸ್ಸು, ವಿಷ್ಣುವೇ ದೇವತೆಯು. ಚಕ್ರ ಮುಂತಾದ ಆಯುಧಗಳಿಂದ ಕೂಡಿದ ಕುಂಭ, ಆದರ್ಶಗಳನ್ನು ಧರಿಸಿ

ಲಕ್ಷ್ಮೀಯುತಂ ವಿದ್ಯುದಾಭಂ ಬಹುಭೂಷಾಯುತಂ ಭಜೇತ್ ।
ಏವಂ ಧ್ಯಾತ್ವಾ ಜಪೇಚ್ಛಕ್ತಿಂ ಶ್ರೀಕಾಮಪುಟಿತಾಕ್ಷರಂ ॥ ೧೦೦ ॥

ವದೇತ್ತದ್ವಿಷ್ಣುಶಕ್ತಿಭ್ಯಾಂ ಹೃದಯಂ ಪ್ರಣವಾದಿಕಂ ।
ತ್ವಗಸೃಙ್ಮಾಂಸಮೇದೋಸ್ಥಿಮಜ್ಜಾಶುಕ್ರಾಣ್ಯಸೂನ್ವದೇತ್ ॥ ೧೦೧ ॥

ಶಕ್ತಿಂ ಕ್ರೋಧಂ ತಥಾತ್ಮಭ್ಯಾಮಂತಾನ್ಯಾದಿದಶಸ್ವಪಿ ।
ಏಕಂ ಮೂಲೇ ಮುಖೇ ಚೈಕಂ ದ್ವಿಕಂ ನೇತ್ರೇ ದ್ವಿಕಂ ಶ್ರುತೌ ॥ ೧೦೨ ॥

---

ರುವ ಲಕ್ಷ್ಮೀಯುಕ್ತನು, ಮಿಂಚಿನಂತೆ ಹೊಳೆಯುತ್ತಿರುವವನು, ಬಹು ಆಭರಣಗಳನ್ನು ಧರಿಸಿರುವವನೂ ಆಗಿರುವ ಹರಿಯನ್ನು ಧ್ಯಾನಿಸಬೇಕು.

೧೦೦-೧೦೧.( ಶಕ್ತಿ= ಹ್ರೀಂ. ಶ್ರೀ= ಶ್ರೀಂ. ಕಾಮ= ಕ್ಲೀಂ. ಅಕ್ಷರ= ಅಂ, ಆಂ ಇತ್ಯಾದಿ, ಹೃದಯ= ನಮಃ.) ಈರೀತಿ ಧ್ಯಾನಮಾಡಿ ಬಳಿಕ ಆದ್ಯಂತಗಳಲ್ಲಿಶಕ್ತಿ ಶ್ರೀ ಕಾಮಗಳಬೀಜಾಕ್ಷರಗಳೂ, ಮಧ್ಯದಲ್ಲಿ ಅಂ ಆಂ ಇಂ ಈಂ ಇತ್ಯಾದಿಗಳೂ, ನಂತರ ಕೇಶವಾದಿನಾಮಗಳನ್ನು ಅವರವರ ಮಾತೃಕಾನಾಮ ಸಹಿತವಾಗಿ ಚತುರ್ಥೀವಿಭಕ್ತಿಯ ದ್ವಿವಚನಾಂತವಾಗಿ ಸೇರಿಸಿ, ಎಲ್ಲಕ್ಕೂ ಮೊದಲು ಓಂ, ಕೊನೆಯಲ್ಲಿ ನಮಃ ಎಂಬ ಶಬ್ದಗಳನ್ನಿಟ್ಟು ನಿಷ್ಪನ್ನವಾದ ಮಂತ್ರವನ್ನು ಹೇಳಿ ಜಪಿಸಬೇಕು. ಹೇಗೆಂದರೆ:—' ಓಂ ಹ್ರೀಂ ಶ್ರೀಂ ಕ್ಲೀಂ ಅಂ ಕ್ಲೀಂ ಶ್ರೀಂ ಹ್ರೀಂ ಕೇಶವ ಕೀರ್ತಿಭ್ಯಾಂ ನಮಃ' ಇತ್ಯಾದಿ.

೧೦೧-೧೦೨. ತ್ವಕ್, ಅಸೃಕ್, ಮಾಂಸ, ಮೇದಃ, ಅಸ್ಥಿ, ಮಜ್ಜ, ಶುಕ್ರ, ಅಸು, ಶಕ್ತಿ ಮತ್ತು ಕ್ರೋಧ ಎಂಬ ಹತ್ತುಶಬ್ದಗಳಲ್ಲಿ ಒಂದೊಂದು ಶಬ್ದಕ್ಕೂ 'ಆತ್ಮಭ್ಯಾಂ' ಎಂಬುದನ್ನು ಸೇರಿಸಿ ಬಳಿಕ ಕೇಶವಾದಿಮಾತೃಕೆಗಳಲ್ಲಿ ನಲವತ್ತೊಂದನೆಯ ಮಾತೃಕಾನಾಮದಿಂದ ಒಂದೊಂದು ನಾಮವನ್ನು, ಕೊನೆಯಲ್ಲಿ 'ನಮಃ' ಎಂಬುದನ್ನುಸೇರಿಸಿ, ಆದಿಯಲ್ಲಿ ಮೇಲ್ಕಂಡ ರೀತಿಯಾಗಿ ಪ್ರಣವಾದಿ ಸಂಪುಟಿತವಾಗಿ ಯಕಾರಾದಿ ಹತ್ತು ವರ್ಣಗಳನ್ನೂ ಸೇರಿಸಿ ನಿಷ್ಪನ್ನವಾದ ಮಂತ್ರವನ್ನು ಹೇಳಿ ಕ್ರಮವಾಗಿ ಹೃದಯ, ಮುಖ, ನೇತ್ರಗಳು, ಕಿವಿಗಳು, ಮೂಗು, ಕಪೋಲಗಳು, ಹಲ್ಲು, ತುಟಿಗಳು, ನಾಲಗೆಯ ಮೂಲಭಾಗ ಮತ್ತು

ನಸೋರ್ದ್ವಯಂ ಕಪೋಲೇ ಚ ದ್ವಯಂ ದ್ವೇ ದ್ವಿರದಚ್ಛದೇ ।
ಏಕಂ ತು ರಸನಾಮೂಲೇ ಗ್ರಿವಾಯಾಮೇಕಮೇವ ಚ　　॥ ೧೦೩ ॥

ಕವರ್ಗಂ ದಕ್ಷಿಣೇ ಬಾಹೌ ಚವರ್ಗಂ ವಾಮಬಾಹುಕೇ ।
ಟತವರ್ಗೌ ಪಾದಯೋಸ್ತು ಪಫೌ ಕುಕ್ಷಿದ್ವಯೋ ನ್ಯಸೇತ್　　॥ ೧೦೪ ॥

ಪೃಷ್ಠಪಾರ್ಶ್ವೇ ವಮಿತ್ಯುಕ್ತಂ ನಾಭೌ ಭಂ ಹೃದಯೇ ತು ಮಂ ।
ಯಾದಿಸಪ್ತಾಪಿ ಧಾತುಸ್ಥಾ ಹಂ ಪ್ರಾಣೇ ಲಂ ತಥಾತ್ಮನಿ　　॥ ೧೦೫ ॥

ಕ್ಷಂ ಕ್ರೋಧೇ ಕ್ರಮತೋ ನ್ಯಸ್ಯ ವಿಷ್ಣುಪೂಜಾಕ್ಷಮೋ ಭವೇತ್ ।
ಪುರ್ಣೋದರ್ಯಾ ತು ಶ್ರೀಕಂಠೋ ಹ್ಯನಂತೋ ವಿರಜಾನ್ವಿತಃ　　॥ ೧೦೬ ॥

---

ಕಂಠ ಎಂಬ ಹತ್ತು ಸ್ಥಾನಗಳಲ್ಲಿ ನ್ಯಾಸಮಾಡಬೇಕು. ಹೇಗೆಂದರೆ:—'ಓಂ ಹ್ರೀಂ ಶ್ರೀಂ ಕ್ಲೀಂ ಯಂ ಕ್ಲೀಂ ಶ್ರೀಂ ಹ್ರೀಂ ತ್ವಗಾತ್ಮಭ್ಯಾಂ ಪುರುಷೋತ್ತಮ ವಸುಧಾಭ್ಯಾಂ ನಮಃ' ಎಂದುಹೇಳಿ ಹೃದಯದಲ್ಲಿ ನ್ಯಾಸಮಾಡಬೇಕು. ಹೀಗೆಯೇ ಉಳಿದ ಒಂಭತ್ತು ವರ್ಣಗಳನ್ನೂ ಸೇರಿಸಿ ಉಕ್ತಸ್ಥಾನಗಳಲ್ಲಿ ನ್ಯಾಸ ಮಾಡಬೇಕು.

೧೦೪. ಬಲಬಾಹು (ತೋಳು) ವಿನಲ್ಲಿ ಕವರ್ಗದ ಅಕ್ಷರಗಳನ್ನೂ ಎಡ ಬಾಹುವಿನಲ್ಲಿ ಚವರ್ಗಾಕ್ಷರಗಳನ್ನೂ, ಟವರ್ಗ ತವರ್ಗಗಳ ಅಕ್ಷರಗಳನ್ನು ಎರಡು ಕಾಲುಗಳಲ್ಲಿಯೂ, ಪಫ ಎಂಬ ವರ್ಣಗಳನ್ನು ಎರಡು ಕುಕ್ಷಿಗಳಲ್ಲಿಯೂ ನ್ಯಾಸಮಾಡಬೇಕು.

೧೦೫-೧೦೬. ಪೃಷ್ಠಭಾಗದಲ್ಲಿ ವಕಾರವನ್ನೂ, ನಾಭಿಯಲ್ಲಿ ಭಕಾರ ವನ್ನೂ, ಹೃದಯದಲ್ಲಿ ಮಕಾರವನ್ನೂ, ಯಕಾರಾದಿ ಸಕಾರಾಂತವಾಗಿ ಏಳು ಅಕ್ಷರಗಳನ್ನು ಸಪ್ತಧಾತುಗಳಲ್ಲಿಯೂ, ಹಕಾರವನ್ನು ಪ್ರಾಣವಾಯುವಿನಲ್ಲಿಯೂ ಲವರ್ಣವನ್ನು ಆತ್ಮನಲ್ಲಿಯೂ, ಕ್ಷ ವರ್ಣವನ್ನು ಕ್ರೋಧದಲ್ಲಿಯೂ ಕ್ರಮವಾಗಿ ನ್ಯಾಸಮಾಡಿ ವಿಷ್ಣುಪೂಜೆಗೆ ಯೋಗ್ಯನಾಗಬೇಕು.

ಸೂಕ್ಷ್ಮೇಶಃ ಶಾಲ್ಮಲೀಯುಕ್ತೋ ಲೋಲಾಕ್ಷಿಯುಕ್ತ್ರಿಮೂರ್ತಿಕಃ ।
ಮಹೇಶ್ವರೋ ವರ್ತುಲಾಕ್ಷ್ಯಾರ್ಧೀಶೋ ವೈ ಧೀರ್ಘಯೋನ್ಯುತಃ ॥ ೧೦೭ ॥

ದೀರ್ಘಯುಕ್ತಾಭಾರಭೂತಿಸ್ತಿಥೀಶೋ ಗೋಮುಖೀಯುತಃ ।
ಸ್ಥಾಣ್ವೀಶೋ ದೀರ್ಘಜಿಹ್ವಾಯುಗ್ಧರಃ ಕುಂಭೋದರೀಯುತಃ ॥ ೧೦೮ ॥

ಊರ್ಧ್ವಕೇಶ್ಯಾ ತು ಝಿಂಟೀಶೋ ಭೌತಿಕೋ ವಿಕೃತಾಸ್ಯಯಾ ।
ಸದ್ಯೋಜ್ವಾಲಾಮುಖೀಯುಕ್ತೋಲ್ಕಾಮುಖ್ಯಾನುಗ್ರಹೋಯುತಃ॥೧೦೯

ಅಕ್ರೂರಃ ಶ್ರೀಮುಖೀ ಮಹಾಸೇನೋ ವಿದ್ಯಾಮುಖೀಯುತಃ ।
ಕ್ರೋಧೀಶಶ್ಚ ಮಹಾಕಾಲ್ಯಾ ಚಂಡೇಶೇನ ಸರಸ್ವತೀ ॥ ೧೧೦ ॥

ಪಂಚಾಂತಕಃ ಸಿದ್ಧಿಗೌರ್ಯಾ ಯುಕ್ತಶ್ಚಾಥ ಶಿವೋತ್ತಮಃ ।
ತ್ರೈಲೋಕ್ಯವಿದ್ಯಯಾ ಯುಕ್ತೋ ಮಂತ್ರಶಕ್ತ್ಯೈಕರುದ್ರಕಃ ॥ ೧೧೧ ॥

---

೧೦೬-೧೧೯. ಪೂರ್ಣೋದರಿಯಿಂದ ಯುಕ್ತನಾದ ಶ್ರೀಕಂಠ, ವಿರಜೆಯಿಂದ ಸಹಿತನಾದ ಅನಂತ, ಶಾಲ್ಮಲೀಯುಕ್ತನಾದ ಸೂಕ್ಷ್ಮೇಶ, ಲೋಲಾಕ್ಷೀ ಸಹಿತ ತ್ರಿಮೂರ್ತಿ, ವರ್ತುಲಾಕ್ಷೀಸಹಿತ ಮಹೇಶ್ವರ, ದೀರ್ಘಯೋನಿಯುಕ್ತ ಅರ್ಧೀಶ, ದೀರ್ಘಮುಖಿಸಹಿತ ಭಾರಭೂತಿ, ಗೋಮುಖೀಯುಕ್ತತಿಥೀಶ, ದೀರ್ಘಜಿಹ್ವೆಯಿಂದ ಕೂಡಿದ ಸ್ಥಾಣ್ವೀಶ, ಕುಂಭೋದರೀ ಸಹಿತ ಧರ, ಊರ್ಧ್ವಕೇಶಿಯಿಂದ ಸಹಿತನಾದ ಝಿಂಟೀಶ, ವಿಕೃತಾಸ್ಯೆಯಿಂದ ಕೂಡಿದ ಭೌತಿಕ, ಜ್ವಾಲಾಮುಖೀಯುಕ್ತ ಸದ್ಯ, ಉಲ್ಕಾಮುಖಿಯಿಂದ ಕೂಡಿದ ಅನುಗ್ರಹ, ಶ್ರೀಮುಖಿಯಿಂದ ಸಹಿತನಾದ ಅಕ್ರೂರ, ವಿದ್ಯಾಮುಖಿಯುಕ್ತನಾದ ಮಹಾಸೇನ, ಮಹಾಕಾಲೀಸಹಿತನಾದ ಕ್ರೋಧೀಶ, ಚಂಡೇಶಸಹಿತಳಾದ ಸರಸ್ವತೀ, ಸಿದ್ಧಗೌರೀ ಸಹಿತ ಪಂಚಾಂತಕ, ತ್ರೈಲೋಕ್ಯವಿದ್ಯೆಯಿಂದ ಕೂಡಿದ ಶಿವೋತ್ತಮ, ಮಂತ್ರಶಕ್ತಿಯಿಂದ ಕೂಡಿದ ಏಕ ರುದ್ರಕ, ಕಮಠೀಯುಕ್ತ ಕೂರ್ಮೇಶ, ಭೂತಮಾತೆಯಿಂದ ಕೂಡಿದ ಏಕನೇತ್ರಕ, ಲಂಬೋದರೀ ಸಹಿತ ಚತುರ್ವಕ್ತ್ರ, ದ್ರಾವಿಣೀ ಸಹಿತನಾದ ಅಜೇಶ, ನಾಗರೀ ಸಹಿತ ಸರ್ವೇಶ, ಖೇಚರೀ ಸಹಿತ

ಕೂರ್ಮೇಶಃ ಕಮಠೀಯುಕ್ತೋ ಭೂತಮಾತ್ರೈಕನೇತ್ರಕಃ।
ಲಂಬೋದರ್ಯಾ ಚತುರ್ವಕ್ತ್ರೋ ಹ್ಯಜೇಶೋ ದ್ರಾವಿಣೀಯುತಃ॥ ೧೧೨ ॥

ಸರ್ವೇಶೋ ನಾಗರೀಯುಕ್ತಸ್ಸೋಮೇಶಃ ಖೇಚರೀಯುತಃ ।
ಮಂಜರ್ಯಾ ಲಾಂಗಲೀಶಶ್ಚ ದಾರುಕೇಶೇನ ರೂಪಿಣೀ ॥ ೧೧೩ ॥

ವೀರಣ್ಯಾತ್ವರ್ಧನಾರೀಶೋ ಉಮಾಕಾಂತಃ ಪುನರ್ಯುತಃ ।
ಕಾಕೋದರ್ಯಾ ತಥಾಷಾಢೀ ಪೂತನಾಸಂಯುತೋ ಮತಃ ॥ ೧೧೪ ॥

ಚಂಡಿಶೋ ಭದ್ರಕಾಲೀಯುಗತ್ರೀಶೋ ಯೋಗಿನೀಯುತಃ ।
ಮೀನೇಶಶ್ಶಂಖಿನೀಯುಕ್ತೋ ಮೇಷೇಶಸ್ತರ್ಜನೀಯುತಃ ॥ ೧೧೫ ॥

ಲೋಹಿತಃ ಕಾಲರಾತ್ರ್ಯಾ ಚ ಶಿಖೀಶಃ ಕುಜನೀಯುತಃ ।
ಛಲಗಂಡಃ ಕಪರ್ದಿನ್ಯಾ ದ್ವಿರಂಡೇಶಶ್ಚ ವಜ್ರಯಾ ॥ ೧೧೬ ॥

ಮಹಾಬಲೋ ಜಯಾಯುಕ್ತೋ ಬಾಲೀಶಸ್ಸುಮುಖೇಶ್ವರೀ ।
ಭುಜಂಗೋ ರೇವತೀಯುಕ್ತಃ ಪಿನಾಕೀ ಮಾಧವಾಯುತಃ ॥ ೧೧೭ ॥

---

ಸೋಮೇಶ, ಮಂಜರಿಯಿಂದ ಕೂಡಿದ ಲಾಂಗಲೀಶ, ದಾರುಕೇಶನಿಂದ ಸಹಿತಳಾದ ರೂಪಿಣೀ, ವೀರಣಿಯಿಂದ ಕೂಡಿದ ಅರ್ಧನಾರೀಶ್ವರ, ಕಾಕೋದರೀಯುಕ್ತನಾದ ಉಮಾಕಾಂತನು, ಪೂತನಾಸಹಿತ ಆಷಾಢೀ, ಭದ್ರಕಾಲೀ ಸಹಿತ ಚಂಡೀಶ, ಯೋಗಿನೀಸಹಿತ ಅತ್ರೀಶ, ಶಂಖಿನೀಯುಕ್ತ ಮೀನೇಶ, ತರ್ಜನೀಯುಕ್ತ ಮೇಷೇಶ, ಕಾಲರಾತ್ರೀ ಸಹಿತ ಲೋಹಿತ, ಕುಜನೀ ಸಹಿತ ಶಿಖೀಶ, ಕಪರ್ದಿನೀಯುಕ್ತ ಛಲಗಂಡ, ವಜ್ರೆಯಿಂದ ಕೂಡಿದ ದ್ವಿರಂಡೇಶ, ಜಯೆಯಿಂದ ಸಹಿತ ಮಹಾಬಲ, ಸುಮುಖೇಶ್ವರೀ ಸಹಿತ ಬಲೀಶ, ರೇವತೀಯುಕ್ತನಾದ ಭುಜಂಗ, ಮಾಧವೆಯಿಂದ ಕೂಡಿದ ಪಿನಾಕಿ, ವಾರುಣೀ ಸಹಿತ ಖಡ್ಗೀಶ, ವಾಯುವೀ ಸಹಿತ ಬಕೇಶ, ವಿದಾರಿಣೀ ಸಹಿತ

ಖಡ್ಗೀಶೋ ವಾರುಣೀಯುಕ್ತೋ ಬಕೇಶೋ ವಾಯವೀಯುತಃ ।
ಶ್ವೇತೋರಸ್ಕೋ ವಿದಾರಿಣ್ಯಾ ಭೃಗುಃ ಸಹಜಯಾ ಯುತಃ ॥ ೧೧೮ ॥

ನಕುಲೀಶಶ್ಚ ಲಕ್ಷ್ಮೀಯುಕ್ ಶಿವೇಶೋ ವ್ಯಾಪಿನೀಯುತಃ ।
ಸಂವರ್ತಕೋ ಮಹಾಮಾಯಾ ಪ್ರೋಕ್ತಾ ಶ್ರೀಕಂಠಮಾತೃಕಾ ॥ ೧೧೯ ॥

ಯತ್ರ ತ್ವೀಶಪದಂ ನೋಕ್ತಂ ತತ್ರ ಸರ್ವತ್ರ ಯೋಜಯೇತ್ ।
ಮುನಿಸ್ಯಾದ್ದಕ್ಷಿಣಾಮೂರ್ತಿರ್ಗಾಯತ್ರೀಛಂದ ಈರಿತಂ ॥ ೧೨೦ ॥

ದೇವತಾ ಚಾರ್ಧನಾರೀಶೋ ವಿನಿಯೋಗೋಽಖಿಲಾಪ್ತಯೇ ।
ಹಲೋ ಬಿಜಾನಿ ಚೋಕ್ತಾನಿ ಸ್ವರಾಃ ಶಕ್ತಯ ಈರಿತಾಃ ॥ ೧೨೧ ॥

ಕುರ್ಯಾದ್ಭೃಗುಸ್ಥಾಕಾಶೇನ ಷಡ್ದೀರ್ಘಾರ್ಢ್ಯೇನ ಚಾಂಗಕಂ ।
ಬಂಧೂಕಸ್ವರ್ಣಪರ್ಣಾಂಗಂ ವರಾಕ್ಷಾಂಕುಶಪಾಶಿನಂ ॥ ೧೨೨ ॥

---

ನಾದ ಶ್ವೇತರಸ್ಕ, ಸಹಜೆಯಿಂದ ಯುಕ್ತನಾದ ಭೃಗು, ಲಕ್ಷ್ಮೀಯುತನಾದ ನಕುಲೀಶ, ವ್ಯಾಪಿನೀ ಸಹಿತ ಶಿವೇಶ ಮತ್ತು ಮಹಾಮಾಯಾ ಸಹಿತ ಸಂವರ್ತಕ ಎಂಬ ಈ ದೇವತೆಗಳು ಶ್ರೀಕಂಠಮಾತೃಕಾ ದೇವತೆಗಳೆಂದು ಉಕ್ತವಾಗಿದೆ.

೧೨೦. ಇಲ್ಲಿ ಹೇಳಿರುವ ದೇವತೆಗಳ ನಾಮಗಳಲ್ಲಿ 'ಈಶ' ಎಂಬ ಪದವಿಲ್ಲದಿರುವೆಡೆಯಲ್ಲೆಲ್ಲಾ ಅದನ್ನು ಸೇರಿಸಿಕೊಳ್ಳಬೇಕು. ಈ ಮಾತೃಕಾ ಮಂತ್ರಕ್ಕೆ ದಕ್ಷಿಣಾಮೂರ್ತಿಯು ಮುನಿಯು, ಗಾಯತ್ರಿಯೇ ಛಂದಸ್ಸು ಎಂದು ಉಕ್ತವಾಗಿದೆ.

೧೨೧. ಅರ್ಧನಾರೀಶನು ದೇವತೆ, ಸಕಲಾಭೀಷ್ಟಸಿದ್ಧಿಗಾಗಿ ಈ ಮಂತ್ರವು ವಿನಿಯೋಗಿಸಲ್ಪಡಬೇಕು. ಹ, ಲ ಇವು ಬೀಜಗಳು, ಸ್ವರಗಳು ಶಕ್ತಿಗಳು ಎಂದು ಉಕ್ತವಾಗಿದೆ.

೧೨೨-೧೨೩. (ಭೃಗುಸ್ಥಾಕಾಶ= ಹ್,ಸ.) 'ಆ ಈ ಊ ಐ ಔಃ' ಎಂಬೀ ಆರು ದೀರ್ಘಯುಕ್ತವಾದ ಹ್ ಸ ಎಂಬ ಅಕ್ಷರದಿಂದ ಹೃದಯಾದಿ ಷಡಂಗ ನ್ಯಾಸ ಮಾಡಬೇಕು. ಸುವರ್ಣವರ್ಣೋಪೇತವಾದ ಬಂಧೂಕಪುಷ್ಪದ

ಅರ್ಧೇಂದುಶೇಖರಂ ತ್ರ್ಯಕ್ಷಂ ದೇವವಂದ್ಯಂ ವಿಚಿಂತಯೇತ್ ।
ಧ್ಯಾತ್ವೈವಂ ಶಿವಶಕ್ತೀಶ್ಚ ಚತುರ್ಥೀ ಹೃದಯಾಂತಿಮೇ ॥ ೧೨೩

ಸಬೀಜಮಾತೃಕಾಪೂರ್ವೇ ವಿನ್ಯಸೇನ್ಮಾತೃಕಾಸ್ಥಲೇ ।
ವಿಘ್ನೇಶಶ್ಚ ಹ್ರಿಯಾ ಯುಕ್ತೋ ವಿಘ್ನರಾಜಃ ಶ್ರಿಯಾ ಯುತಃ ॥ ೧೨೪ ॥

ವಿನಾಯಕಸ್ತಥಾ ಪುಷ್ಟ್ಯಾ ಶಾಂತಿಯುಕ್ತಃ ಶಿವೋತ್ತಮಃ ।
ವಿಘ್ನಕೃತ್ಸ್ವಸ್ತಿಸಂಯುಕ್ತೋ ವಿಘ್ನಹರ್ತಾ ಸರಸ್ವತೀ ॥ ೧೨೫ ॥

ಸ್ವಾಹಯಾ ಗಣನಾಥಶ್ಚ ಏಕದಂತಃ ಸುಮೇಧಯಾ ।
ಕಾಂತ್ಯಾಯುಕ್ತೋ ದ್ವಿದಂತಸ್ತು ಕಾಮಿನ್ಯಾ ಗಜವಕ್ತ್ರಕಃ ॥ ೧೨೬ ॥

---

ಎಲೆಯಂತೆ ಅವಯವಗಳುಳ್ಳ, ವರ, ಅಕ್ಷರಮಾಲೆ, ಅಂಕುಶ, ಪಾಶಗಳನ್ನು ಧರಿಸಿರುವ, ತ್ರಿನೇತ್ರನು, ದೇವವಂದ್ಯನೂ ಆಗಿರುವ ಅರ್ಧೇಂದುಶೇಖರನನ್ನು ಧ್ಯಾನಮಾಡಬೇಕು.

೧೨೩-೧೨೪. ಈ ಪ್ರಕಾರವಾಗಿ ಧ್ಯಾನಮಾಡಿ ಆದಿಯಲ್ಲಿ ಬೀಜಾಕ್ಷರ, ಆಮೇಲೆ ಚತುರ್ಥ್ಯಂತ ಮಾತೃಕಾನಾಮ, ಕೊನೆಯಲ್ಲಿ ' ನಮಃ ' ಎಂಬ ಶಬ್ದಗಳನ್ನು ಹೇಳುತ್ತಾ ಶಿವಶಕ್ತಿಗಳನ್ನು ಮಾತೃಕಾಸ್ಥಾನದಲ್ಲಿ ನ್ಯಾಸಮಾಡಬೇಕು.

೧೨೪-೧೩೮. ಹ್ರೀ ಸಹಿತ ವಿಘ್ನೇಶ, ಶ್ರೀಯುಕ್ತ ವಿಘ್ನರಾಜ, ಪುಷ್ಟೀ ಸಹಿತನಾದ ವಿನಾಯಕ, ಶಾಂತಿ ಸಹಿತ ಶಿವೋತ್ತಮ, ಸ್ವಸ್ತಿಯುಕ್ತನಾದ ವಿಘ್ನಕೃತ್ತು, ಸರಸ್ವತೀ ಸಹಿತ ವಿಘ್ನಹರ್ತ, ಸ್ವಾಹೆಯಿಂದ ಕೂಡಿದ ಗಣನಾಥ, ಸುಮೇಧೆಯಿಂದ ಸಹಿತನಾದ ಏಕದಂತ, ಕಾಂತಿಯುಕ್ತನಾದ ದ್ವಿದಂತ, ಕಾಮಿನೀ ಸಹಿತ ಗಜವಕ್ತ್ರ, ಮೋಹಿನೀಯುಕ್ತನಾದ ನಿರಂಜನ, ನಟೀ ಸಹಿತ ಕಪರ್ದೀ, ಪಾರ್ವತೀ ಸಹಿತ ದೀರ್ಘಜಿಹ್ವ, ಜ್ವಾಲಿನೀ ಸಹಿತ ಶಂಕುಕರ್ಣ,

ನಿರಂಜನೋ ನೋಹಿನೀಯುಕ್ಕಪರ್ದೀ ತು ನಟೀಯುತಃ ।
ದೀರ್ಘಜಿಹ್ವಃ ಪಾರ್ವತೀಯುಗ್ಜ್ವಾಲಿನ್ಯಾ ಶಂಕುಕರ್ಣಕಃ ॥ ೧೨೭ ॥

ವೃಷಧ್ವಜೋ ನಂದಯಾ ಚ ಸುರೇಶ್ಯಾ ಗಣನಾಯಕಃ ।
ಗಜೇಂದ್ರಃ ಕಾಮರೂಪಿಣ್ಯಾ ಶೂರ್ಪಕರ್ಣಸ್ತಥೋಮಯಾ ॥ ೧೨೮ ॥

ವಿರೋಚನಸ್ತೇಜೋವತ್ಯಾ ಸತ್ಯಾ ಲಂಬೋದರೇಣ ಚ ।
ಮಹಾನಂದಶ್ಚ ವಿಘ್ನೇಶ್ಯಾ ಚತುರ್ಮೂರ್ತಿಸ್ವರೂಪಿಣೀ ॥ ೧೨೯ ॥

ಸದಾಶಿವಃ ಕಾಮದಯಾ ಸ್ಯಾಮೋದೋ ಮದಜಿಹ್ವಯಾ ।
ದುರ್ಮುಖೋ ಭೂತಿಸಂಯುಕ್ತಃ ಸುಮುಖೋ ಭೌತಿಕೀಯುತಃ ॥ ೧೩೦ ॥

ಪ್ರಮೋದಃ ಸೀತಯಾ ಯುಕ್ತ ಏಕ ಪಾದೋ ರಮಾಯುತಃ ।
ದ್ವಿಜಿಹ್ವೋ ಮಹಿಷೀಯುಕ್ತೋ ಜಂಭಿನ್ಯಾ ಶೂರನಾಮಕಃ ॥ ೧೩೧ ॥

ವೀರೋ ವಿಕರ್ಣಯಾ ಯುಕ್ತಃ ಷಣ್ಮುಖೋ ಭ್ರುಕುಟೀಯುತಃ ।
ವರದೋ ಲಜ್ಜಯಾ ವಾಮದೇವೇಶೋದೀರ್ಘಘೋಣಯಾ ॥ ೧೩೨ ॥

---

ನಂದಾ ಸಹಿತ ವೃಷಧ್ವಜ, ಸುರೇಶೀಯುಕ್ತ ಗಣನಾಯಕ, ಕಾಮರೂಪಿಣಿಯಿಂದ ಕೂಡಿದ ಗಜೇಂದ್ರ, ಉಮಾದೇವಿಯಿಂದ ಸಹಿತನಾದ ಶೂರ್ಪಕರ್ಣ, ತೇಜೋವತೀ ಸಹಿತ ವಿರೋಚನ, ಲಂಬೋದರ ಸಹಿತಳಾದ ಸತ್ಯೆ, ಚತುರ್ಮೂರ್ತಿಯುಕ್ತಸ್ವರೂಪಿಣಿ, ವಿಘ್ನೇಶಿಯಿಂದೊಡಗೂಡಿದ ಮಹಾನಂದ, ಕಾಮದೆಯಿಂದ ಸಹಿತನಾದ ಸದಾಶಿವ, ಮದಜಿಹ್ವೆಯಿಂದ ಕೂಡಿದ ಸ್ಯಾಮೋದ, ಭೂತಿ ಸಹಿತ ದುರ್ಮುಖ, ಭೌತಿಕೀಯುಕ್ತ ಸುಮುಖ, ಸೀತಾಯುಕ್ತ ಪ್ರಮೋದ, ರಮಾ ಸಹಿತನಾದ ಏಕಪಾದ, ಮಹಿಷೀ ಸಹಿತನಾದ ದ್ವಿಜಿಹ್ವ, ಜಂಭಿನೀಯುಕ್ತ ಶೂರ, ವಿಕರ್ಣೆಸಹಿತ ವೀರ, ಭ್ರುಕುಟೀ ಸಹಿತನಾದ ಷಣ್ಮುಖ, ಲಜ್ಜೆ ಸಹಿತ ವರದ, ದೀರ್ಘಘೋಣೆಯಿಂದ ಕೂಡಿದ ವಾಮದೇವೇಶ, ಧನುರ್ಧೆ ಸಹಿತ ವಕ್ರತುಂಡ, ಯಾಮಿನೀಯುಕ್ತ ದ್ವಿರಂಡ, ರಾತ್ರಿಸಂಯುಕ್ತ ಸೇನಾನಿ, ಗ್ರಾಮಣೀಯುಕ್ತನಾದ ಕಾಮಾಂಧ, ಶಶಿಪ್ರಭೆಯಿಂದ ಕೂಡಿದ ಮತ್ತ, ಲೋಲ

ಧನುರ್ಧರ್ಯಯಾ ವಕ್ರತುಂಡೋ ದ್ವಿರಂಡೋ ಯಾಮಿನೀಯುತಃ ।
ಸೇನಾನೀ ರಾತ್ರಿಸಂಯುಕ್ತಃ ಕಾಮಾಂಧೋ ಗ್ರಾಮಣೀಯುತಃ ॥ ೧೩೩ ॥

ಮತ್ತಃ ಶಶಿಪ್ರಭಾಯುಕ್ತೋ ವಿಮತ್ತೋ ಲೋಲನೇತ್ರಯಾ ।
ಮತ್ತಶ್ಚಂಚಲಯಾ ಯುಕ್ತೋ ಜಟೀದೀಪ್ತಿಸಮನ್ವಿತಃ ॥ ೧೩೪ ॥

ಮುಂಡೀಸುಭಗಯಾ ಯುಕ್ತಃ ಖಡ್ಗೀದುರ್ಭಗಯಾ ಯುತಃ ।
ವರೇಣ್ಯಶ್ಚ ಶಿವಾಯುಕ್ತೋ ಭಗಯಾ ವೃಷಕೇತನಃ ॥ ೧೩೫ ॥

ಭಕ್ಷ್ಯಪ್ರಿಯೋ ಭಗಿನ್ಯಾ ಚ ಗಣೇಶೋ ಭಗಿನೀಯುತಃ ।
ಮೇಘನಾದಸ್ಸುಭಗಯಾ ವ್ಯಾಪೀ ಸ್ಯಾತ್ಕಾಲರಾತ್ರಿಯುಕ್ ॥ ೧೩೬ ॥

ಗಣೇಶ್ವರಃ ಕಾಲಿಕಯಾ ಪ್ರೋಕ್ತಾ ವಿಘ್ನೇಶಮಾತೃಕಾಃ ।
ಗಣೇಶಮಾತೃಕಾಯಾಸ್ತು ಗಣೋ ಮುನಿರಿತೀರಿತಃ ॥ ೧೩೭ ॥

ನಿಚೃದ್ಗಾಯತ್ರಿಕಾಛಂದೋ ದೇವಃ ಶಕ್ತಿಗಣೇಶ್ವರಃ ।
ಷಡ್ದೀರ್ಘಾಢ್ಯೇನ ಬೀಜೇನ ಕೃತ್ವಾಂಗಾನಿ ತತಃ ಸ್ಮರೇತ್ ॥ ೧೩೮ ॥

---

ನೇತ್ರೆಯಿಂದ ಯುಕ್ತನಾದ ವಿಮತ್ತ, ಚಂಚಲೆಯಿಂದ ಸಹಿತನಾದ ಮತ್ತ ದೀಪ್ತಿಯಿಂದ ಕೂಡಿದ ಜಟೀ, ಸುಭಗೆಯಿಂದ ಸಹಿತನಾದ ಮುಂಡೀ, ದುರ್ಭಗೆ ಸಹಿತ ಖಡ್ಗೀ, ಶಿವಾಯುಕ್ತನಾದ ವರೇಣ್ಯ, ಭಗಾ ಸಹಿತ ವೃಷಕೇತನ, ಭಗಿನೀಯುಕ್ತ ಭಕ್ಷ್ಯಪ್ರಿಯ, ಭಗಿನೀ ಸಹಿತನಾದ ಗಣೇಶ, ಸುಭಗೆಯಿಂದ ಯುಕ್ತನಾದ ಮೇಘನಾದ, ಕಾಲರಾತ್ರಿಯಿಂದ ಯುಕ್ತನಾದ ವ್ಯಾಪಿ, ಕಾಲಿಕಾ ದೇವಿಯಿಂದ ಕೂಡಿದ ಗಣೇಶ್ವರ ಇವರು ವಿಘ್ನೇಶ ಮಾತೃಕೆಗಳೆಂದು ಉಕ್ತರಾಗಿರುವರು. ಗಣೇಶ ಮಾತೃಕಾಮಂತ್ರಕ್ಕೆ ನಿಚೃತ್ ಗಣವು ಋಷಿ, ಗಾಯತ್ರೀ ಛಂದಸ್ಸು, ಶಕ್ತಿಗಣೇಶ್ವರನೇ ದೇವತೆ, ಷಡ್ವಿಧವಾದ ಬೀಜದಿಂದ ಷಡಂಗ ನ್ಯಾಸವನ್ನು ಮಾಡಿ ಧ್ಯಾನಿಸಬೇಕು.

ಪಾಶಾಂಕುಶಾಭಯವರಾನ್ದಧಾನಂ ಕಂಜಹಸ್ತಯಾ ।
ಪತ್ನ್ಯಾ ಶ್ಲಿಷ್ಟಂ ರಕ್ತತನುಂ ತ್ರಿನೇತ್ರಂ ಗಣಪಂ ಭಜೇತ್ ॥ ೧೩೯ ॥

ಏವಂ ಧ್ಯಾತ್ವಾ ನ್ಯಸೇತ್ಸ್ವಸ್ವಬೀಜಪೂರ್ವಾಕ್ಷರಾನ್ವಿತಂ ।
ನಿವೃತ್ತಿಶ್ಚ ಪ್ರತಿಷ್ಠಾ ಚ ವಿದ್ಯಾಶಾಂತಿಸ್ತಥೇಧಿಕಾ ॥ ೧೪೦ ॥

ದೀಪಿಕಾ ರೇಚಿಕಾ ಚಾಪಿ ಮೋಚಿಕಾ ಚ ಪರಾಭಿಧಾ ।
ಸೂಕ್ಷ್ಮಾ ಸೂಕ್ಷ್ಮಾಮೃತಾ ಜ್ಞಾನಾಮೃತಾ ಚಾಪ್ಯಾಯನೀ ತಥಾ ॥ ೧೪೧ ॥

ವ್ಯಾಪಿನೀ ವ್ಯೋಮರೂಪಾ ಚಾನಂತಾ ಸೃಷ್ಟಿಃ ಸಮೃದ್ಧಿಕಾ ।
ಸ್ಮೃತಿರ್ಮೇಧಾ ತತಃ ಕಾಂತಿರ್ಲಕ್ಷ್ಮೀರ್ಧೃತಿಃ ಸ್ಥಿರಾ ಸ್ಥಿತಿಃ ॥ ೧೪೨ ॥

ಸಿದ್ಧಿರ್ಜರಾ ಪಾಲಿನೀ ಚ ಕ್ಷಾಂತಿರೀಶ್ವರಿಕಾ ರತಿಃ ।
ಕಾಮಿಕಾ ವರದಾ ವಾಥ ಹ್ಲಾದಿನೀ ಪ್ರೀತಿಸಂಯುತಾ ॥ ೧೪೩ ॥

---

೧೩೯-೧೪೦. ಕಮಲದಂತಿರುವ ಹಸ್ತದಿಂದ ಪಾಶ, ಅಂಕುಶ, ವರ, ಅಭಯುಗಳನ್ನು ಧರಿಸಿರುವ, ಪತ್ನಿಯಿಂದ ಆಲಿಂಗಿತನು, ಕೆಂಪುಬಣ್ಣದ ಶರೀರವುಳ್ಳವನೂ, ತ್ರಿನೇತ್ರನೂ ಆದ ಗಣಪತಿಯನ್ನು ಧ್ಯಾನಿಸಬೇಕು.

೧೪೦. ಈರೀತಿಯಾಗಿ ಧ್ಯಾನಿಸಿ, ಆಯಾ ದೇವತೆಗಳ ಬೀಜಾಕ್ಷರ ಪೂರ್ವಕವಾಗಿ ನ್ಯಾಸಮಾಡಬೇಕು.

೧೪೦-೧೪೫. ನಿವೃತ್ತಿ, ಪ್ರತಿಷ್ಠೆ, ವಿದ್ಯೆ, ಶಾಂತಿ, ಈಧಿಕಾ, ದೀಪಿಕೆ, ರೇಚಿಕೆ, ಪರಾನಾಮಕವಾದ ಮೋಚಿಕೆ, ಸೂಕ್ಷ್ಮಾ, ಸೂಕ್ಷ್ಮಾಮೃತಾ, ಜ್ಞಾನಾಮೃತಾ, ಆಪ್ಯಾಯನೀ, ವ್ಯೋಮರೂಪವಾದ ವ್ಯಾಪಿನೀ, ಅನಂತಾ, ಸೃಷ್ಟಿ, ಸಮೃದ್ಧಿ, ಸ್ಮೃತಿ, ಮೇಧಾ, ಕಾಂತಿ, ಲಕ್ಷ್ಮೀ, ಧೃತಿ, ಸ್ಥಿರಾ, ಸ್ಥಿತಿ, ಸಿದ್ಧಿ, ಜರಾ, ಪಾಲಿನೀ, ಕ್ಷಾಂತಿ, ಈಶ್ವರೀ, ರತಿ, ಕಾಮಿಕಾ, ವರದಾ, ಪ್ರೀತಿಯುಕ್ತ

ದೀರ್ಘಾ ತೀಕ್ಷ್ಣಾ ತಥಾ ರೌದ್ರಾ ಪ್ರೋಕ್ತಾ ನಿದ್ರಾ ಚ ತಂದ್ರಿಕಾ ।
ಕ್ಷುಧಾ ಚ ಕ್ರೋಧಿನೀ ಪಶ್ಚಾತ್ಕ್ರಿಯಾಕಾರೀ ಸ ಮೃತ್ಯುಕಾ ॥ ೧೪೪ ॥

ಪೀತಾ ಶ್ವೇತಾರುಣೌ ಪಶ್ಚಾದಸಿತಾನಂತಯಾ ಯುತಾ ।
ಉಕ್ತಾ ಕಲಾಮಾತೃಕೈವಂ ತತ್ತದ್ಭಕ್ತೈಃ ಸಮಾಚರೇತ್ ॥ ೧೪೫ ॥

ಕಲಾಯುಙ್ಮಾತೃಕಾಯಾಸ್ತು ಮುನಿಃ ಪ್ರೋಕ್ತಃ ಪ್ರಜಾಪತಿಃ ।
ಗಾಯತ್ರೀಛಂದ ಆಖ್ಯಾತಂ ದೇವತಾ ಶಾರದಾಭಿಧಾ ॥ ೧೪೬ ॥

ಹ್ರಸ್ವದೀರ್ಘಾಂತರಸ್ಥೈಶ್ಚ ತಾರೈಃ ಕುರ್ಯಾತ್ ಷಡಂಗಕಂ ।
ಪದ್ಮಚಕ್ರಗುಣೈಣಾಶ್ಚ ದಧತೀಂ ಚ ತ್ರಿಲೋಚನಾಂ ॥ ೧೪೭ ॥

ಪಂಚವಕ್ತ್ರಾಂ ಭಾರತೀಂ ತಾಂ ಮುಕ್ತಾಭೂಷಾಂ ಭಜೇತ್ಸುಧೀಃ ।
ಧ್ಯಾತ್ವೈವಂ ತಾರಪೂರ್ವಾಂ ತಾಂ ನ್ಯಸೇತ್ ಜಃಂತಕಲಾನ್ವಿತಾಂ॥ ೧೪೮ ॥

---

ಳಾದ ಹ್ರಾದಿನೀ, ದೀರ್ಘಾ, ತೀಕ್ಷ್ಣಾ, ರೌದ್ರಾ, ನಿದ್ರಾ, ತಂದ್ರಾ, ಕ್ಷುಧಾ, ಕ್ರೋಧಿನೀ, ಮೃತ್ಯು ಸಹಿತ ಕ್ರಿಯಾಕಾರಿ, ಪೀತಾ, ಶ್ವೇತಾ, ಅರುಣಾ, ಅನಂತಾಸಹಿತಳಾದ ಅಸಿತಾ ಇವರು ಕಲಾಮಾತೃಕೆಗಳು. ಆಯಾಯಾ ದೇವತಾ ಭಕ್ತರು ಆಯಾಯಾ ದೇವತಾ ಮಾತೃಕೆಗಳನ್ನು ಆರಾಧಿಸಬೇಕು.

೧೪೬. ಕಲಾಯುಕ್ತವಾದ ಮಾತೃಕೆಗೆ ಪ್ರಜಾಪತಿಯೇ ಮುನಿಯು. ಛಂದಸ್ಸು ಗಾಯತ್ರೀ, ಶಾರದೆಯೇ ದೇವತೆ ಎಂದು ಹೇಳಿದೆ.

೧೪೭-೧೪೮. ಹ್ರಸ್ವದೀರ್ಘ ಮಧ್ಯಸ್ಥಗಳಾದ 'ತಾರ' ಎಂದರೆ ಪ್ರಣವಗಳಿಂದ ಷಡಂಗನ್ಯಾಸವನ್ನು ಮಾಡಬೇಕು. ಹೇಗೆಂದರೆ :—ಅಂ ಓಂ ಆಂ ಹೃದಯಾಯ ನಮಃ, ಇಂ ಓಂ ಈಂ ಶಿರಸೇ ಸ್ವಾಹಾ, ಉಂ ಓಂ ಊಂ ಶಿಖಾಯೈ ವಷಟ್, ಏಂ ಓಂ ಐಂ ಕವಚಾಯ ಹುಂ, ಓಂ ಓಂ ಔಂ ನೇತ್ರ ತ್ರಯಾಯ ವೌಷಟ್, ಅಂ ಓಂ ಅಃ ಅಸ್ತ್ರಾಯ ಫಟ್. ಈರೀತಿಯಾಗಿ ಹೇಳುತ್ತಾ ಷಡಂಗಗಳನ್ನು ನ್ಯಾಸಮಾಡಬೇಕು. ಪಂಡಿತನು ಪದ್ಮ, ಚಕ್ರ, ಪಾಶ, ಜಿಂಕೆ ಇವುಗಳನ್ನು ಧರಿಸಿರುವ, ಮೂರು ಕಣ್ಣುಗಳು ಮತ್ತು ಐದು ಮುಖಗಳುಳ್ಳ, ಮುತ್ತಿನ ಆಭರಣಗಳನ್ನು ಧರಿಸಿರುವ ಆ ಭಾರತೀದೇವಿಯನ್ನು ಧ್ಯಾನಿಸಬೇಕು.

**ತತಶ್ಚ ಮೂಲಮಂತ್ರಸ್ಯ ಷಡಂಗಾನಿ ಸಮಾಚರೇತ್ ।**
**ಹೃದಯಾದೌ ಚತುರ್ಥ್ಯಂತೇ ಜಾತೀಃ ಸಂಯೋಜ್ಯ ವಿನ್ಯಸೇತ್ ॥ ೧೪೯ ॥**

**ನಮಃ ಸ್ವಾಹಾ ವಷಟ್ ಹುಂ ಔಷಟ್ ಫಟ್ ಜಾತಯ ಈರೀತಾಃ ।**
**ತತೋ ಧ್ಯಾತ್ವೇಷ್ಟದೇವಂ ತಂ ಭೂಷಾಯುಧಸಮನ್ವಿತಂ ॥ ೧೫೦ ॥**

**ನ್ಯಸ್ಯಾಂಗಷಟ್ಕಂ ತನ್ಮೂರ್ತೌ ತತಃ ಪೂಜನಮಾರಭೇತ್ ॥ ೧೫೧ ॥**

**ಇತಿ ಶ್ರೀನಾರದೀಯ ಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ**
**ತೃತೀಯ ಪಾದೇ ಸಂಧ್ಯಾದಿನಿರೂಪಣಂ ನಾಮ**
**ಷಟ್ಷಷ್ಟಿತಮೋಽಧ್ಯಾಯಃ**

---

ಈರೀತಿ ಧ್ಯಾನಿಸಿ, "ಓಂ ಅಂ ನಿವೃತ್ತ್ಯೈ ನಮಃ, ಓಂ ಆಂ ಪ್ರತಿಷ್ಠಾಯೈ ನಮಃ" ಇತ್ಯಾದಿಯಾಗಿ ಉಕ್ತಕಲಾದೇವತೆಗಳನ್ನು ನ್ಯಾಸಮಾಡಬೇಕು.

೧೪೯. ತರುವಾಯ ಮೂಲಮಂತ್ರ ಜಪದ ಅಂಗವಾಗಿ ಷಡಂಗನ್ಯಾಸ ಮಾಡಬೇಕು. ಚತುರ್ಥ್ಯಂತವಾದ ಹೃದಯಾದಿ ಶಬ್ದಗಳ ಮುಂದೆ ಜಾತಿಗಳನ್ನು ಸೇರಿಸಿ ನ್ಯಾಸಮಾಡಬೇಕು.

೧೫೦-೧೫೧. ನಮಃ, ಸ್ವಾಹಾ, ವಷಟ್, ಹುಂ, ಔಷಟ್, ಫಟ್ ಇವು ಜಾತಿಗಳೆಂದು ಹೇಳಲ್ಪಟ್ಟಿವೆ. ಅನಂತರ ಆಭರಣ, ಆಯುಧಗಳಿಂದ ಅಲಂಕೃತವಾದ ಅವರವರ ಇಷ್ಟದೇವತೆಯನ್ನು ಧ್ಯಾನಿಸಿ, ಆ ಮೂರ್ತಿಯಲ್ಲಿ ಷಡಂಗನ್ಯಾಸಮಾಡಿ ಪೂಜೆಯನ್ನು ಆರಂಭಿಸಬೇಕು.

ಇಂತು ಶ್ರೀ ನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ತೃತೀಯಪಾದದಲ್ಲಿ ಸಂಧ್ಯಾದಿ ನಿರೂಪಣೆಯೆಂಬ ಅರವತ್ತಾರನೆಯ ಅಧ್ಯಾಯವು ಮುಗಿದುದು.



## ಕಥಾಸಂಗ್ರಹ

ಉಷಃಕಾಲದಲ್ಲಿ ಹಾಸಿಗೆಯಿಂದೆದ್ದು, ಭೂಮಿಪ್ರಾರ್ಥನೆಮಾಡಿ, ಬಹಿರ್ದೇಶಕ್ಕೆ ಹೋಗಿ, ಮಲ ಮೂತ್ರಾದಿ ವಿಸರ್ಜನೆ ಮಾಡಿ, ಮೃತ್ತಿಕಾಶೌಚಾದಿಗಳಿಂದ ಶುದ್ಧಿಯನ್ನು ಪಡೆಯಬೇಕು ಎಂದು ಹೇಳಿ, ಶೌಚಪ್ರಕಾರವನ್ನು ವಿಸ್ತರಿಸಿ, ಅನಂತರ ಕರ್ತವ್ಯವಾದ ದಂತಧಾವನ, ಸ್ನಾನ ಮುಂತಾದುದರ ವಿಧಾನವನ್ನು ನಿರೂಪಿಸಿದೆ. ಈರೀತಿ ಪ್ರಾತಃಕರ್ತವ್ಯ ಶುದ್ಧ್ಯನಂತರ ಸಂಧ್ಯಾವಂದನೆಯ ವಿಧಾನವನ್ನೂ, ಮಾಧ್ಯಾಹ್ನಿಕ, ಸಾಯಂಸಂಧ್ಯಾವಂದನೆಗಳಲ್ಲಿನ ವಿಶೇಷಾಂಶವನ್ನೂ ಹೇಳಿ, ಜಪಾಂಗವಾದ ಮಾತೃಕಾನ್ಯಾಸಪ್ರಕಾರವನ್ನು ವಿಶದಪಡಿಸಿದೆ. ಅದರಲ್ಲಿ ವೈಷ್ಣವ, ಶೈವ, ಶಾಕ್ತೇಯ, ವಿಘ್ನೇಶ ಕಲಾಮಾತೃಕಾದೇವತೆಗಳನ್ನು, ಅವುಗಳ ನ್ಯಾಸ, ಧ್ಯಾನ ಮುಂತಾದುವನ್ನೂ ವಿಸ್ತಾರವಾಗಿ ನಿರೂಪಿಸಿ, ಅನಂತರ ಮೂಲ ಮಂತ್ರವನ್ನು ಜಪಿಸಿ, ಇಷ್ಟದೇವತೆಯಲ್ಲಿಯೂ ನ್ಯಾಸಾದಿಗಳನ್ನು ಮಾಡಿ, ಪೂಜೆಯನ್ನು ಆರಂಭಿಸಬೇಕೆಂದು ಹೇಳಿದೆ.



# ಸಪ್ತಷಷ್ಟಿತಮೋಽಧ್ಯಾಯಃ

ಸನತ್ಕುಮಾರ ಉವಾಚ

ಅಥ ವಕ್ಷ್ಯೇ ದೇವಪೂಜಾಂ ಸಾಧಕಾಭೀಷ್ಟಸಿದ್ಧಿದಾಂ ।
ತ್ರಿಕೋಣಂ ಚತುರಸ್ರಂ ತು ವಾಮಭಾಗೇ ಪ್ರಕಲ್ಪ್ಯ ಚ ॥ ೧ ॥

ಸಂಪೂಜ್ಯಾಸ್ತ್ರೇಣ ಸಂಕ್ಷಾಲ್ಯ ಹೃದಾಽಽಧಾರಂ ನಿಧಾಯ ಚ ।
ತತ್ರಾಗ್ನಿಮಂಡಲಂ ಚೇದ್ವಾ ಪಾತ್ರಂ ಸಂಕ್ಷಾಲ್ಯ ಚಾಸ್ತ್ರತಃ ॥ ೨ ॥

ಆಪೂರ್ಯ ಮನುನಾ ಸ್ಥಾಪ್ಯ ತತ್ರ ಚೇದ್ರವಿಮಂಡಲಂ ।
ವಿಲೋಮಮಾತೃಕಾಂ ಮೂಲಮುಚ್ಚರನ್ಪೂರಯೇಜ್ಜಲೈಃ ॥ ೩ ॥

ತತ್ರೇಂದುಮಂಡಲಂ ಪ್ರಾರ್ಚ್ಯ ತೀರ್ಥಾನ್ಯಾವಾಹ್ಯ ಪೂರ್ವವತ್ ।
ಗೋಮುದ್ರಯಾಽಮೃತೀಕೃತ್ಯ ಕವಚೇನಾವಗುಂಠಯೇತ್ ॥ ೪ ॥

---

## ಅರವತ್ತೇಳನೆಯ ಅಧ್ಯಾಯವು

೧-೩. ಸನತ್ಕುಮಾರನು ಹೇಳಿದನು :— ಈಗ ಸಾಧಕರಿಗೆ ಅಭೀಷ್ಟ ಸಿದ್ಧಿಪ್ರದವಾದ ದೇವಪೂಜೆಯ ವಿಧಾನವನ್ನು ಹೇಳುವೆನು. ಎಡಭಾಗದಲ್ಲಿ ತ್ರಿಕೋಣ ಅಥವಾ ಚತುರಸ್ರಮಂಡಲವನ್ನು ರಚಿಸಿ, ಅದನ್ನು ಪೂಜಿಸಿ 'ಫಟ್' ಎಂದು ಹೇಳಿ ಶೋಧಿಸಿದ ಪಾತ್ರೆಯನ್ನು 'ನಮಃ' ಎನ್ನುವುದರಿಂದ ಅದರಲ್ಲಿ ಸ್ಥಾಪಿಸಬೇಕು. ಅಗ್ನಿಮಂಡಲವಾದರೆ ಫಟ್ಕಾರದಿಂದ ಪಾತ್ರೆಯನ್ನು ಶೋಧಿಸಿ ಮಂತ್ರದಿಂದ ನೀರು ತುಂಬಬೇಕು. ರವಿಮಂಡಲವಾದರೆ ವಿಲೋಮಕ್ರಮ ದಿಂದ ಮಾತೃಕಾಮಂತ್ರ ಮತ್ತು ಮೂಲಮಂತ್ರಗಳನ್ನು ಉಚ್ಚರಿಸುವವನಾಗಿ ಪಾತ್ರೆಯನ್ನು ನೀರಿನಿಂದ ಪೂರ್ಣಮಾಡಬೇಕು.

೪. ಅಲ್ಲಿ ಚಂದ್ರಮಂಡಲವನ್ನು ಅರ್ಚಿಸಿ, ಹಿಂದೆ ಮಾಡಿದಂತೆ ತೀರ್ಥಗಳನ್ನು ಆವಾಹನೆ ಮಾಡಿ ಗೋಮುದ್ರೆಯನ್ನು ತೋರಿಸಿ ಅಮೃತವಾದಂತೆ ಭಾವಿಸಿ, ಕವಚದಿಂದ (ಹುಂ) ಅವಗುಂಠನೆಮಾಡಬೇಕು.

ಸಂಕ್ಷಾಲ್ಯಾಸ್ತ್ರೇಣ ಪ್ರಣವಂ ತದುಪರ್ಯಷ್ಟಧಾ ಜಪೇತ್ ।
ಸಾಮಾನ್ಯಾರ್ಘ್ಯಮಿದಂ ಪ್ರೋಕ್ತಂ ಸರ್ವಸಿದ್ಧಿಕರಂ ನೃಣಾಂ ॥ ೫ ॥

ತಜ್ಜಲಂ ಕಿಂಚಿದುದ್ಧೃತ್ಯ ಪ್ರೋಕ್ಷಿಣ್ಯಾ ಸಾಧಕೋತ್ತಮಃ ।
ಆತ್ಮಾನಂ ಯಾಗವಸ್ತೂನಿ ತೇನ ಸಂಪ್ರೋಕ್ಷಯೇತ್ ಪೃಥಕ್ ॥ ೬ ॥

ಆತ್ಮವಾಮಾಗ್ರತಃ ಕುರ್ಯಾತ್ ಷಟ್ಕೋಣಾಂತಸ್ತ್ರಿಕೋಣಕಂ ।
ಚತುರಸ್ರೇಣ ಸಂವೇಷ್ಟ್ಯ ಸಂಕ್ಷಾಲ್ಯಾರ್ಘೋದಕೇನ ಚ ॥ ೭ ॥

ತತಸ್ತು ಸಾಧಕಶ್ರೇಷ್ಠಃ ಸ್ತಂಭಯೇಚ್ಛಂಖಮುದ್ರಯಾ ।
ಆಗ್ನೇಯಾದಿಷು ಕೋಣೇಷು ಹೃದಾದ್ಯಂಗಚತುಷ್ಟಯಂ ॥ ೮ ॥

ನೇತ್ರಂ ಮಧ್ಯೇ ದಿಕ್ಷು ಚಾಸ್ತ್ರಂ ತ್ರಿಕೋಣೇ ಪೂಜಯೇತ್ತತಃ ।
ಮೂಲಖಂಡತ್ರಯೇಣಾಥಾಧಾರಶಕ್ತಿಂ ತು ಮಧ್ಯತಃ ॥ ೯ ॥

---

೫. ಅಸ್ತ್ರ (ಫಟ್) ಮಂತ್ರದಿಂದ ಶೋಧಿಸಿ, ಬಳಿಕ ಪ್ರಣವ ಮಂತ್ರವನ್ನು ಎಂಟಾವರ್ತಿ ಜಪಿಸಬೇಕು. ಇದು ಮನುಷ್ಯರಿಗೆ ಸಕಲೇಷ್ಟಪ್ರದವಾದ ಸಾಮಾನ್ಯ ಪೂಜಾ ವಿಧಾನವೆಂದು ಹೇಳಲ್ಪಟ್ಟಿದೆ.

೬. ಸಾಧಕವರ್ಯನು ಪ್ರೋಕ್ಷಣೀ ಪಾತ್ರೆಯಿಂದ ಆ ನೀರನ್ನು ಸ್ವಲ್ಪ ವಾಗಿ ತೆಗೆದುಕೊಂಡು ಅದರಿಂದ ಬೇರೆ ಬೇರೆಯಾಗಿ ತನ್ನನ್ನೂ ಯಾಗೋಪ ಯುಕ್ತಪದಾರ್ಥಗಳನ್ನೂ ಪ್ರೋಕ್ಷಣೆಮಾಡಿಕೊಳ್ಳಬೇಕು.

೭-೯. ತನ್ನ ಮುಂದೆ ಎಡಭಾಗದಲ್ಲಿ ತ್ರಿಕೋಣವನ್ನೊಳಗೊಂಡಿರುವ ಷಟ್ಕೋಣವನ್ನು ರಚಿಸಬೇಕು. ಅದನ್ನು ಚದರಮಂಡಲದಿಂದ ಸುತ್ತುಗಟ್ಟಿ, ಅರ್ಘ್ಯೋದಕದಿಂದ ಶೋಧಿಸಿ ಎಂದರೆ ಪ್ರೋಕ್ಷಿಸಿ, ತರುವಾಯ ಸಾಧಕ ಶ್ರೇಷ್ಠನು ಶಂಖಮುದ್ರೆಯನ್ನು ಪ್ರದರ್ಶಿಸಿ ಆಗ್ನೇಯ ನೈಋತ್ಯ ಮುಂತಾದ ನಾಲ್ಕು ಕೋಣಗಳಲ್ಲಿ ಹೃದಯಾದಿ ಅಂಗಚತುಷ್ಟಯ, ಮಧ್ಯದಲ್ಲಿ ಕಣ್ಣು, ದಿಕ್ಕುಗಳಲ್ಲಿ ಅಸ್ತ್ರ ಇವುಗಳನ್ನು ಸ್ತಂಭನಮಾಡಬೇಕು. ಅನಂತರ ತ್ರಿಕೋಣದ ಮಧ್ಯದಲ್ಲಿರುವ ಆಧಾರಶಕ್ತಿಯನ್ನು ಮೂಲ ಮಂತ್ರದ ಮೂರು ಭಾಗಗಳಿಂದ ಪೂಜಿಸಬೇಕು.

**ಏವಂ ಸಂಪೂಜ್ಯ ವಿಧಿವದಸ್ತ್ರಸಂಕ್ಷಾಲಿತಂ ಹೃದಾ ।**
**ಪ್ರತಿಷ್ಠಾಪ್ಯ ತ್ರಿಪದಿಕಾಂ ಪೂಜಯೇನ್ಮನುನಾಽಮುನಾ ॥ ೧೦ ॥**

**ಮಂ ವಹ್ನಿಮಂಡಲಾಯೇತಿ ತತೋ ದಶಕಲಾತ್ಮನೇ ।**
**ಅಮುಕಾರ್ಘ್ಯೇತಿ ಪಾತ್ರಾಂತೇ ಸನಾಯ ನಮ ಇತ್ಯಪಿ ॥ ೧೧ ॥**

**ಚತುರ್ವಿಂಶತಿವರ್ಣೋಽಯಮಾಧಾರಸ್ಯಾರ್ಚನೇ ಮನುಃ ।**
**ಸ್ವಮಂತ್ರಕ್ಷಾಲಿತಂ ಶಂಖಂ ಸಂಸ್ಥಾಪ್ಯಾಥ ಸಮರ್ಚಯೇತ್ ॥ ೧೨ ॥**

**ತಾರಃ ಕಾಮೋ ಮಹಾಂತೇ ತು ತತೋ ಜಲಚರಾಯ ಚ ।**
**ವರ್ಮೇತಿ ಫಟ್ ಸ್ವಾಹಾ ಪಾಂಚಜನ್ಯಾಯ ಹೃನ್ಮನುಃ ॥ ೧೩ ॥**

---

೧೦, ಈರೀತಿ ಪೂಜಿಸಿ ವಿಧಿವತ್ತಾಗಿ ಅಸ್ತ್ರಮಂತ್ರದಿಂದ ಶೋಧಿತವಾದುದನ್ನು 'ನಮಃ' ಎಂಬುದರಿಂದ ಪ್ರತಿಷ್ಠೆಮಾಡಿ ಈ ಮಂತ್ರದಿಂದ ಪೂಜಿಸಬೇಕು.

೧೧-೧೨. ಆದಿಯಲ್ಲಿ "ಮಂ ವಹ್ನಿಮಂಡಲಾಯ" ಎಂಬುದಾಗಿ ಅನಂತರ "ದಶಕಲಾತ್ಮನೇ" ಎಂದೂ, ಕೊನೆಯಲ್ಲಿ "ಅಮುಕಾರ್ಘ್ಯಪಾತ್ರಾಸನಾಯ ನಮಃ" ಎಂದೂ ಸಂಯೋಜನೆಮಾಡುವುದರಿಂದ ನಿಷ್ಪನ್ನವಾಗುವ "ಮಂ ವಹ್ನಿಮಂಡಲಾತ್ಮನೇ ಅಮುಕಾರ್ಘ್ಯಪಾತ್ರಾಸನಾಯ ನಮಃ" ಎಂಬ ಇಪ್ಪತ್ತುನಾಲ್ಕು ಅಕ್ಷರಗಳ ಮಂತ್ರವನ್ನು ಆಧಾರಶಕ್ತಿಪೂಜೆಗೆ ವಿನಿಯೋಗಿಸಬೇಕು.

೧೨-೧೩. ಅನಂತರ ಸ್ವಮಂತ್ರದಿಂದ ಶೋಧಿಸಲ್ಪಟ್ಟ ಶಂಖವನ್ನು ಸ್ಥಾಪಿಸಿ ಪೂಜಿಸಬೇಕು. ಮಂತ್ರ :—(ತಾರ=ಓಂ, ಕಾಮ=ಕ್ಲೀಂ, ವರ್ಮ=ಹುಂ, ಹೃತ್=ನಮಃ) "ಓಂ ಕ್ಲೀಂ ಮಹಾಜಲಚರಾಯ ಹುಂ ಫಟ್ ಸ್ವಾಹಾ ಪಾಂಚಜನ್ಯಾಯ ನಮಃ" ಎಂಬುದೇ ಶಂಖಮಂತ್ರವು. ಇದನ್ನು ಹೇಳಿ ಶಂಖವನ್ನು ತೊಳೆಯಬೇಕು.

ಅಂ ಸೂರ್ಯಮಂಡಲಾಯೇತಿ ದ್ವಾದಶಾಂತೇ ಕಲಾತ್ಮನೇ |
ಅಮುಕಾರ್ಘ್ಯೇತಿ ಪಾತ್ರಾಯ ನಮೋಂತಸ್ತ್ರ್ಯಕ್ಷಿವರ್ಣವಾನ್ || ೧೪ ||

ಸಂಪೂಜ್ಯ ತೇನ ತತ್ರಾರ್ಚೇದ್ದ್ವಾದಶಾರ್ಕಕಲಾಃ ಕ್ರಮಾತ್ |
ತತಃ ಶುದ್ಧಜಲೈರ್ಮೂಲಂ ವಿಲೋಮಮಾತೃಕಾಂ ಪಠನ್ || ೧೫ ||

ಶಂಖಮಾಪೂರಯೇತ್ತಸ್ಮಿನ್ಪೂಜಯೇನ್ಮನುನಾಮುನಾ |
ಓಂ ಸೋಮಮಂಡಲಾಯೇತಿ ಷೋಡಶಾಂತೇ ಕಲಾತ್ಮನೇ || ೧೬ ||

ಅಮುಕಾರ್ಘ್ಯಾಮೃತಾಯೇತಿ ಹೃನ್ಮನುಶ್ಚಾರ್ಘ್ಯಪೂಜನೇ |
ತತ್ರ ಷೋಡಶಸಂಖ್ಯಾಕಾ ಯಜೇಚ್ಚಂದ್ರಮಸಃ ಕಲಾಃ | || ೧೭ ||

ತತಸ್ತು ತೀರ್ಥಾನ್ಯಾವಾಹ್ಯ ಗಂಗೇ ಚೇತ್ಯಾದಿ ಪೂರ್ವವತ್ |
ಗೋಮುದ್ರಯಾಮೃತೀಕೃತ್ಯಾಚ್ಛಾದಯೇನ್ಮತ್ಸ್ಯಮುದ್ರಯಾ || ೧೮ ||

---

೧೪. "ಅಂ ಸೂರ್ಯಮಂಡಲಾಯ ದ್ವಾದಶಕಲಾತ್ಮನೇ ಅಮುಕಾರ್ಘ್ಯ ಪಾತ್ರಾಯ ನಮಃ" ಎಂಬ ಇಪ್ಪತ್ತುಮೂರು ಅಕ್ಷರಗಳ ಮಂತ್ರವು ಶಂಖ ಸ್ಥಾಪನಮಂತ್ರವು.

೧೫-೧೭. ಆ ಮಂತ್ರವನ್ನು ಹೇಳಿ ಮಂಡಲವನ್ನು ಪೂಜಿಸಿ ಅಲ್ಲಿ ಸೂರ್ಯನ ಹನ್ನೆರಡು ಕಲೆಗಳನ್ನು ಕ್ರಮವಾಗಿ ಪೂಜಿಸಬೇಕು. ಅನಂತರ ಮೂಲಮಂತ್ರ, ವಿಲೋಮಕ್ರಮದಿಂದ ಮಾತೃಕಾಮಂತ್ರ ಇವುಗಳನ್ನು ಪಠನ ಮಾಡುತ್ತಾ ಶುದ್ಧೋದಕಗಳಿಂದ ಶಂಖವನ್ನು ಪೂರ್ಣಮಾಡಿ ಅದರಲ್ಲಿ ಈ ಮಂತ್ರ (ಮುಂದೆ ಹೇಳುವ ಮಂತ್ರ) ದಿಂದ ಅರ್ಘ್ಯವನ್ನು ಪೂಜಿಸಬೇಕು. ಮಂತ್ರ :—"ಓಂ ಸೋಮಮಂಡಲಾಯ ಷೋಡಶಕಲಾತ್ಮನೇ ಅಮುಕಾರ್ಘ್ಯಾ ಮೃತಾಯ ನಮಃ" ಎಂಬುದೇ ಅರ್ಘ್ಯಪೂಜೆಮಾಡುವ ಮಂತ್ರವು. ಅಲ್ಲಿ ಚಂದ್ರನ ಹದಿನಾರು ಕಲೆಗಳನ್ನು ಪೂಜಿಸಬೇಕು.

೧೮. ತರುವಾಯ ಹಿಂದಿನಂತೆ "ಗಂಗೇ ಚ ಯಮುನೇ" ಇತ್ಯಾದಿ ಮಂತ್ರಗಳಿಂದ ತೀರ್ಥಗಳನ್ನು ಆವಾಹನೆ ಮಾಡಿ ಗೋಮುದ್ರೆಯನ್ನು ಪ್ರದರ್ಶಿಸಿ, ಅಮೃತವನ್ನಾಗಿ ಮಾಡಿ ಮತ್ಸ್ಯಮುದ್ರೆಯನ್ನು ತೋರಿಸಿ ಜಲ ವನ್ನು ಮುಚ್ಚಬೇಕು.

ಕವಚೇನಾವಗುಂಠ್ಯಾಥ ರಕ್ಷೇದಸ್ತ್ರೇಣ ತತ್ಪುನಃ ।
ಚಿಂತಯಿತ್ವೇಷ್ಟದೇವಂ ಚ ತತೋ ಮುದ್ರಾಃ ಪ್ರದರ್ಶಯೇತ್ ॥ ೧೯ ॥

ಶಂಖಮೌಸಲಚಕ್ರಾಖ್ಯಾಃ ಪರಮೀಕರಣಂ ತತಃ ।
ಮಹಾಮುದ್ರಾಂ ಯೋನಿಮುದ್ರಾಂ ದರ್ಶಯೇತ್ಕ್ರಮತಃ ಸುಧೀಃ॥ ೨೦ ॥

ಗಾರುಡೀ ಗಾಲಿನೀ ಚೈವ ಮುಖ್ಯೇ ಮುದ್ರೇ ಪ್ರಕೀರ್ತಿತೇ ।
ಗಂಧಪುಷ್ಪಾದಿಭಿಸ್ತತ್ರ ಪೂಜಯೇದ್ದೇವತಾಂ ಸ್ಮರನ್ ॥ ೨೧ ॥

ಅಷ್ಟಕೃತ್ವೋ ಜಪೇನ್ಮೂಲಂ ಪ್ರಣವಂ ಚಾಷ್ಟಧಾ ತಥಾ ।
ಶಂಖಾದ್ದಕ್ಷಿಣದಿಗ್ಭಾಗೇ ಪ್ರೋಕ್ಷಣೀ ಪಾತ್ರಮಾದಿಶೇತ್ ॥ ೨೨ ॥

ಪ್ರೋಕ್ಷಿಣ್ಯಾಂ ತಜ್ಜಲಂ ಕಿಂಚಿದ್ಧೃತ್ವಾತ್ಮಾನಂ ತ್ರಿಧಾ ತತಃ ।
ಆತ್ಮತತ್ತ್ವಾತ್ಮನೇ ಹೃಚ್ಚ ವಿದ್ಯಾತತ್ತ್ವಾತ್ಮನೇ ನಮಃ ॥ ೨೩ ॥

---

೧೯-೨೦. ಅದನ್ನು 'ಹುಂ' ಎಂದು ಹೇಳಿ ಅವಗುಂಠನಮಾಡಿ ಆಮೇಲೆ ಪುನಃ 'ಫಟ್' ಎನ್ನುವುದರಿಂದ ರಕ್ಷಿಸಬೇಕು. ಬಳಿಕ ಇಷ್ಟದೇವತೆಯನ್ನು ಧ್ಯಾನಿಸಿ, ತರುವಾಯ ಜ್ಞಾನಿಯು ಶಂಖ, ಮೌಸಲ, ಚಕ್ರಗಳೆಂಬ ಮುದ್ರೆಗಳನ್ನು ತೋರಿಸಿ ಕೈಬೆರಳುಗಳನ್ನು ಗ್ರಥನಮಾಡಿ ಮಹಾಮುದ್ರೆ ಮತ್ತು ಯೋನಿಮುದ್ರೆಗಳನ್ನು ಕ್ರಮವಾಗಿ ತೋರಿಸಬೇಕು.

೨೧. ಮುದ್ರೆಗಳಲ್ಲಿ ಗಾರುಡೀ ಮತ್ತು ಗಾಲಿನೀ ಎಂಬ ಮುದ್ರೆಗಳು ಮುಖ್ಯಮುದ್ರೆಗಳೆಂದು ಉಕ್ತವಾಗಿದೆ. ಅದರಲ್ಲಿ ದೇವತೆಯನ್ನು ಚಿಂತಿಸಿ ಗಂಧ, ಪುಷ್ಪ ಮುಂತಾದುವುಗಳಿಂದ ಪೂಜೆಮಾಡಬೇಕು.

೨೨ ಮೂಲಮಂತ್ರ ಮತ್ತು ಪ್ರಣವಮಂತ್ರಗಳನ್ನು ಎಂಟೆಂಟುಬಾರಿ ಜಪಿಸಬೇಕು. ಶಂಖದ ದಕ್ಷಿಣದಿಕ್ಕಿನಲ್ಲಿ ಪ್ರೋಕ್ಷಣೀ ಪಾತ್ರೆಯನ್ನು ಸ್ಥಾಪಿಸಬೇಕು.

೨೩-೨೪. ಪ್ರೋಕ್ಷಣೀ ಪಾತ್ರೆಯಲ್ಲಿನ ಉದಕವನ್ನು ಸ್ವಲ್ಪ ತೆಗೆದುಕೊಂಡು "ಆತ್ಮ ತತ್ತ್ವಾತ್ಮನೇ ನಮಃ, ವಿದ್ಯಾತತ್ತ್ವಾತ್ಮನೇ ನಮಃ, ಶಿವತತ್ತ್ವಾ

ಶಿವತತ್ವಾತ್ಮನೇ ಹೃಚ್ಚ ಇತ್ಯೇತೈರ್ಮನುಭಿಸ್ತ್ರಿಭಿಃ ।
ಪ್ರೋಕ್ಷೇತ್ಪುಷ್ಪಾಕ್ಷತಾಂಶ್ಚಾಪಿ ಮಂಡಲಂ ವಿಧಿವತ್ಸುಧೀಃ　　॥ ೨೪ ॥

ಅಥವಾ ಮೂಲಗಾಯತ್ರ್ಯಾ ಪೂಜಾದ್ರವ್ಯಾಣಿ ಪ್ರೋಕ್ಷಯೇತ್ ।
ಪಾದ್ಯಾರ್ಘ್ಯಾಚಮನೀಯಾರ್ಥಂ ಮಧುಪರ್ಕಾರ್ಥಮಪ್ಯುತ　　॥ ೨೫ ॥

ಪಾತ್ರಾಣ್ಯಾಧಾರಯುಕ್ತಾನಿ ಸ್ಥಾಪಯೇದ್ವಿಧಿನಾ ಪುರಃ
ಪಾದ್ಯಂ ಶ್ಯಾಮಾಕದೂರ್ವಾಬ್ಜವಿಷ್ಣುಕ್ರಾಂತಜಲೈಃ ಸ್ಮೃತಂ　　॥ ೨೬ ॥

ಅರ್ಘ್ಯಂ ಪುಷ್ಪಾಕ್ಷತಯವೈಃ ಕುಶಾಗ್ರತಿಲಸರ್ಷಪೈಃ ।
ಗಂಧದೂರ್ವಾದಲೈಃ ಪ್ರೋಕ್ತಂ ತತಶ್ಚಾಚಮನೀಯಕಂ　　॥ ೨೭ ॥

ಜಾತೀಫಲಂ ಚ ಕಂಕೋಲಂ ಲವಂಗಂ ಚ ಜಲಾನ್ವಿತಂ ।
ಕ್ಷೌದ್ರಾಜ್ಯದಧಿಸಂಮಿಶ್ರಂ ಮಧುಪರ್ಕಂ ಸಮೀರಿತಂ　　॥ ೨೮ ॥

---

ತ್ಮನೇ ನಮಃ'' ಎಂಬೀ ಮೂರು ಮಂತ್ರಗಳಿಂದ ತನ್ನನ್ನೂ, ಪುಷ್ಪಾಕ್ಷತೆಗಳನ್ನೂ, ಮಂಡಲವನ್ನೂ ಸಹ ವಿಧಿವತ್ತಾಗಿ ಮೂರಾವರ್ತಿ ಪ್ರೋಕ್ಷಿಸಬೇಕು.

೨೫-೨೬. ಅಥವಾ ಮೂಲ ಗಾಯತ್ರೀ ಮಂತ್ರದಿಂದ ಪೂಜೋಪಯುಕ್ತ ಪದಾರ್ಥಗಳನ್ನು ಪ್ರೋಕ್ಷಿಸಬೇಕು. ಮುಂಭಾಗದಲ್ಲಿ ಪಾದ್ಯ ಅರ್ಘ್ಯ, ಆಚಮನೀಯ ಮತ್ತು ಮಧುಪರ್ಕಗಳಿಗಾಗಿ ಆಧಾರಯುಕ್ತಗಳಾದ ಪಾತ್ರೆಗಳನ್ನು ಸ್ಥಾಪನೆಮಾಡಬೇಕು.

೨೬-೨೭. ಸಾವೆ, ಗರಿಕೆ, ಕಮಲ, ವಿಷ್ಣುಕ್ರಾಂತ ಇವುಗಳಿಂದ ಸಹಿತವಾದ ನೀರನ್ನು ಪಾದ್ಯಕ್ಕೂ, ಹೂವು, ಅಕ್ಷತೆ, ಯವ, ದರ್ಭೆಯ ಅಗ್ರಭಾಗ, ಎಳ್ಳು, ಸಾಸುವೆ, ಗಂಧ, ಗರಿಕೆ ಇವುಗಳಿಂದ ಕೂಡಿದ ಜಲವನ್ನು ಅರ್ಘ್ಯಕ್ಕೂ ಉಪಯೋಗಿಸಬೇಕು.

೨೮. ಜಾಜೀಕಾಯಿ, ಮರಿಮುಳ ಚಕ್ಕೆ, ಲವಂಗ ಇವುಗಳಿಂದ ಯುಕ್ತವಾದ ನೀರಿನಿಂದ ಆಚಮನೀಯವನ್ನರ್ಪಿಸಬೇಕು. ಜೇನುತುಪ್ಪ, ತುಪ್ಪ, ಮೊಸರು ಇವುಗಳನ್ನು ಮಿಶ್ರಮಾಡಿ ಮಧುಪರ್ಕವನ್ನು ಮಾಡಬೇಕೆಂದು ಉಕ್ತವಾಗಿದೆ.

ಏಕಸ್ಮಿನ್ನಥವಾ ಪಾತ್ರೇ ಪಾದ್ಯಾದೀನಿ ಪ್ರಕಲ್ಪಯೇತ್ ।
ಶಂಕರಾರ್ಕಾರ್ಚನೇ ತಾಮ್ರಮಯೇನೈವ ಪ್ರಶಸ್ಯತೇ ॥ ೨೯ ॥

ಶ್ವೇತಾ ಕೃಷ್ಣಾಽರುಣಾ ಪೀತಾ ಶ್ಯಾಮಾ ರಕ್ತಾ ಸಿತಾಸಿತಾಃ ।
ರಕ್ತಾಂಬರಾಭಯಕರಾ ಧ್ಯೇಯಾ ಸ್ಯುಃ ಪೀಠಶಕ್ತಯಃ ॥ ೩೦ ॥

ಸ್ವರ್ಣಾದಿಲಿಖಿತೇ ಯಂತ್ರೇ ಸಾಲಗ್ರಾಮೇ ಮಣೌ ತಥಾ ।
ವಿಧಿನಾ ಸ್ಥಾಪಿತಾಯಾಂ ವಾ ಪ್ರತಿಮಾಯಾಂ ಪ್ರಪೂಜಯೇತ್ ॥ ೩೧ ॥

ಅಂಗುಷ್ಠಾದಿ ವಿತಸ್ತ್ಯಂತಮಾನಾ ಸ್ವರ್ಣಾದಿಧಾತುಭಿಃ ।
ನಿರ್ಮಿತಾ ಶುಭದಾ ಗೇಹೇ ಪೂಜನಾಯ ದಿನೇ ದಿನೇ ॥ ೩೨ ॥

ವಕ್ರಾಂ ದಗ್ಧಾಂ ಖಂಡಿತಾಂ ಚ ಭಿನ್ನಮೂರ್ಧದೃಶಂ ಪುನಃ ।
ಸ್ಪೃಷ್ಟಾಂ ಪಾಪ್ಯಂತಜಾದ್ಯೈಶ್ಚ ಪ್ರತಿಮಾಂ ನೈವ ಪೂಜಯೇತ್ ॥ ೩೩ ॥

---

೨೯. ಅಥವಾ ಒಂದೇ ಪಾತ್ರೆಯಲ್ಲಿಯಾದರೂ ಪಾದ್ಯಾದಿಗಳನ್ನು ಕಲ್ಪಿಸಬೇಕು. ಈಶ್ವರ ಮತ್ತು ಸೂರ್ಯದೇವನ ಪೂಜೆಗೆ ತಾಮ್ರಪಾತ್ರೆಯೇ ಪ್ರಶಸ್ತವು.

೩೦. ಶ್ವೇತಾ, ಕೃಷ್ಣಾ, ಅರುಣಾ, ಪೀತಾ, ಶ್ಯಾಮಾ, ರಕ್ತಾ, ಸಿತಾ, ಅಸಿತಾ, ರಕ್ತಾಂಬರಾ, ಅಭಯಕರಾ ಎಂಬ ಪೀಠಶಕ್ತಿಗಳನ್ನು ಧ್ಯಾನಿಸಬೇಕು.

೩೧. ಬಂಗಾರ ಮುಂತಾದ ಲೋಹದಲ್ಲಿ ಲಿಖಿತವಾದ ಯಂತ್ರ, ಸಾಲಗ್ರಾಮಮಣಿ ಮತ್ತು ವಿಧಾನೋಕ್ತ ಪ್ರಕಾರದಿಂದ ಪ್ರತಿಷ್ಠೆಮಾಡಲ್ಪಟ್ಟ ಪ್ರತಿಮೆ ಇವುಗಳಲ್ಲಿ ಪೂಜೆಮಾಡಬೇಕು.

೩೨. ಹೆಬ್ಬೆರಳಿನಿಂದ ಗೇಣುದ್ದದವರೆಗಿನ, ಸುವರ್ಣ ಮುಂತಾದ ಧಾತುಗಳಿಂದ ಮಾಡಿದ ಪ್ರತಿಮೆಗಳನ್ನು ಮನೆಗಳಲ್ಲಿ ಪ್ರತಿದಿನವೂ ಪೂಜೆ ಮಾಡುವುದು ಮಂಗಳಕರವು.

೩೩. ವಕ್ರವಾಗಿರುವ, ಸುಟ್ಟಿರುವ, ಒಡೆದಿರುವ, ಶಿರಸ್ಸು ಕಣ್ಣು ಮುಂತಾದ ಅವಯವಗಳು ಭಿನ್ನವಾಗಿರುವ ಮತ್ತು ಚಂಡಾಲ ಮುಂತಾದವರಿಂದ ಸ್ಪರ್ಶಮಾಡಲ್ಪಟ್ಟ ಪ್ರತಿಮೆಯನ್ನು ಪೂಜಿಸಬಾರದು.

ಬಾಣಾದಿಲಿಂಗೇ ವಾಭ್ಯರ್ಚೇತ್ಸರ್ವಲಕ್ಷಣಲಕ್ಷಿತೇ ।
ಮೂಲೇನ ಮೂರ್ತಿಂ ಸಂಕಲ್ಪ್ಯ ಧ್ಯಾತ್ವಾ ದೇವಂ ಯಥೋದಿತಂ ॥ ೩೪ ॥

ಆವಾಹ್ಯ ಪೂಜಯೇತ್ತಸ್ಯಾಂ ಪರಿವಾರಗಣೈಃ ಸಹ ।
ಸಾಲಗ್ರಾಮೇ ಸ್ಥಾಪಿತಾಯಾಂ ನಾವಾಹನವಿಸರ್ಜನೇ ॥ ೩೫ ॥

ಪುಷ್ಪಾಂಜಲಿಂ ಸಮಾಧಾಯ ಧ್ಯಾತ್ವಾ ಮಂತ್ರಮುದೀರಯೇತ್ ।
ಆತ್ಮಸಂಸ್ಥಮಜಂ ಶುದ್ಧಂ ತ್ವಾಮಹಂ ಪರಮೇಶ್ವರ ॥ ೩೬ ॥

ಅರಣ್ಯಾಮಿವ ಹವ್ಯಾಶಂ ಮೂರ್ತಾವಾವಾಹಯಾಮ್ಯಹಂ ।
ತವೇಯಂ ಮಹಿಮಾ ಮೂರ್ತಿಸ್ತಸ್ಯಾಂ ತ್ವಾಂ ಸರ್ವಗಂ ಪ್ರಭೋ ॥೩೭॥

ಭಕ್ತಿಸ್ನೇಹಸಮಾಕೃಷ್ಟಾಂ ದೀಪವತ್ಸ್ಥಾಪಯಾಮ್ಯಹಂ ।
ಸರ್ವಾಂತರ್ಯಾಮಿಣೇ ದೇವ ಸರ್ವಬೀಜಮಯಂ ಶುಭಂ ॥ ೩೮ ॥

---

೩೪. ಸಕಲ ಲಕ್ಷಣಗಳಿಂದ ಯುಕ್ತವಾದ ಪಂಚಾಯತನಗಳಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸಂಕಲ್ಪಿಸಿ ಯಥೋಕ್ತ ದೇವತೆಯನ್ನು ಧ್ಯಾನಿಸಿ ಪೂಜಿಸಬೇಕು.

೩೫. ಆ ಪ್ರತಿಮೆಯಲ್ಲಿ ದೇವತೆಯನ್ನು ಪರಿವಾರಸಮೂಹಗಳೊಡನೆ ಆವಾಹನೆ ಮಾಡಿ ಪೂಜಿಸಬೇಕು. ಸಾಲಗ್ರಾಮ ಮತ್ತು ವಿಧಾನೋಕ್ತ ಪ್ರಕಾರ ಸ್ಥಾಪಿಸಲ್ಪಟ್ಟ ಪ್ರತಿಮೆ ಇವುಗಳಲ್ಲಿ ದೇವತೆಗಳು ನಿತ್ಯ ಸನ್ನಿಹಿತ ರಾಗಿರುವುದರಿಂದ ಆಗಾಗ ಆವಾಹನೆ, ವಿಸರ್ಜನೆಗಳನ್ನು ಮಾಡಬೇಕಾಗಿಲ್ಲ.

೩೬-೪೧. ಪುಷ್ಪಾಂಜಲಿಯನ್ನು ಹಿಡಿದು ಧ್ಯಾನಿಸಿ, ಮಂತ್ರವನ್ನು ಹೇಳಬೇಕು. ಪರಮೇಶ್ವರನೇ! ಆತ್ಮಾಂತರ್ಗತನು, ಅಜನು, ನಿರ್ದೋಷನೂ, ಅಹೇಯನೂ ಆಗಿರುವ ನಿನ್ನನ್ನು ಈ ಮೂರ್ತಿಯಲ್ಲಿ, ಅರಣಿಯಲ್ಲಿ ಮಥನ ಮಾಡಿ ಅಗ್ನಿಯನ್ನು ಕರೆಯುವಂತೆ ನಾನು ಆವಾಹನೆ ಮಾಡುವೆನು. ಸ್ವಾಮೀ! ಇದು ನಿನ್ನ ಮಾಹಾತ್ಮ್ಯಪೂರಿತವಾದ ಪ್ರತಿಮೆಯು. ಇಲ್ಲಿ ಸರ್ವಗತನಾದ ನಿನ್ನನ್ನು ಭಕ್ತಿಯೆಂಬ ಸ್ನೇಹ (ತೈಲ) ದಿಂದ ಆಕರ್ಷಿಸಿ ದೀಪದಂತೆ ಸ್ಥಾಪಿಸು ವೆನು. ದೇವನೇ! ಸರ್ವಾಂತರ್ಯಾಮಿಯೂ, ಸ್ವಾತ್ಮಸಂಸ್ಥನೂ ಆಗಿರುವ

ಸ್ವಾತ್ಮಸ್ಥಾಯಿ ಪರಂ ಶುದ್ಧಮಾಸನಂ ಕಲ್ಪಯಾಮ್ಯಹಂ ।
ಅನನ್ಯಾ ತವ ದೇವೇಶ ಮೂರ್ತಿಶಕ್ತಿರಿಯಂ ಪ್ರಭೋ ॥ ೩೯ ॥

ಸಾನ್ನಿಧ್ಯಂ ಕುರು ತಸ್ಯಾಂ ತ್ವಂ ಭಕ್ತಾನುಗ್ರಹಕಾರಕ ।
ಅಜ್ಞಾನಾದುನ್ಮತ್ತತ್ವಾದ್ವೈಕಲ್ಯಾತ್ಸಾಧಕಸ್ಯ ಚ ॥ ೪೦ ॥

ಯದ್ಯಪೂರ್ಣಂ ಭವೇತ್ಕಲ್ಪಂ ತಥಾಪ್ಯಭಿಮುಖೋ ಭವ ।
ದೃಶಾ ಪೀಯೂಷವರ್ಷಿಣ್ಯಾ ಪೂರಯನ್ಯಜ್ಞವಿಷ್ಟರೇ ॥ ೪೧ ॥

ಮೂರ್ತೌ ವಾ ಯಜ್ಞಸಂಪೂರ್ತ್ಯೈ ಸ್ಥಿತೋ ಭವ ಮಹೇಶ್ವರ ।
ಅಭಕ್ತವಾಙ್ಮನಶ್ಚಕ್ಷುಃಶ್ರೋತ್ರದೂರಾಯಿತದ್ಯುತೇ ॥ ೪೨ ॥

ಸ್ವತೇಜಃಪಂಜರೇಣಾಶು ವೇಷ್ಟಿತೋ ಭವ ಸರ್ವತಃ ।
ಯಸ್ಯ ದರ್ಶನಮಿಚ್ಛಂತಿ ದೇವಾಃ ಸ್ವಾಭೀಷ್ಟಸಿದ್ಧಯೇ ॥ ೪೩ ॥

ನಿನಗೆ ಸಕಲ ಬೀಜಮಯವೂ, ಮಾಂಗಲಿಕವೂ, ಪರಿಶುದ್ಧವೂ ಆದ ಉತ್ಕೃಷ್ಟಾಸನವನ್ನು ರಚಿಸಿರುವೆನು. ದೇವೇಶ್ವರನಾದ ಪ್ರಭುವೇ! ನಿನ್ನ ಈ ಮೂರ್ತಿಶಕ್ತಿಯು ಅಸಾಧಾರಣವಾದುದು. ಅದರಲ್ಲಿ ಭಕ್ತರಿಗೆ ಅನುಗ್ರಹ ಮಾಡುವವನಾದ ನೀನು ಸನ್ನಿಹಿತನಾಗಬೇಕು. ಸಾಧಕನ ಅಜ್ಞಾನ, ಉನ್ಮತ್ತತೆ, ಅಂಗವೈಕಲ್ಯ ಇವುಗಳಿಂದ ಪೂಜೆಯು ಸಂಪೂರ್ಣವಾಗದೇ ನ್ಯೂನವಾಗಿದ್ದಾಗ್ಯೂ ಅಮೃತವರ್ಷವನ್ನು ಸುರಿಸುವ ದೃಷ್ಟಿಯಿಂದ ಅದನ್ನು ಪೂರ್ಣಗೊಳಿಸುವವನಾಗಿ ಯಜ್ಞಸ್ಥಾನದಲ್ಲಿ ಅಭಿಮುಖನಾಗು.

೪೨. ಭಕ್ತರಲ್ಲದವರ ವಾಕ್ಕು, ಮನಸ್ಸು, ಕಿವಿ, ಕಣ್ಣು ಮುಂತಾದುವುಗಳಿಗೆ ದೂರದಲ್ಲಿರುವಂತೆ ತೋರುತ್ತಿರುವ, ಕಾಂತಿಯುಳ್ಳ ಮಹೇಶ್ವರನೇ! ಪ್ರಾರಂಭಿಸಿರುವ ಯಜ್ಞವನ್ನು ಪೂರ್ತಿಗೊಳಿಸುವವರೆಗಾದರೂ ಈ ಪ್ರತಿಮೆಯಲ್ಲಿ ಸನ್ನಿಹಿತನಾಗಿರು.

೪೩-೪೪. ದೇವತೆಗಳೂ ಸಹ ತಮ್ಮ ಇಷ್ಟಾರ್ಥಸಿದ್ಧಿಗಾಗಿ ಯಾರ ದರ್ಶನವನ್ನು ಅಪೇಕ್ಷಿಸುವರೋ, ಅಂತಹ ಪರಮೇಶ್ವರನಾದ ನಿನಗೆ ಸ್ವಾಗತ

ತಸ್ಮೈ ತೇ ಪರಮೇಶಾಯ ಸ್ವಾಗತಂ ಸ್ವಾಗತಂ ಚ ಮೇ ।
ಕೃತಾರ್ಥೋಽನುಗೃಹೀತೋಽಸ್ಮಿ ಸಫಲಂ ಜೀವಿತಂ ಮಮ ॥ ೪೪ ॥

ಆಗತೋ ದೇವದೇವೇಶ ಸುಖಾಗತಮಿದಂ ಪುನಃ ।
ಯದ್ಭಕ್ತಿಲೇಶಸಂಪರ್ಕಾತ್ಪರಮಾನಂದವಿಗ್ರಹ ॥ ೪೫ ॥

ತಸ್ಮೈ ತೇ ಚರಣಾಬ್ಜಾಯ ಪಾದ್ಯಂ ಶುದ್ಧಾಯ ಕಲ್ಪ್ಯತೇ ।
ವೇದಾನಾಮಪಿ ವೇದಾಯ ದೇವಾನಾಂ ದೇವತಾತ್ಮನೇ ॥ ೪೬ ॥

ಆಚಾಮಂ ಕಲ್ಪಯಾಮೀಶ ಶುದ್ಧಾನಾಂ ಶುದ್ಧಿಹೇತವೇ ।
ತಾಪತ್ರಯಹರಂ ದಿವ್ಯಂ ಪರಮಾನಂದಲಕ್ಷಣಂ ॥ ೪೭ ॥

ತಾಪತ್ರಯವಿನಿರ್ಮುಕ್ತ್ಯೈ ತವಾರ್ಘ್ಯಂ ಕಲ್ಪಯಾಮ್ಯಹಂ ।
ಸರ್ವಕಾಲುಷ್ಯಹೀನಾಯ ಪರಿಪೂರ್ಣಸುಖಾತ್ಮನೇ ॥ ೪೮ ॥

---

ವನ್ನು ಬಯಸುವೆನು. ಆದರಿಂದ ನನಗೂ ಸ್ವಾಗತವಾಗುವುದು. ಕೃತಾರ್ಥನಾಗಿ ಅನುಗೃಹೀತನಾದೆನು. ನನ್ನ ಬದುಕು ಸಫಲವಾಯಿತು.

೪೫. ಪೂರ್ಣಾನಂದಮೂರ್ತಿಯಾದ ದೇವದೇವೇಶನೇ! ನನ್ನ ಅಲ್ಪ ಭಕ್ತಿಗೆ ಮೆಚ್ಚಿ ಬಂದ ನಿನಗೆ ಪುನಃ ಸ್ವಾಗತವನ್ನು ಬಯಸುವೆನು.

೪೬-೪೭. ಅಂತಹ ಪರಿಶುದ್ಧವಾದ ನಿನ್ನ ಚರಣಕಮಲದಲ್ಲಿ ಪಾದ್ಯವನ್ನು ಸಮರ್ಪಿಸುವೆನು. ವೇದಗಳಲ್ಲೆಲ್ಲಾ ಉತ್ಕೃಷ್ಟವೇದರೂಪನು, ದೇವದೇವೋತ್ತಮ ಸ್ವರೂಪನು, ಶುದ್ಧರಿಗೂ ಶುದ್ಧಿಪ್ರದನೂ ಆಗಿರುವ ಸ್ವಾಮಿಯೇ ನಿನಗೆ ಆಚಮನವನ್ನು ಸಮರ್ಪಿಸುವೆನು.

೪೭-೪೮. ಆಧ್ಯಾತ್ಮಿಕಾದಿ ತಾಪತ್ರಯ ಪರಿಹಾರಕವು, ಪರಮಾನಂದ ಸ್ವರೂಪವೂ ಆಗಿರುವ ಅರ್ಘ್ಯೆಯನ್ನು ತಾಪತ್ರಯವನ್ನು ಪರಿಹರಿಸಿಕೊಳ್ಳಲು ನಿನಗೆ ಅರ್ಪಿಸುವೆನು.

೪೮-೪೯. ಸರ್ವದೋಷವಿಹೀನನು, ನಿರವಧಿಕಪೂರ್ಣಸುಖಸ್ವರೂಪನೂ ಆಗಿರುವ ನಿನಗೆ ಈ ಮಧುಪರ್ಕವನ್ನರ್ಪಿಸುವೆನು, ದೇವಾ! ನನಗೆ ಪ್ರಸನ್ನನಾಗು.

ಮಧುಪರ್ಕಮಿದಂ ದೇವ ಕಲ್ಪಯಾಮಿ ಪ್ರಸೀದ ಮೇ ।
ಉಚ್ಛಿಷ್ಟೋಽಪ್ಯಶುಚಿರ್ವಾಪಿ ಯಸ್ಯ ಸ್ಮರಣಮಾತ್ರತಃ ॥ ೪೯ ॥

ಶುದ್ಧಿಮಾಪ್ನೋತಿ ತಸ್ಮೈ ತೇ ಪುನರಾಚಮನೀಯಕಂ ।
ಸ್ನೇಹಂ ಗೃಹಾಣ ಸ್ನೇಹೇನ ಲೋಕನಾಥ ಮಹಾಶಯ ॥ ೫೦ ॥

ಸರ್ವಲೋಕೇಷು ಶುದ್ಧಾತ್ಮನ್ ದದಾಮಿ ಸ್ನೇಹಮುತ್ತಮಂ ।
ಪರಾನಂದಬೋಧಾಬ್ಧಿನಿಮಗ್ನನಿಜಮೂರ್ತಯೇ ॥ ೫೧ ॥

ಸಾಂಗೋಪಾಂಗಮಿದಂ ಸ್ನಾನಂ ಕಲ್ಪಯಾಮ್ಯಹಮೀಶ ತೇ ।
ಸಹಸ್ರಂ ವಾ ಶತಂ ವಾಪಿ ಯಥಾಶಕ್ತ್ಯಾದರೇಣ ಚ ॥ ೫೨ ॥

ಗಂಧಪುಷ್ಪಾದಿಕೈರೀಶಂ ಮನುನಾ ಚಾಭಿಷಿಂಚಯೇತ್ ।
ಮಾಯಾಚಿತ್ರಪಟಚ್ಛನ್ನನಿಜಗುಹ್ಯೋರುತೇಜಸೇ ॥ ೫೩ ॥

---

೪೯-೫೦. ಉಚ್ಛಿಷ್ಟ ಅಥವಾ ಅಶುದ್ಧನಾಗಿದ್ದಾಗ್ಯೂ ಸ್ಮರಣೆಮಾಡುವ ಮಾತ್ರದಿಂದ ಶುದ್ಧಿಯನ್ನು ಉಂಟುಮಾಡುವಂತಹ ಸ್ವಾಮಿಯಾದ ನಿನಗೆ ಪುನಃ ಆಚಮನೀಯವನ್ನು ಸಮರ್ಪಿಸುವೆನು.

೫೦-೫೧. ಜಗದೊಡೆಯನೂ, ಮಹಾನುಭಾವನೂ ಆದ ದೇವನೇ! ನನ್ನ ಭಕ್ತಿಯನ್ನು ಪ್ರೀತಿಯಿಂದ ಸ್ವೀಕರಿಸು. ಜಗತ್ತಿನಲ್ಲೆಲ್ಲಾ ಪ್ರಸಿದ್ಧನಾದ ಸ್ವಾಮಿಯೇ! ನಿನಗೆ ಉತ್ತಮವಾದ ಭಕ್ತಿಯನ್ನು ಅರ್ಪಿಸುವೆನು.

೫೧-೫೨. ಸ್ವಾಮಿಯೇ! ಶ್ರೇಷ್ಠವಾದ ಆನಂದ ಜ್ಞಾನಗಳೆಂಬ ಸಮುದ್ರದಲ್ಲಿ ಮುಳುಗಿರುವ ಎಂದರೆ ಜ್ಞಾನಾನಂದಮಯಗಳಾದ ದೇಹಗಳುಳ್ಳ ನಿನಗೆ ಅಂಗೋಪಾಂಗಸಹಿತವಾದ ಈ ಸ್ನಾನವನ್ನರ್ಪಿಸುವೆನು.

೫೨-೫೩. ತನ್ನ ಶಕ್ತ್ಯನುಸಾರ ಭಕ್ತಿಯಿಂದ ಸಾವಿರ ಅಥವಾ ನೂರಾವರ್ತಿಯಾದರೂ ಮಂತ್ರಹೇಳುತ್ತಾ ಗಂಧ ಪುಷ್ಪಾದಿಗಳಿಂದ, ಈಶ್ವರನಿಗೆ ಅಭಿಷೇಕ ಮಾಡಬೇಕು.

೫೩-೫೪. ಆವರಣವಿಲ್ಲದ ವಿಜ್ಞಾನವೆಂಬ ವಸ್ತ್ರಧಾರಿಯೇ! ಮಾಯೆ

ನಿರಾವರಣವಿಜ್ಞಾನವಾಸಸ್ತೇ ಕಲ್ಪಯಾಮ್ಯಹಂ ।
ಯಮಾಶ್ರಿತ್ಯ ಮಹಾಮಾಯಾ ಜಗತ್ಸಂಮೋಹಿನೀ ಸದಾ ॥ ೫೪ ॥

ತಸ್ಮೈ ತೇ ಪರಮೇಶಾಯ ಕಲ್ಪಯಾಮ್ಯುತ್ತರೀಯಕಂ ।
ರಕ್ತಂ ಶಕ್ತ್ಯರ್ಕವಿಘ್ನೇಷು ಪೀತಂ ವಿಷ್ಣೌ ಸಿತಂ ಶಿವೇ ॥ ೫೫ ॥

ತೈಲಾದಿ ದೂಷಿತಂ ಜೀರ್ಣಂ ಸಚ್ಛಿದ್ರಂ ಮಲಿನಂ ತ್ಯಜೇತ್ ।
ಯಸ್ಯ ಶಕ್ತಿತ್ರಯೇಣೇದಂ ಸಂಪ್ರೀತಮಖಿಲಂ ಜಗತ್ ॥ ೫೬ ॥

ಯಜ್ಞಸೂತ್ರಾಯ ತಸ್ಮೈ ತೇ ಯಜ್ಞಸೂತ್ರಂ ಪ್ರಕಲ್ಪಯೇ ।
ಸ್ವಭಾವಸುಂದರಾಂಗಾಯ ನಾನಾಶಕ್ತ್ಯಾಶ್ರಯಾಯ ತೇ ॥ ೫೭ ॥

ಭೂಷಣಾನಿ ವಿಚಿತ್ರಾಣಿ ಕಲ್ಪಯಾಮ್ಯಮರಾರ್ಚಿತ ।
ಪರಮಾನಂದಸೌರಭ್ಯಪರಿಪೂರ್ಣದಿಗಂತರಂ ॥ ೫೮ ॥

---

ಯೆಂಬ ಚಿತ್ರಪಟದಿಂದ ಆಚ್ಛಾದಿತವೂ, ಗೋಪ್ಯ ಮತ್ತು ಉತ್ಕೃಷ್ಟವೂ ಆದ ಆತ್ಮತೇಜಸ್ಸುಳ್ಳ ನಿನಗೆ ವಸ್ತ್ರವನ್ನರ್ಪಿಸುವೆನು.

೫೪-೫೫. ಯಾರನ್ನಾಶ್ರಯಿಸಿ ಮಹಾಮಾಯೆಯು ನಿರಂತರ ಜಗನ್ಮೋಹಕಳಾಗುವಳೋ, ಅಂತಹ ಪರಮೇಶ್ವರನಾದ ನಿನಗೆ ಉತ್ತರೀಯವನ್ನು ಅರ್ಪಿಸುವೆನು. ಶಕ್ತಿ ಅಥವಾ ಸೂರ್ಯ ಇಲ್ಲವೇ ಗಣಪತಿ ಇವರುಗಳಿಗೆ ಕೆಂಪು ವಸ್ತ್ರವನ್ನೂ, ವಿಷ್ಣುವಿಗೆ ಹಳದಿಯದನ್ನೂ, ರುದ್ರನಿಗೆ ಬಿಳಿಯದನ್ನೂ ಸಮರ್ಪಿಸಬೇಕು.

೫೬-೫೭. ಎಣ್ಣೆ ಮುಂತಾದುವುಗಳಿಂದ ಕಲುಷಿತವು, ಹಳೆಯದು, ತೂತಾಗಿರುವುದು ಮತ್ತು ಕೊಳೆಯಾಗಿರುವ ವಸ್ತ್ರವನ್ನು ದೇವರಿಗೆ ಅರ್ಪಿಸಬಾರದು. ಈ ಸಕಲ ಲೋಕವೂ ಯಾರ ಶಕ್ತಿತ್ರಯದಿಂದ ಸಂತೋಷಿಸುವುದೋ, ಅಂತಹ "ಯಜ್ಞಸೂತ್ರ" ನಾಮಕನಾದ ನಿನಗೆ ಯಜ್ಞೋಪವೀತವನ್ನರ್ಪಿಸುವೆನು.

೫೭-೫೮. ದೇವಪೂಜಿತನೇ! ಸ್ವಾಭಾವಿಕವಾಗಿ ಸುಂದರವಾದ ಅವಯವಗಳುಳ್ಳ, ನಾನಾ ಶಕ್ತಿಗಳಿಗಾಧಾರಭೂತನಾದ ನಿನಗೆ, ವಿಚಿತ್ರಾಭರಣಗಳನ್ನು ಸಮರ್ಪಿಸುವೆನು.

ಗೃಹಾಣ ಪರಮಂ ಗಂಧಂ ಕೃಪಯಾ ಪರಮೇಶ್ವರ ।
ತುರೀಯವನಸಂಭೂತಂ ನಾನಾಗುಣಮನೋಹರಂ ॥ ೫೯ ॥

ಅಮಂದಸೌರಭಂ ಪುಷ್ಪಂ ಗೃಹ್ಯತಾಮಿದಮುತ್ತಮಂ ।
ಅಕ್ಷತಾನರ್ಕಧತ್ತೂರೌ ವಿಷ್ಣೋರ್ನೈವಾರ್ಚಯೇತ್ಕ್ವಚಿತ್ ॥ ೬೦ ॥

ಕೇತಕೀಂ ಕುಟಜಂ ಕುಂದಂ ಬಂಧೂಕಂ ಕೇಸರಂ ಜಪಾಂ ।
ಮಾಲತೀಪುಷ್ಪಕಂ ಚೈವ ನಾರ್ಚಯೇತ್ತು ಮಹೇಶ್ವರೇ ॥ ೬೧ ॥

ಮಾತುಲಿಂಗಂ ಚ ತಗರಂ ರವೌ ನೈವಾರ್ಚಯೇತ್ಕ್ವಚಿತ್ ।
ಶಕ್ತ್ಯಾ ದೂರ್ವಾರ್ಕಮಂದಾರಾನ್ಗಣೇಶೇ ತುಲಸೀಂ ತ್ಯಜೇತ್ ॥ ೬೨ ॥

ಸರೋಜಿನೀ ದಮನಕಾ ತಥಾ ಮರುಬಕಾಃ ಕುಶಃ ।
ವಿಷ್ಣುಕ್ರಾಂತಾ ನಾಗವಲ್ಲೀ ದೂರ್ವಾಪಾಮಾರ್ಗದಾಡಿಮಾ ॥ ೬೩ ॥

ಧಾತ್ರೀ ಮುನಿಯುತಾನಾಂ ಚ ಪತ್ರೈರ್ದೇವಾರ್ಚನಂ ಚರೇತ್ ।
ಕದಲೀ ಬದರೀ ಧಾತ್ರೀ ತಿಂತ್ರಿಣೀ ಬೀಜಪೂರ್ವಕಂ ॥ ೬೪ ॥

---

೫೮-೫೯. ಪರಮೇಶ್ವರ! ಪರಮ ಸಂತೋಷಕರವಾದ, ಸುವಾಸನೆಯಿಂದ ದಿಕ್ಕುಗಳನ್ನು ತುಂಬಿಸುತ್ತಿರುವ ಉತ್ಕೃಷ್ಟ ಗಂಧವನ್ನು ದಯೆಯಿಂದ ಸ್ವೀಕರಿಸು.

೫೯-೬೦. ತುರೀಯವನದಲ್ಲಿ ಹುಟ್ಟಿದ ಬಹುಗುಣಗಳಿಂದ ಮನೋಹರವೂ, ಸಂಪೂರ್ಣ ಸುವಾಸನೆಯುಳ್ಳದೂ ಆಗಿರುವ ಈ ಉತ್ಕೃಷ್ಟ ಪುಷ್ಪವನ್ನು ಸ್ವೀಕರಿಸಬೇಕು. ಅಕ್ಷತೆ, ಎಕ್ಕ ಮತ್ತು ದತ್ತೂರಿ ಹೂಗಳು ಇವುಗಳನ್ನು ಯಾವಾಗಲೂ ವಿಷ್ಣುವಿಗೆ ಪೂಜಿಸಬಾರದು.

೬೧. ಕೇತಕೀ, ಬೆಟ್ಟದ ಮಲ್ಲಿಗೇ. ಮಲ್ಲೀ, ಕೆಂಪು ರೋಜಾ ಅಥವಾ ಬಂದುಗೆ ಹೂವು, ನಾಗಸಂಪಿಗೆ, ದಾಸವಾಳ ಮತ್ತು ಜಾಜೀ ಹೂವುಗಳನ್ನು ರುದ್ರದೇವರಿಗೆ ಪೂಜಿಸಬಾರದು.

೬೨. ಮಾದಾಳ, ತಗರಪುಷ್ಪಗಳನ್ನು ಸೂರ್ಯನಿಗೆ ಯಾವ ಸಂದರ್ಭದಲ್ಲಿಯೂ ಪೂಜೆ ಮಾಡಬಾರದು. ಶಕ್ತಿ ದೇವತೆಗೆ ಗರಿಕೆ, ಎಕ್ಕದೆಲೆಗಳನ್ನು ಪೂಜಿಸಬಾರದು. ಗಣೇಶನಿಗೆ ತುಲಸಿಯನ್ನು ಪೂಜಿಸಬಾರದು.

೬೩-೬೫. ಕಮಲ, ದವನ, ಮರುಗ, ದರ್ಭೆ, ವಿಷ್ಣುಕ್ರಾಂತಿ, ವೀಳೆಯದೆಲೆಯ ಬಳ್ಳಿ, ಗರಿಕೆ, ಉತ್ತರಣೆ, ದಾಳಿಂಬರೆ, ನೆಲ್ಲೀ ಇವುಗಳ ಪತ್ರೆಗಳಿಂದ

ಆಮ್ರದಾಡಿಮುಜಂಬೀರಜಂಬೂಪನಸಭೂರುಹಾಃ ।
ಏತೇಷಾಂ ತು ಫಲೈಃ ಕುರ್ಯಾದ್ದೇವತಾಪೂಜನಂ ಬುಧಃ ॥ ೬೫ ॥

ಶುಷ್ಕೈಸ್ತು ನಾರ್ಚಯೇದ್ದೇವಂ ಪತ್ರೈಃ ಪುಷ್ಪೈಃ ಫಲೈರಪಿ ।
ಧಾತ್ರೀಖದಿರಬಿಲ್ವಾನಾಂ ತಮಾಲಸ್ಯ ದಳಾನಿ ಚ ॥ ೬೬ ॥

ಛಿನ್ನಭಿನ್ನಾನ್ಯಪಿ ಮುನೇ ನ ದೂಷ್ಯಾಣಿ ಜಗುರ್ಬುಧಾಃ ।
ಯಾಮುಮಾಮಲಕಂ ತಿಷ್ಠೇಚ್ಛುದ್ಧಂ ಚೈವ ದಿನತ್ರಯಂ ॥ ೬೭ ॥

ಸರ್ವದಾ ತುಲಸೀ ಶುದ್ಧಾ ಬಿಲ್ವಪತ್ರಾಣಿ ವೈ ತಥಾ ।
ಪಲಾಶಕಾಶಕುಸುಮೈಸ್ತಮಾಲತುಲಸೀದಲೈಃ ॥ ೬೮ ॥

ಧಾತ್ರೀದಲೈಶ್ಚ ದೂರ್ವಾಭಿರ್ನಾರ್ಚಯೇಜ್ಜಗದಂಬಿಕಾಂ ।
ನಾರ್ಚಯೇತ್ಕುಸುಮಂ ಪತ್ರಂ ಫಲಂ ದೇವೇ ಹ್ಯಧೋಮುಖಂ ॥ ೬೯ ॥

---

ದೇವರ ಪೂಜೆಯನ್ನು ಮಾಡಬೇಕು. ಜ್ಞಾನಿಯು ಬಾಳೆ, ಬೋರೆ, ನೆಲ್ಲೀ, ಕಿತ್ತಳೇ, ಮಾದಾಳ, ಮಾವು, ದಾಳಿಂಬರೆ, ನಿಂಬೆ, ನೇರಳೇ, ಹಲಸು ಇವುಗಳ ಹಣ್ಣಿನಿಂದ ದೇವರ ಪೂಜೆಯನ್ನು ಮಾಡಬೇಕು.

೬೬-೬೭. ಒಣಗಿದ ಪತ್ರೆ, ಫಲ, ಪುಷ್ಪ ಇವುಗಳಿಂದ ದೇವರನ್ನು ಪೂಜಿಸಬಾರದು. ನೆಲ್ಲೀ, ಖದಿರ (ಕಗ್ಗಲೀ) ಬಿಲ್ವ ಮತ್ತು ತಮಾಲದ ದಳಗಳು ಚೂರು ಚೂರಾದಾಗ್ಯೂ ಅವು ನಿಂದ್ಯವಲ್ಲವೆಂದು ಜ್ಞಾನಿಗಳು ಹೇಳುತ್ತಾರೆ. ಆಮಲಕವು (ನೆಲ್ಲೀ) ಮೂರು ದಿವಸ ಶುದ್ಧವಾಗಿರುವುದು.

೬೮-೬೯. ತುಲಸೀ ಮತ್ತು ಬಿಲ್ವ ಪತ್ರೆಗಳು ಯಾವಾಗಲೂ ಪರಿಶುದ್ಧವಾಗಿರುತ್ತವೆ. ಮುತ್ತುಗ ಮತ್ತು ಜುಂಡಗಳ ಹೂವು, ತಮಾಲ, ತುಲಸೀ ದಳಗಳು, ನೆಲ್ಲೀ, ಗರಿಕೆ ಇವುಗಳಿಂದ ಜಗದಂಬಿಕೆಯನ್ನು ಪೂಜಿಸಬಾರದು. ಹೂವು ಪತ್ರೆ ಫಲಗಳನ್ನು ಅಧೋಮುಖವಾಗಿ ಎಂದರೆ ತಲೆಕೆಳಗಾಗಿ ದೇವರಿಗೆ ಸಮರ್ಪಿಸಬಾರದು.

ಪುಷ್ಪಪತ್ರಾದಿಕಂ ವಿಪ್ರ ಯಥೋತ್ಪನ್ನಂ ತಥಾರ್ಪಯೇತ್ ।
ವನಸ್ಪತಿರಸಂ ದಿವ್ಯಂ ಗಂಧಾಢ್ಯಂ ಸುಮನೋಹರಂ ॥ ೭೦ ॥

ಆಘ್ರೇಯಂ ದೇವದೇವೇಶ ಧೂಪಂ ಭಕ್ತ್ಯಾ ಗೃಹಾಣ ಮೇ ।
ಸುಪ್ರಕಾಶಂ ಮಹಾದೀಪಂ ಸರ್ವದಾ ತಿಮಿರಾಪಹಂ ॥ ೭೧ ॥

ಘೃತವರ್ತಿಸಮಾಯುಕ್ತಂ ಗೃಹಾಣ ಮಮ ಸತ್ಕೃತಂ ।
ಅನ್ನಂ ಚತುರ್ವಿಧಂ ಸ್ವಾದು ರಸೈಃ ಷಡ್ಭಿಃ ಸಮನ್ವಿತಂ ॥ ೭೨ ॥

ಭಕ್ತ್ಯಾ ಗೃಹಾಣ ಮೇ ದೇವ ನೈವೇದ್ಯಂ ತುಷ್ಟಿದಂ ಸದಾ ।
ನಾಗವಲ್ಲೀದಳಂ ಶ್ರೇಷ್ಠಂ ಪೂಗಖದಿರಚೂರ್ಣಯುಕ್ ॥ ೭೩ ॥

ಕರ್ಪೂರಾದಿಸುಗಂಧಾಢ್ಯಂ ಯದ್ದತ್ತಂ ತದ್ಗೃಹಾಣ ಮೇ ।
ದದ್ಯಾತ್ಪುಷ್ಪಾಂಜಲಿಂ ಪಶ್ಚಾತ್ಕುರ್ಯಾದಾವರಣಾರ್ಚನಂ ॥ ೭೪ ॥

---

೭೦-೭೧. ಬ್ರಾಹ್ಮಣನೇ! ಪುಷ್ಪ, ಪತ್ರೆ ಮುಂತಾದವುಗಳನ್ನು ಅವು ಹುಟ್ಟಿದ ರೀತಿಯಿಂದಲೇ ದೇವರಿಗೆ ಸಮರ್ಪಿಸಬೇಕು. ದೇವದೇವರೊಡಯನೇ! ದಿವ್ಯ ವನಸ್ಪತಿಗಳ ರಸ, ಗಂಧಗಳಿಂದ ಯುಕ್ತವು, ಅತ್ಯಂತ ಮನೋರಂಜಕವೂ ಆಘ್ರಾಣಿಸಲರ್ಹವೂ ಆಗಿರುವ, ಭಕ್ತಿಯಿಂದ ಸಮರ್ಪಿಸಿರುವ ಈ ಧೂಪವನ್ನು ಸ್ವೀಕರಿಸು.

೭೧-೭೨. ಅತ್ಯಂತ ಪ್ರಕಾಶಮಾನವೂ, ನಿರಂತರ ಅಂಧಕಾರವನ್ನು ನೀಗುವುದೂ, ತುಪ್ಪದಲ್ಲಿ ನೆನೆಸಿರುವ ಬತ್ತಿಯಿಂದ ಕೂಡಿರುವುದೂ ಆಗಿರುವ, ನನ್ನಿಂದ ಸಮರ್ಪಿಸಲ್ಪಟ್ಟ ಮಹಾದೀಪವನ್ನು ಸ್ವೀಕರಿಸು.

೭೨-೭೩. ದೇವನೇ! ರುಚಿಕರವಾದ, ಷಡ್ರಸಗಳಿಂದ ಯುಕ್ತವೂ, ಯಾವಾಗಲೂ ತೃಪ್ತಿಕರವೂ ಆದ, ಭಕ್ತಿಯಿಂದ ಸಮರ್ಪಿಸಲ್ಪಟ್ಟ, ನಾಲ್ಕು ವಿಧವಾದ ಅನ್ನಗಳೆಂಬ ನೈವೇದ್ಯವನ್ನು ಸ್ವೀಕರಿಸು.

೭೩-೭೪. ಅಡಿಕೆ ಖದಿರಚೂರ್ಣಗಳಿಂದ ಕೂಡಿದ, ಕರ್ಪೂರ ಮುಂತಾದ ಸುಗಂಧದ್ರವ್ಯೋಪೇತವಾದ, ನನ್ನಿಂದ ಸಮರ್ಪಿಸಲ್ಪಟ್ಟ, ಉತ್ತಮ ವೀಳೆಯದೆಲೆಯನ್ನು ಸ್ವೀಕರಿಸು ಎಂದು ಪ್ರಾರ್ಥಿಸಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ಆಮೇಲೆ ಆವರಣ ಪೂಜೆಯನ್ನು ಮಾಡಬೇಕು.

ಯದಾಶಾಭಿಮುಖೋ ಭೂತ್ವಾ ಪೂಜನಂ ತು ಸಮಾಚರೇತ್ ।
ಸೈವ ಪ್ರಾಚೀ ತು ವಿಜ್ಞೇಯಾ ತತೋಽನ್ಯಾ ವಿದಿಶೋ ದಶ ॥ ೭೫ ॥

ಕೇಸರೇಷ್ವಗ್ನಿಕೋಣಾದಿ ಹೃದಯಾದೀನಿ ಪೂಜಯೇತ್ ।
ನೇತ್ರಮಗ್ರೇ ದಿಕ್ಷು ಚಾಸ್ತ್ರಂ ಅಂಗಮಂತ್ರೈರ್ಯಥಾಕ್ರಮಂ ॥ ೭೬ ॥

ಶುಕ್ಲಶ್ವೇತಸಿತಶ್ಯಾಮಕೃಷ್ಣರಕ್ತಾರ್ಚಿಷಃ ಕ್ರಮಾತ್ ।
ವರಾಭಯಕರಾ ಧ್ಯೇಯಾ ಸ್ವಸ್ವದಿಕ್ಷ್ವಂಗಶಕ್ತಯಃ ॥ ೭೭ ॥

ಅಮುಕಾವರಣಾಂತೇ ತು ದೇವತಾ ಇತಿ ಸಂವದೇತ್ ।
ಸಾಲಂಕಾರಾಸ್ತತಃ ಪಶ್ಚಾತ್ಸಾಂಗಾಃ ಸಪರಿಚಾರಕಾಃ ॥ ೭೮ ॥

ಸವಾಹನಾಸ್ಸಾಯುಧಾಶ್ಚ ತತಃ ಸರ್ವೋಪಚಾರಕೈಃ ।
ಸಂಪೂಜಿತಾಸ್ತರ್ಪಿತಾಶ್ಚ ವರದಾಸ್ಸಂತ್ವಿದಂ ಪಠೇತ್ ॥ ೭೯ ॥

---

೭೫. ಯಾವ ದಿಕ್ಕಿಗೆ ಅಭಿಮುಖವಾಗಿ ಕುಳಿತು ಪೂಜೆಯನ್ನು ಮಾಡುವನೋ, ಅದೇ ಪೂರ್ವವೆಂದು ತಿಳಿಯಬೇಕು. ತದನ್ಯವಾದುವು ವಿದಿಕ್ಕುಗಳು ಎಂದರೆ ದಿಙ್ಮಧ್ಯಗಳು ಎಂದು ಭಾವಿಸಬೇಕು.

೭೬. ಆಗ್ನೇಯ ದಿಗ್ಭಾಗ ಮುಂತಾದ ಕೋಣಗಳಲ್ಲಿನ ಕೇಸರಗಳಲ್ಲಿ ಹೃದಯಾದಿಗಳನ್ನೂ, ಅಗ್ರಭಾಗದಲ್ಲಿ ನೇತ್ರವನ್ನೂ, ದಿಕ್ಕುಗಳಲ್ಲಿ ಅಸ್ತ್ರವನ್ನೂ, ಅಂಗಮಂತ್ರಗಳಿಂದ ಯಥಾಕ್ರಮವಾಗಿ ಪೂಜಿಸಬೇಕು.

೭೭. ವರ, ಅಭಯ ಹಸ್ತಗಳುಳ್ಳ, ಶುಕ್ಲ, ಶ್ವೇತ, ಸಿತ, ಶ್ಯಾಮ, ಕೃಷ್ಣ, ರಕ್ತ, ಅರ್ಚಿಸ್ಸು ಎಂಬ ಅಂಗ ಶಕ್ತಿಗಳನ್ನು ತಮ್ಮ ತಮ್ಮ ದಿಕ್ಕುಗಳಲ್ಲಿ ಕ್ರಮವಾಗಿ ಧ್ಯಾನಿಸಬೇಕು.

೭೮-೭೯. ಒಂದೊಂದು ಆವರಣಾರ್ಚನೆಯ ಅಂತ್ಯದಲ್ಲಿಯೂ "ಸಾಲಂಕಾರಾಸ್ಸಾಂಗಾಸ್ಸಪರಿಚಾರಕಾಸ್ಸವಾಹನಾಃ ಸಾಯುಧಾಶ್ಚ ಅಮುಕಾವರಣದೇವತಾಃ ಸರ್ವೋಪಚಾರೈಸ್ಸಂಪೂಜಿತಾಸ್ತರ್ಪಿತಾಶ್ಚ ವರದಾಃ ಸಂತು" (ಆಭರಣ, ಅಂಗ, ಪರಿಚಾರಕ, ವಾಹನ, ಆಯುಧ ಇವುಗಳಿಂದ ಸಹಿತರಾದ ದೇವತೆಗಳು ಸಕಲ ಉಪಚಾರಗಳಿಂದ ಪೂಜಿಸಲ್ಪಟ್ಟು, ತೃಪ್ತರಾಗಿ ವರಗಳನ್ನು ಕೊಡಲಿ) ಎಂದು ಹೇಳಬೇಕು.

ಮೂಲಮಂತ್ರೇ ಸಮುಚ್ಚಾರ್ಯ ದೇವತಾಯೈ ನಿವೇದಯೇತ್ ।
ಅಭೀಷ್ಟಸಿದ್ಧಿಂ ಮೇ ದೇಹಿ ಶರಣಾಗತವತ್ಸಲ ॥ ೮೦ ॥

ಭಕ್ತ್ಯಾ ಸಮರ್ಪಯೇ ತುಭ್ಯಮಮುಕಾವರಣಾರ್ಚನಂ ।
ಇತ್ಯುಚ್ಚಾರ್ಯ ಕ್ಷಿಪೇತ್ಪುಷ್ಪಾಂಜಲಿಂ ದೇವಸ್ಯ ಮಸ್ತಕೇ ॥ ೮೧ ॥

ತತಸ್ತ್ವಭ್ಯರ್ಚನೀಯಾಃ ಸ್ಯುಃ ಕಲ್ಪೋಕ್ತಾಶ್ಚಾವೃತೀಃ ಕ್ರಮಾತ್ ।
ಸಾಯುಧಾಂಸ್ತತಇಂದ್ರಾದ್ಯಾನ್ಸ್ವಸ್ವದಿಕ್ಷು ಪ್ರಪೂಜಯೇತ್ ॥ ೮೨ ॥

ಇಂದ್ರೋ ವಹ್ನಿರ್ಯಮೋ ರಕ್ಷೋ ವರುಣಃ ಪವನೋ ವಿಧುಃ ।
ಈಶಾನೋಽಥ ವಿಧಿಶ್ಚೈವಮಧಸ್ತಾತ್ಪನ್ನಗಾಧಿಪಃ ॥ ೮೩ ॥

ಐರಾವತಸ್ತಥಾ ಮೇಷೋ ಮಹಿಷಃ ಪ್ರೇತಸ್ತಿಮಿರ್ಮೃಗಃ ।
ವಾಜೀ ವೃಷೋ ಹಂಸಕೂರ್ಮೌ ವಾಹನಾನಿ ವಿದುರ್ಬುಧಾಃ ॥ ೮೪ ॥

---

೮೦-೮೧. ಕೊನೆಯಲ್ಲಿ ಮೂಲಮಂತ್ರವನ್ನು ಪಠನೆಮಾಡಿ ದೇವರಿಗೆ ಸಮರ್ಪಿಸಬೇಕು. 'ಶರಣಾಗತವತ್ಸಲನಾದ ಸ್ವಾಮಿಯೇ! ನಿನಗೆ ಇಂತಹ ಆವರಣಾರ್ಚನೆಯನ್ನು ಸಮರ್ಪಿಸುವೆನು. ನನಗೆ ಇಷ್ಟಾರ್ಥವನ್ನು ಕೊಡು' ಎಂದು ಹೇಳಿ ದೇವರ ತಲೆಯಮೇಲೆ ಪುಷ್ಪಾಂಜಲಿಯನ್ನು ಹಾಕಬೇಕು.

೮೨. ಅನಂತರ ಕಲ್ಪದಲ್ಲಿ ಹೇಳಿರುವ ಆವರಣದೇವತೆಗಳನ್ನು ಆಯುಧ ಸಹಿತವಾಗಿ ಕ್ರಮವಾಗಿ ಪೂಜಿಸಬೇಕು. ತರುವಾಯ ಇಂದ್ರಾದಿ ದಿಕ್ಪಾಲಕರುಗಳನ್ನು ಅವರವರ ದಿಕ್ಕುಗಳಲ್ಲಿ ಪೂಜಿಸಬೇಕು.

೮೩. ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ ಮತ್ತು ಈಶಾನ ಇವರು ಅಷ್ಟದಿಕ್ಪಾಲಕರು. ಅನಂತರ ಊರ್ಧ್ವದಿಗ್ಭಾಗದಲ್ಲಿ ವಿಧಿ (ಬ್ರಹ್ಮ) ಅಧೋದಿಗ್ಭಾಗದಲ್ಲಿ ಶೇಷ ಎಂಬೀರ್ವರನ್ನು ಅಲ್ಲಲ್ಲಿ ಪೂಜಿಸಬೇಕು.

೮೪. ಐರಾವತ, ಮೇಷ, (ಮೇಕೆ) ಎಮ್ಮೆ, ಪ್ರೇತ, ತಿಮಿಂಗಿಲ, ಜಿಂಕೆ, ಕುದುರೆ, ಎತ್ತು, ಹಂಸ ಮತ್ತು ಕೂರ್ಮ (ಆಮೆ) ಇವು ದಿಕ್ಪಾಲಕರ ವಾಹನವೆಂದು ಜ್ಞಾನಿಗಳು ತಿಳಿದಿರುವರು.

ವಜ್ರಂ ಶಕ್ತಿಂ ದಂಡಖಡ್ಗೌ ಪಾಶಾಂಕುಶಗದಾ ಅಪಿ ।
ತ್ರಿಶೂಲಂ ಪದ್ಮಚಕ್ರೇ ಚ ಕ್ರಮಾದಿಂದ್ರಾದಿಹೇತಯಃ ॥ ೮೫ ॥

ಸಮಾಪ್ಯಾವರಣಾರ್ಚಾಂ ತು ದೇವತಾರಾರ್ತಿಕಂ ಚರೇತ್ ।
ಶಂಖತೋಯಂ ಪರಿಕ್ಷಿಪ್ಯೋದ್ಬಾಹುರ್ನೃತ್ಯನ್ಪತೇತ್ ಕ್ಷಿತೌ ॥ ೮೬ ॥

ದಂಡವಚ್ಚಾಪ್ಯಥೋತ್ಥಾಯ ಪ್ರಾರ್ಥಯಿತ್ವಾ ನಿಜೇಶ್ವರಂ ।
ದಕ್ಷಿಣೇ ಸ್ಥಂಡಿಲಂ ಕೃತ್ವಾ ತತ್ರ ಸಂಸ್ಕಾರಮಾಚರೇತ್ ॥ ೮೭ ॥

ಮೂಲೇನೇಕ್ಷಣಮಸ್ತ್ರೇಣ ಪ್ರೋಕ್ಷಣಂ ತಾಡನಂ ಪುನಃ ।
ಕುಶೈಸ್ತದ್ವರ್ಮಣಾಭ್ಯುಕ್ಷ್ಯ ಪೂಜ್ಯ ತತ್ರ ನ್ಯಸೇದ್ವಸುಂ ॥ ೮೮ ॥

ಪ್ರತಾಪ್ಯ ತತ್ರ ಜುಹುಯಾದ್ಧ್ಯಾತ್ವಾ ಚೈವೇಷ್ಟದೇವತಾಂ ।
ಮಹಾವ್ಯಾಹೃತಿಭಿರ್ಯಸ್ತು ಸಮಸ್ತಾಭಿಶ್ಚ ತುಷ್ಟಯಂ ॥ ೮೯ ॥

---

೮೫. ವಜ್ರಾಯುಧ, ಶಕ್ತಿ, ದಂಡ, ಕತ್ತಿ, ಪಾಶ, ಅಂಕುಶ, ಗದೆ, ತ್ರಿಶೂಲ, ಪದ್ಮ ಮತ್ತು ಚಕ್ರ ಇವು ಇಂದ್ರಾದಿ ದಿಕ್ಪಾಲಕರ ಆಯುಧಗಳು.

೮೬-೮೭. ಆವರಣಪೂಜೆಯನ್ನು ಮುಗಿಸಿ ದೇವರಿಗೆ ಆರತಿಯನ್ನು ಮಾಡಬೇಕು. ಸುತ್ತಲೂ ಶಂಖೋದಕವನ್ನು ಪ್ರೋಕ್ಷಿಸಿ, ಕೈಗಳನ್ನು ಎತ್ತಿಕೊಂಡು, ಪ್ರದಕ್ಷಿಣೆ ಮಾಡಿ, ಭೂಮಿಯಲ್ಲಿ ದಂಡ ಪ್ರಣಾಮ ಮಾಡಬೇಕು. ತರುವಾಯ ಎದ್ದು ತನ್ನ ಸ್ವಾಮಿಯನ್ನು ಪ್ರಾರ್ಥಿಸಿ ಬಲಭಾಗದಲ್ಲಿ ಸ್ಥಂಡಿಲವನ್ನು ಮಾಡಿ ಅಲ್ಲಿ ಸಂಸ್ಕಾರವನ್ನಾಚರಿಸಬೇಕು.

೮೮. ಮೂಲಮಂತ್ರದಿಂದ ದರ್ಶನ, ಅಸ್ತ್ರದಿಂದ (ಫಟ್) ಪ್ರೋಕ್ಷಣೆ, ದರ್ಭೆಗಳಿಂದ ತಾಡನ, ಕವಚದಿಂದ (ಹುಂ) ಅಭ್ಯುಕ್ಷಣ ಇವುಗಳನ್ನು ಮಾಡಿ ಪೂಜಿಸಿ ಅಲ್ಲಿ ಅಗ್ನಿ ಪ್ರತಿಷ್ಠೆ ಮಾಡಬೇಕು.

೮೯-೯೦. ಅಗ್ನಿಯನ್ನು ಪ್ರಜ್ವಲಿಸಿ, ಇಷ್ಟದೇವತೆಯನ್ನು ಧ್ಯಾನಿಸಿ ಹೋಮ ಮಾಡಬೇಕು. ಸಾಧಕವರ್ಯನು ಸಮಸ್ತ ವ್ಯಾಹೃತಿ ಮಂತ್ರಗಳಿಂದ

ಜುಹುಯಾತ್ಸರ್ಪಿಷಾ ಭಕ್ತ್ಯೈಸ್ತಿಲೈರ್ವಾ ಪಾಯಸೇನ ವಾ ।
ಸಘೃತೈಃ ಸಾಧಕಶ್ರೇಷ್ಠಃ ಪಂಚವಿಂಶತಿಸಂಖ್ಯಯಾ ॥ ೯೦ ॥

ಪುನರ್ವ್ಯಾಹೃತಿಭಿರ್ಹುತ್ವಾ ಗಂಧಾದ್ಯೈಃ ಪುನರರ್ಚಯೇತ್ ।
ದೇವಂ ಸಂಯೋಜಯೇನ್ಮೂರ್ತೌ ತತೋ ವಹ್ನಿಂ ವಿಸರ್ಜಯೇತ್ ॥೯೧॥

ಭೋ ಭೋ ವಹ್ನೇ ಮಹಾಶಕ್ತೇ ಸರ್ವಕರ್ಮಪ್ರಸಾಧಕ ।
ಕರ್ಮಾಂತರೇಽಪಿ ಸಂಪ್ರಾಪ್ತೇ ಸಾನ್ನಿಧ್ಯಂ ಕುರು ಸಾದರಂ ॥ ೯೨ ॥

ವಿಸೃಜ್ಯಾಗ್ನಿದೇವತಾಯೈ ದದ್ಯಾದಾಚಮನೀಯಕಂ ।
ಅವಶಿಷ್ಟೇನ ಹವಿಷಾ ಗಂಧಪುಷ್ಪಾಕ್ಷತಾನ್ವಿತಂ ॥ ೯೩ ॥

ದೇವತಾಪಾರ್ಷದೇಭ್ಯೋಽಪಿ ಪೂರ್ವೋಕ್ತೇಭ್ಯೋ ಬಲಿಂ ದದೇತ್ ।
ಯೇ ರೌದ್ರಾ ರೌದ್ರಕರ್ಮಾಣೋ ರೌದ್ರಸ್ಥಾನನಿವಾಸಿನಃ ॥ ೯೪ ॥

---

ನಾಲ್ಕಾವರ್ತಿ ಘೃತಹೋಮ ಮಾಡಬೇಕು. ಮತ್ತು ತುಪ್ಪದೊಡನೆ ಎಳ್ಳು ಅಥವಾ ಪಾಯಸದಿಂದ ವ್ಯಾಹೃತಿಯ ಒಂದೊಂದು ಪದವನ್ನೂ ಹೇಳಿ ಇಪ್ಪತ್ತೈದಾವರ್ತಿ ಹೋಮ ಮಾಡಬೇಕು.

೯೧. ಪುನಃ ವ್ಯಾಹೃತಿಗಳಿಂದ ಹೋಮವಮಾಡಿ, ಗಂಧಾದಿಗಳಿಂದ ಪೂಜೆಮಾಡಬೇಕು. ದೇವರನ್ನು ಪ್ರತಿಮೆಯಲ್ಲಿ ಆವಾಹನೆ ಮಾಡಿ ಅನಂತರ ಅಗ್ನಿಯನ್ನು ವಿಸರ್ಜನೆ ಮಾಡಬೇಕು.

೯೨-೯೬. 'ಸಕಲ ಕರ್ಮಗಳಿಗೂ ಮುಖ್ಯ ಸಾಧಕನಾದ, ಮಹಾ ಸಾಮರ್ಥ್ಯವುಳ್ಳ ಅಗ್ನಿಯೇ ! ಇನ್ನೊಂದು ಕರ್ಮವು ಸಂಭವಿಸಿದಾಗ ಅಲ್ಲಿಯೂ ಪ್ರೀತಿಯಿಂದ ಸನ್ನಿಹಿತನಾಗು' ಎಂದು ಪ್ರಾರ್ಥಿಸಿ, ಅಗ್ನಿವಿಸರ್ಜನೆಮಾಡಿ ಅಗ್ನಿ ದೇವತೆಗೆ ಆಚಮನವನ್ನು ಸಮರ್ಪಿಸಬೇಕು. ಉಳಿದ ಹೋಮದ್ರವ್ಯದಿಂದ ಗಂಧ, ಪುಷ್ಪ, ಅಕ್ಷತೆಗಳೊಡನೆ, ಹಿಂದೆ ಹೇಳಿದ ದೇವತಾ ಪರಿವಾರಗಳಿಗೂ ಬಲಿಯನ್ನು ಕೊಡಬೇಕು. ಭಯಂಕರರು, ಕ್ರೂರವ್ಯಾಪಾರವನ್ನು ಮಾಡುವವರು, ಭಯಂಕರ ಸ್ಥಾನದಲ್ಲಿ ವಾಸಿಸುವವರು, ಯೋಗಿನಿಗಳು, ಉಗ್ರರೂಪ

ಯೋಗಿನ್ಯೋ ಹ್ಯುಗ್ರರೂಪಾಶ್ಚ ಗಣಾನಾಮಧಿಪಾಶ್ಚ ಯೇ ।
ವಿಘ್ನಭೂತಾಸ್ತಥಾ ಚಾನ್ಯೇ ದಿಗ್ವಿದಿಕ್ಷು ಸಮಾಶ್ರಿತಾಃ ॥ ೯೫ ॥

ಸರ್ವೇ ತೇ ಪ್ರೀತಮನಸಃ ಪ್ರತಿಗೃಹ್ಣಂತ್ವಿಮಂ ಬಲಿಂ ।
ಇತ್ಯಷ್ಟದಿಕ್ಷು ದತ್ವಾ ಚ ಪುನರ್ಭೂತಬಲಿಂ ಚರೇತ್ ॥ ೯೬ ॥

ಪಾನೀಯಮಮೃತೀಕೃತ್ಯ ಮುದ್ರಯಾ ಧೇನುಸಂಜ್ಞಯಾ ।
ದೇವತಾಯಾಃ ಕರೇ ದದ್ಯಾತ್ಪುನಶ್ಚಾಚಮನೀಯಕಂ ॥ ೯೭ ॥

ದೇವಮುದ್ವಾಸ್ಯ ಮೂರ್ತಿಸ್ಥಂ ಪುನಸ್ತತ್ರೈವ ಯೋಜಯೇತ್ ।
ನೈವೇದ್ಯಂ ಚ ತತೋ ದದ್ಯಾತ್ತತ್ತದುಚ್ಛಿಷ್ಟಭೋಜಿನೇ ॥ ೯೮ ॥

ಮಹೇಶ್ವರಸ್ಯ ಚಂಡೇಶೋ ವಿಷ್ವಕ್ಸೇನಸ್ತಥಾ ಹರೇಃ ।
ಚಂಡಾಂಶುಸ್ತರಣೇರ್ವಕ್ರತುಂಡಶ್ಚಾಪಿ ಗಣೇಶಿತುಃ ॥ ೯೯ ॥

---

ವುಳ್ಳವರು, ಗಣನಾಯಕರು, ವಿಘ್ನಸ್ವಾಮಿಗಳು ಮತ್ತು ದಿಕ್ಕು ವಿದಿಕ್ಕುಗಳಲ್ಲಿ ಆಶ್ರಯಿಸಿರುವವರು, ಇವರೆಲ್ಲರೂ ಸಂತುಷ್ಟಚಿತ್ತರಾಗಿ ಈ ಬಲಿಯನ್ನು ಸ್ವೀಕರಿಸ ಬೇಕೆಂದು ಪ್ರಾರ್ಥಿಸಿ ಎಂಟು ದಿಕ್ಕುಗಳಲ್ಲಿಯೂ ಬಲಿಯನ್ನು ಕೊಟ್ಟು ಪುನಃ ಭೂತ ಬಲಿಯನ್ನು ಆಚರಿಸಬೇಕು.

೯೭. ಧೇನುಮುದ್ರೆಯಿಂದ ಉದಕವನ್ನು ಅಮೃತವನ್ನಾಗಿ ಮಾಡಿ ದೇವತೆಯ ಹಸ್ತದಲ್ಲಿ ಆಚಮನಕ್ಕಾಗಿ ಪುನಃ ನೀರನ್ನು ಹಾಕಬೇಕು.

೯೮. ಪ್ರತಿಮೆಯಲ್ಲಿ ಸನ್ನಿಹಿತನಾಗಿದ್ದ ದೇವತೆಯನ್ನು ಉದ್ವಾಸನೆ ಮಾಡಿ ತಿರುಗಿ ಅಲ್ಲಿಯೇ ಸಂಯೋಜನೆ ಮಾಡಬೇಕು. ತರುವಾಯ ಆಯಾ ದೇವತೆಗಳ ಉಚ್ಛಿಷ್ಟವನ್ನು ತಿನ್ನುವ ಪರಿವಾರ ದೇವತೆಗಳಿಗೆ ನೈವೇದ್ಯವನ್ನು ಕೊಡಬೇಕು.

೯೯-೧೦೨. ಮಹೇಶ್ವರನಿಗೆ ಚಂಡೇಶನೂ, ವಿಷ್ಣುವಿಗೆ ವಿಷ್ವಕ್ಸೇನನೂ, ಸೂರ್ಯನಿಗೆ ಚಂಡಾಂಶುವೂ, ಗಣೇಶನಿಗೆ ವಕ್ರತುಂಡನೂ, ಶಕ್ತಿಗೆ ಉಚ್ಛಿಷ್ಟ ಚಾಂಡಾಲಿಯೂ, ಉಚ್ಛಿಷ್ಟಭೋಕ್ತೃಗಳೆಂದು ಉಕ್ತವಾಗಿದೆ. ಅನಂತರ ಋಷಿ ದೇವತೆ ಮುಂತಾದವರನ್ನು ಅನುಸಂಧಾನ ಮಾಡಿ, ಮೂಲಮಂತ್ರಜಪಾಂಗ

ಶಕ್ತೇರುಚ್ಛಿಷ್ಟಚಾಂಡಾಲೀ ಪ್ರೋಕ್ತಾ ಉಚ್ಛಿಷ್ಟಭೋಜಿನಃ ।
ತತೋ ಋಷ್ಯಾದಿಕಂ ಸ್ಮೃತ್ವಾ ಕೃತ್ವಾ ಮೂಲಷಡಂಗಕಂ ॥ ೧೦೦ ॥

ಜಪ್ತ್ವಾ ಮಂತ್ರಂ ಯಥಾಶಕ್ತಿ ದೇವತಾಯ್ಕೈ ನಿವೇದಯೇತ್ ।
ಗುಹ್ಯಾತಿಗುಹ್ಯಗೋಪ್ತಾ ತ್ವಂ ಗೃಹಾಣಾಸ್ಮತ್ಕೃತಂ ಜಪಂ ॥ ೧೦೧ ॥

ಸಿದ್ಧಿರ್ಭವತು ಮೇ ದೇವ ತ್ವತ್ಪ್ರಸಾದಾತ್ತ್ವಯಿ ಸ್ಥಿತಿಃ ।
ತತಃ ಪರಾಙ್ಮುಖಂ ಚಾರ್ಘ್ಯಂ ಕೃತ್ವಾ ಪುಷ್ಪೈಃ ಪ್ರಪೂಜಯೇತ್ ॥೧೦೨॥

ದೋರ್ಭ್ಯಾಂ ಪದ್ಭ್ಯಾಂ ಚ ಜಾನುಭ್ಯಾಂ ಉರಸಾ ಶಿರಸಾ ದೃಶಾ ।
ಮನಸಾ ವಚಸಾ ಚೇತಿ ಪ್ರಣಾಮೋऽಷ್ಟಾಂಗ ಈರಿತಃ ॥ ೧೦೩ ॥

ಬಾಹುಭ್ಯಾಂ ಚ ಸಜಾನುಭ್ಯಾಂ ಶಿರಸಾ ವಚಸಾऽಪಿ ವಾ ।
ಪಂಚಾಂಗಕಃ ಪ್ರಣಾಮಃ ಸ್ಯಾತ್ಪೂಜಾಯಾಂ ಪ್ರವರಾವುಭೌ ॥ ೧೦೪ ॥

---

ವಾದ ಷಡಂಗನ್ಯಾಸ ಮಾಡಿ ತನ್ನ ಶಕ್ತ್ಯನುಸಾರ ಮಂತ್ರವನ್ನು ಜಪಿಸಿ ದೇವತೆಗೆ ಅರ್ಪಿಸಬೇಕು. 'ದೇವನೇ! ನೀನು ಗೋಪ್ಯವಸ್ತುಗಳಲ್ಲೆಲಾ ಅತ್ಯಂತ ಗೋಪ್ಯವಾದುದನ್ನೂ ಸಹ ರಕ್ಷಿಸುವವನು. ನನ್ನಿಂದ ಆಚರಿಸಲ್ಪಟ್ಟ ಜಪವನ್ನು ಸ್ವೀಕರಿಸು. ನಿನ್ನ ಅನುಗ್ರಹದಿಂದ ನನಗೆ ಸಿದ್ಧಿಯಾಗಿ ನಿನ್ನ ಸಾನ್ನಿಧ್ಯವು ದೊರಕಲಿ' ಎಂದು ಪ್ರಾರ್ಥಿಸಿ, ಅನಂತರ ಬಹಿರ್ಮುಖನಾಗಿ ಅರ್ಘ್ಯವನ್ನು ಕೊಟ್ಟು, ಪುಷ್ಪಗಳಿಂದ ಪೂಜಿಸಬೇಕು.

೧೦೩. ಬಾಹು, ಪಾದ, ಮೊಣಕಾಲು, ಎದೆ, ಶಿರಸ್ಸು, ದೃಷ್ಟಿ, ಮನಸ್ಸು, ವಾಕ್ ಎಂಬ ಎಂಟು ಅಂಗಗಳಿಂದ ಮಾಡುವ ನಮಸ್ಕಾರವು ಸಾಷ್ಟಾಂಗನಮಸ್ಕಾರವೆನಿಸುವುದು.

೧೦೪. ಬಾಹು, ಜಾನು, (ಮೊಣಕಾಲು) ತಲೆ, ವಾಕ್ಕು, ಮನಸ್ಸು ಇವುಗಳಿಂದ ಮಾಡುವ ಪ್ರಣಾಮವು ಪಂಚಾಂಗನಮಸ್ಕಾರವೆನಿಸುವುದು. ಈ ಎರಡು ವಿಧ ನಮಸ್ಕಾರವೂ ಪೂಜೆಯಲ್ಲಿ ಪ್ರಶಸ್ತವು.

ನತ್ವಾ ಚ ದಂಡವನ್ಮಂತ್ರೀ ತತಃ ಕುರ್ಯಾತ್ಪ್ರದಕ್ಷಿಣಾಃ ।
ವಿಷ್ಣ್ವೀಶಶಕ್ತ್ಯರ್ಕವಿಘ್ನಾನಾಂ ವೇದಾರ್ಥೇಂದ್ವದ್ರಿವಹ್ನಯಃ ॥ ೧೦೫ ॥

ತತಃ ಸ್ತೋತ್ರಾದಿಕಂ ಮಂತ್ರೀ ಪ್ರಪಠೇದ್ಭಕ್ತಿಪೂರ್ವಕಂ ।
ಇತಃ ಪೂರ್ವಂ ಪ್ರಾಣಬುದ್ಧಿದೇಹಧರ್ಮಾಧಿಕಾರತಃ ॥ ೧೦೬ ॥

ಜಾಗ್ರತ್ಸ್ವಪ್ನಸುಷುಪ್ತ್ಯಂತಾವಸ್ಥಾಸು ಮನಸಾ ತತಃ ।
ವಾಚಾ ಹಸ್ತಾಭ್ಯಾಂ ಚ ಪದ್ಭ್ಯಾಮುದರೇಣ ತತಃ ಪರಂ ॥ ೧೦೭ ॥

ಶಿಶ್ನಾ ಚ ಯತ್ ಸ್ಮೃತಂ ಪಶ್ಚಾದ್ಯದುಕ್ತಂ ಯತ್ಕೃತಂ ತತಃ ।
ತತ್ಸರ್ವಂ ಚ ತತೋ ಬ್ರಹ್ಮಾರ್ಪಣಂ ಭವತು ಠದ್ವಯಂ ॥ ೧೦೮ ॥

ಮಾಂ ಮದೀಯಂ ಚ ಸಕಲಂ ವಿಷ್ಣವೇ ಚ ಸಮರ್ಪಯೇ ॥
ತಾರಂ ತತ್ಸದಿತಿ ಪ್ರೋಕ್ತೋ ಬ್ರಹ್ಮಾರ್ಪಣಮನುರ್ಮತಃ ॥ ೧೦೯ ॥

ಪ್ರಣವಾದಿದ್ವ್ಯಶೀತ್ಯರ್ಣೋ ಹ್ಯನೇನಾತ್ಮಾನಮರ್ಪಯೇತ್ ।
ಅಜ್ಞಾನಾದ್ವಾ ಪ್ರಮಾದಾದ್ವಾ ವೈಕಲ್ಯಾತ್ಸಾಧನಸ್ಯ ಚ ॥ ೧೧೦ ॥

---

೧೦೫. ಮಂತ್ರಜಪಕರ್ತನು ದಂಡಪ್ರಣಾಮ ಮಾಡಿ ಅನಂತರ ಪ್ರದಕ್ಷಿಣೆ ಮಾಡಬೇಕು. ವಿಷ್ಣುವಿಗೆ ನಾಲ್ಕು, ಈಶ್ವರನಿಗೆ ಅರ್ಧ, ಶಕ್ತಿಗೆ ಒಂದು, ಸೂರ್ಯನಿಗೆ ಏಳು, ಗಣೇಶನಿಗೆ ಮೂರು ಈರೀತಿ ಪ್ರದಕ್ಷಿಣೆ ಮಾಡಬೇಕು.

೧೦೬-೧೧೦. ತರುವಾಯ ಮಂತ್ರಜಪಕರ್ತನು ಸ್ತೋತ್ರ ಮುಂತಾದುವನ್ನು ಭಕ್ತಿಪೂರ್ವಕವಾಗಿ ಪಠನೆ ಮಾಡಬೇಕು. ಆಮೇಲೆ ಈ ಮಂತ್ರವನ್ನು ಹೇಳಿ ಆತ್ಮಸಮರ್ಪಣೆಯನ್ನು ಮಾಡಬೇಕು : — (ಠದ್ವಯಂ= ಸ್ವಾಹಾ). “ ಓಂ ಇತಃ ಪೂರ್ವಂ ಪ್ರಾಣಬುದ್ಧಿದೇಹಧರ್ಮಾಧಿಕಾರತೋ ಜಾಗ್ರತ್ಸ್ವಪ್ನಸುಷುಪ್ತ್ಯವಸ್ಥಾಸು ಮನಸಾ ವಾಚಾ ಹಸ್ತಾಭ್ಯಾಂ ಪದ್ಭ್ಯಾಂ ಉದರೇಣ ಶಿಶ್ನಾ ಯತ್ಸ್ಮೃತಂ ಯದುಕ್ತಂ ಯತ್ಕೃತಂ ತತ್ಸರ್ವಂ ಬ್ರಹ್ಮಾರ್ಪಣಂ ಭವತು ಸ್ವಾಹಾ ಮಾಂ ಮದೀಯಂ ಚ ಸಕಲಂ ವಿಷ್ಣವೇ ಸಮರ್ಪಯೇ ಓಂ ತತ್ಸತ್ ” ಈ ಮಂತ್ರವು ಎಂಭತ್ತೆರಡು ಅಕ್ಷರಗಳನ್ನೊಳಗೊಂಡಿದೆ.

ಯನ್ನ್ಯೂನಮತಿರಿಕ್ತಂ ವಾ ತತ್ಸರ್ವಂ ಕ್ಷಂತುಮರ್ಹಸಿ ।
ದ್ರವ್ಯಹೀನಂ ಕ್ರಿಯಾಹೀನಂ ಮಂತ್ರಹೀನಂ ಮಯಾನ್ಯಥಾ ॥ ೧೧೧ ॥

ಕೃತಂ ಯತ್ತತ್ಕ್ಷಮಸ್ವೇಶ ಕೃಪಯಾ ತ್ವಂ ದಯಾನಿಧೇ ।
ಯನ್ಮಯಾ ಕ್ರಿಯತೇ ಕರ್ಮ ಜಾಗ್ರತ್ಸ್ವಪ್ನಸುಷುಪ್ತಿಷು ॥ ೧೧೨ ॥

ತತ್ಸರ್ವಂ ತಾವಕೀ ಪೂಜಾ ಭೂಯಾದ್ಭೂತ್ಯೈ ಚ ಮೇ ಪ್ರಭೋ ।
ಭೂಮೌ ಸ್ಖಲಿತಪಾದಾನಾಂ ಭೂಮಿರೇವಾವಲಂಬನಂ ॥ ೧೧೩ ॥

ತ್ವಯಿ ಜಾತಾಪರಾಧಾನಾಂ ತ್ವಮೇವ ಶರಣಂ ಪ್ರಭೋ ।
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ॥ ೧೧೪ ॥

ತಸ್ಮಾತ್ಕಾರುಣ್ಯಭಾವೇನ ಕ್ಷಮಸ್ವ ಪರಮೇಶ್ವರ ।
ಅಪರಾಧಸಹಸ್ರಾಣಿ ಕ್ರಿಯಂತೇಹರ್ನಿಶಂ ಮಯಾ ॥ ೧೧೫ ॥

---

೧೧೦-೧೧೨. ದಯಾಕರನಾದ ನೀನು ಅಜ್ಞಾನ, ಆಲಸ್ಯ, ಅಂಗ ವೈಕಲ್ಯ ಇವುಗಳಿಂದ ಸಂಭವಿಸಿದ ನ್ಯೂನಾತಿರೇಕಗಳೆಲ್ಲವನ್ನೂ ದಯೆಯಿಟ್ಟು ಕ್ಷಮಿಸಬೇಕು. ದ್ರವ್ಯಲೋಪ, ಕ್ರಿಯಾಲೋಪ, ಮಂತ್ರಲೋಪ ಇವುಗಳಿಂದ ನಾನು ವಿಪರೀತವಾಗಿ ಮಾಡಿರುವುದೆಲ್ಲವನ್ನೂ ಸ್ವಾಮಿಯಾದ ನೀನೇ ಕ್ಷಮಿಸಬೇಕು.

೧೧೨-೧೧೪. ಸ್ವಾಮಿಯೇ! ಜಾಗ್ರತ್, ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳಲ್ಲಿಯೂ ನನ್ನಿಂದಾಚರಿಸಲ್ಪಟ್ಟ ಸಕಲ ಕರ್ಮವೂ ನಿನ್ನ ಪೂಜೆಯಾಗಿ ಅದು ನನಗೆ ಶ್ರೇಯಃಪ್ರದವಾಗಲಿ ಎಂದು ಪ್ರಾರ್ಥಿಸಬೇಕು. ಭೂಮಿಯಲ್ಲಿ ಎಡವಿ ಬಿದ್ದವರಿಗೆ ಹೇಗೆ ಭೂಮಿಯೇ ಆಶ್ರಯವೋ ಅದರಂತೆ ಸ್ವಾಮಿಯೇ! ನಿನ್ನಲ್ಲಿ ತಪ್ಪು ಮಾಡಿದವರಿಗೆ ನೀನೇ ರಕ್ಷಕನು. ಬೇರೆ ಗತಿಯಿಲ್ಲ. ನೀನೇ ನನಗೆ ರಕ್ಷಕನು.

೧೧೫. ಆದ ಕಾರಣ ಪರಮೇಶ್ವರನೇ! ದಯಾ ಭಾವದಿಂದ ನನ್ನ ತಪ್ಪುಗಳನ್ನೆಲ್ಲಾ ಕ್ಷಮಿಸು. ಅಹೋರಾತ್ರಿಗಳಲ್ಲಿ ಸಾವಿರಾರು ಅಪರಾಧಗಳು ನನ್ನಿಂದ ಆಚರಿಸಲ್ಪಡುತ್ತಿವೆ.

ದಾಸೋಽಯಮಿತಿ ಮಾಂ ತ್ವಂ ಕ್ಷಮಸ್ವ ಜಗತಾಂ ಪತೇ ।
ಆವಾಹನಂ ನ ಜಾನಾಮಿ ನ ಜಾನಾಮಿ ವಿಸರ್ಜನಂ ॥ ೧೧೬ ॥

ಪೂಜಾಂ ಚೈವ ನ ಜಾನಾಮಿ ತ್ವಂ ಗತಿಃ ಪರಮೇಶ್ವರಃ ।
ಸಂಪ್ರಾರ್ಥ್ಯೈವಂ ತತೋ ಮಂತ್ರೀ ಮೂಲಾಂತೇ ಶ್ಲೋಕಮುಚ್ಚರೇತ್ ॥

ಗಚ್ಛ ಗಚ್ಛ ಪರಂ ಸ್ಥಾನಂ ಜಗದೀಶ ಜಗನ್ಮಯ ।
ಯನ್ನ ಬ್ರಹ್ಮಾದಯೋ ದೇವಾ ಜಾನಂತಿ ಚ ಸದಾಶಿವಃ ॥ ೧೧೮ ॥

ಇತಿ ಪುಷ್ಪಾಂಜಲಿಂ ದತ್ವಾ ತತಃ ಸಂಹಾರಮುದ್ರಯಾ ।
ನಿಧಾಯ ದೇವಂ ಸಾಂಗಂ ಚ ಸ್ವೀಯಹೃತ್ಸರಸೀರುಹೇ ॥ ೧೧೯ ॥

ಸುಷುಮ್ನಾ ವರ್ತ್ಮನಾ ಪುಷ್ಪಮಾಘ್ರಾಯೋದ್ವಾಸಯೇದ್ಬುಧಃ ।
ಶಂಖಚಕ್ರಶಿಲಾಲಿಂಗವಿಷ್ಣುಸೂರ್ಯದ್ವಯಂ ತಥಾ ॥ ೧೨೦ ॥

---

೧೧೬. ಜಗದೊಡೆಯನೇ! ಇವನು ದಾಸನೆಂದು ನನ್ನನ್ನು ತಿಳಿದು ಅಪುಗಳನ್ನೆಲ್ಲಾ ಕ್ಷಮಿಸಿ ಉದ್ಧರಿಸು. ನಾನು ಕೇವಲ ಅಜ್ಞನು. ಆವಾಹನೆ ಮತ್ತು ವಿಸರ್ಜನೆಗಳ ಪ್ರಕಾರವನ್ನರಿಯೆನು.

೧೧೭. ಪೂಜಾವಿಧಾನವನ್ನೂ ಸಹ ತಿಳಿಯೆನು. ಪರಮೇಶ್ವರನಾದ ನೀನೇ ಗತಿಯು ಎಂಬುದಾಗಿ ಪ್ರಾರ್ಥಿಸಿ ತರುವಾಯ ಮಂತ್ರಿಯು ಮೂಲ ಮಂತ್ರವನ್ನು ಜಪಿಸಿ ಅಂತ್ಯದಲ್ಲಿ ಈ ಶ್ಲೋಕವನ್ನು ಹೇಳಬೇಕು.

೧೧೮. ಸಮಸ್ತಜಗನ್ಮಯ ಎಂದರೆ ಸಕಲಲೋಕಾಂತರ್ಯಾಮಿಯಾದ ಜಗದೀಶ್ವರನೇ! ಬ್ರಹ್ಮಾದಿ ಶೇವತೆಗಳು ಸದಾಶಿವನೂ ಸಹ ತಿಳಿಯದಂತಹ ಉತ್ಕೃಷ್ಟಸ್ಥಾನಕ್ಕೆ ಹೋಗುವವನಾಗು ಎಂದು ಶ್ಲೋಕಾರ್ಥವು. ಈ ಶ್ಲೋಕ ವನ್ನು ಪೂಜೆಯ ಕೊನೆಯಲ್ಲಿ ಹೇಳಬೇಕು.

೧೧೯-೧೨೨. ಹೀಗೆ ಹೇಳಿ ದೇವರಿಗೆ ಪುಷ್ಪಾಂಜಲಿಯನ್ನರ್ಪಿಸಿ, ಉಪ ಸಂಹಾರಮುದ್ರೆಯನ್ನು ತೋರಿಸಿ ತನ್ನ ಹೃದಯ ಕಮಲದಲ್ಲಿ ಅಂಗಸಹಿತನಾದ ದೇವನನ್ನು ಸ್ಥಾಪನೆಮಾಡಿ ಜ್ಞಾನಿಯು ಸುಷಮ್ನಾ ನಾಡಿಯ ದ್ವಾರದಿಂದ ಹೂವನ್ನು ಮೂಸಿನೋಡಿ ದೇವರನ್ನು ಉದ್ವಾಸನೆ ಮಾಡಬೇಕು. ಶಂಖ,

ಶಕ್ತಿತ್ರಯಂ ನಚೈಕತ್ರ ಪೂಜಯೇದ್ದುಃಖಕಾರಣಂ ।
ಅಕಾಲಮೃತ್ಯುಹರಣಂ ಸರ್ವವ್ಯಾಧಿವಿನಾಶನಂ ॥ ೧೨೧ ॥

ಸರ್ವಪಾಪಕ್ಷಯಕರಂ ವಿಷ್ಣುಪಾದೋದಕಂ ಶುಭಂ ॥ ೧೨೨ ॥

ತತ್ತದ್ಭಕ್ತೈರ್ಗೃಹೀತವ್ಯಂ ತನ್ನೈವೇದ್ಯಂ ನಿವೇದಿತಂ ।
ಅಗ್ರಾಹ್ಯಂ ಶಿವನಿರ್ಮಾಲ್ಯಂ ಪತ್ರಂ ಪುಷ್ಪಂ ಫಲಂ ಜಲಂ ॥ ೧೨೩ ॥

ಸಾಲಗ್ರಾಮಶಿಲಾಸ್ಪರ್ಶಾತ್ಸರ್ವಂ ಯಾತಿ ಪವಿತ್ರತಾಂ ।
ಪೂಜಾ ಪಂಚವಿಧಾ ತತ್ರ ಕಥಿತಾ ನಾರದಾಖಿಲೈಃ ॥ ೧೨೪ ॥

ಆಸುರೀ ಸೌತಕೀ ತ್ರಾಸೀ ಸಾಧನಾಭಾವಿನೀ ತಥಾ ।
ದೌರ್ಬೋಧೀ ಚ ಕ್ರಮಾದಾಸಾಂ ಲಕ್ಷಣಾನಿ ಶೃಣುಷ್ವ ಮೇ ॥ ೧೨೫ ॥

---

ಚಕ್ರ, ಶಿಲಾಲಿಂಗ, ವಿಘ್ನೇಶ್ವರ, ಸೂರ್ಯದ್ವಯ ಮತ್ತು ಶಕ್ತಿತ್ರಯ ಇವುಗಳನ್ನು ಒಂದೆಡೆಯಲ್ಲಿ ಪೂಜಿಸಬಾರದು. ಹಾಗೆ ಪೂಜಿಸುವುದು ದುಃಖಪ್ರದವಾಗುವುದು. ಶುಭವಾದ ವಿಷ್ಣುಪಾದೋದಕವು ಅಕಾಲಮೃತ್ಯುವನ್ನು ಪರಿಹರಿಸುವುದು. ಸಕಲ ರೋಗಗಳನ್ನು ನಾಶಪಡಿಸುವುದು ಮತ್ತು ಸಮಸ್ತ ಪಾಪಗಳನ್ನು ಕಳೆಯುವುದು.

೧೨೩. ಆಯಾಯಾ ದೇವತಾ ಭಕ್ತರು ಆಯಾಯಾ ದೇವತೆಗಳಿಗೆ ನಿವೇದನ ಮಾಡಿದುದನ್ನು ಸ್ವೀಕರಿಸಬೇಕು. ಶಿವ ನಿರ್ಮಾಲ್ಯವಾದ ಪತ್ರೆ, ಪುಷ್ಪ, ಫಲ, ನೀರು ಇವು ಗ್ರಾಹ್ಯವಲ್ಲ.

೧೨೪-೧೨೫. ಸಾಲಗ್ರಾಮಶಿಲೆಯನ್ನು ಸ್ಪರ್ಶಮಾಡುವುದರಿಂದ ಸಮಸ್ತವೂ ಪವಿತ್ರವಾಗುವುದು. ನಾರದನೇ! ಪೂಜೆಯು ಆಸುರೀ, ಸೌತಿಕೀ, ತ್ರಾಸೀ, ಸಾಧನಾಭಾವಿನೀ ಮತ್ತು ದೌರ್ಬೋಧಿ ಎಂಬುದಾಗಿ ಐದು ವಿಧವೆಂದು ಎಲ್ಲರಿಂದಲೂ ಉಕ್ತವಾಗಿದೆ. ಕ್ರಮವಾಗಿ ಇವುಗಳ ಲಕ್ಷಣಗಳನ್ನು ಹೇಳುತ್ತೇನೆ ಕೇಳು.

ರೋಗಾದಿಯುಕ್ತೋ ನ ಸ್ನಾಯಾನ್ನ ಜಪೇನ್ನ ಚ ಪೂಜಯೇತ್ ।
ವಿಲೋಕ್ಯ ಪೂಜಾಂ ದೇವಸ್ಯ ಮೂರ್ತಿಂ ವಾ ಸೂರ್ಯಮಂಡಲಂ ॥೧೨೬॥

ಪ್ರಣಮ್ಯಾಥ ಸ್ಮರನ್ಮಂತ್ರಮರ್ಪಯೇತ್ಕುಸುಮಾಂಜಲಿಂ ।
ರೋಗೇ ನಿವೃತ್ತೇ ಸ್ನಾತ್ವಾಽಥ ನತ್ವಾ ಸಂಪೂಜಯೇದ್ಗುರುಂ ॥ ೧೨೭ ॥

ತ್ವತ್ಪ್ರಸಾದಾಜ್ಜಗನ್ನಾಥ ಜಗತ್ಪೂಜ್ಯ ದಯಾನಿಧೇ ।
ಪೂಜಾವಿಚ್ಛೇದದೋಷೋ ಮೇ ಮಾಸ್ತ್ವಿತಿ ಪ್ರಾರ್ಥಯೇಚ್ಚ ತಂ ॥೧೨೮॥

ದ್ವಿಜಾನಪಿ ಚ ಸಂಪೂಜ್ಯ ಯಥಾಶಕ್ತ್ಯಾ ಪ್ರತೋಷ್ಯ ಚ ।
ತೇಭ್ಯಶ್ಚಾಶಿಷಮಾದಾಯ ದೇವಂ ಪ್ರಾಗ್ವತ್ತತೋಽರ್ಚಯೇತ್ ॥ ೧೨೯ ॥

ಆಸುರೀ ಕಥಿತಾಹ್ಯೇಷಾ ಸೌತಕ್ಯಥ ನಿಗದ್ಯತೇ ।
ಸೂತಕಂ ದ್ವಿವಿಧಂ ಪ್ರೋಕ್ತಂ ಜಾತಾಖ್ಯಂ ಮೃತಸಂಜ್ಞಕಂ ॥ ೧೩೦ ॥

---

೧೨೬-೧೨೮. ರೋಗಾದಿಗಳಿಂದ ಪೀಡಿತನು ಸ್ನಾನ, ಜಪ, ಪೂಜೆಗಳನ್ನು ಮಾಡಬಾರದು. ದೇವರ ಪೂಜೆ, ಪ್ರತಿಮೆ, ಇಲ್ಲವೇ ಸೂರ್ಯಮಂಡಲ ಇವುಗಳನ್ನು ನೋಡಿ ನಮಸ್ಕರಿಸಿ, ಮಂತ್ರವನ್ನು ಸ್ಮರಿಸುತ್ತಾ ಪುಷ್ಪಾಂಜಲಿಯನ್ನರ್ಪಿಸಬೇಕು. ರೋಗವು ವಾಸಿಯಾದಮೇಲೆ ಸ್ನಾನಮಾಡಿ ಗುರುಗಳಿಗೆ ನಮಸ್ಕಾರಮಾಡಿ ಪೂಜೆಮಾಡಬೇಕು. ಜಗದೊಡೆಯನೇ! ಜಗತ್ಪೂಜ್ಯ! ದಯಾಕರ! ಪೂಜೆಯನ್ನು ಬಿಟ್ಟಿದ್ದರಿಂದ ಬಂದ ಪಾಪವು ನಿನ್ನ ಅನುಗ್ರಹದಿಂದ ಪರಿಹಾರವಾಗಲಿ ಎಂದು ಅವನನ್ನು ಪ್ರಾರ್ಥಿಸಬೇಕು.

೧೨೯. ಬ್ರಾಹ್ಮಣರನ್ನು ಪೂಜಿಸಿ, ತನ್ನ ಶಕ್ತ್ಯನುಸಾರ ಅವರನ್ನು ತೃಪ್ತಿಪಡಿಸಿ ಅವರಿಂದ ಆಶೀರ್ವಾದ ಪಡೆದು ಆಮೇಲೆ ಎಂದಿನಂತೆ ದೇವರನ್ನು ಪೂಜಿಸಬೇಕು.

೧೩೦. ಈ ರೀತಿಯಾದ ಪೂಜೆಯು ಆಸುರಿಯೆನಿಸುವುದು. ಇನ್ನು ಮುಂದೆ ಸೌತಕೀಪೂಜಾ ವಿಧಾನವು ನಿರೂಪಿಸಲ್ಪಡುವುದು. ಸೂತಕವು, ಹುಟ್ಟುವುದರಿಂದ ಜಾತಸೂತಕವೆಂದೂ, ಸಾಯುವುದರಿಂದ ಮೃತಸೂತಕವೆಂದೂ ಎರಡು ವಿಧವು ಎಂದು ಉಕ್ತವಾಗಿದೆ.

ತತ್ರ ಸ್ನಾತ್ವಾ ಮಾನಸೀಂ ತು ಕೃತ್ವಾ ಸಂಧ್ಯಾಂ ಸಮಾಹಿತಃ ।
ಮನಸೈವ ಯಜೇದ್ದೇವಂ ಮನಸೈವ ಜಪೇನ್ಮನುಂ ॥ ೧೩೧ ॥

ನಿವೃತ್ತೇ ಸೂತಕೇ ಪ್ರಾಗ್ವತ್ಸಂಪೂಜ್ಯ ಚ ಗುರುಂ ದ್ವಿಜಾನ್ ।
ತೇಭ್ಯಶ್ಚಾಶಿಷಮಾದಾಯ ತತೋ ನಿತ್ಯಕ್ರಮಂ ಚರೇತ್ ॥ ೧೩೨ ॥

ಏಷಾ ತು ಸೌತಕೀ ಪ್ರೋಕ್ತಾ ತ್ರಾಸೀ ಚಾಥ ನಿಗದ್ಯತೇ ।
ದುಷ್ಟೇಭ್ಯಸ್ತ್ರಸಮಾಪನ್ನೋ ಯಥಾಲಬ್ಧೋಪಚಾರಕೈಃ ॥ ೧೩೩ ॥

ಮಾನಸೈರ್ವಾ ಯಜೇದ್ದೇವಂ ತ್ರಾಸೀ ಸಾ ಪರಿಕೀರ್ತಿತಾ ।
ಪೂಜಾಸಾಧನವಸ್ತೂನಾಮಸಾಮರ್ಥ್ಯೇ ತು ಸರ್ವತಃ ॥ ೧೩೪ ॥

---

೧೩೧. ಆ ಸೂತಕಗಳು ಬಂದಾಗ ಸ್ನಾನ ಮಾಡಿ ಸಮಾಧಾನಚಿತ್ತ ದಿಂದ ಮನಸ್ಸಿನಲ್ಲಿಯೇ ಸಂಧ್ಯೆಯನ್ನು ಅನುಸಂಧಾನಮಾಡಿ ಮನಸ್ಸಿನಿಂದಲೇ ದೇವರನ್ನು ಪೂಜಿಸಬೇಕು. ಹಾಗೆಯೇ ಮಂತ್ರವನ್ನೂ ಜಪಿಸಬೇಕು.

೧೩೨. ಸೂತಕವು ಹೋದಮೇಲೆ ಹಿಂದಿನಂತೆ ಗುರು ದ್ವಿಜರನ್ನು ಪೂಜಿಸಿ, ಅವರಿಂದಾಶೀರ್ವಾದವನ್ನು ಪಡೆದು ಅನಂತರ ನಿತ್ಯಕ್ರಮವನ್ನು ಆಚರಿಸಬೇಕು.

೧೩೩-೧೩೫. ಇದು ಸೌತಕೀಪೂಜೆಯೆನಿಸುವುದು. ಇನ್ನು ಮುಂದೆ ತ್ರಾಸೀಪೂಜೆಯ ವಿಧಾನವು ನಿರೂಪಿಸಲ್ಪಡುತ್ತದೆ :—ದುಷ್ಟರ ದೆಸೆಯಿಂದ ಭಯಗ್ರಸ್ತನಾದಾಗ, ಲಭಿಸಿದಷ್ಟು ಸಾಧನಗಳಿಂದ ಅಥವಾ ಮಾನಸ ಸಾಧನ ಗಳಿಂದಲಾದರೂ, ದೇವರನ್ನು ಪೂಜಿಸಬೇಕು. ಅದು ತ್ರಾಸೀಪೂಜೆಯೆನಿಸು ವುದು. ಪೂಜೋಪಯುಕ್ತವಾದ ಪದಾರ್ಥಗಳನ್ನು ಸ್ವಲ್ಪವಾಗಿ ಶೇಖರಿಸು ವುದಕ್ಕೂ ಸಾಧ್ಯವಿಲ್ಲದಿದ್ದರೆ, ಪುಷ್ಪ, ಪತ್ರೆ, ಫಲಗಳಿಂದ ಅಥವಾ ಮಾನಸಿಕ ವಾದ ಅನುಸಂಧಾನದಿಂದಲಾದರೂ ಸ್ವಾಮಿಯನ್ನು ಪೂಜಿಸಬೇಕು. ಈ

ಪುಷ್ಪೈಃ ಪತ್ರೈಃ ಫಲೈರ್ವಾಽಪಿ ಮನಸಾ ವಾ ಯಜೇದ್ವಿಭುಂ ।
ಸಾಧನಾಭಾವಿನೀ ಹ್ಯೇಷಾ ದೌರ್ಬೋಧೀ ಶೃಣು ನಾರದ ॥ ೧೩೫ ॥

ಸ್ತ್ರಿಯೋ ವೃದ್ಧಾಸ್ತಥಾ ಬಾಲಾಃ ಮೂರ್ಖಾಸ್ತೈಸ್ತು ಯಥಾಕ್ರಮಂ ।
ಯಥಾಜ್ಞಾಯಾ ಕೃತಾ ಸಾ ತು ದೌರ್ಬೋಧೀತಿ ಪ್ರಕೀರ್ತಿತಾ ॥ ೧೩೬ ॥

ಏವಂ ಯಥಾಕಥಂಚಿತ್ತು ಪೂಜಾಂ ಕುರ್ಯಾದ್ಧಿ ಸಾಧಕಃ ।
ದೇವಪೂಜಾವಿಹೀನೋ ಯಃ ಸ ಗಚ್ಛೇನ್ನರಕಂ ಧ್ರುವಂ ॥ ೧೩೭ ॥

ವೈಶ್ವದೇವಾದಿಕಂ ಕೃತ್ವಾ ಭೋಜಯೇದ್ದ್ವಿಜಸತ್ತಮಾನ್ ।
ದೇವೇ ನಿವೇದಿತಂ ಪಶ್ಚಾದ್ಭುಂಜೀತ ಸ್ವಗಣೈಃ ಸ್ವಯಂ ॥ ೧೩೮ ॥

ಆಚಮ್ಯಾನನಶುದ್ಧಿಂ ಚ ಕೃತ್ವಾ ತಿಷ್ಠೇತ್ಕ್ಷಿಯತ್ಕ್ಷಣಂ ।
ಪುರಾಣಮಿತಿಹಾಸಂ ಚ ಶೃಣುಯಾತ್ಸ್ವಜನೈಃ ಸಹ ॥ ೧೩೯ ॥

---

ರೀತಿಯ ಪೂಜೆಯು ಸಾಧನಾಭಾವಿನೀಪೂಜೆಯೆನಿಸುವುದು. ನಾರದನೇ! ದೌರ್ಬೋಧಿನೀಪೂಜೆಯ ವಿಧಾನವನ್ನು ಹೇಳುವೆನು ಕೇಳು.

೧೩೬. ಪೂಜಾ ವಿಧಾನವನ್ನರಿಯದ ಸ್ತ್ರೀಯರು, ವೃದ್ಧರು, ಬಾಲಕರು, ಮೂರ್ಖರು ಇವರಿಂದಾಚರಿಸಲ್ಪಡುವ ಅಕ್ರಮ ಪೂಜೆಯು ದೌರ್ಬೋಧಿನೀಪೂಜೆಯೆನಿಸುವುದು.

೧೩೭. ಈ ಪ್ರಕಾರ ಹೇಗಾದರೂ ಪೂಜೆಯನ್ನು ಸಾಧಕನು ಮಾಡಬೇಕು. ದೇವರಪೂಜೆಯನ್ನು ಮಾಡದಿರುವವನು ಸ್ಥಿರವಾದ ನರಕವನ್ನು ಹೊಂದುವನು.

೧೩೮. ವೈಶ್ವದೇವ, ಬಲಿಹರಣಗಳನ್ನು ಮಾಡಿ, ದ್ವಿಜೋತ್ತಮರಿಗೆ ಭೋಜನವನ್ನು ಮಾಡಿಸಬೇಕು. ಅನಂತರ ದೇವರಿಗೆ ನಿವೇದಿತವಾದ ಅನ್ನಶೇಷವನ್ನು ತನ್ನ ಪರಿವಾರದೊಡನೆ ಭೋಜನಮಾಡಬೇಕು.

೧೩೯. ಊಟವಾದ ಮೇಲೆ ಬಾಯಿಯನ್ನು ತೊಳೆದುಕೊಂಡು, ಆಚಮನ ಮಾಡಿ, ಸ್ವಲ್ಪ ಹೊತ್ತು ಬಂಧುಗಳೊಡನೆ ಇತಿಹಾಸ ಪುರಾಣಗಳನ್ನು ಶ್ರವಣಮಾಡಬೇಕು.

**ಸಮರ್ಥಃ ಸರ್ವಕಲ್ಪೇಷು ಯೋऽನುಕಲ್ಪಂ ಸಮಾಚರೇತ್ ।**
**ನ ಸಾಂಗಶಯಿಕಂ ತಸ್ಯ ದುರ್ಮತೇರ್ಜಾಯತೇ ಫಲಂ ॥ ೧೪೦ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ದೇವಪೂಜಾನಿರೂಪಣಂ ನಾಮ ಸಪ್ತಷಷ್ಟಿತಮೋऽಧ್ಯಾಯಃ**

---

೧೪೦. ಉತ್ತಮ ಕಲ್ಪದಲ್ಲಿ ಪೂಜೆ ಮಾಡಲು ಸಮರ್ಥನಾದವನು ಅಮುಖ್ಯ ಕಲ್ಪವನ್ನು ಆಚರಿಸಿದರೆ ಅಂತಹ ದುರ್ಮತಿಪುರುಷನಿಗೆ ಸಾಂಗ ಕರ್ಮಫಲವು ಖಂಡಿತವಾಗಿ ಲಭಿಸುವುದಿಲ್ಲ.

ಇಂತು ಶ್ರೀ ಬೃಹನ್ನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ಮೂರನೆಯ ಪಾದದಲ್ಲಿ ದೇವಪೂಜಾನಿರೂಪಣವೆಂಬ ಅರವತ್ತೇಳನೆಯ ಅಧ್ಯಾಯವು ಮುಗಿದುದು.

## ಕಥಾಸಂಗ್ರಹ

ದೇವಪೂಜಾವಿಧಾನವನ್ನು ಹೇಳಲುಪಕ್ರಮಿಸಿ ಸಾಮಾನ್ಯ ಅರ್ಘ್ಯ ಪ್ರಕಾರವನ್ನು ನಿರೂಪಿಸಿ, ಕಲಶ ಪೂಜೆ, ಶಂಖ ಪೂಜೆ, ಪೀಠ ಪೂಜೆ, ಆವರಣ ಪೂಜೆಗಳ ಕ್ರಮವನ್ನು ವಿವರಿಸಿ ಷೋಡಶೋಪಚಾರಗಳನ್ನೂ, ನಾನಾ ದೇವತೆಗಳಿಗೆ ಪೂಜಿಸಲರ್ಹವಾದ ಪುಷ್ಪಗಳನ್ನೂ ವಿವೇಚನೆಮಾಡಿ, ಭಿನ್ನ ಭಿನ್ನ ದೇವತಾ ಪೂಜೆಗಳ ವಿಧಾನವನ್ನು ವಿವರಿಸಿ, ಪಂಚವಿಧಪೂಜೆಗಳ ಸ್ವರೂಪವನ್ನೂ ವ್ಯಕ್ತಪಡಿಸಿ, ಸಾಲಗ್ರಾಮದ ಮಹಿಮೆಯನ್ನೂ ವರ್ಣಿಸಿ, ಪೂಜೆಯ ಫಲವನ್ನೂ ನಿರೂಪಿಸಿ, ಪೂಜೆ ಮಾಡದೇ ಇರುವವನಿಗಾಗುವ ಅನರ್ಥವನ್ನೂ ಹೇಳಿದೆ.



# ಅಷ್ಟಷಷ್ಟಿತಮೋऽಧ್ಯಾಯಃ

ಸನತ್ಕುಮಾರ ಉವಾಚ

ಅಥ ವಕ್ಷ್ಯೇ ಗಣೇಶಸ್ಯ ಮಂತ್ರಾನ್ಸರ್ವೇಷ್ಟದಾಯಕಾನ್ ।
ಯಾನ್ಸಮಾರಾಧ್ಯ ವಿಪ್ರೇಂದ್ರ ಸಾಧಕೋ ಭುಕ್ತಿಮುಕ್ತಿಮಾನ್ ॥ ೧ ॥

ಅವ್ಯಯೋ ವಿಷ್ಣುವನಿತಾ ಶಂಭುಸ್ತ್ರೀ ಮೀನಕೇತನಃ ।
ಸ್ಮೃತಿರ್ಮಾಂಸೇಂದುಮಾಯಾಢ್ಯಾ ಸಾ ಪುನಶ್ಚಂದ್ರಶೇಖರಾ ॥ ೨ ॥

ಜೇಂತೋ ಗಣಪತಿಸ್ತೋಯಂ ಭುಜಂಗೋ ವರದೇತಿ ಚ ।
ಸರ್ವಾಂತೇ ಜನಮುಚ್ಚಾರ್ಯ ತತೋ ಮೇ ವಶಮಾನಯ ॥ ೩ ॥

ವಹ್ನಿಪ್ರಿಯಾಂತೋ ಮಂತ್ರೋऽಯಮಷ್ಟಾವಿಂಶತಿವರ್ಣವಾನ್ ।
ಗಣಕೋऽಸ್ಯ ಮುನಿಶ್ಛಂದೋ ಗಾಯತ್ರೀ ನಿಚೃದನ್ವಿತಾ ॥ ೪ ॥

## ಅರವತ್ತೆಂಟನೆಯ ಅಧ್ಯಾಯವು.

೧. ಶ್ರೀಸನತ್ಕುಮಾರನು ಹೇಳಿದನು.—ಬ್ರಾಹ್ಮಣವರ್ಯನಾದ ನಾರದನೇ ! ಸಾಧಕನು ಯಾವ ಮಂತ್ರಗಳನ್ನು ಜಪಿಸುವುದರಿಂದ ಇಲ್ಲಿ ಭೋಗ ಪರಲೋಕದಲ್ಲಿ ಮುಕ್ತಿ ಇವುಗಳನ್ನು ಪಡೆಯುವನೋ, ಅಂತಹ ಸಕಲೇಷ್ಟ ಪ್ರದಗಳಾದ ಗಣೇಶ ಮಂತ್ರಗಳನ್ನು ಹೇಳುವೆನು

೨-೪. (ಅವ್ಯಯ= ಓಂ, ವಿಷ್ಣುವನಿತಾ= ಶ್ರೀಂ, ಶಂಭುಸ್ತ್ರೀ= ಹ್ರೀಂ, ಮೀನಕೇತನ= ಕ್ಲೀಂ (ಸ್ಮೃತಿ= ಗ, ಮಾಂಸ= ಲ, ಇಂದು= ೦, ಮಾಯಾ =ಔ) ಮಾಂಸೇಂದು ಮಾಯಾಢ್ಯಾ ಸ್ಮೃತಿಃ= ಗ್ಲೌಂ, ಸಾ = ಗ+ಚಂದ್ರ= ೦.= ಗಂ, ತೋಯ= ವ, ಭುಜಂಗ= ರ, ವಹ್ನಿಪ್ರಿಯಾ =ಸ್ವಾಹಾ.)

ಈಶ್ಲೋಕಗಳಲ್ಲಿ ಇಪ್ಪತ್ತೆಂಟು ಅಕ್ಷರಗಳುಳ್ಳ ಮಹಾಗಣಪತಿಮಂತ್ರವು ಉಕ್ತವಾಗಿದೆ. ಮಂತ್ರ:—‘ ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೇ ವರ ವರದ ಸರ್ವಜನಂ ಮೇ ವಶಮಾನಯ ಸ್ವಾಹಾ.’

ಗಣೇಶೋ ದೇವತಾ ಬೀಜಂ ಷಟ್‌ಶಕ್ತಿಸ್ತದಾದಿಕಾ ।
ಶ್ರೀಮನ್ಮಹಾಗಣಪತಿಪ್ರೀತಯೇ ವಿನಿಯೋಗಕಃ ॥ ೫ ॥

ಋಷಿಃ ಶಿರಸಿ ವಕ್ತ್ರೇ ತು ಛಂದಶ್ಚ ಹೃದಿ ದೇವತಾಂ ।
ಗುಹ್ಯೇ ಬೀಜಂ ಪದೋಃ ಶಕ್ತಿಂ ನ್ಯಸೇತ್ಸಾಧಕಸತ್ತಮಃ ॥ ೬ ॥

ಷಡ್ದೀರ್ಘಾರ್ಢ್ಯೇನ ಬೀಜೇನ ಪಂಚಬೀಜಾದಿನಾ ಪುನಃ ।
ಷಡಂಗಾನಿ ನ್ಯಸೇದಸ್ಯ ಜಾತಿಯುಕ್ತಾನಿ ಮಂತ್ರವಿತ್ ॥ ೭ ॥

ಶೈವೀ ಷಡಂಗಮುದ್ರಾತ್ರ ನ್ಯಸ್ತವ್ಯಾ ಹಿ ಷಡಂಗಕೇ ।
ಗಾವಾದ್ಯಂ ಚೈವ ಭೂಲೋಕಂ ನಾಭ್ಯಂತಂ ಪಾದಯೋರ್ನ್ಯಸೇತ್ ॥

---

೪-೫ ಈ ಮಂತ್ರಕ್ಕೆ ಗಣಕನು ಋಷಿಯು. ನಿಚೃದ್ಯುಕ್ತವಾದ ಗಾಯತ್ರಿಯೇ ಛಂದಸ್ಸು. ಗಣೇಶನೇ ದೇವತೆಯು. ಆರು ಶಕ್ತಿಗಳೇ ಬೀಜವು. ಈ ಮಂತ್ರವನ್ನು ಶ್ರೀಮನ್ಮಹಾಗಣಪತಿಯ ಪ್ರೀತ್ಯರ್ಥವಾಗಿ ವಿನಿಯೋಗಿಸಬೇಕು. ಎಂದರೆ ಈ ಮಂತ್ರವನ್ನು ಜಪಿಸುವುದರಿಂದ ಮಹಾಗಣಪತಿಯು ಪ್ರೀತನಾಗಿ ಸಕಲೇಷ್ಟಾರ್ಥಗಳನ್ನೂ ಅನುಗ್ರಹಿಸುವನೆಂದು ತಾತ್ಪರ್ಯ.

೬. ಸಾಧಕಶ್ರೇಷ್ಠನು ಋಷಿಯನ್ನು ಶಿರಸ್ಸಿನಲ್ಲಿಯೂ, ಮುಖದಲ್ಲಿ ಛಂದಸ್ಸನ್ನೂ, ಹೃದಯದಲ್ಲಿ ದೇವತೆಯನ್ನೂ, ಗುಹ್ಯಾವಯವದಲ್ಲಿ ಬೀಜವನ್ನೂ ಪಾದಗಳಲ್ಲಿ ಶಕ್ತಿಯನ್ನೂ ನ್ಯಾಸಮಾಡಬೇಕು.

೭. ಈ ಶ್ಲೋಕದಲ್ಲಿ ಮಹಾಗಣಪತಿ ಮಂತ್ರಾಂಗವಾದ ಷಡಂಗನ್ಯಾಸವು ಉಕ್ತವಾಗಿದೆ. (ಷಡ್ದೀರ್ಘ= ಆ, ಈ, ಊ, ಐ, ಔ, ಃ, ಜಾತಿ= ನಮಃ ಸ್ವಾಹಾ ವಷಟ್, ಹುಂ, ಔಷಟ್, ಫಟ್.) 'ಓಂ ಗಾಂ ಹೃದಯಾಯನಮಃ, ಶ್ರೀಂಗೀಂ ಶಿರಸೇ ಸ್ವಾಹಾ, ಹ್ರೀಂ ಗೂಂ ಶಿಖಾಯೈ ವಷಟ್, ಕ್ಲೀಂ ಗೈಂ ಕವಚಾಯ ಹುಂ, ಗ್ಲಾಂ ಗೌಂ ನೇತ್ರಾಭ್ಯಾಂ ಔಷಟ್, ಗಂ ಗಃ ಅಸ್ತ್ರಾಯ ಫಟ್' ಈರೀತಿಯಾಗಿ ಸಾಧಕನು ಷಡಂಗನ್ಯಾಸಮಾಡಬೇಕು.

೮-೧೦. ಈ ಮಂತ್ರ ಜಪಮಾಡುವ ಸಂದರ್ಭದಲ್ಲಿ ಹೃದಯಾದಿ ಆರು ಅಂಗಗಳಲ್ಲಿ ಶಿವಸಂಬಂಧಿಯಾದ ಆರು ಮುದ್ರೆಗಳನ್ನು ನ್ಯಾಸಮಾಡಬೇಕು.

ಗೀವರ್ಾದ್ಯಂ ಚ ಭುವರ್ಲೋಕಂ ಕಂಠಾಂತಂ ನಾಭಿತೋ ನ್ಯಸೇತ್ ।
ಸ್ವರ್ಲೋಕಂ ಚೈವ ಗೋಮಾದ್ಯಂ ಕಂಠಾದಿಮಸ್ತಕಾವಧಿ ॥ ೯ ॥

ವ್ಯಾಪಕಂ ಮೂಲಮಂತ್ರೇಣ ನ್ಯಾಸೋಽಯಂ ಭುವನಾಭಿಧಃ ।
ಮೂಲಮಂತ್ರಂ ಸಮುಚ್ಚಾರ್ಯ ಮಾತೃಕಾವರ್ಣವಿಾರಯೇತ್ ॥ ೧೦ ॥

ತದಂತೇಽಪಿ ಚ ಮೂಲಂ ಸ್ಯಾನ್ನಮೋಽಂತಂ ಮಾತೃಕಾಸ್ಥಲೇ ।
ಕ್ಷಾಂತಂ ವಿನ್ಯಸ್ಯ ಮೂಲೇನ ವ್ಯಾಪಕಂ ರಚಯೇತ್ಸುಧೀಃ ॥ ೧೧ ॥

ವರ್ಣನ್ಯಾಸೋಽಯಮಾಖ್ಯಾತಃ ಪದನ್ಯಾಸಸ್ತಥೋಚ್ಯತೇ ।
ಪಂಚತ್ರಿಬಾಣವಹ್ನೀಂದುಚಂದ್ರಾಕ್ಷಿನಿಗಮೈಃ ಕ್ರಮಾತ್ ॥ ೧೨ ॥

ವಿಭಕ್ತೈರ್ಮೂಲಗಾಯತ್ರ್ಯಾ ಹೃದಂತೈರಷ್ಟಭಿಃ ಪದೈಃ ।
ಫಾಲದೇಶೇ ಮುಖೇ ಕಂಠೇ ಹೃದಿ ನಾಭ್ಯೂರುಜಾನುಷು ॥ ೧೩ ॥

---

ಗಾಂ ಎಂಬ ದೀರ್ಘಯುಕ್ತ ವರ್ಣದಿಂದ ಪಾದಗಳಿಂದ ನಾಭಿಪರ್ಯಂತವಾಗಿ ಭೂಲೋಕವನ್ನು ನ್ಯಾಸಮಾಡಬೇಕು. "ಗೀಂ" ಎಂಬುದರಿಂದ ನಾಭಿಯಿಂದ ಕಂಠದವರೆಗೆ ಭುವರ್ಲೋಕವನ್ನು ನ್ಯಾಸಮಾಡಬೇಕು. "ಗೂಂ" ಎಂಬುದರಿಂದ ಕಂಠದಿಂದ ಶಿರಃಪರ್ಯಂತವಾಗಿ ಸ್ವರ್ಗಲೋಕವನ್ನು ನ್ಯಾಸಮಾಡಬೇಕು. ಮೂಲಮಂತ್ರದಿಂದ ಸರ್ವಾಂಗನ್ಯಾಸಮಾಡಬೇಕು. ಈ ನ್ಯಾಸವು ಭುವನ ನ್ಯಾಸವೆನಿಸುವುದು.

೧೦-೧೧. ವರ್ಣನ್ಯಾಸಕ್ರಮ:— ಆದ್ಯಂತಗಳಲ್ಲಿ ಮೂಲಮಂತ್ರವನ್ನುಚ್ಚರಿಸಿ ಮಧ್ಯದಲ್ಲಿ ಮಾತೃಕಾವರ್ಣಗಳನ್ನೂ ಕೊನೆಯಲ್ಲಿ 'ನಮಃ' ಎಂಬುದನ್ನೂ ಹೇಳುತ್ತಾ ಕ್ಷವರ್ಣಪರ್ಯಂತವಾಗಿ ಆಯಾವರ್ಣಗಳಸ್ಥಾನದಲ್ಲಿ ನ್ಯಾಸಮಾಡಬೇಕು. ಅನಂತರ ಮೂಲಮಂತ್ರದಿಂದ ಸರ್ವಾಂಗನ್ಯಾಸಮಾಡಬೇಕು. ಈರೀತಿಯಾದ ನ್ಯಾಸವು ವರ್ಣನ್ಯಾಸವೆಂದು ಹೇಳಿದೆ.

೧೨-೧೩. ಪದನ್ಯಾಸವನ್ನು ಹೇಳುವೆನು. ಮೂಲಗಾಯತ್ರಿಯಲ್ಲಿರುವ ಐದು, ಮೂರು, ಐದು, ಮೂರು, ಒಂದು, ಒಂದು, ಎರಡು, ನಾಲ್ಕು, ಅಕ್ಷರಗಳುಳ್ಳ ಎಂಟು ಪದಗಳನ್ನು ವಿಭಾಗಿಸಿಕೊಂಡು, 'ನಮಃ' ಎಂಬುದನ್ನು

ಪಾದಯೋಶ್ಚೈವ ವಿನ್ಯಸ್ಯ ಮೂಲೇನ ವ್ಯಾಪಕಂ ಚರೇತ್ ।
ವದೇತ್ತತ್ಪುರುಷಾಯಾಂತೇ ವಿದ್ಮಹೇತಿ ಪದಂ ತತಃ ॥ ೧೪ ॥

ವಕ್ರತುಂಡಾಯ ಶಬ್ದಾಂತೇ ಧೀಮಹೀತಿ ಸಮೀರಯೇತ್ ।
ತನ್ನೋ ದಂತಿಃ ಪ್ರಚೋದಯಾದಿತಿ ವದೇತ್ಪುನಃ ॥ ೧೫ ॥

ಏಷೋಽಕ್ತಾ ಮೂಲಗಾಯತ್ರೀ ಸರ್ವಸಿದ್ಧಿಪ್ರದಾಯಿನೀ ।
ಏವಂ ನ್ಯಾಸವಿಧಿಂ ಕೃತ್ವಾ ಧ್ಯಾಯೇದ್ದೇವಂ ಹೃದಂಬುಜೇ ॥ ೧೬ ॥

ಉದ್ಯದ್ಭಾಸ್ಕರ್ತಾಂಡಸದೃಶಂ ಲೋಕಸ್ಥಿತ್ಯಂತಕಾರಣಂ ।
ಸಶಕ್ತಿಕಂ ಭೂಷಿತಾಂಗಂ ದಂತಚಕ್ರಾದ್ಯುದಾಯುಧಂ ॥ ೧೭ ॥

ಏವಂ ಧ್ಯಾತ್ವಾ ಚತುಶ್ಚತ್ವಾರಿಂಶತ್ಸಾಹಸ್ರಸಂಯುತಂ ।
ಚತುರ್ಲಕ್ಷಂ ಜಪೇನ್ಮಂತ್ರಂ ಅಷ್ಟದ್ರವ್ಯೈರ್ದಶಾಂಶತಃ ॥ ೧೮ ॥

---

ಸೇರಿಸಿ ಆ ಎಂಟು ಪದಗಳಿಂದ ಹಣೆ, ಮುಖ, ಕಂಠ, ಹೃದಯ, ನಾಭಿ, ತೊಡೆ, ಮೊಣಕಾಲು, ಪಾದ ಎಂಬ ಎಂಟು ಅಂಗಗಳಲ್ಲಿ ನ್ಯಾಸಮಾಡಿ ಮೂಲಮಂತ್ರದಿಂದ ಸರ್ವಾಂಗನ್ಯಾಸಮಾಡಬೇಕು. ಇದೇ ಪದನ್ಯಾಸವು.

೧೪-೧೬. "ತತ್ಪುರುಷಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ತನ್ನೋ ದಂತಿಃ ಪ್ರಚೋದಯಾತ್'' ಎಂಬುದೇ ಸಕಲಸಿದ್ಧಿದಾಯಕವಾದ ಮೂಲ ಗಾಯತ್ರಿಯು. ಈ ಪ್ರಕಾರ ನ್ಯಾಸವಿಧಾನವನ್ನಾಚರಿಸಿ ಹೃದಯಕಮಲದ ದೇವತೆಯನ್ನು ಧ್ಯಾನಿಸಬೇಕು.

೧೭. ಉದಯಿಸುತ್ತಿರುವ ಸೂರ್ಯನಿಗೆ ಸಮಾನನು, ಲೋಕಸ್ಥಿತಿ ಸಂಹಾರಗಳಿಗೆ ಕಾರಣನು, ಶಕ್ತಿಸಹಿತನು, ಅಲಂಕೃತಾವಯವೋಪೇತನು, ದಂತ, ಚಕ್ರ, ಮುಂತಾದ ಆಯುಧವುಳ್ಳವನೂ ಆಗಿರುವ ದೇವತೆಯನ್ನು ಧ್ಯಾನಿಸಬೇಕು.

೧೮-೨೦. ಈ ಪ್ರಕಾರ ಧ್ಯಾನಿಸಿ ನಾಲ್ಕುಲಕ್ಷ ನಲವತ್ತುನಾಲ್ಕು ಬಾರಿ ಮಂತ್ರವನ್ನು ಜಪಿಸಬೇಕು. ಮಂತ್ರಜಪಕರ್ತನು ಸಂಸ್ಕಾರ ಮಾಡಲ್ಪಟ್ಟ ಅಗ್ನಿಯಲ್ಲಿ ವಿಧಾನೋಕ್ತ ಪ್ರಕಾರ ಜಪದ ಹತ್ತನೆಯ ಒಂದು ಭಾಗ ಎಂದರೆ

ಜುಹುಯಾದ್ವಿಧಿವನ್ಮಂತ್ರೀ ಸಂಸ್ಕೃತೇ ಹವ್ಯವಾಹನೇ ।
ಇಕ್ಷವಃ ಸಕ್ತವೋ ಮೋಚಾಫಲಾನಿ ಚಿಪಿಟಾಸ್ತಿಲಾಃ ॥ ೧೯ ॥

ಮೋದಕಾ ನಾರಿಕೇಳಾನಿ ಲಾಜಾ ದ್ರವ್ಯಾಷ್ಟಕಂ ಸ್ಮೃತಂ ।
ಪೀಠಮಾಧಾರಶಕ್ತ್ಯಾದಿ ಪರತತ್ವಾಂತಮರ್ಚಯೇತ್ ॥ ೨೦ ॥

ಷಟ್ಕೋಣಾಂತಸ್ತ್ರಿಕೋಣಂ ಚ ಬಹಿರಷ್ಟದಲಂ ಲಿಖೇತ್ ।
ಭೂಪುರಂ ತದ್ಬಹಿಃ ಕೃತ್ವಾ ಗಣೇಶಂ ತತ್ರ ಪೂಜಯೇತ್ ॥ ೨೧ ॥

ತೀವ್ರಾಖ್ಯಾ ಜ್ವಾಲಿನೀ ನಂದಾ ಭೋಗದಾ ಕಾಮರೂಪಿಣೀ ।
ಉಗ್ರಾ ತೇಜೋವತೀ ಸತ್ಯಾ ನವಮೀ ವಿಘ್ನನಾಶಿನೀ ॥ ೨೨ ॥

ಸರ್ವಾದಿಶಕ್ತಿಕಮಲಾಸನಾಯ ಹೃದಯಾಂತಿಕಃ ।
ಪೀಠಮಂತ್ರೋಯಮೇತೇನ ದದ್ಯಾದಾಸನಮುತ್ತಮಂ ॥ ೨೩ ॥

---

ನಲವತ್ತುನಾಲ್ಕುಸಾವಿರದ ನಾನೂರಾವರ್ತಿ ಅಷ್ಟದ್ರವ್ಯಗಳಿಂದ ಹೋಮ ಮಾಡಬೇಕು. ಕಬ್ಬು, ಹಿಟ್ಟು, ಬಾಳೇಹಣ್ಣು, ಅವಲಕ್ಕಿ, ಎಳ್ಳು, ಕಡುಬು, ತೆಂಗಿನಕಾಯಿ ಮತ್ತು ಅರಳು ಇವು ಹೋಮೋಪಯುಕ್ತವಾದ ಎಂಟು ದ್ರವ್ಯಗಳು. ಆಧಾರಶಕ್ತಿಯಿಂದ ಪರತತ್ವಾಂತವಾಗಿ ಪೀಠವನ್ನು ಅರ್ಚಿಸಬೇಕು.

೨೧. ತ್ರಿಕೋಣಮಂಡಲವನ್ನೊಳಗೊಂಡಿರುವ ಷಟ್ಕೋಣವನ್ನು, ಅದರ ಹೊರಭಾಗದಲ್ಲಿ ಅಷ್ಟದಳವನ್ನು ವಿನ್ಯಾಸಮಾಡಬೇಕು. ಅದರ ಹೊರಗೆ ಚತುರಸ್ರರೇಖೆಯನ್ನು ಬರೆದು ಆ ಮಂಡಲದಲ್ಲಿ ಗಣೇಶನನ್ನು ಪೂಜಿಸಬೇಕು.

೨೨ ತೀವ್ರಾ, ಜ್ವಾಲಿನೀ, ನಂದಾ, ಭೋಗದಾ, ಕಾಮರೂಪಿಣೀ, ಉಗ್ರಾ, ತೇಜೋವತಿ, ಸತ್ಯಾ, ವಿಘ್ನನಾಶಿನೀ ಈ ಒಂಬತ್ತೂ ಶಕ್ತಿಗಳು.

೨೩. 'ಸರ್ವಾದಿಶಕ್ತಿಕಮಲಾಸನಾಯ ನಮಃ' ಎಂಬುದು ಪೀಠ ಮಂತ್ರವು. ಇದನ್ನು ಹೇಳಿ ಉತ್ತಮವಾದ ಆಸನವನ್ನು ಕೊಡಬೇಕು.

ತತ್ರಾವಾಹ್ಯ ಗಣಾಧೀಶಂ ಮಧ್ಯೇ ಸಂಪೂಜ್ಯ ಯತ್ನತಃ ।
ತ್ರಿಕೋಣಬಾಹ್ಯೇ ಪೂರ್ವಾದಿ ಚತುರ್ದಿಕ್ಷ್ವರ್ಚಯೇತ್ಕ್ರಮಾತ್ ॥ ೨೪ ॥

ಶ್ರಿಯಂ ಶ್ರಿಯಃಪತಿಂ ಚೈವ ಗೌರೀಂ ಗೌರೀಪತಿಂ ತಥಾ ।
ರತಿಂ ರತಿಪತಿಂ ಪಶ್ಚಾನ್ಮಹೀಪೂರ್ವಂ ಚ ಪೋತ್ರಿಣಂ ॥ ೨೫ ॥

ಕ್ರಮಾದ್ಬಿಲ್ವವಟಾಶ್ವತ್ಥಪ್ರಿಯಂಗೂನಾಮಧೋಽರ್ಚಯೇತ್ ।
ರಮಾ ಪದ್ಮದ್ವಯಕರಾ ಶಂಖಚಕ್ರಧರೋ ಹರಿಃ ॥ ೨೬ ॥

ಗೌರೀ ಪಾಶಾಂಕುಶಧರಾ ಟಂಕಶೂಲಧರೋ ಹರಃ ।
ರತಿಃ ಪದ್ಮಕರಾ ಪುಷ್ಪಬಾಣಚಾಪಧರಃ ಸ್ಮರಃ ॥ ೨೭ ॥

ಶೂಕವ್ರೀಹ್ಯಗ್ರಹಸ್ತಾ ಭೂಃ ಪೋತ್ರೀ ಚಕ್ರಗದಾಧರಃ ।
ದೇವಾಗ್ರೇ ಪೂಜಯೇಲ್ಲಕ್ಷ್ಮೀಸಹಿತಂ ತು ವಿನಾಯಕಂ ॥ ೨೮ ॥

೨೪. ಅದರ ಮಧ್ಯದಲ್ಲಿ ಗಣಾಧೀಶನನ್ನು ಆವಾಹನಮಾಡಿ ಪೂಜಿಸಿ, ಪ್ರಯತ್ನಪೂರ್ವಕವಾಗಿ ತ್ರಿಕೋಣಮಂಡಲದ ಹೊರಭಾಗದಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಕ್ರಮವಾಗಿ ಪೂಜೆಮಾಡಬೇಕು

೨೫-೨೬. ಪೂರ್ವದಿಕ್ಕಿನಲ್ಲಿ ಬಿಲ್ವವೃಕ್ಷದ ಕೆಳಗೆ ಶ್ರೀದೇವಿ ಮತ್ತು ಶ್ರೀಪತಿಯನ್ನೂ, ದಕ್ಷಿಣದಿಕ್ಕಿನಲ್ಲಿ ಆಲದಮರದ ಕೆಳಗೆ ಗೌರೀ ಮತ್ತು ಗೌರೀಪತಿಯನ್ನೂ, ಪಶ್ಚಿಮದಿಕ್ಕಿನಲ್ಲಿ ಅರಳೀಮರದ ಕೆಳಗೆ ರತಿ ಮತ್ತು ರತಿಪತಿಯಾದ ಕಾಮನನ್ನೂ, ಉತ್ತರದಿಕ್ಕಿನಲ್ಲಿ ಗೋಣೀಮರದ ಕೆಳಗೆ ಭೂದೇವಿ ಮತ್ತು ವರಾಹನನ್ನೂ ಪೂಜಿಸಬೇಕು.

೨೬-೨೮. ಲಕ್ಷ್ಮಿಯು ಎರಡುಕೈಗಳಲ್ಲಿಯೂ ಪದ್ಮವನ್ನೂ, ಹರಿಯು ಶಂಖಚಕ್ರಗಳನ್ನೂ ಧರಿಸಿರುವರು. ಗೌರಿಯು ಪಾಶಅಂಕುಶಗಳನ್ನೂ, ಈಶ್ವರನು ಟಂಕಶೂಲಗಳನ್ನೂ ಹಸ್ತಗಳಲ್ಲಿ ಧರಿಸಿರುವರು. ರತಿಯು ಕೈಯಲ್ಲಿ ಪದ್ಮವನ್ನೂ, ಮನ್ಮಥನು ಪುಷ್ಪಬಾಣ, ಧನುಸ್ಸು ಇವುಗಳನ್ನೂ ಧರಿಸಿರುವರು. ಭೂದೇವಿಯು ಮುಂದಿನ ಕೈಯಲ್ಲಿ ಶೂಕವ್ರೀಹಿಯನ್ನೂ ವರಾಹನುಚಕ್ರ, ಗದೆಗಳನ್ನೂ ಧರಿಸಿರುವರು. ದೇವರಮುಂದೆ ಲಕ್ಷ್ಮೀಸಹಿತನಾದ ವಿನಾಯಕನನ್ನು ಪೂಜಿಸಬೇಕು.

ಪೂಜಯೇತ್ ಷಟ್ಸು ಕೋಣೇಷು ಹ್ಯಾಮೋದಾದ್ಯಾನ್ಪ್ರಿಯಾಯುತಾನ್।
ಆಮೋದಂ ಸಿದ್ಧಿಸಂಯುಕ್ತಮಗ್ರತಃ ಪರಿಪೂಜಯೇತ್ ॥ ೨೯ ॥

ಪ್ರಮೋದಂ ಚಾಗ್ನಿಕೋಣೇ ತು ಸಮೃದ್ಧಿಸಹಿತಂ ಯಜೇತ್ ।
ಈಶಕೋಣೇ ಯಜೇತ್ಕೀರ್ತಿಸಂಯುತಂ ಸುಮುಖಂ ತಥಾ ॥ ೩೦ ॥

ವಾರುಣೇ ಮದನಾವತ್ಯಾ ಸಂಯುತಂ ದುರ್ಮುಖಂ ಯಜೇತ್ ।
ಯಜೇನ್ನೈರುತ್ಯಕೋಣೇ ತು ವಿಘ್ನಂಚ ಸಮದದ್ರವಂ ॥ ೩೧ ॥

ದ್ರಾವಿಣ್ಯಾ ವಿಘ್ನಕರ್ತಾರಂ ವಾಯುಕೋಣೇ ಸಮರ್ಚಯೇತ್ ।
ಪಾಶಾಂಕುಶಾಭಯಕರಾಂಸ್ತರುಣಾರ್ಕಸಮಪ್ರಭಾನ್ ॥ ೩೨ ॥

ಕಪೋಲವಿಗಲದ್ದಾನಗಂಧಲುಬ್ಧಾಲಿಶೋಭಿತಾನ್ ।
ಷಟ್ಕೋಣೋಭಯಪಾರ್ಶ್ವೇ ತು ಶಂಖಪದ್ಮನಿಧೀ ಕ್ರಮಾತ್ ॥ ೩೩ ॥

೨೯. ಆರು ಕೋಣ ಎಂದರೆ ಮೂಲೆಗಳಲ್ಲಿ ಆಮೋದಮುಂತಾದವರನ್ನು ಅವರವರ ಪತ್ನೀಸಮೇತವಾಗಿ ಪೂಜಿಸಬೇಕು. ಪೂರ್ವದಿಕ್ಕಿನಲ್ಲಿ ಸಿದ್ಧಿಸಹಿತನಾದ ಆಮೋದನನ್ನು ಪೂಜಿಸಬೇಕು.

೩೦. ಅದರ ಆಗ್ನೇಯಕೋಣದಲ್ಲಿ ಸಮೃದ್ಧಿಸಮೇತನಾದ ಪ್ರಮೋದನನು ಪೂಜಿಸಬೇಕು. ಈಶಾನ್ಯಮೂಲೆಯಲ್ಲಿ ಕೀರ್ತಿಸಹಿತನಾದ ಸುಮುಖನನು ಪೂಜಿಸಬೇಕು.

೩೧–೩೨. ವರುಣಮೂಲೆಯಲ್ಲಿ ಮದನಾವತಿಯಿಂದ ಯುಕ್ತನಾದ ದುರ್ಮುಖನನ್ನು ಪೂಜಿಸಬೇಕು. ನೈರುತ್ಯಮೂಲೆಯಲ್ಲಿ ಮದದ್ರವಾ ಎಂಬ ಸ್ತ್ರೀಯಿಂದ ಯುಕ್ತನಾದ ವಿಘ್ನನನ್ನು ಪೂಜಿಸಬೇಕು. ವಾಯುವ್ಯಮೂಲೆಯಲ್ಲಿ ದ್ರಾವಿಣೀಶಕ್ತಿಸಹಿತನಾದ ವಿಘ್ನಕರ್ತೃವನ್ನು ಪೂಜಿಸಬೇಕು

೩೩–೩೫ ಪಾಶ, ಅಂಕುಶ, ಅಭಯ, ಮುದ್ರೆಗಳನ್ನು ಹಸ್ತದಲ್ಲಿ ಧರಿಸಿರುವ, ಮಧ್ಯಾಹ್ನಕಾಲದ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಕಪೋಲಗಳಲ್ಲಿ ಸುರಿಯುತ್ತಿರುವ ಗಂಧದ ಆಶೆಯಿಂದ ಮುತ್ತುತ್ತಿರುವ ದುಂಬಿಗಳಿಂದ

**ಸಹಿತೌ ನಿಜಶಕ್ತಿಭ್ಯಾಂ ಧ್ಯಾತ್ವಾ ಪೂರ್ವವದರ್ಚಯೇತ್ ।**
**ಕೇಸರೇಷು ಷಡಂಗಾನಿ ಪತ್ರೇಷ್ವಷ್ಟೌ ತು ಮಾತರಃ ॥ ೩೪ ॥**

**ಇಂದ್ರಾದ್ಯಾನಪಿ ವಜ್ರಾದೀನ್ಪೂಜಯೇದ್ಧರಣೀಗೃಹೇ ।**
**ಏವಮಾರಾಧ್ಯ ವಿಘ್ನೇಶಂ ಸಾಧಯೇತ್ಸ್ವಮನೋರಥಾನ್ ॥ ೩೫ ॥**

**ಚತುಶ್ಚತ್ವಾರಿಂಶತಾಢ್ಯಚತುಃಶತಮತಂದ್ರಿತಃ ।**
**ತರ್ಪಯೇದಂಬುಭಿಃ ಶುದ್ಧೈಃ ಗಜಾಸ್ಯಂ ದಿನಶಃ ಸುಧೀಃ ॥ ೩೬ ॥**

**ಪದ್ಮೈಸ್ತು ವಶಯೇದ್ಭೂಪಾಂಸ್ತತ್ಪತ್ನೀಶ್ಚೋತ್ಪಲೈಸ್ತಥಾ ।**
**ಕುಮುದೈರ್ಮಂತ್ರಿಣೋಽಶ್ವತ್ಥಸಮಿದ್ಭಿರ್ವಾಡವಾನ್ ಶುಭೈಃ ॥ ೩೭ ॥**

**ಉದುಂಬರೋತ್ಥೈರ್ನೃಪತೀನ್ವೈಶ್ಯಾನ್ ಪ್ಲಕ್ಷಸಮುದ್ಭವೈಃ ।**
**ವಟೋದ್ಭವೈಃ ಸಮಿದ್ಭಿಶ್ಚ ವಶಯೇದಂತಿಮಾನ್ಬುಧಃ ॥ ೩೮ ॥**

---

ಅಲಂಕೃತವಾದ ಮುಖಕಮಲಗಳುಳ್ಳ ದೇವತೆಗಳನ್ನೂ ಮತ್ತು ಷಟ್ಕೋಣ ಮಂಡಲದ ಎರಡು ಭಾಗಗಳಲ್ಲಿಯೂ ಶಂಖನಿಧಿ, ಪದ್ಮನಿಧಿಗಳನ್ನು ಕ್ರಮವಾಗಿ ಅವರವರ ಶಕ್ತಿಸಹಿತವಾಗಿ ಧ್ಯಾನಿಸಿ ಹಿಂದಿನಂತೆ ಪೂಜಿಸಬೇಕು. ಕೇಸರಗಳಲ್ಲಿ ಷಡಂಗ, ಪತ್ರಗಳಲ್ಲಿ ಅಷ್ಟಮಾತೃಗಳು, ಚತುರಸ್ರಮಂಡಲದಲ್ಲಿ ಇಂದ್ರಾದಿ ದಿಕ್ಪಾಲಕರು, ವಜ್ರಾದಿ ಅವರ ಆಯುಧ ಇವುಗಳನ್ನೂ ಪೂಜಿಸಬೇಕು. ಈರೀತಿಯಾಗಿ ವಿಘ್ನೇಶ್ವರನನ್ನು ಆರಾಧಿಸಿ ತನ್ನ ಇಷ್ಟಾರ್ಥಗಳನ್ನು ಸಾಧಿಸಿಕೊಳ್ಳಬೇಕು.

೩೬. ಜ್ಞಾನಿಯು ಆಲಸ್ಯವಿಲ್ಲದೆ ಪ್ರತಿದಿನವೂ ಶುದ್ಧೋದಕಗಳಿಂದ ನಾನೂರುನಲವತ್ತುನಾಲ್ಕುಸಾರಿ ಗಜಾನನನಿಗೆ ತರ್ಪಣ ಕೊಡಬೇಕು.

೩೭–೩೮. ಪದ್ಮಹೋಮಗಳಿಂದ ರಾಜರನ್ನೂ, ಕನ್ನೈದಿಲೆಯ ಹೋಮಗಳಿಂದ ಅವರಪತ್ನಿಯರನ್ನೂ, ಕುಮುದಪುಷ್ಪ ಹೋಮಗಳಿಂದ ಮಂತ್ರಿಗಳನ್ನೂ, ಅಶ್ವತ್ಥಸಮಿತ್ತುಗಳ ಹೋಮದಿಂದ ಅಶ್ವಸಮೂಹವನ್ನೂ, ಅತ್ತಿಯ ಸಮಿತ್ತುಗಳ ಹೋಮದಿಂದ ದೊರೆಗಳನ್ನೂ, ಬಸರೀ ಸಮಿತ್ತುಗಳ ಹೋಮದಿಂದ ವೈಶ್ಯರನ್ನೂ, ಆಲದ ಸಮಿತ್ತುಗಳ ಹೋಮದಿಂದ ಶೂದ್ರರನ್ನೂ ಜ್ಞಾನಿಯು ಸ್ವಾಧೀನಪಡಿಸಿಕೊಳ್ಳಬಹುದು.

ಆಜ್ಯೇನ ಶ್ರಿಯಮಾಪ್ನೋತಿ ಸ್ವರ್ಣಾಪ್ತಿರ್ಮಧುನಾ ಭವೇತ್ ।
ಗೋದುಗ್ಧೇನ ಗವಾಂ ಲಾಭೋ ದಧ್ನಾ ಸರ್ವಸಮೃದ್ಧಿಮಾನ್ ॥ ೩೯ ॥

ಅನ್ನಾಪ್ತಿರನ್ನಹೋಮೇನ ಸ್ಯಾದೇವಾತ್ರ ನ ಸಂಶಯಃ ।
ವಾಸಾಂಸಿ ಲಭತೇ ಹುತ್ವಾ ಕುಸುಂಭಕುಸುಮೈಃ ಶುಭೈಃ ॥ ೪೦ ॥

ಅಥ ಸರ್ವೇಷ್ಟದಂ ವಕ್ಷ್ಯೇ ಚತುರಾವೃತ್ತಿತರ್ಪಣಂ ।
ಮೂಲೇನಾದೌ ಚತುರ್ವಾರಂ ಪ್ರತ್ಯೇಕಂ ಚ ಪ್ರತರ್ಪಯೇತ್ ॥ ೪೧ ॥

ಪೂರ್ವಮಂತ್ರಾಕ್ಷರೈರ್ಮಂತ್ರೈಃ ಸ್ವಾಹಾಂತೈಶ್ಚ ಚತುಶ್ಚತುಃ ।
ಮೂಲಮಂತ್ರೈಶ್ಚತುರ್ವಾರಪೂರ್ವಕಂ ಸಂಪ್ರತರ್ಪ್ಯ ಚ ॥ ೪೨ ॥

ಮಿಥುನಾದೀಂಸ್ತತಃ ಪಶ್ಚಾತ್ಪೂರ್ವವತ್ಸಂಪ್ರತರ್ಪಯೇತ್ ।
ದೇವೇನ ಸಹಿತಾಂ ಶಕ್ತಿಂ ಶಕ್ತ್ಯಾ ಚ ಸಹಿತಂ ತು ತಂ ॥ ೪೩ ॥

---

೩೯–೪೦. ತುಪ್ಪದ ಹೋಮದಿಂದ ಐಶ್ವರ್ಯಪ್ರಾಪ್ತಿಯೂ, ಜೇನು ತುಪ್ಪದ ಹೋಮದಿಂದ ಬಂಗಾರ ಲಾಭವೂ, ಗೋಕ್ಷೀರದ ಹೋಮದಿಂದ ಗೋಲಾಭವೂ, ಮೊಸರಿನ ಹೋಮದಿಂದ ಸರ್ವೇಷ್ಟಸಿದ್ಧಿಯೂ, ಅನ್ನ ಹೋಮದಿಂದ ಅನ್ನಪ್ರಾಪ್ತಿಯೂ, ಕುಸುಂಭವೆಂಬ ಕೆಂಪು ಹೂವಿನ ಹೋಮದಿಂದ ವಸ್ತ್ರ ಲಾಭವೂ ಆಗುತ್ತದೆ. ಸಂದೇಹವಿಲ್ಲ.

೪೧-೪೫. ಈಗ ಸರ್ವೇಷ್ಟದಾಯಕವಾದ ನಾಲ್ಕು ನಾಲ್ಕು ಬಾರಿ ಮಾಡುವ ತರ್ಪಣವಿಧಾನವನ್ನು ಹೇಳುವೆನು:— ಮೊದಲು ಮೂಲಮಂತ್ರ ದಿಂದ ನಾಲ್ಕುಬಾರಿ ತರ್ಪಣಮಾಡಬೇಕು. ಬಳಿಕ ಹಿಂದೆ ಹೇಳಿರುವ ಮಹಾ ಗಣಪತಿ ಮಂತ್ರದ ಒಂದೊಂದು ಅಕ್ಷರದಿಂದಲೂ ನಾಲ್ಕು ನಾಲ್ಕುಬಾರಿ ತರ್ಪಣ ಮಾಡಬೇಕು. ಒಂದೊಂದು ಅಕ್ಷರತರ್ಪಣಕ್ಕೂ ಮೊದಲು ಸ್ವಾಹಾಂತವಾದ ಮೂಲಮಂತ್ರದಿಂದ ನಾಲ್ಕುನಾಲ್ಕು ಬಾರಿ ತರ್ಪಣಮಾಡಬೇಕು. ಬಳಿಕ ಮೂಲಮಂತ್ರದಿಂದ ನಾಲ್ಕುಬಾರಿ ತರ್ಪಣಮಾಡಿ, ಶ್ರೀ ಶ್ರೀಪತ್ಯಾದಿ ಐದು ಮಿಥುನಗಳು, ಶಕ್ತಿಸಹಿತರಾದ ಆಮೋದಾದಿ ಆರು ದೇವತೆಗಳು, ಶಕ್ತಿಸಹಿತ ರಾದ ಶಂಖನಿಧಿ, ಪದ್ಮನಿಧಿಗಳು ಒಟ್ಟು ಹದಿಮೂರು ಜೊತೆಗಳಿಗೂ, ದೇವ

ಏವಂ ಚ ಷಡ್ವಿಂಶತಿಧಾ ಮಿಥುನಾನಿ ಭವಂತಿ ಹಿ ।
ಸ್ವನಾಮಾದ್ಯರ್ಣಬೀಜಾನಿ ತಾನಿ ಸಂತರ್ಪಯೇತ್ಕ್ರಮಾತ್ ॥ ೪೪ ॥

ಭವೇತ್ಸಂಭೂಯ ಸ ಚತುಶ್ಚತ್ವಾರಿಂಶಚ್ಚತುಃಶತಂ ।
ಏವಂ ಸಂತರ್ಪ್ಯ ತತ್ಪಶ್ಚಾತ್ಪೂರ್ವವತ್ಸೋಪಚಾರಕೈಃ ॥ ೪೫ ॥

ಸರ್ವಾಭೀಷ್ಟಂ ಚ ಸಂಪ್ರಾರ್ಥ್ಯ ಪ್ರಣಮ್ಯೋದ್ವಾಸಯೇತ್ಸುಧೀಃ ।
ಭಾದ್ರಕೃಷ್ಣಚತುರ್ಥ್ಯಾದಿ ಪ್ರತಿಮಾಸಮತಂದ್ರಿತಃ ॥ ೪೬ ॥

ಆರಭ್ಯಾರ್ಕೋದಯಂ ಮಂತ್ರೀ ಯಾವಚ್ಚಂದ್ರೋದಯೋ ಭವೇತ್ ।
ತಾವನ್ನೋಪವಿಶೇದ್ಭೂಮೌ ಜಿತವಾಕ್ಸ್ಥಿರಮಾನಸಃ ॥ ೪೭ ॥

---

ಸಹಿತ ಶಕ್ತಿ, ಶಕ್ತಿಸಹಿತದೇವ ಈಪ್ರಕಾರ ಕ್ರಮವ್ಯತ್ಯಾಸದಿಂದಾಗುವ ಇಪ್ಪತ್ತಾರು ಮಿಥುನಗಳಿಗೆ ನಾಲ್ಕುನಾಲ್ಕುಬಾರಿ ತರ್ಪಣ ಕೊಡಬೇಕು. ಒಂದೊಂದು ಮಿಥುನ ತರ್ಪಣಾದಿಯಲ್ಲಿಯೂ ಪುನಃ ಮೂಲಮಂತ್ರ ತರ್ಪಣವನ್ನು ನಾಲ್ಕು ನಾಲ್ಕು ಬಾರಿ ಮಾಡಬೇಕು. ಕೊನೆಯಲ್ಲಿಯೂ ನಾಲ್ಕು ಬಾರಿ ಮೂಲಮಂತ್ರ ತರ್ಪಣವನ್ನಾಚರಿಸಬೇಕು. ಈ ದೇವತೆಗಳಿಗೆ ತರ್ಪಣ ಕೊಡುವಾಗ ಅವರವರ ಹೆಸರಿನ ಮೊದಲನೆಯ ಅಕ್ಷರವೆಂಬ ಬೀಜಾಕ್ಷರದಿಂದ ಸಹಿತವಾದ, ದ್ವಿತಿಯಾ ವಿಭಕ್ತ್ಯಂತ ನಾಮವನ್ನೂ ಅದರ ಮುಂದೆ 'ತರ್ಪಯಾಮಿ' ಎಂಬುದನ್ನೂ ಸೇರಿಸಿ ಹೇಳಬೇಕು. ಉದಾಹರಣೆ:— 'ಶ್ರೀಂ ಶ್ರೀಪತಿಸಹಿತಾಂ ಶ್ರೀಯಂ ತರ್ಪಯಾಮಿ, ಶ್ರೀಂ ಶ್ರೀಸಹಿತಂ ಶ್ರೀಪತಿಂ ತರ್ಪಯಾಮಿ' ಇತ್ಯಾದಿ. ಈರೀತಿಯಾಗಿ ಕೊಡುವ ತರ್ಪಣಗಳನ್ನು ಸೇರಿಸಿದರೆ ಒಟ್ಟು ನಾನೂರು ನಲವತ್ತುನಾಲ್ಕು ತರ್ಪಣಗಳಾಗುವುವು. ಹೀಗೆ ತರ್ಪಣಮಾಡಿ ನಂತರ ಹಿಂದಿನಂತೆ ಉಪಚಾರಸಹಿತವಾಗಿ ಪೂಜಿಸಬೇಕು.

೪೬.೪೭. ಅನಂತರ ಮನೋಭೀಷ್ಟಗಳೆಲ್ಲವನ್ನೂ ಪ್ರಾರ್ಥಿಸಿ, ನಮಸ್ಕರಿಸಿ ವಿಸರ್ಜನೆ ಮಾಡಬೇಕು. ಭಾದ್ರಪದ ಕೃಷ್ಣ ಚೌತಿಯದಿನ ಪ್ರಾರಂಭಿಸಿ ಪ್ರತಿ ತಿಂಗಳುಗಳಲ್ಲಿಯೂ ಚತುರ್ಥಿಯದಿನ ಆಲಸ್ಯವಿಲ್ಲದೇ ಸೂರ್ಯೋದಯ

ತತಶ್ಚಂದ್ರೋದಯೇ ಮಂತ್ರೀ ಪೂಜಯೇದ್ಗಣನಾಯಕಂ ।
ಪೂರ್ವೋಕ್ತವಿಧಿನಾ ಸಮ್ಯಗ್ನಾನಾಪುಷ್ಪೋಪಹಾರಕೈಃ ॥ ೪೮ ॥

ಏಕವಿಂಶತಿಸಂಖ್ಯಾಕಾನ್ಮೋದಕಾಂಶ್ಚ ನಿವೇದಯೇತ್ ।
ತದಗ್ರೇ ಪ್ರಜಪೇನ್ಮಂತ್ರಮಷ್ಟೋತ್ತರಸಹಸ್ರಕಂ ॥ ೪೯ ॥

ತತಃ ಕರ್ಪೂರಕಾಶ್ಮೀರರಕ್ತಪುಷ್ಪೈಃ ಸಚಂದನೈಃ ।
ಅರ್ಘ್ಯಂ ದತ್ವಾ ತು ಮೂಲಾಂತೇ ಜಪೇಂತಂ ಗಣಪತಿಂ ತತಃ ॥ ೫೦ ॥

ಇದಮರ್ಘ್ಯಂ ಕಲ್ಪಯಾಮಿ ಹೃದಂತೋಽರ್ಘ್ಯಮನುರ್ಮತಃ ।
ಸ್ತುತ್ವಾ ನತ್ವಾ ವಿಸೃಜ್ಯಾಽಥ ಯಜೇಚ್ಚಂದ್ರಮಸಂ ಪುನಃ ॥ ೫೧ ॥

ಅರ್ಘ್ಯಂ ದದ್ಯಾಚ್ಚತುರ್ವಾರಂ ಪೂಜಯಿತ್ವಾ ಗುರುಂ ತತಃ ।
ನಿವೇದಿತೇಷು ವಿಪ್ರಾಯ ದದ್ಯಾದರ್ಧಾಂಶ್ಚ ಮೋದಕಾನ್ ॥ ೫೨ ॥

---

ಕಾಲದಿಂದ ಚಂದ್ರೋದಯವಾಗುವವರೆಗೂ ಮೌನದಿಂದ ಸ್ಥಿರಚಿತ್ತನಾಗಿ ಸೆಂಪ ಮೇಲೆ ಕುಳಿತುಕೊಳ್ಳದೇ ಜಪಮಾಡಬೇಕು. ಚಂದ್ರೋದಯವಾದ ಮೇಲೆ ಮಂತ್ರಿಯು ಪೂರ್ವೋಕ್ತ ವಿಧಾನಪ್ರಕಾರ ನಾನಾವಿಧ ಪುಷ್ಪಗಳಿಂದ ಗಣನಾಥನನ್ನು ಚೆನ್ನಾಗಿ ಪೂಜಿಸಬೇಕು.

೪೯. ಇಪ್ಪತ್ತೊಂದು ಕಡುಬುಗಳನ್ನು ನೈವೇದ್ಯ ಮಾಡಬೇಕು. ಆ ಗಣೇಶನ ಮುಂದೆ ಸಾವಿರೆಂಟಾವರ್ತಿ ಮಂತ್ರವನ್ನು ಜಪಿಸಬೇಕು.

೫೦-೫೧. ಅನಂತರ ಕರ್ಪೂರ, ಪದ್ಮ, ಕೆಂಪು ಹೂವು, ಇವುಗಳಿಂದ ಗಂಧಸಹಿತವಾದ ಜಲದಿಂದ ಅರ್ಘ್ಯವನ್ನು ಕೊಡಬೇಕು. "ಓಂ ಶ್ರೀಂ ಹ್ರೀಂ ಕ್ಲೀಂ ಗ್ಲೌಂ ಗಂ ಗಣಪತಯೇ ವರವರದ ಸರ್ವಜನಂ ಮೇ ವಶಮಾನಯ ಸ್ವಾಹಾ ನಮಃ" ಗಣಪತಯೇ ಇದಮರ್ಘ್ಯಂ ಕಲ್ಪಯಾಮಿ ಎಂಬುದೇ ಅರ್ಘ್ಯ ಮಂತ್ರವೆಂದು ಸಮ್ಮತವಾಗಿದೆ. ಸ್ತೋತ್ರಮಾಡಿ ನಮಸ್ಕರಿಸಿ, ಗಣೇಶನನ್ನು ವಿಸರ್ಜನೆಮಾಡಿ ಆಮೇಲೆ ಪುನಃ ಚಂದ್ರನನ್ನು ಪೂಜಿಸಬೇಕು.

೫೨. ನಾಲ್ಕಾವರ್ತಿ ಅರ್ಘ್ಯವನ್ನು ಕೊಡಬೇಕು. ಅನಂತರ ಗುರು ಪೂಜೆಮಾಡಿ, ನಿವೇದನೆ ಮಾಡಲ್ಪಟ್ಟ ಕಡಬುಗಳಲ್ಲಿ ಅರ್ಧವನ್ನು ಬ್ರಾಹ್ಮಣರಿಗೆ ಕೊಡಬೇಕು.

ಸ್ವಯಮರ್ಧಾನ್ಪ್ರಭುಂಜೀತ ಬ್ರಹ್ಮಚಾರೀ ಜಿತೇಂದ್ರಿಯಃ ।
ಏವಂ ವ್ರತಂ ಯಃ ಕುರುತೇ ಸಮ್ಯಕ್ಸಂವತ್ಸರಾವಧಿ ॥ ೫೩ ॥

ಪುತ್ರಾನ್ಪೌತ್ರಾನ್ಸುಖಂ ವಿತ್ತಮಾರೋಗ್ಯಂ ಲಭತೇ ನರಃ ।
ಸೂರ್ಯೋದಯಾದಶಕ್ತಶ್ಚೇದಸ್ತಮಾರಭ್ಯ ಮಂತ್ರವಿತ್ ॥ ೫೪ ॥

ಚಂದ್ರೋದಯಾಂತಂ ಪೂರ್ವೋಕ್ತವಿಧಿನಾ ವ್ರತಮಾಚರೇತ್ ।
ಏವಂ ಕೃತೇಽಪಿ ಪೂರ್ವೋಕ್ತಂ ಫಲಮಾಪ್ನೋತಿ ನಿಶ್ಚಿತಂ ॥ ೫೫ ॥

ಗಣೇಶಪ್ರತಿಮಾಂ ದಂತಿದಂತೇನ ಕಪಿನ್ಯಾಪಿ ವಾ ।
ಗಜಭಗ್ನೇನ ನಿಂಬೇನ ಸಿತಾರ್ಕೇಣಾಥವಾ ಪುನಃ ॥ ೫೬ ॥

ಕೃತ್ವಾ ತಸ್ಯಾಂ ಸಮಾವಾಹ್ಯ ಪ್ರಾಣಸ್ಥಾಪನಪೂರ್ವಕಂ ।
ಅಭ್ಯರ್ಚ್ಯ ವಿಧಿವನ್ಮಂತ್ರೀ ರಾಹುಗ್ರಸ್ತೇ ನಿಶಾಕರೇ ॥ ೫೭ ॥

೫೩-೫೫. ಬ್ರಾಹ್ಮಣರಿಗೆ ಕೊಟ್ಟು ಉಳಿದ ಅರ್ಧಕಡುಬುಗಳನ್ನು ತಾನು ತಿನ್ನಬೇಕು. ಜಿತೇಂದ್ರಿಯನಾಗಿ ಬ್ರಹ್ಮಚರ್ಯದಿಂದ ರಾತ್ರಿಯನ್ನು ಕಳೆಯಬೇಕು. ಈ ಪ್ರಕಾರ ಒಂದುವರ್ಷ ಪರ್ಯಂತವಾಗಿ ವ್ರತವನ್ನು ಚೆನ್ನಾಗಿ ಮಾಡುವ ಮನುಷ್ಯನು ಮಕ್ಕಳು, ಮೊಮ್ಮಕ್ಕಳು, ಸುಖ, ಧನ, ಮತ್ತು ಆರೋಗ್ಯ ಇವುಗಳನ್ನು ಹೊಂದುವನು. ಸೂರ್ಯೋದಯಕಾಲದಿಂದಲೂ ವ್ರತವನ್ನು ಆಚರಿಸಲಶಕ್ತನಾದರೆ ಸೂರ್ಯಾಸ್ತಮಯ ಕಾಲದಿಂದ ಪ್ರಾರಂಭಿಸಿ ಮಂತ್ರಜ್ಞನು ಚಂದ್ರೋದಯಪರ್ಯಂತವಾಗಿ ಹಿಂದೆ ಹೇಳಿದ ವಿಧಾನದಿಂದ ವ್ರತವನ್ನಾಚರಿಸಬೇಕು. ಹೀಗೆ ಮಾಡಿದರೂ ಸಹ ಹಿಂದೆ ಹೇಳಿದ ಫಲವು ಖಂಡಿತವಾಗಿ ಲಭಿಸುವುದು.

೫೬-೫೮. ದಂತ ಅಥವಾ ಆನೆಯು ಮುರಿದಬೇವು, ಅಥವಾ ರಕ್ತಚಂದನ ಇಲ್ಲವೇ ಬಿಳಿಯ ಎಕ್ಕದ ಕಟ್ಟಿಗೆಯಿಂದಲಾದರೂ ಗಣೇಶ ಪ್ರತಿಮೆಯನ್ನು ಮಾಡಿ ಅದರಲ್ಲಿ ಗಣೇಶನನ್ನು ಆವಾಹನೆಮಾಡಿ ಪ್ರಾಣಪ್ರತಿಷ್ಠಾಪನಪೂರ್ವಕವಾಗಿ ಮಂತ್ರಿಯು ವಿದ್ಯುಕ್ತಪ್ರಕಾರವಾಗಿ ಪೂಜೆಮಾಡಿ ಚಂದ್ರಗ್ರಹಣವು ಪ್ರಾಪ್ತ

ಸ್ಪೃಷ್ಟ್ವಾ ಚೈವ ನಿರಾಹಾರಸ್ತಾಂ ಶಿಖಾಯಾಂ ಸಮುದ್ವಹನ್ ।
ದ್ಯೂತೇ ವಿವಾದೇ ಸಮರೇ ವ್ಯವಹಾರೇ ಜಯಂ ಲಭೇತ್ ॥ ೫೮ ॥

ಬೀಜಂ ವರಾಹೋ ಬಿಂದ್ವಾಢ್ಯೋ ಮನ್ವಿಂದ್ವಾಢ್ಯಾ ಕಲಾ ತತಃ ।
ಸ್ಮೃತಿರ್ಮಾಂಸೇಂದುಮನ್ವಾಢ್ಯಾ ಕರ್ಣೋಚ್ಛಿಷ್ಟಗಣೇ ವದೇತ್ ॥ ೫೯ ॥

ಬಕಃ ಸದೀರ್ಘಪವನೋ ಮಹಾಯಕ್ಷಾಯಯಂ ಬಲಿಃ ।
ಬಲಿಮಂತ್ರೋಯಮಾಖ್ಯಾತೋ ಸರ್ವೇಂದ್ವರ್ಣೋಖಿಲೇಷ್ಟದಃ ೬೦ ॥

ಪ್ರಣವೋ ಭುವನೇಶಾನೀ ಸ್ವಬೀಜಾಂತೇ ನವಾರ್ಣಕಃ ।
ಹಸ್ತೀತಿ ಚ ಪಿಶಾಚೀತಿ ಲಿಖೇ ಚೈವಾಗ್ನಿಸುಂದರೀ ॥ ೬೧ ॥

ನವಾರ್ಣೋಯಂ ಸಮುದ್ದಿಷ್ಟೋ ಭಜತಾಂ ಸರ್ವಸಿದ್ಧಿದಃ ।
ಪದೈಃ ಸರ್ವೇಣ ಮಂತ್ರೇಣ ಪಂಚಾಂಗಾನಿ ಪ್ರಕಲ್ಪಯೇತ್ ॥ ೬೨ ॥

---

ವಾದಾಗ ಉಪವಾಸದಿಂದ ಆ ಪ್ರತಿಮೆಯನ್ನು ಸ್ಪರ್ಶಮಾಡಿ ಶಿಖೆಯಲ್ಲಿ ಧರಿಸುವವನು ಜೂಜು, ವಿವಾದ, ಯುದ್ಧ ಮತ್ತು ವ್ಯವಹಾರ ಇವುಗಳಲ್ಲಿ ಜಯವನ್ನು ಪಡೆಯುವನು.

೫೯-೬೦. (ಬೀಜ= ಗ. ವರಾಹ= ಹ. ಬಿಂದು= ಂ. ಮನು= ಔ. ಕರ್ಣ= ಉ. ಬಕ= ಶ. ಪವನ= ಯ. ಇಂದು= ಂ. ಸ್ಮೃತಿ= ಗ. ಮಾಂಸ= ಲ. ಉಳಿದುದು ಶಬ್ದಸ್ವರೂಪವು.) 'ಗಂ ಹಂ ಕ್ಲೌಂ ಗ್ಲೌಂ ಉಚ್ಛಿಷ್ಟಗಣೇಶಾಯ ಮಹಾಯಕ್ಷಾಯಾಯಂ ಬಲಿಃ' ಎಂಬುದು ಹತ್ತೊಂಬತ್ತು ವರ್ಣಗಳುಳ್ಳ ಬಲಿಮಂತ್ರವೆಂದು ಉಕ್ತವಾಗಿದೆ. ಇದು ಸಕಲೇಷ್ಟದಾಯಕವು.

೬೧-೬೨. (ಭುವನೇಶಾನಿ= ಹ್ರೀಂ. ಅಗ್ನಿಸುಂದರೀ= ಸ್ವಾಹಾ.) 'ಹಸ್ತಿಪಿಶಾಚಿಲಿಖೇ ಸ್ವಾಹಾ' ಎಂಬುದು ಒಂಬತ್ತು ವರ್ಣವುಳ್ಳ ಉಚ್ಛಿಷ್ಟ ಗಣಪತಿಯ ಮಂತ್ರವೆಂದು ಉಕ್ತವಾಗಿದೆ. ಇದರ ಆದಿಯಲ್ಲಿ "ಓಂ, ಹ್ರೀಂ, ಗಂ" ಎಂಬ ಮೂರು ಅಕ್ಷರಗಳನ್ನು ಸೇರಿಸಿದರೆ "ಓಂ ಹ್ರೀಂ ಗಂ ಹಸ್ತಿ ಪಿಶಾಚಿಲಿಖೇ ಸ್ವಾಹಾ" ಎಂದಾಗುವ ಉಚ್ಛಿಷ್ಟಗಣಪತಿಯ ದ್ವಾದಶಾಕ್ಷರ ಮಂತ್ರವು ಆರಾಧಕನಿಗೆ ಸಕಲ ಸಿದ್ಧಿಪ್ರದವೆಂದು ಉಕ್ತವಾಗಿದೆ.

**ಅನ್ಯತ್ಸರ್ವಂ ಸಮಾನಂ ಸ್ಯಾತ್ಪೂರ್ವಮಂತ್ರೇಣ ನಾರದ ।**
**ಅಥಾಭಿಧಾಸ್ಯೇ ವಿಧಿವದ್ವಕ್ರತುಂಡಮನುತ್ತಮಂ ॥ ೬೩ ॥**

**ತೋಯಂ ವಿಧಿರ್ವಹ್ನಿಯುಕ್ತಕರ್ಣೇಂದ್ವಾಢ್ಯೋ ಹರಿಸ್ತಥಾ ।**
**ಸದೀರ್ಘೋ ದಾರಕೋ ವಾಯುರ್ವರ್ಮಾಂತೋಽಯಂ ಷಡರ್ಣಕಃ ॥**

**ಭಾರ್ಗವೋಽಸ್ಯ ಮುನಿಶ್ಛಂದೋಽನುಷ್ಟುಪ್ ದೇವೋ ಗಣಾಧಿಪಃ ।**
**ವಕ್ರತುಂಡಾಭಿಧೋ ಬೀಜಂ ವಂ ಶಕ್ತಿರ್ಯಮಿತೀರಿತಾ ॥ ೬೫ ॥**

**ತಾರಹೃನ್ಮಧ್ಯಗೈರ್ಮಂತ್ರವರ್ಣೈಶ್ಚಂದ್ರವಿಭೂಷಿತೈಃ ।**
**ಕೃತ್ವಾ ಷಡಂಗಮಂತ್ರಾರ್ಣಾನ್ನ್ಯಸ್ಯ ಭ್ರೂಮಧ್ಯೇ ಚ ಗಲೇ ಹೃದಿ ॥ ೬೬ ॥**

**ನಾಭೌ ಲಿಂಗೇ ಪದೇ ನ್ಯಸ್ಯಾಖಿಲೇನ ವ್ಯಾಪಕಂ ಚರೇತ್ ।**
**ಉದ್ಯದರ್ಕದ್ಯುತಿಂ ಹಸ್ತೈಃ ಪಾಶಾಂಕುಶವರಾಭಯಾನ್ ॥ ೬೭ ॥**

೬೨-೬೩. ಈ ಮಂತ್ರದ ನಾಲ್ಕು ಪದಗಳು ಮತ್ತು ಸಮಗ್ರಮಂತ್ರಗಳಿಂದ ಹೃದಯಾದಿ ಐದು ಅಂಗಗಳಲ್ಲಿ ನ್ಯಾಸಮಾಡಬೇಕು. ನಾರದನೇ ! ಈ ಮಂತ್ರಾಂಗವಾಗಿ ಮಾಡಬೇಕಾದ ಪೂಜಾದಿಗಳೆಲ್ಲವನ್ನೂ ಹಿಂದಿನಮಂತ್ರದಲ್ಲಿ ಹೇಳಿರುವಂತೆ ಆಚರಿಸಬೇಕು.

೬೩-೬೪. ಈಗ ವಕ್ರತುಂಡಗಣೇಶಮಂತ್ರವನ್ನು ಹೇಳುವೆನು. (ತೋಯ= ವ. ವಿಧಿ= ಕ. ವಹ್ನಿ= ರ. ಹರಿ= ತ. ಕರ್ಣ= ಉ. ಇಂದು= ಂ. ದಾರುಕ= ಡ. ವಾಯು= ಯ. ವರ್ಮ= ಹುಂ.) ''ವಕ್ರತುಂಡಾಯ ಹುಂ'' ಎಂಬುದೇ ಷಡಕ್ಷರ ವಕ್ರತುಂಡಮಂತ್ರವು.

೬೫. ಈಮಂತ್ರಕ್ಕೆ ಭಾರ್ಗವನು ಋಷಿಯು, ಅನುಷ್ಟುಪ್ ಛಂದಸ್ಸು, ವಕ್ರತುಂಡನಾಮಕನಾದ ಗಣಾಧಿಪನೇ ದೇವತೆಯು. 'ವಂ' ಎಂಬುದು ಬೀಜವು, 'ಯಂ' ಎಂಬುದು ಶಕ್ತಿಯು.

೬೬-೬೭. ಈ ಮಂತ್ರದ ಒಂದೊಂದು ವರ್ಣವನ್ನು ಮಧ್ಯದಲ್ಲಿಯೂ, ಓಂಕಾರವನ್ನು ಆದಿಯಲ್ಲಿಯೂ, ಕೊನೆಯಲ್ಲಿ ನಮಃ ಎಂಬುದನ್ನೂ ಸೇರಿಸಿ ''ಓಂ ವಂ ನಮಃ ಹೃದಯಾಯ ನಮಃ, ಓಂ ಕ್ರಂ ನಮಃ ಶಿರಸೇ ಸ್ವಾಹಾ'' ಇತ್ಯಾದಿರೀತಿಯಾಗಿ ಮಂತ್ರವನ್ನು ಹೇಳುತ್ತಾ ಷಡಂಗನ್ಯಾಸಮಾಡಿ ಬಳಿಕ

ದಧತಂ ಗಜವಕ್ತ್ರಂ ಚ ರಕ್ತಭೂಷಾಂಬರಂ ಭಜೇತ್ ।
ಧ್ಯಾತ್ವೈವಂ ಪ್ರಜಪೇತ್ತರ್ಕಲಕ್ಷಂ ದ್ರವ್ಯೈರ್ದಶಾಂಶಕಃ ॥ ೩೮ ॥

ಅಷ್ಟಭಿರ್ಜುಹುಯಾತ್ಪೀಠೇ ತೀವ್ರಾದಿಸಹಿತೇಽರ್ಚಯೇತ್ ।
ಮೂರ್ತಿಂ ಮೂಲೇನ ಸಂಕಲ್ಪ್ಯ ತಸ್ಯಾಮಾವಾಹ್ಯ ಪೂಜಯೇತ್ ।

ಷಟ್ಕೋಣೇಷು ಷಡಂಗಾನಿ ಪತ್ರೇಷ್ವಷ್ಟೌ ತು ಶಕ್ತಯಃ ।
ಯಜೇದ್ವಿದ್ಯಾಂ ವಿಧಾತ್ರೀಂ ಚ ಭೋಗದಾಂ ವಿಘ್ನಘಾತಿನೀಂ ॥ ೭೦ ॥

ನಿಧಿಪ್ರದೀಪಾಂ ಪಾಪಘ್ನೀಂ ಪುಣ್ಯಾಂ ಪಶ್ಚಾಚ್ಛಶಿಪ್ರಭಾಂ ।
ದಲಾಗ್ರೇಷು ವಕ್ರತುಂಡ ಏಕದಂಷ್ಟ್ರಮಹೋದರೌ ॥ ೭೧ ॥

ಹುಬ್ಬುಗಳಮಧ್ಯ, ಕಂಠ, ಹೃದಯ, ನಾಭಿ, ಲಿಂಗ, ಪಾದ ಎಂಬೀ ಆರು ಸ್ಥಾನಗಳಲ್ಲಿ ಮಂತ್ರದ ಒಂದೊಂದು ಅಕ್ಷರವನ್ನೂ ಕ್ರಮವಾಗಿ ನ್ಯಾಸಮಾಡಿ ಸಂಪೂರ್ಣಮಂತ್ರವನ್ನು ಹೇಳಿ ಸರ್ವಾಂಗನ್ಯಾಸಮಾಡಬೇಕು.

೩೭-೩೮. ಉದಯಿಸುವ ಸೂರ್ಯನಂತೆ ಕಾಂತಿಯುಳ್ಳ, ಹಸ್ತಗಳಲ್ಲಿ ಪಾಶ, ಅಂಕುಶ, ವರಮುದ್ರೆ, ಅಭಯಮುದ್ರೆಗಳನ್ನು ಧರಿಸಿರುವ, ಕೆಂಪು ಬಣ್ಣದ ಆಭರಣ ಮತ್ತು ವಸ್ತ್ರಗಳನ್ನು ಧರಿಸಿರುವ ಗಜಮುಖನನ್ನು ಧ್ಯಾನಿಸಬೇಕು.

೩೮. ಈ ಪ್ರಕಾರವಾಗಿ ಧ್ಯಾನಿಸಿ ಆರುಲಕ್ಷ ಸಾರಿ ಈ ಮಂತ್ರವನ್ನು ಜಪಿಸಬೇಕು. ಜಪದ ಹತ್ತನೆಯ ಒಂದು ಭಾಗದಷ್ಟು ಹಿಂದೆ ಹೇಳಿರುವ ಎಂಟು ದ್ರವ್ಯಗಳಿಂದ ಹೋಮಮಾಡಬೇಕು.

೩೯. ತೀವ್ರ ಮುಂತಾದ ಶಕ್ತಿಸಹಿತವಾದ ಪೀಠದಲ್ಲಿ ಗಣೇಶ ಪ್ರತಿಮೆಯನ್ನು ಮೂಲಮಂತ್ರದಿಂದ ಸ್ಥಾಪಿಸಿ ಅದರಲ್ಲಿ ಗಣೇಶನನ್ನು ಆವಾಹನೆ ಮಾಡಿ ಪೂಜಿಸಬೇಕು.

೭೦-೭೧. ಷಟ್ಕೋಣ ಎಂದರೆ ಆರು ಮೂಲೆಗಳಲ್ಲಿ ಆರು ಅಂಗಗಳನ್ನೂ, ಪತ್ರಗಳಲ್ಲಿ ಎಂಟುಶಕ್ತಿಗಳನ್ನೂ ಪೂಜಿಸಬೇಕು. ವಿದ್ಯೆ, ವಿಧಾತ್ರೀ, ಭೋಗದಾ, ವಿಘ್ನಘಾತಿನೀ, ನಿಧಿಪ್ರದೀಪಾ, ಪಾಪಘ್ನೀ, ಪುಣ್ಯ ಮತ್ತು ಶಶಿಪ್ರಭೇ ಇವೇ ಎಂಟು ಶಕ್ತಿಗಳು.

ಗಜಾಸ್ಯ ಲಂಬೋದರಕೌ ವಿಕಟೋ ವಿಘ್ನರಾಟ್ತಥಾ ।
ಧೂಮ್ರವರ್ಣಸ್ತತೋ ಬಾಹ್ಯೇ ಲೋಕೇಶಾನ್ಹೇತಿಸಂಯುತಾನ್ ॥ ೭೨ ॥

ಏವಮಾವರಣೈರಿಷ್ಟ್ವಾ ಪಂಚಭಿರ್ಗಣನಾಯಕಂ ।
ಸಾಧಯೇದಖಿಲಾನ್ಕಾಮಾನ್ವಕ್ರತುಂಡಪ್ರಸಾದತಃ ॥ ೭೩ ॥

ಲಬ್ಧ್ವಾ ಗುರುಮುಖಾನ್ಮಂತ್ರಂ ದೀಕ್ಷಾಸಂಸ್ಕಾರಪೂರ್ವಕಂ ।
ಬ್ರಹ್ಮಚಾರೀ ಹವಿಷ್ಯಾಶೀ ಸತ್ಯವಾಕ್ ಚ ಜಿತೇಂದ್ರಿಯಃ ॥ ೭೪ ॥

ಜಪೇದರ್ಕಸಹಸ್ರಂ ತು ಷಣ್ಮಾಸಂ ಹೋಮಸಂಯುತಂ ।
ದಾರಿದ್ರ್ಯಂ ತು ಪರಾಭೂಯ ಜಾಯತೇ ಧನದೋಪಮಃ ॥ ೭೫ ॥

ಚತುರ್ಥ್ಯಾದಿ ಚತುರ್ಥ್ಯಂತಂ ಜಪೇದಯುತಮಾದರಾತ್ ।
ಅಷ್ಟೋತ್ತರಶತಂ ನಿತ್ಯಂ ಹುತ್ವಾ ಪ್ರಾಗ್ವತ್ಫಲಂ ಲಭೇತ್ ॥ ೭೬ ॥

---

೭೧-೭೨ ದಳದ ಅಂತ್ಯಭಾಗಗಳಲ್ಲಿ ವಕ್ರತುಂಡ, ಏಕದಂಷ್ಟ್ರ, ಮಹೋದರ, ಗಜಾಸ್ಯ, ಲಂಬೋದರ, ವಿಕಟ, ವಿಘ್ನರಾಜ, ಮತ್ತು ಧೂಮವರ್ಣ ಇವರನ್ನೂ, ಬಾಹ್ಯಪ್ರದೇಶದಲ್ಲಿ ಆಯುಧಸಮೇತರಾದ ಲೋಕಪಾಲಕರನ್ನೂ ಪೂಜಿಸಬೇಕು.

೭೩. ಈರೀತಿಯಾಗಿ ಐದು ಆವರಣಗಳಿಂದ ಗಣನಾಥನನ್ನು ಪೂಜಿಸಿ ಅವನ ಅನುಗ್ರಹದಿಂದ ಸಕಲೇಷ್ಟಾರ್ಥಗಳನ್ನೂ ಪಡೆಯಬೇಕು.

೭೪-೭೫. ಗುರು ಮುಖದಿಂದ ದೀಕ್ಷೆ ಸಂಸ್ಕಾರ ಪೂರ್ವಕವಾಗಿ ಮಂತ್ರೋಪದೇಶವನ್ನು ಪಡೆದು ಬ್ರಹ್ಮಚಾರಿಯು ಹವಿಷ್ಯ ಭೋಕ್ತೃವು, ಸತ್ಯವಚನನು ಮತ್ತು ಜಿತೇಂದ್ರನೂ, ಆಗಿ ಹೋಮಸಹಿತವಾಗಿ ಆರು ತಿಂಗಳುಗಳ ಕಾಲ ಹನ್ನೆರಡು ಸಾವಿರಆವರ್ತಿ ಮಂತ್ರಜಪವನ್ನು ಮಾಡಬೇಕು. ಅದರಿಂದ ಬಡತನವು ಹೋಗಿ ಕುಬೇರನಂತೆ ಶ್ರೀಮಂತನಾಗುವನು.

೭೬. ಚತುರ್ಥಿಯಿಂದ ಇನ್ನೊಂದು ಚೌತಿಯವರೆಗೂ ಭಕ್ತಿಯಿಂದ ಹತ್ತುಸಾವಿರ ಜಪಮಾಡಿ ನಿತ್ಯವೂ ನೂರೆಂಟು ಹೋಮಮಾಡುತ್ತಾ ಬಂದರೆ ಹಿಂದೆ ಹೇಳಿದ ಫಲವು ಲಭಿಸುವುದು.

ಪಕ್ಷಯೋರುಭಯೋರ್ಮಂತ್ರೀ ಚತುರ್ಥ್ಯಾಂ ಜುಹುಯಾಚ್ಚ ತಂ ।
ಅಪೂಪೈರ್ವತ್ಸರೇ ಸ ಸ್ಯಾತ್ಸಮೃದ್ಧೇಃ ಪರಮಂ ಪದಂ ॥ ೭೭ ॥

ಅಂಗಾರಕಚತುರ್ಥ್ಯಾಂ ತು ದೇವಮಿಷ್ಟ್ವಾ ವಿಧಾನತಃ ।
ಹವಿಷಾ ಪಯಸಾನ್ನೇನ ನೈವೇದ್ಯಂ ಪರಿಕಲ್ಪಯೇತ್ ॥ ೭೮ ॥

ತತೋ ಗುರುಂ ಸಮಭ್ಯರ್ಚ್ಯ ಭೋಜಯೇದ್ವಿಧಿವತ್ಸುಧೀಃ ।
ನಿವೇದಿತೇನ ಜುಹುಯಾತ್ಸಹಸ್ರಂ ವಿಧಿವದ್ವಸುಂ ॥ ೭೯ ॥

ಏವಂ ಸಂವತ್ಸರಂ ಕೃತ್ವಾ ಮಹತೀಂ ಶ್ರಿಯಮಾಪ್ನುಯಾತ್ ।
ಅಥಾನ್ಯತ್ಸಾಧನಂ ವಕ್ಷ್ಯೇ ಲೋಕಾನಾಂ ಹಿತಕಾಮ್ಯಯಾ ॥ ೮೦ ॥

ಇಷ್ಟ್ವಾ ಗಣೇಶಂ ಪೃಥುಕೈಃ ಪಾಯಸಾಪೂಪಮೋದಕೈಃ ।
ನಾನಾಫಲೈಸ್ತತೋ ಮಂತ್ರೀ ಹರಿದ್ರಾಮಥ ಸೈಂಧವಂ ॥ ೮೧ ॥

---

೭೭. ಶುಕ್ಲ, ಕೃಷ್ಣ ಪಕ್ಷಗಳ ಚೌತಿದಿನಗಳೆರಡರಲ್ಲಿಯೂ ಅಪೂಪಗಳಿಂದ ಒಂದುವರ್ಷ ಗಣೇಶನನ್ನು ಉದ್ದೇಶಿಸಿ ಹೋಮಮಾಡಿದರೆ ಅವನಿಗೆ ಸಮೃದ್ಧಿಯ ಉತ್ತಮಸ್ಥಾನ ಎಂದರೆ ಸಂಪೂರ್ಣೇಷ್ಟಾರ್ಥವುಂಟಾಗುವುದು.

೭೮. ಮಂಗಳವಾರ ಸಹಿತವಾದ ಚೌತಿಯ ದಿನದಲ್ಲಿ ಕಲ್ಪೋಕ್ತ ಪ್ರಕಾರ ದೇವರನ್ನು ಪೂಜಿಸಿ ಕ್ಷೀರಾನ್ನರೂಪವಾದ ಹವಿಸ್ಸನ್ನು ನೀವೇದನೆ ಮಾಡಬೇಕು.

೭೯. ಅನಂತರ ಜ್ಞಾನಿಯು ಗುರುಪೂಜೆಯನ್ನು ಮಾಡಿ ಅವರಿಗೆ ವಿಧಿವತ್ತಾಗಿ ಭೋಜನ ಮಾಡಿಸಬೇಕು. ನೈವೇದ್ಯ ಮಾಡಿದ ಹವಿಸ್ಸಿನಿಂದ ಅಗ್ನಿಯಲ್ಲಿ ವಿಧ್ಯುಕ್ತಪ್ರಕಾರವಾಗಿ ಒಂದುಸಾವಿರ ಹೋಮ ಮಾಡಬೇಕು.

೮೦. ಈ ರೀತಿಯಾಗಿ ಒಂದು ವರ್ಷ ಮಾಡಿದರೆ ಮಹದೈಶ್ವರ್ಯ ಪ್ರಾಪ್ತಿಯಾಗುವುದು. ಲೋಕಕ್ಕನುಕೂಲವಾಗಲೆಂಬ ಅಭಿಲಾಷೆಯಿಂದ ಬೇರೆ ಸಾಧನವನ್ನು ಹೇಳುವೆನು.

೮೧-೮೪. ಅವಲಕ್ಕಿ, ಪಾಯಸ, ಅಪೂಪ, ಕಡುಬು, ಅನೇಕ ವಿಧವಾದ ಹಣ್ಣುಗಳು ಇವುಗಳಿಂದ ಗಣೇಶನನ್ನು ಪೂಜಿಸಿ ತರುವಾಯ ಮಂತ್ರಿಯು

ವಚಾಂ ನಿಷ್ಕಾರ್ಧಭಾಗಂ ಚ ತದರ್ಧಂ ವಾ ಮನುಂ ಜಪನ್ ।
ವಿಶೋಧ್ಯ ಚೂರ್ಣಂ ಪ್ರಸೃತೌ ಗವಾಂ ಮೂತ್ರೇ ವಿನಿಕ್ಷಿಪೇತ್ ॥ ೬೨ ॥

ಸಹಸ್ರಕೃತ್ವೋ ಮನುನಾ ಮಂತ್ರಯಿತ್ವಾ ಪ್ರಯತ್ನತಃ ।
ಸ್ನಾತಾಂ ಋತುದಿನೇ ಶುದ್ಧಾಂ ಶುಕ್ಲಾಂಬರಧರಾಂ ಶುಭಾಂ ॥ ೬೩ ॥

ದೇವಸ್ಯ ಪುರತಃ ಸ್ಥಾಪ್ಯ ಪಾಯಯೇದೌಷಧಃ ಸುಧೀಃ ।
ಸರ್ವಲಕ್ಷಣಸಂಪನ್ನಂ ವಂಧ್ಯಾಽಪಿ ಲಭತೇ ಸುತಂ ॥ ೬೪ ॥

ಅಥಾನ್ಯತ್ಸಂಪ್ರವಕ್ಷ್ಯಾಮಿ ರಹಸ್ಯಂ ಪರಮಾದ್ಭುತಂ ।
ಗೋಚರ್ಮಮಾತ್ರಾಂ ಧರಣೀಮುಪಲಿಪ್ಯ ಪ್ರಯತ್ನತಃ ॥ ೬೫ ॥

ವಿಕೀರ್ಯ ಧಾನ್ಯಪ್ರಕರೈಸ್ತತ್ರ ಸಂಸ್ಥಾಪಯೇದ್ಘಟಂ ।
ಶುದ್ಧೋದಕೇನ ಸಂಪೂರ್ಯ ತಸ್ಯೋಪರಿ ನಿಧಾಪಯೇತ್ ॥ ೬೬ ॥

---

ಅರಿಸಿನ, ಉಪ್ಪು, ಬಜೆ, ನಿಷ್ಕವೆಂಬ ಸುವರ್ಣನಾಣ್ಯದ ಅರ್ಧ ಅಥವಾ ಕಾಲು ಭಾಗ ಇವುಗಳನ್ನು ಚೂರ್ಣಮಾಡಿ ಅದನ್ನು ಮಂತ್ರಜಪದಿಂದ ಶುದ್ಧಿಗೊಳಿಸಿ ಶಾರೆ ಗೋಮೂತ್ರದಲ್ಲಿ ಇಡಬೇಕು. ಮನಃಪೂರ್ವಕವಾಗಿ ಸಾವಿರಾವರ್ತಿ ಮಂತ್ರವನ್ನು ಹೇಳಿ ಗೋಮೂತ್ರ (ಗಂಜಲ) ದಲ್ಲಿಟ್ಟಿದ್ದ ಆ ಚೂರ್ಣವನ್ನು ಅಭಿ ಮಂತ್ರಿಸಿ, ದೇವರನ್ನುಂದಿಟ್ಟು, ಋತುಸ್ನಾನಮಾಡಿದ ಪರಿಶುದ್ಧಳು, ಬಿಳಿಯ ಬಟ್ಟೆಯನ್ನು ಉಟ್ಟಿರುವವಳೂ ಆದ ಶೋಭನಾಂಗಿಗೆ ಆ ಔಷಧವನ್ನು ಕುಡಿ ಸಬೇಕು. ಹಾಗೆ ಪಾನ ಮಾಡಿದವಳು ಬಂಜೆ (ಗೊಡ್ಡಿ) ಯಾದಾಗ್ಯೂ ಸಕಲ ಲಕ್ಷಣಯುಕ್ತನಾದ ಮಗನನ್ನು ಪಡೆಯುವಳು.

೬೫-೬೬. ಇನ್ನೂ ಅತ್ಯಂತ ಆಶ್ಚರ್ಯಕರವಾದ ಬೇರೇ ರಹಸ್ಯವನ್ನು ಹೇಳುವೆನು. ಗೋಚರ್ಮಪರಿಮಿತವಾದ ಭೂಮಿಯನ್ನು ಪ್ರಯತ್ನಪೂರ್ವಕ ವಾಗಿ ಸಾರಿಸಿ, ಧಾನ್ಯ ಸಮೂಹಗಳನ್ನು ಹರಡಿ ಅದರ ಮೇಲೆ ಕಲಶವನ್ನು ಸ್ಥಾಪಿ ಸಬೇಕು. ಅದರಲ್ಲಿ ಶುದ್ಧೋದಕವನ್ನು ತುಂಬಿ ಅದರಮೇಲೆ ಕಪಿಲಗೋವಿನ ತುಪ್ಪದಿಂದ ತುಂಬಿದ, ಹೊಸದು, ಮಂಗಳಕರವೂ ಆದ ಶರಾವ (ಪ್ರಾವೆ) ಯನ್ನು ಇಡಬೇಕು. ಅದರಲ್ಲಿ ಆರು ಅಕ್ಷರ, ಎಂಟುಅಕ್ಷರಗಳುಳ್ಳ ಮಂತ್ರ ಗಳಿಂದ ಶುಭದೀಪವನ್ನು ಹಚ್ಚಿಸಬೇಕು.

ಕಪಿಲಾಜ್ಯೇನ ಸಂಪೂರ್ಣಂ ಶರಾವಂ ನೂತನಂ ಶುಭಂ ।
ಷಡಷ್ಟಾಕ್ಷರಮಂತ್ರಾಭ್ಯಾಂ ದೀಪಮಾರೋಪಯೇಚ್ಛುಭಂ　　|| ೮೭ ||

ದೀಪೇ ದೇವಂ ಸಮಾವಾಹ್ಯ ಗಂಧಪುಷ್ಪಾದಿಭಿರ್ಯಜೇತ್ ।
ಸ್ನಾತಾಂ ಕುಮಾರೀಮಥವಾ ಕುಮಾರಂ ಪೂಜಯೇತ್ಸುಧೀಃ　　|| ೮೮ ||

ದೀಪಸ್ಯ ಪುರತಃ ಸ್ಥಾಪ್ಯ ಧ್ಯಾತ್ವಾ ದೇವಂ ಜಪೇನ್ಮನುಂ ।
ಪ್ರದೀಪೇ ಸ್ಥಾಪಿತೇ ಪಶ್ಯೇದ್ದ್ವಿಜರೂಪಂ ಗಣೇಶ್ವರಂ　　|| ೮೯ ||

ಪೃಷ್ಟವತೀ ಸಪದಿ ವಾ ನಷ್ಟಂ ಚೈವಾಪ್ಯನಾಗತಂ ।
ಸಕಲಂ ಪ್ರವದೇದೇವಂ ಕುಮಾರೀ ವಾ ಕುಮಾರಕಃ　　|| ೯೦ ||

ಷಡಕ್ಷರೋ ಹೃದಂತಶ್ಚೇದ್ಭವೇದಷ್ಟಾಕ್ಷರೋ ಮನುಃ ।
ಅನ್ಯೇಽಪಿ ಮಂತ್ರಾ ದೇವರ್ಷೇ ಸಂತಿ ತಂತ್ರೇ ಗಣೇಶಿತುಃ　　|| ೯೧ ||

ಕಿಂತ್ವತ್ರ ಯನ್ನಸಾಧ್ಯಂ ಸ್ಯಾತ್ತ್ರಿಷು ಲೋಕೇಷು ಸಾಧಕೈಃ ।
ಅಷ್ಟವಿಂಶರಸಾರ್ಣಾಭ್ಯಾಂ ತನ್ನ ಪಶ್ಯೇದಪಿ ಕ್ವಚಿತ್　　|| ೯೨ ||

೮೮-೯೦. ಆ ದೀಪದಲ್ಲಿ ದೇವರನ್ನು ಆವಾಹನೆ ಮಾಡಿ, ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ದೀಪದಮುಂದೆ ಸ್ನಾನಮಾಡಿದ ಪುತ್ರೀ ಅಥವಾ ಪುತ್ರನನ್ನು ಕೂಡಿಸಿ ದೇವರನ್ನು ಧ್ಯಾನಿಸಿ ಪೂಜಿಸಿ ಮಂತ್ರವನ್ನು ಜಪಿಸಬೇಕು. ಸ್ಥಾಪಿಸಲ್ಪಟ್ಟ ದೀಪದಲ್ಲಿ ದ್ವಿಜರೂಪಿಯಾದ ಗಣೇಶನನ್ನು ಅನುಸಂಧಾನಮಾಡಬೇಕು. ಅಲ್ಲಿ ಕೂಡಿಸಿದ್ದ ಕುಮಾರಿ ಅಥವಾ ಕುಮಾರನನ್ನು ಅಲ್ಲಿ ನೆರೆದಿದ್ದವರು ಪ್ರಶ್ನೆಮಾಡಿದರೆ ಅವರು ಭೂತಭವಿಷ್ಯವಿಷಯವೆಲ್ಲವನ್ನೂ ಹೇಳುವರು.

೯೧. ಷಡಕ್ಷರ ಮಂತ್ರವು ಕೊನೆಯಲ್ಲಿ "ನಮಃ" ಎಂಬುದರಿಂದ ಸಹಿತವಾದರೆ ಅದೇ ಅಷ್ಟಾಕ್ಷರ ಮಂತ್ರವಾಗುವುದು. ದೇವರ್ಷಿಯಾದ ನಾರದನೇ! ಇವುಗಳಲ್ಲದೆ ತಂತ್ರಶಾಸ್ತ್ರದಲ್ಲಿ ಗಣೇಶನ ಮಂತ್ರಗಳು ಬಹಳವಾಗಿವೆ.

೯೨. ಆದರೆ ಸಾಧಕರಿಗೆ ಈ ಅಷ್ಟಾಕ್ಷರ ಮತ್ತು ಇಪ್ಪತ್ತೆಂಟು ಅಕ್ಷರಗಳ ಗಣಪತಿ ಮಂತ್ರಗಳಿಂದ ಪಡೆಯಲಶಕ್ಯವಾದ ಯಾವಫಲವನ್ನೂ ಮೂರು ಲೋಕಗಳಲ್ಲಿ ಎಲ್ಲಿಯೂ ಯಾರೂ ಕಾಣಲಾರರು.

ಏತದ್ಗಣೇಶಮಂತ್ರಾಣಾಂ ವಿಧಾನಂ ತೇ ಮಯೋದಿತಂ ।
ಶಠೇಭ್ಯಃ ಪರಶಿಷ್ಯೇಭ್ಯೋ ವಂಚಕೇಭ್ಯೋಽಪಿ ಮಾ ವದ ॥ ೯೩ ॥

ಏವಂ ಯೋ ಭಜತೇ ದೇವಂ ಗಣೇಶಂ ಸರ್ವಸಿದ್ಧಿದಂ ।
ಪ್ರಾಪ್ಯೇಹ ಸಕಲಾನ್ಭೋಗಾನಂತೇ ಮುಕ್ತಿಪದಂ ವ್ರಜೇತ್ ॥ ೯೪ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ಗಣೇಶಮಂತ್ರವಿಧಾನನಿರೂಪಣಂ ನಾಮ
ಅಷ್ಟಷಷ್ಟಿತಮೋಽಧ್ಯಾಯಃ

---

೯೩. ಗಣೇಶಮಂತ್ರಗಳ ಈ ವಿಧಾನವನ್ನು ನಿನಗೆ ಉಪದೇಶಿಸಿರುವೆನು. ಇದನ್ನು ದುಷ್ಟರು, ಇತರರ ಶಿಷ್ಯರು, ಮೋಸಗಾರರೂ ಆಗಿರುವವರಿಗೆ ಹೇಳಬಾರದು.

೯೪. ಸಕಲ ಸಿದ್ಧಪ್ರದನಾದ ಗಣೇಶದೇವನನ್ನು ಭಜಿಸುವವನು ಈ ಲೋಕದಲ್ಲಿ ಸಮಸ್ತ ಭೋಗಗಳನ್ನು ಅನುಭವಿಸಿ ಕೊನೆಯಲ್ಲಿ ಮುಕ್ತಿ ಸ್ಥಾನಕ್ಕೆ ಹೋಗುವನು.

ಇಂತು ನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ
ತೃತೀಯಪಾದದಲ್ಲಿ ಗಣೇಶಮಂತ್ರ ವಿಧಾನನಿರೂಪಣವೆಂಬ ಅರವತ್ತೆಂಟ
ನೆಯ ಅಧ್ಯಾಯವು ಮುಗಿದುದು.

## ಕಥಾ ಸಂಗ್ರಹ.

ಆದಿಯಲ್ಲಿ ಗಣೇಶನ ಮಂತ್ರವನ್ನು ಹೇಳುತ್ತೇನೆಂದು ಪ್ರತಿಜ್ಞೆ ಮಾಡಿ, ಇಪ್ಪತ್ತೆಂಟಕ್ಷರಗಳ ಮಹಾಗಣಪತಿ ಮಂತ್ರವನ್ನು ಸೂಚಿಸಿ, ಅದರ ವಿಧಾನವನ್ನು ಸಮಗ್ರವಾಗಿ ನಿರೂಪಿಸಿ, ದ್ವಾದಶಾಕ್ಷರಮತ್ತು ಷಡಕ್ಷರ ಗಣಪತಿಮಂತ್ರಗಳನ್ನೂ ಹೇಳಿ, ಅವುಗಳ ಫಲವನ್ನು ವಿವರಿಸಿ, ವಂಧ್ಯಾಸ್ತ್ರೀಯರಿಗೆ ಪುತ್ರನಾಗುವ ವಿಧಾನವನ್ನು ವಿಸ್ತರಿಸಿ ಫಲವನ್ನು ನಿರೂಪಿಸಿದೆ.

# ಏಕೋನಸಪ್ತತಿತಮೋಽಧ್ಯಾಯಃ



ಸನತ್ಕುಮಾರ ಉವಾಚ

ಅಥ ವಕ್ಷ್ಯೇ ತ್ರಯೀಮೂರ್ತೇರ್ವಿಧಾನಂ ತ್ವಂಜಿನೀಪತೇಃ ।
ಮಂತ್ರಾಣಾಂ ಯತ್ನಮಾರಾಧ್ಯ ಸರ್ವೇಷ್ಟಂ ಪ್ರಾಪ್ನುಯಾದ್ಭುವಿ ॥ ೧ ॥

ತಾರೋ ರೇಚಿಕಯಾ ಯುಕ್ತಾ ಮೇಧಾ ನೇತ್ರಯುತಾ ರತಿಃ ।
ಸಸರ್ಗಾ ವಾಮಕರ್ಣಾಢ್ಯೋ ಭೃಗುರ್ವಹ್ನ್ಯಾಸನೋ ಮರುತ್ ॥ ೨ ॥

ಶೇಷೋದಿತ್ಯ ಇತಿ ಪ್ರೋಕ್ತೋ ವಸ್ವರ್ಣೋ ಭುಕ್ತಿಮುಕ್ತಿದಃ ।
ದೇವಭಾಗೋ ಮುನಿಶ್ಛಂದೋ ಗಾಯತ್ರೀ ದೇವತಾ ರವಿಃ ॥ ೩ ॥

ಮಾಯಾ ಬೀಜಂ ರಮಾ ಶಕ್ತಿರ್ದೃಷ್ಟಾದೃಷ್ಟೇ ನಿಯೋಗಕಃ ।
ಸತ್ಯಾಯ ಹೃದಯಂ ಪಶ್ಚಾದ್ಬ್ರಹ್ಮಣೇ ಶಿರ ಈರಿತಂ ॥ ೪ ॥

---

## ಅರವತ್ತೊಂಬತ್ತನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳಿದನು. ಈಗ ವೇದಮೂರ್ತಿಯಾದ ಸೂರ್ಯನ ಮಂತ್ರಗಳವಿಧಾನವನ್ನು ಹೇಳುವೆನು :- ಆ ಮಂತ್ರಗಳನ್ನು ಜಪಾದಿಗಳಿಂದ ಆರಾಧಿಸಿದರೆ ಭೂಲೋಕದಲ್ಲಿ ಇಷ್ಟಾರ್ಥವೆಲ್ಲವೂ ಸಿದ್ಧಿಸುವುದು.

೨-೩. (ರೇಚಕಯಾ ಯುಕ್ತಾ ಮೇಧಾ= ಘೃ. ನೇತ್ರಯುತಾರತಿಃ ಸಸರ್ಗಾ =ಣಿಃ. ವಾಮಕರ್ಣಾಢ್ಯೋಭೃಗುಃ = ಸೂ. ವಹ್ನ್ಯಾಸನೋ ಮರುತ್= ರ್ಯ. ಶೇಷ =ಆ. 'ದಿತ್ಯಃ'ವೆಂಬುವನ್ನು ಸೇರಿಸಬೇಕು.) 'ಓಂ ಘೃಣಿಃ ಸೂರ್ಯಆದಿತ್ಯಃ' ಎಂಬುದು ಎಂಟು ಅಕ್ಷರಗಳ ಸೂರ್ಯಮಂತ್ರವು.

೩-೪. ಅದು ಐಹಿಕದಲ್ಲಿ ಭೋಗವನ್ನೂ ಅನಂತರ ಮುಕ್ತಿಯನ್ನೂ ಕೊಡುವುದು. ಈ ಮಂತ್ರಕ್ಕೆ ಭೃಗುವು ಋಷಿ, ಗಾಯಿತ್ರಿಯೇ ಛಂದಸ್ಸು, ದಿವಾಕರನು ದೇವತೆಯು, ಹ್ರೀಂ ಎಂಬುದು ಬೀಜ, ಶ್ರೀಂ ಎಂಬುದು ಶಕ್ತಿ. ಈ ಮಂತ್ರವು ಐಹಿಕಾಮುಷ್ಮಿಕ ಇಷ್ಟಾರ್ಥಸಿದ್ಧಿಗಾಗಿ ವಿನಿಯೋಗಿಸಲ್ಪಡತಕ್ಕುದು.

ವಿಷ್ಣವೇ ತು ಶಿಖಾ ವರ್ಮ ರುದ್ರಾಯ ಪರಿಕೀರ್ತಿತಂ ।
ನೇತ್ರಂ ಸ್ಯಾದಗ್ನಯೇ ಪಶ್ಚಾಚ್ಛರ್ವಾಯಾಸ್ತ್ರಮುದಾಹೃತಂ ॥ ೫ ॥

ತೇಜೋಜ್ವಾಲಾಮಣೇ ಹುಂ ಫಟ್ ಸ್ವಾಹಾಂತಾ ಮನವೋಂಗಜಾಃ ।
ಪುನಃ ಷಡರ್ಣೈರ್ಹ್ರೀಂ ಲಕ್ಷ್ಮ್ಯೋಃ ಕೃತ್ವಾಂತಃಸ್ಥೈಃ ಷಡಂಗಕಂ ॥ ೬ ॥

ಶಿಷ್ಟಾರ್ಣಾ ಜಠರೇ ಪೃಷ್ಠೇ ತಯೋರ್ಙೇಂತಾಖ್ಯಯಾ ನ್ಯಸೇತ್ ।
ಆದಿತ್ಯಂ ಚ ರವಿಂ ಪಶ್ಚಾದ್ಭಾನುಂ ಭಾಸ್ಕರಮೇವ ಚ ॥ ೭ ॥

---

೪-೬. "ಸತ್ಯತೇಜೋಜ್ವಾಲಾಮಣೇ ಹುಂ ಫಟ್ ಸ್ವಾಹಾ ಹೃದಯಂ'' ಎಂದು ಹೃದಯವನ್ನೂ, " ಬ್ರಹ್ಮತೇಜೋಜ್ವಾಲಾಮಣೇ ಹುಂ ಫಟ್ ಸ್ವಾಹಾ ಶಿರಃ" ಎಂದು ತಲೆಯನ್ನೂ, 'ವಿಷ್ಣುತೇಜೋಜ್ವಾಲಾಮಣೇ ಹುಂ ಫಟ್ ಸ್ವಾಹಾ ಶಿಖಾ" ಎಂದು ಶಿಖೆ(ಜುಟ್ಟು)ಯನ್ನೂ' "ರುದ್ರತೇಜೋ....ಸ್ವಾಹಾ ಕವಚಂ '' ಎಂದು ಕವಚ ಎಂದರೆ ತಲೆಯಸುತ್ತಲೂ, "ಅಗ್ನಿತೇಜೋ....ಸ್ವಾಹಾ ನೇತ್ರಂ'' ಎಂದು ಕಣ್ಣನ್ನೂ, 'ಶರ್ವತೇಜೋ......ಸ್ವಾಹಾ ಅಸ್ತ್ರಂ' ಎಂಬುದಾಗಿ ಅಸ್ತ್ರವನ್ನೂ ನ್ಯಾಸಮಾಡಬೇಕು. ಇದು ಈಮಂತ್ರಕ್ಕೆ ವಿಹಿತವಾದ ಷಡಂಗನ್ಯಾಸವು. 'ಹ್ರೀಂ ಶ್ರೀಂ' ಎಂಬ ಶಿವಾ ಶ್ರೀ ಬೀಜಗಳ ಮಧ್ಯದಲ್ಲಿ ಈಮಂತ್ರದ ವರ್ಣಗಳನ್ನು ಒಂದೊಂದಾಗಿ ಸಂಯೋಜನೆಮಾಡಿ ಅದರಿಂದ ಪುನಃ ಷಡಂಗನ್ಯಾಸ ಮಾಡಬೇಕು.

೭. ಉಳಿದವರ್ಣಗಳನ್ನು ಚತುರ್ಥ್ಯಂತನಾಮದಿಂದ ಉದರಪೃಷ್ಠಗಳಲ್ಲಿ ನ್ಯಾಸಮಾಡಬೇಕು. ಹೇಗೆಂದರೆ "ಹ್ರೀಂ ಓಂ ಶ್ರೀಂ ಹೃದಯಂ" ಎಂದು ಹೃದಯವನ್ನೂ, 'ಹ್ರೀಂ ಘೃಂ ಶ್ರೀಂ ಶಿರಃ"ಎಂದು ತಲೆಯನ್ನೂ, 'ಹ್ರೀಂ ಣಿಂ ಶ್ರೀಂ ಶಿಖಾ' ಎಂದು ತಲೆಯ ಕೂದಲನ್ನೂ, 'ಹ್ರೀಂ ಸೂಂ ಶ್ರೀಂ ವರ್ಮ' ಎಂದು ಕವಚವನ್ನೂ, 'ಹ್ರೀಂ ಯಂ ಶ್ರೀಂ ನೇತ್ರಂ' ಎಂದು ಕಣ್ಣುಗಳನ್ನೂ, 'ಹ್ರೀಂ ಆಂ ಶ್ರೀಂ ಅಸ್ತ್ರಂ' ಎಂದು ಅಸ್ತ್ರವನ್ನೂ, 'ಹ್ರೀಂ ದಿಂ ಶ್ರೀಂ ಉದರಾಯನಮಃ' ಎಂದು ಹೊಟ್ಟೆಯನ್ನೂ, 'ಹ್ರೀಂ ತ್ಯಂ ಶ್ರೀಂ ಪೃಷ್ಠಾಯನಮಃ'ಎಂದು ಪೃಷ್ಠಭಾಗವನ್ನೂ ನ್ಯಾಸಮಾಡಬೇಕು.

**ಸೂರ್ಯಂ ಚ ಮೂರ್ಧ್ನಿ ವದನೇ ಹೃದಿ ಗುಹ್ಯೇ ಚ ಪಾದಯೋಃ ।**
**ಸದ್ಯಾದಿಪಂಚ ಹ್ರಸ್ವಾದ್ಯಾನ್ ನ್ಯಸೇತ್ ಜಃ ಹೃದಯಾಂತಿಮಾನ್ ॥ ೮ ॥**

**ಹ್ರೀಂ ರಮಾ ಮಧ್ಯಗಾಮಷ್ಟೌ ವರ್ಣಾಂಸ್ತಾರಾದಿಕಾನ್ನ್ಯಸೇತ್ ।**
**ಮೂರ್ಧಾಸ್ಯ ಕಂಠಹೃತ್ಕುಕ್ಷಿನಾಭಿಲಿಂಗಗುದೇಷು ಚ ॥ ೯ ॥**

**ಸ ಚಂದ್ರಸ್ವರಪೂರ್ವಂತು ಜಃಂತಂ ಶೀತಾಂಶು ಮಂಡಲಂ ।**
**ಮೂರ್ಧಾದಿಕಂಠಪರ್ಯಂತಂ ನ್ಯಸೇಚ್ಚಂದ್ರಮನುಸ್ಮರ್ರ ॥ ೧೦ ॥**

---

೮. ಆದಿತ್ಯ, ರವಿ, ಭಾನು, ಭಾಸ್ಕರ, ಮತ್ತು ಸೂರ್ಯ ಈ ಶಬ್ದಗಳನ್ನು ಚತುರ್ಥೀ ವಿಭಕ್ತ್ಯಂತವಾಗಿ ಮಾಡಿಕೊಂಡು ಅದರಮುಂದೆ 'ನಮಃ, ಎಂದು ಹೇಳಿ ಮಂತ್ರಗತವಾದ ಓಂಕಾರಾದಿ ಐದುವರ್ಣಗಳನ್ನು ಅ, ಇ, ಉ, ಋ, ಌ ಎಂಬಪಂಚ ಹ್ರಸ್ವ ಸ್ವರಗಳನ್ನೂ ವಿಲೋಮಕ್ರಮದಿಂದ ಆದಿಯಲ್ಲಿ ಸಂಯೋಜನೆಮಾಡಿ ಕ್ರಮವಾಗಿ ಶಿರಸ್ಸು, ಮುಖ, ಹೃದಯ, ಗುಹ್ಯ ಪಾದ ಈ ಅಂಗಗಳಲ್ಲಿ ನ್ಯಾಸಮಾಡಬೇಕು. ಈ ನ್ಯಾಸವು ಪಂಚ ಮೂರ್ತಿ ನ್ಯಾಸವೆನಿಸುವುದು. ಇದರ ಕ್ರಮವೇನೆಂದರೆ 'ಓಂ ಌಂ ಆದಿತ್ಯಾಯನಮಃ' ಎಂದು ಶಿರಸ್ಸಿನಲ್ಲಿಯೂ, 'ಓಂ ಋಂ ರವಯೇನಮಃ' ಎಂದು ಮುಖದಲ್ಲಿಯೂ, 'ಓಂ ಉಂ ಭಾನವೇ ನಮಃ' ಎಂದು ಹೃದಯದಲ್ಲಿಯೂ, 'ಓಂ ಇಂ ಭಾಸ್ಕರಾಯನಮಃ' ಎಂದು ಗುಹ್ಯಎಂದರೆ ಶಿಶ್ನದಲ್ಲಿಯೂ, 'ಓಂ ಅಂ ಸೂರ್ಯಾಯನಮಃ' ಎಂದು ಪಾದಗಳಲ್ಲಿಯೂ ನ್ಯಾಸಮಾಡಬೇಕು. ಇದೇ ಪಂಚಮೂರ್ತಿ ನ್ಯಾಸವೆನಿಸುವುದು.

೯. "ಹ್ರೀಂ, ಶ್ರೀಂ" ಎಂಬ ಶಿವಾ ಶ್ರೀ ಬೀಜಗಳ ಮಧ್ಯದಲ್ಲಿ ಮಂತ್ರದ ಓಂಕಾರಾದಿ ಎಂಟು ವರ್ಣಗಳನ್ನೂ ಒಂದೊಂದಾಗಿ ಸಂಯೋಜನೆ ಮಾಡಿ, ಅದರ ಮುಂದೆ "ನಮಃ" ಎಂದು ಸೇರಿಸಿ ಅದರಿಂದ ಕ್ರಮವಾಗಿ ಶಿರಸ್ಸು, ಮುಖ, ಕಂಠ, ಹೃದಯ, ಹೊಟ್ಟೆ, ಹೊಕ್ಕಳು, ಶಿಶ್ನ, ಗುದ ಇವುಗಳಲ್ಲಿ ನ್ಯಾಸಮಾಡಬೇಕು. ಇದನ್ನು ವರ್ಣನ್ಯಾಸವೆಂದು ತಿಳಿಯಬೇಕು.

೧೦. ಆದಿಯಲ್ಲಿ ಅನುಸ್ವಾರ ಸಹಿತ ಸ್ವರಾಕ್ಷರಗಳು, ಆಮೇಲೆ ಚತುರ್ಥ್ಯಂತ ಸೋಮಮಂಡಲ ಪದ, ಅದರ ಮುಂದೆ "ನಮಃ" ಎಂಬುದನ್ನು ಸೇರಿಸಿ ಹೇಳಿ ಚಂದ್ರನನ್ನು ಸ್ಮರಿಸುವವನಾಗಿ ಶಿರಸ್ಸಿನಿಂದ ಕಂಠದವರೆಗೆ ನ್ಯಾಸ ಮಾಡಬೇಕು.

ಸ್ಪರ್ಶಾನ್ಸೇಂದೂನ್ಸಮುಚ್ಚಾರ್ಯ ಙೇಂತಂ ಭಾಸ್ಕರಮಂಡಲಂ ।
ನ್ಯಸೇತ್ಕಂಠಾದಿ ನಾಭ್ಯಂತಂ ಧ್ಯಾಯನ್ಪ್ರದ್ಯೋತನಂ ಹೃದಿ ॥ ೧೧ ॥

ಯಾದೀನ್ಸಚಂದ್ರಾನುಚ್ಚಾರ್ಯ ಙೇಂತಂ ಚ ವಹ್ನಿಮಂಡಲಂ ।
ನಾಭ್ಯಾದಿ ಪಾದಪರ್ಯಂತಂ ನ್ಯಸೇದ್ವಹ್ನಿಮನುಸ್ಮರನ್ ॥ ೧೨ ॥

ಪ್ರೋಕ್ತೋಯಂ ಮಂಡಲನ್ಯಾಸೋ ಮಹಾತೇಜೋವಿಧಾಯಕಃ ।
ಸ್ವರಾನ್ಸಬಿಂದೂನುಕ್ತ್ವಾ ಙೇ ನಮೋಂತಂ ಸೋಮಮಂಡಲಂ ॥ ೧೩ ॥

ಮೂರ್ಧಾದಿ ಹೃದಯಾಂತಂ-ತು ವಿನ್ಯಸೇತ್ಸಾಧಕೋತ್ತಮಃ ।
ಯಕಾರಾದಿ ಕ್ಷಕಾರಾಂತ ವರ್ಣಾದ್ಯಂ ವಹ್ನಿಮಂಡಲಂ ॥ ೧೪ ॥

---

೧೧. ಮಂತ್ರವರ್ಣಗಳನ್ನು ಅನುಸ್ವಾರ ಸಹಿತವಾಗಿ ಹೇಳಿ, "ಸೂರ್ಯ ಮಂಡಲಾಯ ನಮಃ" ಎಂದು ಹೇಳಿ ಸೂರ್ಯನನ್ನು ಧ್ಯಾನಿಸುತ್ತಾ ಕಂಠಾದಿ ನಾಭಿ ಪರ್ಯಂತವಾಗಿ ನ್ಯಾಸಮಾಡಬೇಕು.

೧೨-೧೫. ಯವರ್ಣಾದಿ ಕ್ಷಕಾರಾಂತ ವರ್ಣಗಳನ್ನು ಅನುಸ್ವಾರ ಸಹಿತ ವಾಗಿ ಉಚ್ಚರಿಸಿ "ವಹ್ನಿಮಂಡಲಾಯ ನಮಃ" ಎಂದು ಹೇಳಿ ಅಗ್ನಿಧ್ಯಾನ ಮಾಡುತ್ತಾ ನಾಭ್ಯಾದಿ ಪಾದದವರೆಗಿನ ಅಂಗಗಳಲ್ಲಿ ನ್ಯಾಸಮಾಡಬೇಕು. ಇದು ಮಂಡಲನ್ಯಾಸವೆನಿಸುವುದು ಅದರ ಕ್ರಮವೆಂತೆಂದರೆ:—

ಅಂ ಆಂ ಇಂ ಈಂ ಉಂ ಊಂ ಋಂ ೠಂ ಌಂ ೡಂ ಏಂ ಐಂ ಓಂ ಔಂ ಅಂ ಅಃ ಸೋಮಮಂಡಲಾಯ ನಮಃ ಎಂದು ತಲೆಯಿಂದ ಕಂಠದ ವರೆಗಿನ ಅಂಗಗಳನ್ನು ನ್ಯಾಸಮಾಡಬೇಕು. ಕಂ ಖಂ ಗಂ ಘಂ ಙಂ ಚಂ ಛಂ ಜಂ ಝಂ ಞಂ ಟಂ ಠಂ ಡಂ ಢಂ ಣಂ ತಂ ಥಂ ದಂ ಧಂ ನಂ ಪಂ ಫಂ ಬಂ ಭಂ ಮಂ ಸೂರ್ಯಮಂಡಲಾಯ ನಮಃ ಎಂದು ಹೇಳಿ ಕಂಠಾದಿ ನಾಭಿ ಪರ್ಯಂತ ವಾಗಿ ನ್ಯಾಸಮಾಡಬೇಕು.

**ಜಕ್ಷಾಂತಂ ಹೃದಾದಿ ಪಾದಾಂತಂ ವಿನ್ಯಸೇತ್ಸುಸಮಾಹಿತಃ ।**
**ಅಗ್ನೀಷೋಮಾತ್ಮಕೋ ನ್ಯಾಸಃ ಕಥಿತಃ ಸರ್ವಸಿದ್ಧಿದಃ ॥ ೧೫ ॥**

**ನ್ಯಸೇತ್ಸೇಂದೂನ್ಮಾತೃಕಾವರ್ಣಾನ್‌ಜಪಾಂ ಪುರುಷಾತ್ಮನೇ ।**
**ನಮೋಂತಂ ವ್ಯಾಪಕಂ ಮಂತ್ರೀ ಹಂಸನ್ಯಾಸೋಽಯಮೀರಿತಃ ॥ ೧೬ ॥**

**ಅಷ್ಟಾವಷ್ಟೌ ಸ್ವರಾನ್ನ್ಯೇಷಾನ್ಪಂಚಪಂಚಮಿತಾನ್ಪುನಃ ।**
**ಉಕ್ತಾದಿತ್ಯಮುಖಾನ್ನೇತಾನ್ವಿನ್ಯಸೇಚ್ಚ ನವಗ್ರಹಾನ್ ॥ ೧೭ ॥**

---

ಯಂ ರಂ ಲಂ ವಂ ಶಂ ಷಂ ಸಂ ಹಂ ಳಂ ಕ್ಷಂ ವಹ್ನಿಮಂಡಲಾಯ ನಮಃ ಎಂದು ಹೇಳಿ ಸಮಾಧಾನಚಿತ್ತದಿಂದ ಹೃದಯದಿಂದ ಪಾದದವರೆಗೂ ನ್ಯಾಸಮಾಡಬೇಕು. ಇದು ಸಕಲ ಸಿದ್ಧಿದಾಯಕವಾದ ಅಗ್ನಿಷೋಮಾತ್ಮಕ ನ್ಯಾಸವೆನಿಸುವುದು.

೧೬, ಅನುಸ್ವಾರ ಸಹಿತವಾಗಿ ಅಕಾರಾದಿ ಕ್ಷಕಾರಾಂತ ವರ್ಣಗಳನ್ನು "ಅಂ ಆಂ" ಇತ್ಯಾದಿಯಾಗಿ ಹೇಳಿ ಅದರ ಮುಂದೆ "ಹಂಸಪುರುಷಾತ್ಮನೇ ನಮಃ" ಎಂದು ಹೇಳಿ ಜಪಕರ್ತನು ಸರ್ವಾಂಗ ನ್ಯಾಸಮಾಡಬೇಕು. ಇದೇ ಹಂಸನ್ಯಾಸವೆಂದುಕ್ತವಾಗಿದೆ.

೧೭-೧೮. ಅಂ ಆಂ ಇಂ ಈಂ ಉಂ ಊಂ ಋಂ ೠಂ ಆದಿತ್ಯಾಯ ಭಗವತೇ ನಮಃ ಎಂಬುದಾಗಿ ಹೇಳಿ ಆಧಾರವನ್ನೂ, ಌಂ ೡಂ ಏಂ ಐಂ ಓಂ ಔಂ ಅಂ ಅಃ ಸೋಮಾಯ ಭಗವತೇ ನಮಃ' ಎಂದು ಶಿಶ್ನವನ್ನೂ, ಕಂ ಖಂ ಗಂ ಘಂ ಙಂ ಅಂಗಾರಕಾಯ ಭಗವತೇ ನಮಃ ಎಂದು ನಾಭಿಯನ್ನೂ, ಚಂ ಛಂ ಜಂ ಝಂ ಞಂ ಬುಧಾಯ ಭಗವತೇ ನಮಃ ಎಂದು ಹೃದಯವನ್ನೂ, ಟಂ ಠಂ ಡಂ ಢಂ ಣಂ ಬೃಹಸ್ಪತಯೇ ಭಗವತೇ ನಮಃ ಎಂದು ಕಂಠವನ್ನೂ, ತಂ ಥಂ ದಂ ಧಂ ನಂ ಶುಕ್ರಾಯ ಭಗವತೇ ನಮಃ ಎಂದು ಮುಖ ಮಧ್ಯವನ್ನೂ, ಪಂ ಫಂ ಬಂ ಭಂ ಮಂ ಶನೈಶ್ಚರಾಯ ಭಗವತೇ ನಮಃ ಎಂದು ಹುಬ್ಬುಗಳ ಮಧ್ಯಭಾಗವನ್ನೂ, ಯಂ ರಂ ಲಂ ವಂ ಶಂ ರಾಹವೇ ಭಗವತೇ ನಮಃ ಎಂದು ಹಣೆಯನ್ನೂ, ಷಂ ಸಂ ಹಂ ಳಂ ಕ್ಷಂ

ಆಧಾರಲಿಂಗಯೋರ್ನಾಭೌ ಹೃದಿ ಕಂಠೇ ಮುಖಾಂತರೇ ।
ಭ್ರೂಮಧ್ಯೇ ಚ ತಥಾ ಫಾಲೇ ಬ್ರಹ್ಮರಂಧ್ರೇ ನ್ಯಸೇತ್ಕ್ರಮಾತ್ ॥ ೧೮ ॥

ಹಂಸಾಖ್ಯಮಗ್ನೀಷೋಮಾಖ್ಯಂ ಮಂಡಲತ್ರಯಮೇವ ಚ ।
ಪುನರ್ನ್ಯಾಸತ್ರಯಂ ಕುರ್ಯಾನ್ಮೂಲೇನ ವ್ಯಾಪಕಂ ಚರೇತ್ ॥ ೧೯ ॥

ಏವಂ ನ್ಯಾಸವಿಧಿಂ ಕೃತ್ವಾ ಧ್ಯಾಯೇತ್ಸೂರ್ಯಂ ಹೃದಂಬುಜೇ ।
ದಾನಾಭಯಾಬ್ಜಯುಗಲಂ ಧಾರಯಂತಂ ಕರೇ ರವಿಂ ॥ ೨೦ ॥

ಕುಂಡಲಾಂಗದಕೇಯೂರಹಾರಿಣಂ ಚ ತ್ರಯೀತನುಂ ।
ಧ್ಯಾತ್ವೈವ ಪ್ರಜಪೇನ್ಮಂತ್ರೀ ವಸುಲಕ್ಷಂ ದಶಾಂಶತಃ ॥ ೨೧ ॥

---

ಕೇತವೇ ಭಗವತೇ ನಮಃ ಎಂದು ಬ್ರಹ್ಮರಂಧ್ರವನ್ನೂ ನ್ಯಾಸಮಾಡಬೇಕು. ಇದು ಗ್ರಹನ್ಯಾಸವು.

೧೯. ಗ್ರಹನ್ಯಾಸಾನಂತರದಲ್ಲಿ ಹಂಸನ್ಯಾಸ, ಅಗ್ನೀಷೋಮನ್ಯಾಸ, ಮಂಡಲನ್ಯಾಸ ಇವುಗಳನ್ನು ಪುನಃ ಹಿಂದೆ ಮಾಡಿದುದಕ್ಕೆ ವಿಪರೀತ ಕ್ರಮದಿಂದ ಮಾಡಬೇಕು. ಮೂಲಮಂತ್ರದಿಂದ ಸರ್ವಾಂಗ ನ್ಯಾಸವನ್ನೂ ಮಾಡಬೇಕು.

೨೦-೨೧. ಈ ಪ್ರಕಾರ ನ್ಯಾಸ ವಿಧಾನವನ್ನು ಮಾಡಿ ಹೃದಯಕಮಲದಲ್ಲಿ ಸೂರ್ಯನನ್ನು ಹೀಗೆ ಧ್ಯಾನಿಸಬೇಕು:—ದಾನ ಮುದ್ರೆ, ಅಭಯ ಮುದ್ರೆ ಮತ್ತು ಪದ್ಮದ್ವಯುಗಳನ್ನು ಕೈಗಳಲ್ಲಿ ಧರಿಸಿರುವ, ಕಡಕು (ಕರ್ಣಾಭರಣ) ಕೈಬಳೆ, ಬಾಹ್ವಾಭರಣ, (ಬಾಜುಬಂದು) ಮುತ್ತಿನಹಾರ, ಇವುಗಳನ್ನು ಧರಿಸಿರುವ, ವೇದಮೂರ್ತಿಯಾದ ಸೂರ್ಯನನ್ನು ಧ್ಯಾನಿಸಿ ಮಂತ್ರಜಪಕರ್ತನು ಎಂಟು ಲಕ್ಷ ಜಪ ಮಾಡಬೇಕು.

ರಕ್ತಾಂಭೋಜೈಸ್ತಿಲೈರ್ವಾಽಪಿ ಜುಹುಯಾದ್ವಿಧಿವದ್ವಸೌ ।
ಪ್ರಥಮಂ ಪೀಠಯಜನೇ ಧರ್ಮಾದೀನಾಂ ಸ್ಥಲೇ ಯಜೇತ್ ॥ ೨೨ ॥

ಪ್ರಭೂತಂ ವಿಮಲಂ ಸಾರಂ ಸಮಾರಾಧ್ಯಮನಂತರಂ ।
ಪರಮಾದಿಸುಖಂ ಮಧ್ಯೇ ಬಿಂಬಾಂತಂ ಮಂಡಲಂ ಯಜೇತ್ ॥ ೨೩ ॥

ಸೋಮಾಗ್ನಿಮಂಡಲಂ ಪೂಜ್ಯ ರವಿಮಂಡಲಮರ್ಚಯೇತ್ ।
ದೀಪ್ತಾ ಸೂಕ್ಷ್ಮಾ ಜಯಾ ಭದ್ರಾ ವಿಭೂತಿರ್ವಿಮಲಾ ತಥಾ ॥ ೨೪ ॥

ಅಮೋಘಾ ವಿದ್ಯುತಾ ಸರ್ವತೋಮುಖೀ ಪೀಠಶಕ್ತಯಃ ।
ಹ್ರಸ್ವತ್ರಯ ಕ್ಲೀಬಹೀನಸ್ವರಾ ವಹ್ನೀಂದುಸಂಯುತಾಃ ॥ ೨೫ ॥

---

೨೨-೨೩. ಕೆಂಪು ಕಮಲ ಅಥವಾ ಎಳ್ಳುಗಳಿಂದ ವಿಧಾನೋಕ್ತಪ್ರಕಾರವಾಗಿ ಅಗ್ನಿಯಲ್ಲಿ ಜಪದ ಹತ್ತನೆಯ ಒಂದು ಭಾಗದಷ್ಟು ಹೋಮ ಮಾಡಬೇಕು. ಮೊದಲು ಪೀಠಪೂಜೆಯಲ್ಲಿ ಧರ್ಮಾದಿ ನಾಲ್ಕು ದಿಕ್ಕುಗಳಲ್ಲಿ ‘‘ಪ್ರಭೂತಾಯನಮಃ, ವಿಮಲಾಯನಮಃ, ಸಾರಾಯನಮಃ, ಸಮಾರಾಧ್ಯಾಯನಮಃ’’ ಎಂದು ಪೂಜಿಸಿ ಮಧ್ಯದಲ್ಲಿ ‘‘ಪರಮಸುಖಾಯನಮಃ’’ ಎಂದು ಪೂಜಿಸಬೇಕು. ಆಮೇಲೆ ಸ್ವಬಿಂಬಾಂತವಾಗಿ ಪೂಜೆಮಾಡಬೇಕು.

೨೪-೨೭. ‘‘ಸೋಮಮಂಡಲಾಯನಮಃ; ಅಗ್ನಿಮಂಡಲಾಯನಮಃ’’ ಎಂಬುದಾಗಿ ಚಂದ್ರಾಗ್ನಿ ಮಂಡಲಗಳನ್ನು ಪೂಜಿಸಿ ‘ಸೂರ್ಯಮಂಡಲಾಯನಮಃ’ ಎಂದು ಸೂರ್ಯಮಂಡಲವನ್ನು ಪೂಜಿಸಬೇಕು. ತರುವಾಯ ಪೀಠಶಕ್ತಿಗಳನ್ನು ಅದರದರ ಬೀಜಸಹಿತವಾಗಿ ಪೂಜಿಸಬೇಕು. ದೀಪ್ತಾ, ಸೂಕ್ಷ್ಮಾ, ಜಯಾ, ಭದ್ರಾ, ವಿಭೂತಿ, ವಿಮಲಾ, ಅಮೋಘಾ, ವಿದ್ಯುತಾ, ಮತ್ತು, ಸರ್ವತೋಮುಖೀ ಎಂಬಿವು ಒಂಬತ್ತು ಪೀಠಶಕ್ತಿಗಳು. ಅ ಇ ಉ ಎಂಬ ಹ್ರಸ್ವತ್ರಯ, ಮತ್ತು ಋ, ೠ, ಌ ೡ ಎಂಬ ಕ್ಲೀಬ ಇವುಗಳನ್ನು ಬಿಟ್ಟು, ರೇಫ (ರವರ್ಣ)

ಬೀಜಾನಿ ಪೀಠಶಕ್ತೀನಾಂ ತದಾದ್ಯಾಃ ಪೂಜಯೇತ್ತು ತಾಃ ।
ಬ್ರಹ್ಮವಿಷ್ಣುಶಿವಾತ್ಮಾಂತೇ ಸೃಷ್ಟಿಃ ಶೇಷಾನ್ವಿತಾ ಯಸೌ ॥ ೨೬ ॥

ರಾಯಚಾಂತೇ ಯೋಗಪೀಠಾತ್ಮನೇ ಹೃದಯಮಿಾರಯೇತ್ ।
ತಾರಾದ್ಯೋಽಯಂ ಪೀಠಮಂತ್ರಸ್ತ್ವನೇನಾಸನಮಾದಿಶೇತ್ ॥ ೨೭ ॥

ಧ್ರುವೋ ವಿಯದ್ಬಿಂದುಯುತಂ ಖೌ ಖಂ ಖಃ ಖೋಲ್ಕಾಯ ನಮಃ ।
ನವಾರ್ಣಾಯ ಚ ಮನವೇ ಮೂರ್ತಿಂ ಸಂಕಲ್ಪಯೇತ್ಸುಧೀಃ ॥ ೨೮ ॥

ಸಾಕ್ಷಿಣಂ ಜಗತಾಂ ತಸ್ಯಾಮಾವಾಹ್ಯ ವಿಧಿವದ್ಯಜೇತ್ ।
ತತಃ ಷಡಂಗಾನ್ಯಾರಾಧ್ಯ ದಿಕ್ಷ್ವಷ್ಟಾಂಗಂ ಪ್ರಪೂಜಯೇತ್ ॥ ೨೯ ॥

---

ಬಿಂದುಯುಕ್ತವಾದ ಸ್ವರಗಳು ಎಂದರೆ ರಾಂ ರೀಂ ರೂಂ ರೇಂ ರೈಂ ರೋಂ ರೌಂ ರಂ ರಃ ಇವುಗಳು ಉಕ್ತವಾದ ಪೀಠಶಕ್ತಿಗಳಿಗೆ ಕ್ರಮವಾಗಿ ಬೀಜಾಕ್ಷರಗಳು. ಆಶಕ್ತಿಗಳನ್ನು ಈ ಬೀಜಾಕ್ಷರಪೂರ್ವಕವಾಗಿ ಪೂಜಿಸಬೇಕು. ಎಂದರೆ ರಾಂ ದೀಪ್ತಾಯೈ ನಮಃ; ರೀಂ ಸೂಕ್ಷ್ಮಾಯೈ ನಮಃ ಮುಂತಾಗಿ ಹೇಳಿ ಪೂಜಿಸಬೇಕೆಂದು ಭಾವ. ''ಓಂ ಬ್ರಹ್ಮವಿಷ್ಣು ಶಿವಾತ್ಮಕಾಯ ಸೌರಾಯ ಯೋಗಪೀಠಾತ್ಮನೇ ನಮಃ" ಎಂಬುದು ಪೀಠಮಂತ್ರವು. ಇದರಿಂದ ಆಸನವನ್ನರ್ಪಿಸಬೇಕು.

೨೮. ''ಓಂ ಹಂ ಖೌ ಖಂ ಖಃ ಖೋಲ್ಕಾಯನಮಃ'' ಎಂಬ ಒಂಬತ್ತುಅಕ್ಷರಗಳುಳ್ಳ ಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಬೇಕು.

೨೯. ಆಮೂರ್ತಿಯಲ್ಲಿ ಸೂರ್ಯನನ್ನು ಆವಾಹನೆಮಾಡಿ ವಿಧಾನೋಕ್ತಪ್ರಕಾರ ಪೂಜಿಸಬೇಕು. ತರುವಾಯ ಅಗ್ನ್ಯಾದಿಗಳಲ್ಲಿ ಷಡಂಗಗಳನ್ನು ಪೂಜಿಸಿ ನ್ಯಾಸೋಕ್ತವಾದ ಅಷ್ಟಾಂಗಗಳನ್ನು ಅಷ್ಟದಿಕ್ಕುಗಳಲ್ಲಿ ಪೂಜಿಸಬೇಕು.

ಸಂಪೂಜ್ಯ ಮಧ್ಯೇ ವಾದಿತ್ಯಂ ರವಿಂ ಭಾನುಂ ಚ ಭಾಸ್ಕರಂ ।
ಸೂರ್ಯಂ ದಶಾಸು ಸದ್ಯಾದಿ ಪಂಚ ಹ್ರಸ್ವಾದಿಕಾನಿಮಾನ್ ॥ ೩೦ ॥

ಸ್ವಸ್ವ ನಾಮಾದಿವರ್ಣಾದ್ಯಾಃ ಶಕ್ತಯೋಽರ್ಚ್ಯಾ ವಿದಿಕ್ಷು ಚ ।
ಉಷಾಂ ಪ್ರಜ್ಞಾಂ ಪ್ರಭಾಂ ಸಂಧ್ಯಾಂ ತತೋ ಬ್ರಹ್ಮಾದಿಕಾನ್ಯಜೇತ್ ೩೧॥

ಪುರತೋಽರುಣಮಭ್ಯರ್ಚ್ಯ ಸೋಮಂ ಜ್ಞಾಂ ಚ ಭೃಗುಂ ಗುರುಂ ।
ದಿಕ್ಷ್ವರ್ಣಾದಿಕಾನಿಷ್ಟ್ವಾ ಭೂಮಿಜಂ ಚ ಶನೈಶ್ಚರಂ ॥ ೩೨ ॥

ರಾಹುಂ ಕೇತುಂ ಚ ಕೋಣೇಷು ಪೂರ್ವವತ್ಪರಿಪೂಜಯೇತ್ ।
ಇಂದ್ರಾದ್ಯಾನಪಿ ವಜ್ರಾದ್ಯಾನ್ಪೂರ್ವವತ್ಪೂಜಯೇತ್ಸುಧೀಃ ॥ ೩೩ ||

---

೩೦. ಸದ್ಯ= ಓಂಕಾರ ಮತ್ತು ಬಿಂದು =ಂ ಸಹಿತವಾದ ಅ ಇ ಉ ಋ ಌ ಎಂಬ ಐದು ಹ್ರಸ್ವವರ್ಣಗಳಲ್ಲಿ ಒಂದೊಂದುವರ್ಣ ಇವುಗಳಿಂದ ಸಹಿತನಾದ ಆದಿತ್ಯನನ್ನು ಮಧ್ಯದಲ್ಲಿಯೂ, ರವಿ, ಭಾನು, ಭಾಸ್ಕರ, ಸೂರ್ಯ, ಇವರನ್ನು ನಾಲ್ಕು ದಿಕ್ಕುಗಳಲ್ಲಿಯೂ, "ಓಂ ಅಂ ಆದಿತ್ಯಾಯನಮಃ" ಇತ್ಯಾದಿಯಾಗಿ ಹೇಳಿ ಪೂಜಿಸಬೇಕು.

೩೧. ಆಗ್ನೇಯ ಮುಂತಾದ ವಿದಿಕ್ಕುಗಳಲ್ಲಿ ಅದರದರ ನಾಮಗಳ ಆದಿವರ್ಣಾದಿಯಾಗಿ ಉಷಾ, ಪ್ರಜ್ಞಾ, ಪ್ರಭಾ, ಸಂಧ್ಯಾ, ಎಂಬ ಶಕ್ತಿಗಳನ್ನು "ಉಂ ಉಷಾಯನಮಃ" ಮುಂತಾಗಿ ಹೇಳುತ್ತಾ ಪೂಜಿಸಬೇಕು. ಅನಂತರ ಬ್ರಹ್ಮಾದಿಗಳನ್ನೂ ಪೂಜಿಸಬೇಕು.

೩೨-೩೩. ಅಗ್ರಭಾಗದಲ್ಲಿ ಅರುಣನನ್ನು ಪೂಜಿಸಿ ಸೋಮ, ಬುಧ, ಶುಕ್ರ, ಗುರುಗಳನ್ನೂ ಅನುಸ್ವಾರ ಸಹಿತವಾದ ಮೊದಲನೆಯ ಅಕ್ಷರಾದಿಯಾಗಿ ನಾಲ್ಕುದಿಕ್ಕುಗಳಲ್ಲಿ "ಸೋಂ ಸೋಮಾಯನಮಃ" ಮುಂತಾಗಿ ಹೇಳಿ ಪೂಜಿಸಿ, ಅಂಗಾರಕ, ಶನಿ ರಾಹು ಕೇತುಗಳನ್ನು ಆಗ್ನೇಯಾದಿ ಕೋಣಗಳಲ್ಲಿ ಹಿಂದೆ ಹೇಳಿದ ಪ್ರಕಾರ ಪೂಜಿಸಬೇಕು. ಜ್ಞಾನಿಯು ಇಂದ್ರಾದಿ ದಿಕ್ಪಾಲಕರನ್ನೂ ಅವರ ವಜ್ರಾದ್ಯಾಯುಧಗಳನ್ನೂ ಹಿಂದಿನಂತೆ ಪೂಜಿಸಬೇಕು.

ಇತ್ಥಂ ಸಂಪೂಜ್ಯ ವಿಧಿವದ್ಭಾಸ್ಕರಂ ಭಕ್ತವತ್ಸಲಂ ।
ಸಮಾಹಿತೋ ದಿನೇಶಾಯ ದದ್ಯಾದರ್ಘ್ಯಂ ದಿನೇ ದಿನೇ ॥ ೩೪ ॥

ಪ್ರಾಣಾನಾಯಮ್ಯ ಸದ್ಭೂಮೌ ನ್ಯಾಸಾನ್ಕೃತ್ವಾ ಪುರೋದಿತಾನ್ ।
ವಿಧಾಯ ಮಂಡಲಂ ಭಾನೋಃ ಪೀಠಂ ಪೂರ್ವವದರ್ಚಯೇತ್ ॥ ೩೫ ॥

ಧ್ಯಾತ್ವಾಽರ್ಕಂ ಪ್ರಯಜೇದ್ದಿವ್ಯೈರ್ಮಾನಸೈರುಪಚಾರಕೈಃ ।
ಪಾತ್ರಂ ತಾಮ್ರಮಯಂ ಪ್ರಸ್ಥತೋಯಗ್ರಾಹಿ ಸುಶೋಭನಂ ॥ ೩೬ ॥

ನಿಧಾಯ ಮಂಡಲೇ ರಕ್ತಚಂದನಾದಿವಿನಿರ್ಮಿತೇ ।
ವಿಲೋಮಮಾತೃಕಾಂ ಮೂಲಮುಚ್ಚರನ್ಪೂರಯೇಜ್ಜಲೈಃ ॥ ೩೭ ॥

ಸೂರ್ಯಬಿಂಬವಿನಿರ್ಗಚ್ಛತ್ಸುಧಾಂಬುಧಿವಿಭಾವಿತೈಃ ।
ಕುಂಕುಮಂ ರೋಚನಾಂ ರಾಜೀಂ ಚಂದನಂ ರಕ್ತಚಂದನಂ ॥ ೩೮ ॥

---

೩೪. ಈ ರೀತಿ ವಿಧಿವತ್ತಾಗಿ ಭಕ್ತಪ್ರೇಮಿಯಾದ ಸೂರ್ಯನನ್ನು ಪೂಜಿಸಿ ಸಮಾಧಾನ ಚಿತ್ತನಾಗಿ ಪ್ರತಿದಿನವೂ ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು.

೩೫. ಪರಿಶುದ್ಧವಾದ ಭೂಪ್ರದೇಶದಲ್ಲಿ ಕುಳಿತು ಪ್ರಾಣಾಯಾಮ ಮಾಡಿ, ಹಿಂದೆ ಹೇಳಿದ ನ್ಯಾಸಗಳನ್ನು ಮಾಡಿ ಸೂರ್ಯಮಂಡಲವನ್ನು ರಚಿಸಿ ಹಿಂದಿನಂತೆ ಪೀಠವನ್ನು ಪೂಜಿಸಬೇಕು.

೩೬-೩೮. ಅಲ್ಲಿ ಸೂರ್ಯನನ್ನು ಧ್ಯಾನಿಸಿ ದಿವ್ಯವಾದ ಮಾನಸೋಪಚಾರಗಳಿಂದ ಪೂಜಿಸಬೇಕು. ಕೆಂಪುಗಂಧದಿಂದ ರಚಿಸಲ್ಪಟ್ಟ ಆಮಂಡಲದಲ್ಲಿ ಬಳ್ಳನೀರು ಹಿಡಿಯುವಂತಹ, ಶುಭಕರವಾದ ತಾಮ್ರದ ಪಾತ್ರೆಯನ್ನು ಸ್ಥಾಪಿಸಿ, ವಿಲೋಮಕ್ರಮದಿಂದ ಮಾತೃಕಾ ಮತ್ತು ಮೂಲಮಂತ್ರಗಳನ್ನು ಹೇಳುತ್ತಾ ಸೂರ್ಯಮಂಡಲದಿಂದ ಹೊರಟ ಅಮೃತವೆಂದು ಭಾವಿಸಲ್ಪಟ್ಟ ನೀರನ್ನು ಆಕಲಶದಲ್ಲಿ ತುಂಬಬೇಕು.

ಕರವೀರಂ ಜಪಾಂ ಶಾಲಿಕುಶಶ್ಯಾಮಾಕತಂಡುಲಾನ್ ।
ತಿಲವೇಣುಯವಾಂಶ್ಚೈವ ನಿಕ್ಷಿಪೇತ್ಸಲಿಲೇ ಶುಭೇ ॥ ೩೯ ॥

ಸಾಂಗಂ ಸಾವರಣಂ ತತ್ರಾವಾಹ್ಯಾರ್ಕಂ ಪೂರ್ವವದ್ಯಜೇತ್
ಗಂಧಪುಷ್ಪಧೂಪದೀಪನೈವೇದ್ಯಾದ್ಯೈರ್ವಿಧಾನತಃ ॥ ೪೦ ॥

ಪ್ರಾಣಾಯಾಮತ್ರಯಂ ಕೃತ್ವಾ ಕುರ್ಯಾದಂಗಾನಿ ಪೂರ್ವವತ್ ।
ಸುಧಾಬೀಜಂ ಚಂದನೇನ ದಕ್ಷೇ ಕರತಲೇ ಲಿಖೇತ್ ॥ ೪೧ ॥

ತೇನಾಚ್ಛಾದ್ಯಾರ್ಘ್ಯಪಾತ್ರಂ ಚ ಜಪೇನ್ಮನುಮನನ್ಯಧೀಃ ।
ಅಷ್ಟೋತ್ತರಶತಾವೃತ್ತ್ಯಾ ಪುನಃ ಸಂಪೂಜ್ಯ ಭಾಸ್ಕರಮ್ ॥ ೪೨ ॥

ಹಸ್ತಾಭ್ಯಾಂ ಪಾತ್ರಮಾದಾಯ ಜಾನುಭ್ಯಾಮವನೀಂ ಗತಃ ।
ಆಮೂರ್ಧ್ನಿ ಪಾತ್ರಮುದ್ಧೃತ್ಯಾಂಬರೇ ಚಾವರಣೇ ರವೇಃ ॥ ೪೩ ॥

---

೩೮-೩೯. ಮನೋಹರವಾದ ಆ ಕಲಶೋದಕದಲ್ಲಿ ಕುಂಕುಮಕೇಸರಿ ಗೋರೋಚನ, ಗಂಧ, ಕೆಂಪುಗಂಧ, ಕರವೀರ, ಜಪಾಪುಷ್ಪಗಳು, ಭತ್ತ, ದರ್ಭಾಗ್ರ, ಹಾರಕ, ಅಕ್ಕಿ, ಎಳ್ಳು ಮತ್ತು ವೇಣುಯವ ಇವುಗಳನ್ನು ಸೇರಿಸಬೇಕು.

೪೦. ಆ ಕಲಶದಲ್ಲಿ ಅಂಗ ಮತ್ತು ಆವರಣಸಹಿತವಾಗಿ ಸೂರ್ಯನನ್ನು ಆವಾಹನೆಮಾಡಿ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಮುಂತಾದ ವಿಧಾನದಿಂದ ಹಿಂದಿನಂತೆ ಪೂಜಿಸಬೇಕು.

೪೧. ಮೂರಾವರ್ತಿ ಪ್ರಾಣಾಯಾಮವನ್ನು ಮಾಡಿ ಹಿಂದಿನಂತೆ ಅಂಗ ನ್ಯಾಸಾದಿಗಳನ್ನು ಮಾಡಬೇಕು. ಬಲದ ಅಂಗೈಯಲ್ಲಿ "ವಂ" ಎಂಬ ಸುಧಾ ಬೀಜವನ್ನು ಗಂಧದಿಂದ ಬರೆಯಬೇಕು.

೪೨-೪೫. ಆ ಬಲಗೈಯಿಂದ ಅರ್ಘ್ಯಪಾತ್ರೆಯನ್ನು ಮುಚ್ಚಿ ಅನನ್ಯ ಮನಸ್ಕನಾಗಿ ನೂರೆಂಟಾವರ್ತಿ ಮಂತ್ರವನ್ನು ಜಪಿಸಬೇಕು. ತರುವಾಯ ಪುನಃ ಸೂರ್ಯನನ್ನು ಪೂಜಿಸಿ, ಎರಡುಕೈಗಳಿಂದಲೂ ಪಾತ್ರೆಯನ್ನು ತೆಗೆದುಕೊಂಡು ನೆಲದಮೇಲೆ ಮೊಣಕಾಲೂರಿಕೊಂಡು, ತಲೆಯುವರೆಗೂ, ಕಲಶಪಾತ್ರೆಯನ್ನೆತ್ತಿ,

ವೃಷ್ಟಿಂ ಚಾಧಾಯ ಮನಸಾ ಪೂಜಯಿತ್ವಾ ರವಿಂ ಪುನಃ ।
ಸಾಧಕೇನ ಸ್ವಕೈಕ್ಯೇನ ಮೂಲಮಂತ್ರಂ ಧಿಯಾ ಜಪೇನ್ ॥ ೪೪ ॥

ಅರ್ಘ್ಯಂ ದದ್ಯಾದ್ರವಿಂ ಧ್ಯಾಯನ್ರಕ್ತಚಂದನ ಮಂಡಲೇ ।
ದತ್ವಾ ಪುಷ್ಪಾಂಜಲಿಂ ಭೂಯೋ ಜಪೇದಷ್ಟೋತ್ತರಂ ಶತಮ್ ॥ ೪೫ ॥

ನಿತ್ಯಂ ವಾ ತದ್ದಿನೇಽಪ್ಯೇವಮರ್ಘ್ಯಂ ದದ್ಯಾದ್ದಿವಸ್ವತೇ ।
ತೇನ ತುಷ್ಟೋ ದಿನೇಶೋಽಸ್ಮೈ ದದ್ಯಾದ್ವಿತ್ತಂ ಯಶಃ ಸುಖಂ ॥ ೪೬ ॥

ಪುತ್ರಾನ್ಪೌತ್ರಾನಭೀಷ್ಟಂ ಚ ಯದ್ಯತ್ಸರ್ವಂ ಪ್ರಯಚ್ಛತಿ ।
ಅರ್ಘ್ಯದಾನಮಿದಂ ಪ್ರೋಕ್ತಮಾಯುರಾರೋಗ್ಯವರ್ಧನಂ ॥ ೪೭ ॥

ಧನ ಧಾನ್ಯ ಪಶುಕ್ಷೇಮ ಕ್ಷೇತ್ರಮಿತ್ರ ಕಲತ್ರದಂ ।
ತೇಜೋ ವೀರ್ಯ ಯಶಃ ಕೀರ್ತಿವಿದ್ಯಾವಿಭವಭೋಗದಂ ॥ ೪೮ ॥

---

ಸೂರ್ಯನ ಅಕಾಶಾವರಣದಲ್ಲಿ ದೃಷ್ಟಿಯನ್ನಿಟ್ಟು ಪುನಃ ಸೂರ್ಯನನ್ನು ಮಾನಸಿಕವಾಗಿ ಪೂಜಿಸಿ, ಸಾಧಕನು ಏಕಾಗ್ರಚಿತ್ತದಿಂದ ಮೂಲಮಂತ್ರವನ್ನು ಜಪಿಸುತ್ತಾ ರಕ್ತಗಂಧದಿಂದ ನಿರ್ಮಿತವಾದ ಮಂಡಲದಲ್ಲಿ ಸೂರ್ಯನನ್ನು ಚಿಂತಿಸುತ್ತಾ ಅರ್ಘ್ಯವನ್ನು ಕೊಡಬೇಕು. ಬಳಿಕ ಪುಷ್ಪಾಂಜಲಿಯನ್ನು ಸಮರ್ಪಿಸಿ ಪುನಃ ನೂರೆಂಟಾವರ್ತಿ ಜಪಮಾಡಬೇಕು

೪೬–೪೮. ಇದೇ ರೀತಿಯಾಗಿ ನಿತ್ಯವೂ ಅಥವಾ ಆ ದಿನದಲ್ಲಿ ಯಾದರೂ ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು. ಅದರಿಂದ ಸಂತುಷ್ಟನಾದ ಸೂರ್ಯನು ಆರಾಧಕನಿಗೆ ಹಣ, ಕೀರ್ತಿ, ಸುಖ, ಮಕ್ಕಳು, ಮೊಮ್ಮಕ್ಕಳು, ಹೆಚ್ಚೇನು ಇಷ್ಟಾರ್ಥವೆಲ್ಲವನ್ನೂ ಕೊಡುವನು. ಈ ಅರ್ಘ್ಯಪ್ರದಾನವು ಆಯುರಾರೋಗ್ಯಾಭಿವೃದ್ಧಿಕರವು. ಧನ, ಧಾನ್ಯ, ಪಶು, ಕ್ಷೇಮ, ಭೂಮಿ, ಮಿತ್ರ, ಕಳತ್ರಗಳನ್ನೂ ಕೊಡುವುದು ಮತ್ತು ತೇಜಸ್ಸು, ವೀರ್ಯ, ಕೀರ್ತಿ, ಯಶಸ್ಸು, ವಿದ್ಯೆ, ಐಶ್ವರ್ಯ, ಭೋಗಗಳನ್ನೂ ಕೊಡುತ್ತದೆ.

ಗಾಯತ್ರ್ಯುಪಾಸನಾಸಕ್ತಃ ಸಂಧ್ಯಾವಂದನತತ್ಪರಃ ।
ಏವಂ ಮನುಂ ಜಪನ್ವಿಪ್ರೋ ದುಃಖಂ ನೈವಾಪ್ನುಯಾತ್ಕ್ವಚಿತ್ ॥ ೪೯ ॥

ವಿಕರ್ತನಾಯ ನೈವೇದ್ಯಮೇವಂ ಸಂಪೂಜ್ಯ ದಾಪಯೇತ್ ।
ವಿಯದ್ವಹ್ನಿಮರುತ್ಸದ್ಯಾಂತೋರ್ವೀಶೇಂದು ಸಮನ್ವಿತಂ ॥ ೫೦ ॥

ಮಾರ್ತಾಂಡ ಭೈರವಾಖ್ಯಂ ಹಿ ಬೀಜಂ ತ್ರೈಲೋಕ್ಯಮೋಹನಂ ।
ಬಿಂಬಬೀಜೇನ ಪುಟಿತಂ ಸರ್ವಕಾಮಫಲಪ್ರದಂ ॥ ೫೧ ॥

ಪೂರ್ವವತ್ಸಕಲಂ ಚಾನ್ಯದತ್ರ ಜ್ಞೇಯಂ ಮನೀಷಿಭಿಃ ।
ಭೃಗುರ್ಜಲೇಂದು ಮನ್ವಾಢ್ಯಃ ಸೋಮಾಯ ಹೃದಯಾಂತಿಮಃ ॥ ೫೨ ॥

ಷಡಕ್ಷರೋ ಮಂತ್ರರಾಜೋ ಮುನಿರಸ್ಯ ಭೃಗುರ್ಮತಃ ।
ಛಂದಃ ಪಂಕ್ತಿಸ್ತು ಸೋಮಸ್ಯ ದೇವತಾ ಪರಿಕೀರ್ತಿತಾ ॥ ೫೩ ॥

---

೪೯-೫೦. ಗಾಯತ್ರಿಯನ್ನು ಆರಾಧಿಸುವುದರಲ್ಲಿಯೂ, ಸಂಧ್ಯಾವಂದನೆ ಯಲ್ಲಿಯೂ ಸಹ ಆಸಕ್ತಿಯುಳ್ಳ ಬ್ರಾಹ್ಮಣನು ಈಪ್ರಕಾರ ಮಂತ್ರವನ್ನು ಜಪಿಸಿ ದರೆ ಯಾವಾಗಲೂ ದುಃಖವನ್ನು ಹೊಂದುವುದೇ ಇಲ್ಲ. ಈ ರೀತಿಯಾಗಿ ಸೂರ್ಯ ನನ್ನು ಪೂಜಿಸಿ ಅವನಿಗೆ ನೈವೇದ್ಯವನ್ನು ಅರ್ಪಿಸಬೇಕು.

೫೦-೫೨. (ವಿಯತ್= ಹ, ವಹ್ನಿ= ರ, ಮರುತ್= ಯ, ಸದ್ಯಾಂತ = ಔ, ಉರ್ವೀಶ= ಉ, ಇಂದು= ಂ) ಈ ಅಕ್ಷರಗಳನ್ನೊಳಗೊಂಡಿರುವ 'ಹ್ರ್ಯೌಂ' ಎಂಬುದು ಮಾರ್ತಾಂಡ ಭೈರವವೆಂಬ ಬೀಜವು ಇದು ಮೂರು ಲೋಕಗಳಿಗೂ ಮೋಹಕವು. ಈ ಬೀಜಮಂತ್ರವನ್ನು ಮಧ್ಯದಲ್ಲಿಟ್ಟು ಬಿಂಬ ಬೀಜ= 'ತ್ರಿಂ' ಎಂಬುದನ್ನು ಮೊದಲು ಕೊನೆಗಳಲ್ಲಿ ಸೇರಿಸಿ ಆರಾಧಿಸಿದರೆ ಅದು ಸಕಲೇಷ್ಟದಾಯಕವಾಗುವುದು. ಈ ಮಂತ್ರಕ್ಕೂ ಅಂಗಪೂಜಾದಿಗಳೆಲ್ಲವನ್ನೂ ಹಿಂದಿನ ಮಂತ್ರದಲ್ಲಿ ಹೇಳಿರುವ ರೀತಿಯಾಗಿಯೇ ತಿಳಿಯಬೇಕು.

೫೨-೫೩. (ಭೃಗು= ಸ, ಜಲ= ವ,) "ಸ್ವಾಂ ಸೋಮಾಯ ನಮಃ" ಎಂಬ ಮಂತ್ರವು ಸೋಮಷಡಕ್ಷರವೆಂಬ ಉತ್ತಮ ಮಂತ್ರವು. ಈ ಮಂತ್ರಕ್ಕೆ ಭೃಗುವೇ ಋಷಿಯು, ಪಂಕ್ತಿಎಂಬುದು ಛಂದಸ್ಸು, ಸೋಮನೇ ದೇವತೆ ಎಂದು ಉಕ್ತವಾಗಿದೆ.

ಆದ್ಯಂ ಬೀಜಂ ನಮಃ ಶಕ್ತಿರ್ವಿನಿಯೋಗೋऽಖಿಲಾಪ್ತಯೇ ।
ಷಡ್ದೀರ್ಘೇಣ ಸ್ವಬೀಜೇನ ಷಡಂಗಾನಿ ಸಮಾಚರೇತ್ ॥ ೫೪ ॥

ಪೂರ್ಣೇಂದ್ವಾಸ್ಯಂ ಸ್ಫಟಿಕಭಂ ನೀಲಾಲಕಲಸನ್ಮುಖಂ ।
ಬಿಭ್ರಾಣಮಿಷ್ಟಂ ಕುಮುದಂ ಧ್ಯಾಯೇನ್ಮುಕ್ತಾಸ್ರಜಂ ವಿಧುಂ ॥ ೫೫ ॥

ಋತುಲಕ್ಷಂ ಜಪೇನ್ಮಂತ್ರಂ ಪಾಯಸೇನ ಸಸರ್ಪಿಷಾ ।
ಜುಹುಯಾತ್ತದ್ದಶಾಂಶೇನ ಪೀಠೇ ಹೋಮಾಂತಪೂಜಿತೇ ॥ ೫೬ ॥

ಮೂರ್ತಿಂ ಮೂಲೇನ ಸಂಕಲ್ಪ್ಯ ಪೂಜಯೇದ್ವಿಧಿವದ್ವಿಧುಂ ।
ಕೇಸರೇಷ್ವಂಗಪೂಜಾ ಸ್ಯಾತ್ಪತ್ರೇಷ್ವೇತಾಶ್ಚ ಶಕ್ತಯಃ ॥ ೫೭ ॥

---

೫೪. 'ಸ್ವಾಂ' ಎಂಬ ಆದ್ಯಕ್ಷರವೇ ಬೀಜವು. "ನಮಃ" ಎಂಬುದು ಶಕ್ತಿ. ಈ ಮಂತ್ರವು ಸಮಸ್ತೇಷ್ಟಾರ್ಥಪ್ರಾಪ್ತಿಗಾಗಿ ವಿನಿಯೋಗಿಸಲ್ಪಡತಕ್ಕದು. (ಜಪಿಸಲ್ಪಡತಕ್ಕದು.) ದೀರ್ಘಯುಕ್ತವಾದ ಸ್ವಬೀಜಾಕ್ಷರದಿಂದ "ಸ್ವಾಂ,ಸ್ವೀಂ" ಇತ್ಯಾದಿಯಾಗಿ ಹೇಳಿ ಷಡಂಗನ್ಯಾಸವಮಾಡಬೇಕು.

೫೫. ಪೂರ್ಣಚಂದ್ರನಂತೆ ಮುಖವುಳ್ಳ, ಸ್ಫಟಿಕದಂತೆ ಹೊಳೆಯುತ್ತಿರುವ, ನೀಲಕುಂತಲಗಳಿಂದ ಪ್ರಕಾಶಮಾನವಾದ ಮುಖವುಳ್ಳ, ಇಷ್ಟವಾದ ಕನ್ನೈದಿಲೆಯ ಹೂವನ್ನು ಕರದಲ್ಲಿ ಧರಿಸಿರುವ, ಕಂಠದಲ್ಲಿ ಮುತ್ತಿನಹಾರವನ್ನು ಹಾಕಿಕೊಂಡಿರುವ ಚಂದ್ರನನ್ನು ಧ್ಯಾನಿಸಬೇಕು.

೫೬-೫೮. ಈ ಮಂತ್ರವನ್ನು ಆರುಲಕ್ಷ ಜಪ ಮಾಡಬೇಕು. ಘೃತಸಹಿತ ಪಾಯಸದಿಂದ ಜಪದ ಹತ್ತನೆಯ ಒಂದುಭಾಗ ಎಂದರೆ ಅರವತ್ತು ಸಾವಿರ ಹೋಮಮಾಡಬೇಕು. ಹೋಮಾಂತವಾಗಿ ಪೂಜಿತವಾದ ಧರ್ಮಾದಿ ಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನುಸ್ಥಾಪಿಸಿ ವಿಧಿವತ್ತಾಗಿ ಚಂದ್ರನನ್ನುಪೂಜಿಸಬೇಕು. ಬಕುಳ ಪುಷ್ಪಗಳಲ್ಲಿ ಅಂಗಪೂಜೆಯನ್ನು ಮಾಡಬೇಕು.

ರೋಹಿಣೀ ಕೃತ್ತಿಕಾ ಚೈವ ರೇವತೀ ಭರಣೀ ಪುರಃ ।
ರಾತ್ರಿರಾರ್ಧ್ರಾ ತಥೋ ಜ್ಯೋತ್ಸ್ನಾ ಕಲಾ ಹಾರಸಮಪ್ರಭಾ ॥ ೫೮ ॥

ಸುಶುಕ್ಲಮಾಲ್ಯವಸನಾ ಮುಕ್ತಾಹಾರ ವಿಭೂಷಿತಾಃ ।
ಸರ್ವಾಃ ಸ್ತನಭರಾಕ್ರಾಂತಾ ರಚಿತಾಂಜಲಯಃ ಶುಭಾಃ ॥ ೫೯ ॥

ಸ್ವಪ್ರಿಯಾಸಕ್ತಮನಸೋ ಮದವಿಭ್ರಮಮಂಥರಾಃ ।
ಸಮಭ್ಯರ್ಚ್ಯಾಃ ಸರೋಜಾಕ್ಷ್ಯಃ ಪೂರ್ಣೇಂದುಸದೃಶಾನನಾಃ ॥ ೬೦ ॥

ದಲಾಗ್ರೇಷು ಸಮಭ್ಯರ್ಚ್ಯ ಸ್ತ್ವಷ್ಟೌ ಸೂರ್ಯಾದಿಕಾ ಗ್ರಹಾಃ ।
ಆದಿತ್ಯಭೂಸುತಬುಧಮಂದದೇವೇಜ್ಯರಾಹವಃ ॥ ೬೧ ॥

ಶುಕ್ರಕೇತುಯುತಾಹ್ಯೇತೇ ಪೂಜ್ಯಾಃ ಪತ್ರಾಗ್ರಗಾ ಗ್ರಹಾಃ ।
ರಕ್ತಾರುಣಶ್ವೇತನೀಲಪೀತಧೂಮ್ರಸಿತಾಸಿತಾಃ ॥ ೬೨ ॥

---

ಆದರ ದಳಗಳಲ್ಲಿ ರೋಹಿಣೀ, ಕೃತ್ತಿಕಾ, ರೇವತಿ, ಭರಣೀ, ರಾತ್ರಿ, ಆದ್ರಾ, ಜ್ಯೋತ್ಸ್ನಾ, ಹಾರಸಮಾನ ಪ್ರಭೆಯುಳ್ಳ ಕಲಾ ಎಂಬಶಕ್ತಿಗಳು ಸನ್ನಿಹಿತವಾಗಿರುತ್ತವೆ.

೫೯-೬೦. ಅತ್ಯಂತ ಪರಿಶುದ್ಧವಾದ ಮಾಲಿಕೆ ಮತ್ತು ವಸ್ತ್ರಗಳನ್ನು ಧರಿಸಿರುವ- ಮುತ್ತಿನಹಾರಗಳಿಂದ ಅಲಂಕೃತರಾದ, ಪೀನಪಯೋಧರಗಳುಳ್ಳ ಬೊಗಸೆಗಳನ್ನು ಹಿಡಿದಿರುವ ಶೋಭನೆಯರು, ತಮ್ಮಪತಿಯಲ್ಲಾಸಕ್ತಚಿತ್ತವುಳ್ಳವರು, ಮದವಿಲಾಸಗಳಿಂದ ಯುಕ್ತರು, ಪೂರ್ಣಚಂದ್ರಸಮಾನ ಮುಖವುಳ್ಳವರೂ ಆಗಿರುವ, ಆಕಮಲನೇತ್ರರಾದ ಸಕಲ ಶಕ್ತಿದೇವತೆಗಳನ್ನೂ ಬಕುಲ ಪುಷ್ಪದಳಗಳಲ್ಲಿ ಪೂಜಿಸಬೇಕು.

೬೧-೬೩. ಆದಳದ ಕೊನೆಯಭಾಗಗಳಲ್ಲಿರುವ, ಕ್ರಮವಾಗಿ ರಕ್ತ, ಅರುಣ, ಶುಕ್ಲ, ಕಪ್ಪು, ಹಳದಿ, ಧೂಮ್ರ, ಸಿತ, ಅಸಿತ ಈ ವರ್ಣಗಳ ವಸ್ತ್ರಗಳನ್ನು ಧರಿಸಿರುವ, ಎಡತೊಡೆಯಮೇಲೆ ಎಡಗೈಯ್ಯನ್ನಿಟ್ಟು, ಬಲಗೈಯಿಂದ ಅಭಯ ಮುದ್ರೆಯನ್ನು ತೋರಿಸುತ್ತಿರುವ, ಆದಿತ್ಯ, ಅಂಗಾರಕ, ಬುಧ, ಗುರು, ಶುಕ್ರ,

**ವಾಮೋರುನ್ಯಸ್ತತದ್ಧಸ್ತಾ ದಕ್ಷಿಣೇನ ಧೃತಾಭಯಾಃ ।**
**ಲೋಕಪಾಲಾಂಸ್ತದಸ್ತ್ರಾಣಿ ತದ್ಬಾಹ್ಯೇ ಪೂಜಯೇತ್ಸುಧೀಃ ॥ ೬೩ ॥**

**ಏವಂ ಸಂಸಾಧಿತೋ ಮಂತ್ರಃ ಪ್ರಯಚ್ಛೇದಿಷ್ಟಮಾತ್ಮನಃ ।**
**ಪೌರ್ಣಮಾಸ್ಯಾಂ ಜಿತಾಹಾರೋ ದದ್ಯಾದರ್ಘ್ಯಂ ವಿಧೂದಯೇ ॥ ೬೪ ॥**

**ಮಂಡಲತ್ರಿತಯಂ ಕುರ್ಯಾತ್ ಪ್ರಾಕ್ಪ್ರತ್ಯಗಾಯತಂ ಭುವಿ ।**
**ಪಶ್ಚಿಮೇ ಮಂಡಲೇ ಸ್ಥಿತ್ವಾ ಪೂಜಾದ್ರವ್ಯಂ ಚ ಮಧ್ಯಮೇ ॥ ೬೫ ॥**

**ಸಂಸ್ಥಾಪ್ಯ ಸೋಮಮನ್ಯಸ್ಮಿನ್ಮಂಡಲೇಽಬ್ಜಸಮನ್ವಿತೇ ।**
**ಸಮಭ್ಯರ್ಚ್ಯ ವಿಧಾನೇನ ಪೀಠಪೂಜನಪೂರ್ವಕಂ ॥ ೬೬ ॥**

**ಸ್ಥಾಪಯೇದ್ರಾಜತಂ ಪಾತ್ರಂ ಪುರತಸ್ತತ್ರ ಮಂತ್ರವಿತ್ ।**
**ಸುರಭೀಪಯಸಾಽಽಪೂರ್ಯ ತಂ ಸ್ಪೃಶಸ್ತುಜಪೇನ್ಮನುಂ ॥ ೬೭ ॥**

---

ಶನಿ, ರಾಹು, ಕೇತು ಎಂಬ ಸೂರ್ಯಾದಿ ಎಂಟು ಗ್ರಹಗಳನ್ನು ದಳಾಗ್ರಭಾಗದಲ್ಲಿ ಪೂಜಿಸಬೇಕು. ಅದರ ಹೊರಭಾಗದಲ್ಲಿ ಲೋಕಪಾಲಕರು ಮತ್ತು ಅವರ ಆಯುಧಗಳನ್ನು ಪೂಜಿಸಬೇಕು.

೬೪. ಈ ಪ್ರಕಾರ ಸಾಧಿಸಲ್ಪಟ್ಟಮಂತ್ರವು ಆರಾಧಕನಿಗೆ ಇಷ್ಟಾರ್ಥವನ್ನು ಕೊಡುವುದು. ಜ್ಞಾನಿಯು ಪೂರ್ಣಿಮೆಯದಿನ ಉಪವಾಸದಿಂದಿದ್ದು ಚಂದ್ರೋದಯವಾದಮೇಲೆ ಅರ್ಘ್ಯೆಯನ್ನು ಕೊಡಬೇಕು.

೬೫-೬೮. ನೆಲದಮೇಲೆ ಪೂರ್ವಪಶ್ಚಿಮವಾಗಿ ಮೂರು ಮಂಡಲಗಳನ್ನು ಮಾಡಬೇಕು. ಪಶ್ಚಿಮದಿಕ್ಕಿನಲ್ಲಿ ಮಾಡಿದ ಮಂಡಲದಮೇಲೆ ತಾನು ನಿಂತುಕೊಂಡು, ಮಧ್ಯದ ಮಂಡಲದಮೇಲೆ ಪೂಜೋಪಯುಕ್ತ ಪದಾರ್ಥಗಳನ್ನಿಟ್ಟು, ಕಮಲಯುಕ್ತವಾದ ಇನ್ನೊಂದು ಮಂಡಲದಲ್ಲಿ ಚಂದ್ರನನ್ನು ಸ್ಥಾಪಿಸಿ ವಿಧಾನೋಕ್ತರೀತಿಯಿಂದ ಪೀಠಪೂಜೆಯನ್ನು ನೆರವೇರಿಸಿ, ಆ ಚಂದ್ರನನ್ನು ಪೂಜಿಸಿ, ಚಂದ್ರನ ಮುಂಭಾಗದಲ್ಲಿ ಬೆಳ್ಳಿಯಪಾತ್ರೆಯನ್ನಿಡಬೇಕು. ಆ ಪಾತ್ರೆಯಲ್ಲಿ ಒಳ್ಳೆಯ ಹಸುವಿನ ಹಾಲನ್ನು ತುಂಬಿ ಆದರಮೇಲೆ ಅಂಗೈಯನ್ನಿಟ್ಟು

ಅಷ್ಟೋತ್ತರಶತಂ ಪಶ್ಚಾದ್ವಿದ್ಯಾಮಂತ್ರೇಣ ಮಂತ್ರವಿತ್ ।
ದದ್ಯಾನ್ನಿಶಾಕರಾಯಾರ್ಘ್ಯಂ ಸರ್ವಾಭೀಷ್ಟಾರ್ಥಸಿದ್ಧಯೇ ॥ ೬೮ ॥

ಕುರ್ಯಾದನೇನ ವಿಧಿನಾ ಪ್ರತಿಮಾಸಮತಂದ್ರಿತಃ ।
ವರ್ಷಾಂತರೇಣ ಸರ್ವೇಷ್ಟಂ ಪ್ರಾಪ್ನೋತಿ ಭುವಿ ಮಾನವಃ ॥ ೬೯ ॥

ವಿದ್ಯೇ ವಿದ್ಯಾಮಾಲಿನಿ ಸ್ಯಾದಂತೇ ಚಂದ್ರಿಣಿ ಸಂವದೇತ್ ।
ಚಂದ್ರಮುಖಿದ್ವಿಠಾಂತೋಽಯಂ ವಿದ್ಯಾಮಂತ್ರ ಉದಾಹೃತಃ ॥ ೭೦ ॥

ಏವಂ ಕುಮುದಿನೀನಾಥಮಂತ್ರಂ ಯೋ ಜಪತಿ ಧ್ರುವಂ ।
ಧನಂ ಧಾನ್ಯಂ ಸುತಾನ್ಪೌತ್ರಾನ್ಸೌಭಾಗ್ಯಂ ಲಭತೇಽಚಿರಾತ್ ॥ ೭೧ ॥

ಅಥಾಂಗಾರಕಮಂತ್ರಂ ತು ವಕ್ಷ್ಯೇ ಧನಸುತಪ್ರದಂ ।
ತಾರೋ ದೀರ್ಘೇಂದುಯುಗ್ವ್ಯೋಮ ತದೇವೇಂದುಯುತಂ ಪುನಃ ॥೭೨॥

---

ಮಂತ್ರವನ್ನು ನೂರೆಂಟಾವರ್ತಿ ಜಪಿಸಬೇಕು. ಅನಂತರ ಮಂತ್ರಜ್ಞನು ವಿದ್ಯಾ ಮಂತ್ರದಿಂದ ಸಕಲಾಭೀಷ್ಟಸಿದ್ಧ್ಯರ್ಥವಾಗಿ ಚಂದ್ರನಿಗೆ ಆಕ್ಷೀರದಿಂದ ಅರ್ಘ್ಯ ಯನ್ನು ಕೊಡಬೇಕು.

೬೯. ಈ ವಿಧಾನದಿಂದ ಪ್ರತಿತಿಂಗಳಲ್ಲಿಯೂ, ಆಲಸ್ಯವಿಲ್ಲದೆ ಮಾಡುವ ಮನುಷ್ಯನು ಒಂದು ವರ್ಷದೊಳಗೆ ಈ ಲೋಕದಲ್ಲಿ ಸಕಲೇಷ್ಟಾರ್ಥಗಳನ್ನೂ ಹೊಂದುವನು.

೭೦. ಓಂ ವಿದ್ಯೇ ವಿದ್ಯಾ ಮಾಲಿನಿ ಚಂದ್ರಿಣಿ ಚಂದ್ರಮುಖಿಸ್ವಾಹಾ ಎಂಬುದು ವಿದ್ಯಾಮಂತ್ರವೆಂದು ಉದಾಹರಿಸಲ್ಪಟ್ಟಿದೆ.

೭೧. ಈ ರೀತಿಯಾಗಿ ಚಂದ್ರ ಮಂತ್ರವನ್ನು ಜಪಿಸುವ ಮನುಜನು ಧನ, ಧಾನ್ಯ, ಪುತ್ರ, ಪೌತ್ರ, ಸೌಭಾಗ್ಯ ಇವುಗಳನ್ನು ಶೀಘ್ರವಾಗಿ ಖಂಡಿತ ಪಡೆಯುವನು.

೭೨-೭೩. ಅನಂತರ ಐಶ್ವರ್ಯ ಮತ್ತು ಪುತ್ರಪ್ರದವಾದ ಅಂಗಾರಕ ಮಂತ್ರವನ್ನು ಹೇಳುವೆನು :—ತಾರ=ಓಂ, ದೀರ್ಘೇಂದುಯುಗ್ವ್ಯೋಮ=ಹಾಂ,

**ಸ್ವಾಂತಃ ಸರ್ಗೀ ಚ ಚಂಡೀಶೌ ಕ್ರಮಾದಿಂದುವಿಸರ್ಗಿಣೌ ।**
**ಷಡರ್ಣೋsಯಂ ಮಹಾಮಂತ್ರೋ ಮಂಗಲಸ್ಯಾಖಿಲೇಷ್ಟದಂ ॥ ೭೩ ॥**

**ವಿರೂಪಾಕ್ಷೋ ಮುನಿಶ್ಛಂದೋ ಗಾಯತ್ರಂ ದೇವತಾ ಕುಜಃ ।**
**ಮಂತ್ರಾರ್ಣೈಃ ಷಡ್ಭಿರಂಗಾನಿ ಕುರ್ವನ್ಧ್ಯಾಯೇದ್ಧರಾತ್ಮಜಂ ॥ ೭೪ ॥**

**ಮೇಷಸ್ಥಂ ರಕ್ತವಸ್ತ್ರಾಂಗಂ ಶೂಲಶಕ್ತಿಗದಾವರಾನ್ ।**
**ಕರೈರ್ಬಿಭ್ರಾಣಮೀಶಾನಸ್ವೇದಜಂ ಭೂಸುತಂ ಸ್ಮರೇತ್ ॥ ೭೫ ॥**

**ರಸಲಕ್ಷಂ ಜಪೇನ್ಮಂತ್ರಂ ದಶಾಂಶಂ ಖದಿರೋದ್ಭವೈಃ ।**
**ಸಮಿದ್ಭಿರ್ಜುಹುಯಾದಗ್ನೌ ಶೈವೇ ಪೀಠೇ ಯಜೇತ್ಕುಜಂ ॥ ೭೬ ॥**

---

ಪುನಃ ಇಂದು ಯುತಂತದೇವ= ಹಂ, ಸರ್ಗೀಸಾಂತಃ= ಸಃ. ಇಂದು ವಿಸರ್ಗಿಣೌ ಚಂಡೀಶೌ= ಖಂ ಖಃ, ಈ ವರ್ಣಗಳನ್ನು ಸೇರಿಸುವುದರಿಂದ ನಿಷ್ಪನ್ನವಾಗುವ "ಓಂ ಹಾಂ ಹಂಸಃ ಖಂ ಖಃ" ಎಂಬ ಷಡಕ್ಷರ ಮಹಾ ಮಂತ್ರವೇ ಅಂಗಾರಕ ಮಂತ್ರವು. ಇದು ಜಪಿಸುವವರಿಗೆ ಇಷ್ಟಾರ್ಥವನ್ನೆಲ್ಲಾ ಕೊಡುತ್ತದೆ.

೭೪. ಈ ಅಂಗಾರಕ ಮಂತ್ರಕ್ಕೆ ವಿರೂಪಾಕ್ಷನು ಋಷಿಯು. ಗಾಯತ್ರಿಯು ಛಂದಸ್ಸು. ಅಂಗಾರಕನೇ ದೇವತೆ. ಈ ಮಂತ್ರದ ಆರುವರ್ಣಗಳಿಂದ ಕ್ರಮವಾಗಿ ಷಡಂಗನ್ಯಾಸಮಾಡಬೇಕು. ಅನಂತರ ಅಂಗಾರಕನನ್ನು ಧ್ಯಾನಿಸಬೇಕು.

೭೫. ಮೇಷರಾಶಿಗತನು, ಅಂಗಗಳಲ್ಲಿ ಕೆಂಪುಬಟ್ಟೆಯನ್ನುಟ್ಟಿರುವವನು, ಶೂಲ ಮತ್ತು ವರಮುದ್ರೆಗಳನ್ನು ಬಲಗೈಯ್ಯಲ್ಲಿಯೂ, ಶಕ್ತಿ, ಗದೆಗಳನ್ನು ಎಡಗೈಯಲ್ಲಿಯೂ ಧರಿಸಿರುವವನು, ರುದ್ರನ ಸ್ವೇದದಿಂದ ಹುಟ್ಟಿದವನೂ ಆಗಿರುವ ಭೂಸುತ ಎಂದರೆ ಅಂಗಾರಕನನ್ನು ಧ್ಯಾನಿಸಬೇಕು.

೭೬-೮೦. ಈ ಮಂತ್ರವನ್ನು ಆರುಲಕ್ಷ ಜಪಿಸಬೇಕು ಅದರಲ್ಲಿ ಹತ್ತನೆಯ ಒಂದುಭಾಗದಷ್ಟು ಕಗ್ಗಳಿಯ ಸಮಿತ್ತುಗಳಿಂದ ಅಗ್ನಿಯಲ್ಲಿ ಹೋಮ

ಪ್ರಾಗಂಗಾನಿ ಸಮಾರಾಧ್ಯ ಹ್ಯೇಕವಿಂಶತಿಕೋಷ್ಠಕಂ ।
ಮಂಗಳೋ ಭೂಮಿಪುತ್ರಶ್ಚ ಋಣಹರ್ತಾ ಧನಪ್ರದಃ ॥ ೭೭ ॥

ಸ್ಥಿರಾಸನೋ ಮಹಾಕಾಯಃ ಸರ್ವಕರ್ಮಾವರೋಧಕಃ ।
ಲೋಹಿತೋ ಲೋಹಿತಾಕ್ಷಶ್ಚ ಸಾಮಗಾನಾಂ ಕೃಪಾಕರಃ ॥ ೭೮ ॥

ಧರ್ಮಾತ್ಮಜಃ ಕುಜೋ ಭೌಮೋ ಭೂಮಿದೋ ಭೂಮಿನಂದನಃ ।
ಅಂಗಾರಕೋ ಮಹೀಸೂನುಃ ಸರ್ವರೋಗಾಪಹಾರಕಃ ॥ ೭೯ ॥

ವೃಷ್ಟಿಕರ್ತಾ ದೃಷ್ಟಿಕರ್ತಾ ಸರ್ವಕಾರ್ಯಾರ್ಥ ಸಿದ್ಧಿದಃ ।
ಇತ್ಯೇಕವಿಂಶತಿಃ ಪ್ರೋಕ್ತಾ ಮೂರ್ತಯೋ ಭೂಸುತಸ್ಯ ವೈ ॥ ೮೦ ॥

ಮಂಗಳಾದೀನ್ಯಜೇನ್ಮಂತ್ರೀ ಸ್ವಸ್ವಸ್ಥಾನಸ್ಥಿತಾನ್ಕ್ರಮಾತ್ ।
ಇಂದ್ರಾದ್ಯಾನಪಿ ವಜ್ರಾದೀನೇವಂ ಸಿದ್ಧೋ ಭವೇನ್ಮನುಃ ॥ ೮೧ ॥

---

ಮಾಡಬೇಕು. ಶೈವ ಪೀಠದಲ್ಲಿ ಮುಂದೆ ಹೇಳುವ ಇಪ್ಪತ್ತೊಂದು ನಾಮಗಳಿಂದ ಅಂಗಗಳನ್ನು ಮೊದಲು ಪೂಜಿಸಿ ಅನಂತರ ಅಂಗಾರಕನನ್ನು ಪೂಜಿಸಬೇಕು. ಮಂಗಳ, ಭೂಮಿಪುತ್ರ, ಋಣಹರ್ತಾ, ಧನಪ್ರದ, ಸ್ಥಿರಾಸನ, ಮಹಾಕಾಯ, ಸರ್ವಕರ್ಮಾವರೋಧಕ, ಲೋಹಿತ, ಲೋಹಿತಾಕ್ಷ, ಸಾಮಗ ಕೃಪಾಕರ, ಧರ್ಮಾತ್ಮಜ, ಕುಜ, ಭೌಮ, ಭೂಮಿದ, ಭೂಮಿನಂದನ, ಅಂಗಾರಕ, ಮಹೀಸೂನು, ಸರ್ವರೋಗಾಪಹಾರಕ, ವೃಷ್ಟಿಕರ್ತಾ, ದೃಷ್ಟಿಕರ್ತಾ, ಸರ್ವಕಾರ್ಯಾರ್ಥಸಿದ್ಧಿದ ಎಂಬುದಾಗಿ ಅಂಗಾರಕನಿಗೆ ಇಪ್ಪತ್ತೊಂದು ಮೂರ್ತಿಗಳು ಉಕ್ತವಾಗಿವೆ. ಅಂಗಾರಕನ ಪಾದಾದಿ ಒಂದೊಂದು ಅವಯವದಲ್ಲಿ ಇವುಗಳ ಪೈಕಿ ಒಂದೊಂದು ಮೂರ್ತಿಯು ಸನ್ನಿಹಿತವಾಗಿರುತ್ತದೆ. ಆಯಾಯಾ ಅಂಗಗಳಲ್ಲಿ ಆಯಾಯಾ ಮೂರ್ತಿಯನ್ನು ಪೂಜಿಸಬೇಕೆಂದು ತಾತ್ಪರ್ಯ.

೮೧. ಮಂತ್ರ ಜಪಕರ್ತನು ಆದರದರ ಸ್ಥಾನಗಳಲ್ಲಿರುವ ಮಂಗಳಾದಿ ಇಪ್ಪತ್ತೊಂದು ಮೂರ್ತಿಗಳನ್ನು ಮತ್ತು ಇಂದ್ರಾದಿ ದಿಕ್ಪಾಲಕರು ಅವರವರ ವಜ್ರಾಯುಧಗಳು ಇವುಗಳನ್ನು ಕ್ರಮವಾಗಿ ಪೂಜಿಸಬೇಕು. ಈರೀತಿ ಮಾಡಿದರೆ ಮಂತ್ರಸಿದ್ಧಿಯಾಗುವುದು.

ಸುತಕಾಮಾ ಕುರಂಗಾಕ್ಷೀ ಭೌಮವ್ರತಮುಪಾಚರೇತ್ ।
ಮಾರ್ಗಶೀರ್ಷೇಽಥವೈಶಾಖೇ ವ್ರತಾರಂಭಃ ಪ್ರಶಸ್ಯತೇ ॥ ೮೨ ॥

ಅರುಣೋದಯವೇಲಾಯಾಮುತ್ಥಾಯಾವಶ್ಯಕಂ ಪುನಃ ।
ವಿನಿವರ್ತ್ಯ ರದಾನ್ಧಾವೇದಪಾಮಾರ್ಗೇಣ ವಾಗ್ಯತಾ ॥ ೮೩ ॥

ಸ್ನಾತ್ವಾ ರಕ್ತಾಂಬರಧರಾ ರಕ್ತಮಾಲ್ಯವಿಲೇಪನಾ ।
ನೈವೇದ್ಯಾದೀಂಶ್ಚ ಸಂಭಾರಾನ್ರಕ್ತಾನ್ಸರ್ವಾನ್ಪ್ರಕಲ್ಪಯೇತ್ ॥ ೮೪ ॥

ಯೋಗ್ಯಂ ವಿಪ್ರಂ ಸಮಾಹೂಯ ಕುಜಮರ್ಚೇತ್ತದಾಜ್ಞಯಾ ।
ರಕ್ತಗೋ ಗೋಮಯಾಲಿಪ್ತಭೂಮೌ ರಕ್ತಾಸನೇ ವಿಶೇತ್ ॥ ೮೫ ॥

---

೮೨. ಮಕ್ಕಳಾಗಬೇಕೆಂದು ಬಯಸುವ ಸ್ತ್ರೀಯು ಭೌಮವ್ರತವನ್ನಾಚರಿಸಬೇಕು. ಈ ವ್ರತವನ್ನು ಮಾರ್ಗಶೀರ್ಷ ಅಥವಾ ವೈಶಾಖಮಾಸದಲ್ಲಿ ಆರಂಭಿಸುವುದು ಪ್ರಶಸ್ತವು.

೮೩. ಈ ವ್ರತವನ್ನಾಚರಿಸುವವಳು ಅರುಣೋದಯಕಾಲದಲ್ಲೆದ್ದು, ಶೌಚಾದಿಗಳನ್ನು ಮುಗಿಸಿಕೊಂಡು, ಮೌನವಾಗಿ ಉತ್ತರಾಣಿ ಕಡ್ಡಿಯಿಂದ ಹಲ್ಲುಜ್ಜಿ ತೊಳೆದುಕೊಳ್ಳಬೇಕು.

೮೪. ತರುವಾಯ ಸ್ನಾನಮಾಡಿ ಕೆಂಪುಬಟ್ಟೆ, ಮಾಲಿಕೆ, ಗಂಧ ಇವುಗಳನ್ನು ಧರಿಸಿದವಳಾಗಿ ಕೆಂಪಗಿರುವ ಫಲಾದಿಗಳೇ ಮುಂತಾದ ನೈವೇದ್ಯಾದಿ ಪೂಜೋಪಯುಕ್ತವಾದ ಸಕಲಸಾಮಗ್ರಿಗಳನ್ನೂ ಸಿದ್ಧಮಾಡಿಕೊಳ್ಳಬೇಕು.

೮೫. ಯೋಗ್ಯಬ್ರಾಹ್ಮಣರನ್ನು ಕರೆದು ಅವರ ಅಪ್ಪಣೆಯನ್ನು ಪಡೆದು ಅಂಗಾರಕನ ಪೂಜೆಗೆ ಪ್ರಾರಂಭಿಸಬೇಕು. ಪೂಜೆಮಾಡುವಾಗ ಕೆಂಪುಬಣ್ಣದ ಹಸುವಿನ ಗೋಮಯದಿಂದ ಸಾರಿಸಲ್ಪಟ್ಟ ಭೂಮಿಯಲ್ಲಿ ರಕ್ತಾಸನದಲ್ಲಿ ಕುಳಿತುಕೊಳ್ಳಬೇಕು.

ಆಚಮ್ಯ ದೇಶಕಾಲೌ ಚ ಸ್ಮೃತ್ವಾ ಕಾಮ್ಯಂ ಸಮುಚ್ಚರನ್ ।
ಮಂಗಲಾದೀನಿ ನಾಮಾನಿ ಸ್ವಕೀಯಾಂಗೇಷು ವಿನ್ಯಸೇತ್ ॥ ೮೬ ॥

ಮುಖೇ ಪ್ರವಿನ್ಯಸೇತ್ಸಾಧ್ವೀ ಸಾಮಗಾನಾಂ ಕೃಪಾಕರಂ ।
ಧರಾತ್ಮಜಂ ನಸೋರಕ್ಷ್ಣೋಃ ಕುಜಂ ಭೌಮಂ ಲಲಾಟಕೇ ॥ ೮೭ ॥

ಭೂಮಿದಂ ತು ಭ್ರುವೋರ್ಮಧ್ಯೇ ಮಸ್ತಕೇ ಭೂಮಿನಂದನಂ ।
ಅಂಗಾರಕಂ ಶಿಲಾಯಾಂ ಚ ಸರ್ವಾಂಗೇ ಚ ಮಹೀಸುತಂ ॥ ೮೮ ॥

ಬಾಹುದ್ವಯೇ ನ್ಯಸೇತ್ಪಶ್ಚಾತ್ಸರ್ವರೋಗಾಪಹಾರಕಂ ।
ಮೂರ್ಧಾದಿ ವೃಷ್ಟಿಕರ್ತಾರಮಾಪಾದಾಂತಂ ನ್ಯಸೇತ್ಸುಧೀಃ ॥ ೮೯ ॥

ವಿನ್ಯಸೇದ್ದೃಷ್ಟಿಕರ್ತಾರಂ ಮೂರ್ಧಾಂತಂ ಚರಣಾದಿತಃ ।
ನ್ಯಸೇದಂತಂ ತತೋ ದಿಕ್ಷು ಸರ್ವಕಾಮಾರ್ಥಸಿದ್ಧಿದಂ ॥ ೯೦ ॥

---

೮೬. ಆಚಮನೆಮಾಡಿ, ದೇಶಕಾಲಾದಿ ಸ್ಮರಣಪೂರ್ವಕವಾಗಿ ಇಷ್ಟಾರ್ಥವನ್ನು ಹೇಳಿ ಸಂಕಲ್ಪಮಾಡಿ ಮಂಗಳಾದಿ ಪೂರ್ವೋಕ್ತ ನಾಮಗಳನ್ನು ತನ್ನ ಅಂಗಗಳಲ್ಲಿ ನ್ಯಾಸಮಾಡಬೇಕು.

೮೭. ಹೇಗೆಂದರೆ :—ಸಾಧ್ವೀಮಣಿಯು "ಸಾಮಗಾನಾಂ ಕೃಪಾಕರಾಯ ನಮಃ" ಎಂದು ಮುಖದಲ್ಲಿಯೂ, "ಧರ್ಮಾತ್ಮಜಾಯನಮಃ" ಎಂದು ಮೂಗುಗಳಲ್ಲಿಯೂ, "ಕುಜಾಯನಮಃ" ಎಂದು ಕಣ್ಣುಗಳಲ್ಲಿಯೂ, "ಭೌಮಾಯನಮಃ" ಎಂದು ಹಣೆಯಲ್ಲಿಯೂ ನ್ಯಾಸಮಾಡಬೇಕು.

೮೮-೯೦. "ಭೂಮಿದಾಯನಮಃ" ಎಂದು ಹುಬ್ಬುಗಳ ನಡುವೆಯಲ್ಲಿಯೂ, "ಭೂಮಿನಂದನಾಯನಮಃ" ಎಂದು ತಲೆಯಲ್ಲಿಯೂ, "ಅಂಗಾರಕಾಯನಮಃ" ಎಂದು ಶಿಖೆಯಲ್ಲಿಯೂ, "ಮಹೀಸುತಾಯನಮಃ" ಎಂದು ಸರ್ವಾಂಗದಲ್ಲಿಯೂ, "ಸರ್ವರೋಗಾಪಹಾರಕಾಯನಮಃ" ಎಂದು ಎರಡು ತೋಳುಗಳಲ್ಲಿಯೂ, "ವೃಷ್ಟಿಕರ್ತ್ರೇನಮಃ" ಎಂದು ಶಿರಸ್ಸಿನಿಂದ ಪಾದದವರೆಗೂ, "ದೃಷ್ಟಿಕರ್ತ್ರೇನಮಃ" ಎಂದು ಪಾದಾದಿ ಶಿರಸ್ಸಿನವರೆಗೂ, ಕೊನೆಯದಾಗಿ "ಸರ್ವಕಾಮಾರ್ಥಸಿದ್ಧಿದಾಯನಮಃ" ಎಂದು ದಿಕ್ಕುಗಳಲ್ಲಿಯೂ ನ್ಯಾಸಮಾಡಬೇಕು.

**ನಾಭೌ ಹೃದಿ ಶಿರಸ್ಯಾರಂ ವಕ್ರಂ ಭೂಮಿಜಮೇವ ಚ ।**
**ವಿನ್ಯಸ್ಯೈವಂ ನಿಜೇ ದೇಹೇ ಧ್ಯಾಯೇತ್ಪ್ರಾಗ್ವದ್ಧರಾತ್ಮಜಂ ॥ ೯೧ ॥**

**ಮಾನಸೈರುಪಚಾರೈಶ್ಚ ಸಂಪೂಜ್ಯಾರ್ಘ್ಯಂ ನಿಧಾಪಯೇತ್ ।**
**ಏಕವಿಂಶತಿಕೋಷ್ಠಾಢ್ಯೇ ತ್ರಿಕೋಣೇ ತಾಮ್ರಪತ್ರಗೇ ॥ ೯೨ ॥**

**ಆವಾಹ್ಯಾಂಗಾರಕಂ ತತ್ರ ರಕ್ತಪುಷ್ಪಾದಿಭಿರ್ಯಜೇತ್ ।**
**ಅಂಗಾನಿ ಪೂರ್ವಮಾರಾಧ್ಯ ಮಂಗಳಾದೀನ್ಪ್ರಪೂಜಯೇತ್ ॥ ೯೩ ॥**

**ಏಕವಿಂಶತಿಕೋಷ್ಠೇಷು ವಕ್ರಮಾರಂ ಚ ಭೂಮಿಜಂ ।**
**ತ್ರಿಕೋಣೇಷು ಚ ಸಂಪೂಜ್ಯ ಬಹಿರಷ್ಟೌ ಚ ಮಾತೃಕಾಃ ॥ ೯೪ ॥**

**ಇಂದ್ರಾದೀನಥವಜ್ರಾದೀನ್ಬಾಹ್ಯೇ ಸಂಪೂಜಯೇತ್ಪುನಃ ।**
**ಧೂಪದೀಪೌ ಸಮರ್ಪ್ಯಾಥ ಗೋಧೂಮಾನ್ನಂ ನಿವೇದಯೇತ್ ॥ ೯೫ ॥**

---

೯೧. ಹೊಕ್ಕಳು, ಎದೆ, ತಲೆಗಳಲ್ಲಿ ಆರ, ವಕ್ರ, ಭೂಮಿಜರನ್ನು ಕ್ರಮವಾಗಿ ನ್ಯಾಸಮಾಡಿ, ಹಿಂದಿನಂತೆ ತನ್ನ ಶರೀರದಲ್ಲಿ ಅಂಗಾರಕನನ್ನು ಧ್ಯಾನಿಸಬೇಕು.

೯೨-೯೫. ಮಾನಸಿಕವಾದ ಉಪಚಾರಗಳಿಂದ ಪೂಜಿಸಿ, ಅರ್ಘ್ಯೆಯನ್ನು ಕೊಡಬೇಕು. ಇಪ್ಪತ್ತೊಂದು ಕೋಷ್ಟಕಗಳನ್ನೊಳಗೊಂಡ, ಮೂರು ಮೂಲೆಗಳುಳ್ಳ, ತಾಮ್ರದ ತಗಡಿನಲ್ಲಿ ಅಂಗಾರಕನನ್ನು ಆವಾಹನೆಮಾಡಿ, ಕೆಂಪುಹೂವು ಮುಂತಾದುವುಗಳಿಂದ ಪೂಜಿಸಬೇಕು. ಅಂಗಗಳನ್ನು ಮೊದಲು ಪೂಜಿಸಿ, ಇಪ್ಪತ್ತೊಂದು ಕೋಷ್ಟಗಳಲ್ಲಿ ಮಂಗಳ ಮುಂತಾದ ಅಂಗಾರಕನ ಇಪ್ಪತ್ತೊಂದು ಮೂರ್ತಿಗಳನ್ನು ಪೂಜಿಸಬೇಕು. ತ್ರಿಕೋಣಗಳಲ್ಲಿ ವಕ್ರ, ಆರ, ಕುಜ ಇವರನ್ನೂ, ಹೊರಭಾಗದಲ್ಲಿ ಅಷ್ಟಮಾತೃಕೆಗಳನ್ನೂ ಪೂಜಿಸಿ, ಬಾಹ್ಯಪ್ರದೇಶದಲ್ಲಿ ಇಂದ್ರಾದಿ ದಿಕ್ಪಾಲಕರನ್ನೂ, ಅವರ ವಜ್ರಾಯುಧಗಳನ್ನೂ ಪುನಃ ಪೂಜಿಸಬೇಕು. ಅನಂತರ ಧೂಪ, ದೀಪಗಳನ್ನು ಸಮರ್ಪಿಸಿ ಗೋಧಿಯ ಅನ್ನವನ್ನು ನಿವೇದನೆಮಾಡಬೇಕು.

ತಾಮ್ರಪಾತ್ರೇಷು ಶುದ್ಧತೋಯಪೂರಿತೇ ರಕ್ತಚಂದನಂ ।
ರಕ್ತಪುಷ್ಪಾಕ್ಷತಫಲಾನ್ಯಾಕ್ಷಿಪ್ಯಾರ್ಘ್ಯಂ ಸಮರ್ಪಯೇತ್ ।
ಮಂಗಲಾಯ ತತೋ ಮಂತ್ರೀ ಇದಂ ಮಂತ್ರದ್ವಯಂ ಪಠೇತ್ ॥ ೯೬ ॥

ಭೂಮಿಪುತ್ರ ಮಹಾತೇಜಃ ಸ್ವೇದೋದ್ಭವ ಪಿನಾಕಿನಃ ।
ಸುತಾರ್ಥಿನೀ ಪ್ರಪನ್ನಾ ತ್ವಾಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೯೭ ॥

ರಕ್ತಪ್ರವಾಳಸಂಕಾಶಜಪಾಕುಸುಮಸನ್ನಿಭಃ ।
ಮಹೀಸುತ ಮಹಾಭಾಗ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೯೮ ॥

ಏಕವಿಂಶತಿಪೂರ್ವೋಕ್ತೈರ್ಜಪೇ ನಮೋಂತೈಶ್ಚ ನಾಮಭಿಃ ।
ತಾರಾದ್ಯೈಃ ಪ್ರಣಮೇತ್ಪಶ್ಚಾತ್ತಾವತ್ಯಶ್ಚ ಪ್ರದಕ್ಷಿಣಾಃ ॥ ೯೯ ॥

---

೯೬. ಶುದ್ಧೋದಕದಿಂದ ತುಂಬಿದ ತಾಮ್ರಪಾತ್ರೆಯಲ್ಲಿ ರಕ್ತವರ್ಣದ ಗಂಧ, ಪುಷ್ಪ, ಅಕ್ಷತೆ, ಫಲ ಇವುಗಳನ್ನು ಹಾಕಿ, ಅರ್ಘ್ಯೆಯನ್ನು ಸಮರ್ಪಿಸಬೇಕು. ತರುವಾಯ ಮಂತ್ರ ಜಪಕರ್ತನು ಅಂಗಾರಕನಿಗೆ ಈ ಎರಡು ಮಂತ್ರಗಳನ್ನೂ ಹೇಳಬೇಕು.

೯೭. ಮಹಾ ತೇಜಸ್ವಿಯು, ಬ್ರಹ್ಮನ ಸ್ವೇದದಿಂದ ಹುಟ್ಟಿದವನೂ ಆಗಿರುವ ಭೂಮಿಪುತ್ರನಾದ ಅಂಗಾರಕನೇ! ಮಕ್ಕಳಾಗಬೇಕೆಂಬ ಅಪೇಕ್ಷೆಯಿಂದ ನಾನು ನಿನ್ನನ್ನು ಶರಣು ಹೊಂದಿರುವೆನು. ಈ ಅರ್ಘ್ಯೆಯನ್ನು ಸ್ವೀಕರಿಸು, ನಿನಗೆ ನಮಸ್ಕಾರ.

೯೮. ಕೆಂಪುಹವಳ, ಜಪಾಕುಸುಮಗಳಂತೆ ಹೊಳೆಯುತ್ತಿರುವ ಧನ್ಯನಾದ ಭೂಮಿಸುತನೇ! ನಿನಗೆ ನಮಸ್ಕಾರ. ಈ ಅರ್ಘ್ಯೆಯನ್ನು ಸ್ವೀಕರಿಸು.

೯೯. ಆದಿಯಲ್ಲಿ ಓಂ ಕಾರ, ಕೊನೆಯಲ್ಲಿ 'ನಮಃ' ಶಬ್ದ ಇವುಗಳಿಂದ ಸಹಿತವಾದ ಹಿಂದೆ ಹೇಳಿದ ಇಪ್ಪತ್ತೊಂದು ಚತುರ್ಥೀ ವಿಭಕ್ತ್ಯಂತ ನಾಮಗಳಿಂದ ಎಂದರೆ "ಓಂ ಮಂಗಳಾಯನಮಃ" ಇತ್ಯಾದಿಯಾಗಿ ಹೇಳುತ್ತಾ ನಮಸ್ಕಾರ ಮಾಡಬೇಕು. ಅದೇ ರೀತಿಯಾಗಿ ಅಷ್ಟೇ ಪ್ರದಕ್ಷಿಣೆಗಳನ್ನೂ ಮಾಡಬೇಕು.

ಧರಣೀಗರ್ಭಸಂಭೂತಂ ವಿದ್ಯುತ್ತೇಜಃ ಸಮಪ್ರಭಂ ।
ಕುಮಾರಂ ಶಕ್ತಿಹಸ್ತಂ ಚ ಮಂಗಳಂ ಪ್ರಣಮಾಮ್ಯಹಂ ॥ ೧೦೦ ॥

ತತೋ ರೇಖಾತ್ರಯಂ ಕುರ್ಯಾತ್ಖದಿರಾಂಗಾರಕೇಣ ಚ ।
ಮಾಜಯೇದ್ವಾಮಪಾದೇನ ಮಂತ್ರಾಭ್ಯಾಂ ಚ ಸಮಾಹಿತಾ ॥ ೧೦೧ ॥

ದುಃಖದೌರ್ಭಾಗ್ಯನಾಶಾಯ ಪುತ್ರಸಂತಾನಹೇತವೇ ।
ಕೃತರೇಖಾತ್ರಯಂ ವಾಮಪಾದೇನೈತತ್ಪ್ರಮಾರ್ಜ್ಯಹಂ ॥ ೧೦೨ ॥

ಋಣದುಃಖವಿನಾಶಾಯ ಮನೋಭೀಷ್ಟಾರ್ಥಸಿದ್ಧಯೇ ।
ಮಾರ್ಜಯಾಮ್ಯಸಿತಾರೇಖಾಸ್ತಿಸ್ರೋ ಜನ್ಮತ್ರಯೋದ್ಭವಾಃ ॥ ೧೦೩ ॥

---

೧೦೦. ಭೂದೇವಿಯ ಗರ್ಭದಲ್ಲಿ ಜನಿಸಿದ ಮಿಂಚಿನ ತೇಜಸ್ಸಿಗೆ ಸದೃಶವಾದ ಕಾಂತಿಯುಳ್ಳ, ಹಸ್ತದಲ್ಲಿ ಶಕ್ತಿಯನ್ನು ಧರಿಸಿರುವ, ಕುಮಾರಪ್ರದನಾದ ಅಂಗಾರಕನನ್ನು ನಮಸ್ಕರಿಸುವೆನು.

೧೦೧. ಅನಂತರ ಕಗ್ಗಲಿ ಕಟ್ಟಿಗೆಯ ಅಂಗಾರದಿಂದ ಮೂರು ರೇಖೆಗಳನ್ನು ಮಾಡಬೇಕು. ಮುಂದಿನ ಎರಡು ಮಂತ್ರಗಳಿಂದ ಸಮಾಧಾನ ಚಿತ್ತಳಾಗಿ ಎಡಗಾಲಿನಿಂದ ಮಾರ್ಜನೆ ಮಾಡಬೇಕು.

೧೦೨. ದುಃಖ ದೌರ್ಭಾಗ್ಯಗಳನ್ನು ಹೋಗಲಾಡಿಸಿ ಪುತ್ರಸಂತಾನ ವುಂಟಾಗುವುದಕ್ಕಾಗಿ ಇಲ್ಲಿ ಬರೆದಿರುವ ರೇಖಾತ್ರಯವನ್ನು ಎಡಗಾಲಿನಿಂದ ಅಳಿಸುವೆನು

೧೦೩. ಸಾಲದಿಂದುಂಟಾದ ದುಃಖಪರಿಹಾರ ಮತ್ತು ಮನೋಭೀಷ್ಟ ಸಿದ್ಧಿ ಇವುಗಳಿಗಾಗಿ ಮೂರು ಜನ್ಮಗಳಲ್ಲಿ ಹುಟ್ಟಿದ ಪಾಪ ರೇಖೆಗಳನ್ನು ಅಳಿಸುವೆನು.

ಸ್ತುವೀತಧರಣೀಪುತ್ರಂ ಪುಷ್ಪಾಂಜಲಿಕರಾ ತತಃ ।
ಧ್ಯಾಯಂತೀ ತತ್ಪದಾಂಭೋಜಂ ಪೂಜಾಸಾಂಗತ್ವಸಿದ್ಧಯೇ ॥ ೧೦೪ ॥

ಋಣಹರ್ತ್ರೇ ನಮಸ್ತುಭ್ಯಂ ದುಃಖದಾರಿದ್ರ್ಯನಾಶಿನೇ ।
ಸೌಭಾಗ್ಯಸುಖದೋ ನಿತ್ಯಂ ಭವ ಮೇ ಧರಣೀಸುತ ॥ ೧೦೫ ॥

ತಪ್ತಕಾಂಚನಸಂಕಾಶತರುಣಾರ್ಕಸಮಪ್ರಭ ।
ಸುಖಸೌಭಾಗ್ಯಧನದ ಋಣದಾರಿದ್ರ್ಯನಾಶಕ ॥ ೧೦೬ ॥

ಗ್ರಹರಾಜ ನಮಸ್ತೇಽಸ್ತು ಸರ್ವಕಲ್ಯಾಣಕಾರಕ ।
ಪ್ರಸಾದಂ ಕುರು ದೇವೇಶ ಸರ್ವಕಲ್ಯಾಣಭಾಜನ ॥ ೧೦೭ ॥

ದೇವದಾನವಗಂಧರ್ವ ಯಕ್ಷರಾಕ್ಷಸಪನ್ನಗಾಃ ।
ಆಪ್ನುವಂತಿ ಶಿವಂ ಸರ್ವೇ ಸದಾ ಪೂರ್ಣಮನೋರಥಾಃ ॥ ೧೦೮ ॥

---

೧೦೪. ಅನಂತರ ಪುಷ್ಪಾಂಜಲಿಯನ್ನು ಕೈಯಲ್ಲಿ ಹಿಡಿದು, ಅಂಗಾರಕನ ಪಾದಕಮಲವನ್ನು ಧ್ಯಾನಿಸುತ್ತಾ, ಪೂಜೆಯು ಸಾಂಗವಾಗುವುದಕ್ಕಾಗಿ ಭೂಸುತನಾದ ಕುಜನನ್ನು ಸ್ತುತಿಸಬೇಕು.

೧೦೫. ಭೂಸುತನೇ ! ಋಣಪರಿಹಾರಕನು, ದುಃಖದಾರಿದ್ರ್ಯಗಳನ್ನು ನಾಶಪಡಿಸುವವನೂ ಆದ ನಿನಗೆ ನಮಸ್ಕಾರವು. ನನಗೆ ಯಾವಾಗಲೂ ಸೌಭಾಗ್ಯ ಸುಖಗಳನ್ನು ಕೊಡುವವನಾಗು.

೧೦೬-೧೦೭. ಕಾಯಿಸಿದ ಬಂಗಾರ, ತಾರುಣ್ಯವನ್ನು ಹೊಂದಿದ ಸೂರ್ಯ ಇವರಂತೆ ಹೊಳೆಯುತ್ತಿರುವ ಆನಂದ, ಸೌಭಾಗ್ಯ, ಹಣ ಇವುಗಳನ್ನು ಕೊಡುವ, ಸಾಲ ಮತ್ತು ಬಡತನಗಳನ್ನು ನಾಶಪಡಿಸುವ, ಸಕಲ ಮಂಗಳ ಗಳನ್ನೂ ಉಂಟುಮಾಡುವ, ಸಕಲ ಮಂಗಳಗಳಿಗೂ ಆಶ್ರಯನು, ಶ್ರೇಷ್ಠ ಗ್ರಹನೂ ಆದ ಅಂಗಾರಕದೇವೇಶ್ವರನೇ ! ನಿನಗೆ ನಮಸ್ಕಾರ ಮಾಡುವೆನು ; ನನ್ನನ್ನು ಅನುಗ್ರಹಿಸು.

೧೦೮. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು ಮತ್ತು ಸರ್ಪಗಳು ಇವರೆಲ್ಲರೂ ಯಾವಾಗಲೂ ನಿನ್ನ ಆರಾಧನೆಯಿಂದ ಇಷ್ಟಾರ್ಥ ಗಳನ್ನು ಸಂಪೂರ್ಣವಾಗಿ ಪಡೆದು ಶುಭವನ್ನು ಹೊಂದುವರು.

ಅಚಿರಾದೇವ ಲೋಕೇऽಸ್ಮಿನ್ಯಸ್ಯಾರಾಧನತೋ ಜನಾಃ ।
ಪ್ರಾಪ್ನುವಂತಿ ಸುಖಂ ತಸ್ಮೈ ನಮೋ ಧರಣಿಸೂನವೇ ॥ ೧೦೯ ॥

ಯೋ ವಕ್ರಗತಿಮಾಪನ್ನೋ ನೃಣಾಂ ದುಃಖಂ ಪ್ರಯಚ್ಛತಿ ।
ಪೂಜಿತಃ ಸುಖಸೌಭಾಗ್ಯಂ ತಸ್ಮೈ ಕ್ಷ್ಮಾಸೂನವೇ ನಮಃ ॥ ೧೧೦ ॥

ನಭಸಿ ದ್ಯೋತಮಾನಾಯ ಸರ್ವಕಲ್ಯಾಣಹೇತವೇ ।
ಮಂಗಳಾಯ ನಮಸ್ತುಭ್ಯಂ ಧನಸಂತಾನಹೇತವೇ ॥ ೧೧೧ ॥

ಪ್ರಸಾದಂ ಕುರು ಮೇ ಭೌಮ ಮಂಗಳಪ್ರದ ಮಂಗಳ ।
ಮೇಷವಾಹನ ರುದ್ರಾತ್ಮನ್ ದೇಹಿ ಪುತ್ರಾನ್ಧನಂ ಯಶಃ ॥ ೧೧೨ ॥

ಏವಂ ಸ್ತುತ್ವಾ ಪ್ರಣಮ್ಯಾಥ ವಿಸೃಜ್ಯ ಧರಣೀಸುತಂ ।
ಯಥಾಶಕ್ತ್ಯಾ ಪ್ರದಾಯ ಸ್ವಂ ಗೃಣ್ಹೀಯಾದ್ಬ್ರಾಹ್ಮಣಾಶಿಷಃ ॥ ೧೧೩ ॥

---

೧೦೯. ಆರಾಧಿಸುವವರಿಗೆ ಈ ಲೋಕದಲ್ಲಿಯೇ ಶೀಘ್ರನಾಗಿ ಸುಖವನ್ನು ಕೊಡುತ್ತಿರುವ ಭೂಸುತನಾದ ಅಂಗಾರಕನಿಗೆ ನಮಸ್ಕಾರ ಮಾಡುವೆನು.

೧೧೦. ವಕ್ರಗತಿಯದ್ನು ಹೊಂದಿದರೆ ಜನರಿಗೆ ದುಃಖವನ್ನುಂಟು ಮಾಡುವ, ಪೂಜಿಸಿದರೆ ಸುಖಸೌಭಾಗ್ಯವನ್ನು ಕೊಡುವಂತಹ ಭೂಸುತನಿಗೆ ನಮಸ್ಕಾರವು.

೧೧೧. ಆಕಾಶದಲ್ಲಿ ಪ್ರಕಾಶಿಸುತ್ತಿರುವ, ಸಕಲ ಕಲ್ಯಾಣಕಾರಕನಾದ, ಧನಸಂತಾನಗಳನ್ನನುಗ್ರಹಿಸುತ್ತಿರುವ, ಮಂಗಳನಾಮಕನಾದ ಕುಜನಿಗೆ ನಮಸ್ಕಾರವು.

೧೧೨. ಮಂಗಳಪ್ರದನು, ಮಂಗಳಸ್ವರೂಪನು, ಮೇಕೆಯನ್ನು ವಾಹನವಾಗಿಟ್ಟುಕೊಂಡಿರುವವನು, ಅಭಕ್ತರಿಗೆ ಭಯಂಕರಸ್ವರೂಪನೂ ಆಗಿರುವ ಭೂಮಿಸುತನೇ! ಅನುಗ್ರಹಮಾಡು. ಪುತ್ರ, ಹಣ, ಯಶಸ್ಸುಗಳನ್ನು ಕೊಡುವವನಾಗು.

೧೧೩. ಈಪ್ರಕಾರ ಭೂಸುತನನ್ನು ಸ್ತೋತ್ರಮಾಡಿ, ನಮಸ್ಕರಿಸಿ, ವಿಸರ್ಜನೆ ಮಾಡಿ ಅನಂತರ ತನ್ನ ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ಅವರ ಆಶೀರ್ವಾದಗಳನ್ನು ಸ್ವೀಕರಿಸಬೇಕು.

ಗುರವೇ ದಕ್ಷಿಣಾಂ ದತ್ವಾ ಭುಂಜೀಯಾತ್ತನ್ನಿವೇದಿತಂ || ೧೧೪ ||

ಏವಮಾವತ್ಸರಂ ಕುರ್ಯಾತ್ಪ್ರತಿಮಂಗಳವಾಸರಂ |
ತಿಲೈರ್ಹೋಮಂ ವಿಧಾಯಾಥ ಶತಾರ್ಧಂ ಭೋಜಯೇದ್ದ್ವಿಜಾನ್ ||೧೧೫||

ಭೌಮಮೂರ್ತಿಂ ಸ್ವರ್ಣಮಯೀಂ ಆಚಾರ್ಯಾಯ ಸಮರ್ಪಯೇತ್ |
ಮಂಡಲಸ್ಥೇ ಘಟೇಽಭ್ಯರ್ಚೇತ್ಸುತಸೌಭಾಗ್ಯಸಿದ್ಧಯೇ || ೧೧೬ ||

ಏವಂ ವ್ರತಪರಾ ನಾರೀ ಪ್ರಾಪ್ನುಯಾತ್ಸುಭಗಾನ್ಸುತಾನ್ |
ಋಣನಾಶಾಯ ವಿತ್ತಾರ್ಥಂ ವ್ರತಂ ಕುರ್ಯಾತ್ಪುಮಾನಪಿ || ೧೧೭ ||

ಬ್ರಾಹ್ಮಣಃ ಪ್ರಜಪೇನ್ಮಂತ್ರಮಗ್ನಿಮೂರ್ಧೇತಿ ವೈದಿಕಂ |
ಅಂಗಾರಕಸ್ಯ ಗಾಯತ್ರೀಂ ವಕ್ಷ್ಯೇ ಯಜನಸಿದ್ಧಯೇ || ೧೧೮ ||

---

೧೧೪. ಗುರುಗಳಿಗೆ ದಕ್ಷಿಣೆಯನ್ನು ಕೊಟ್ಟು ನಿವೇದನಮಾಡಲ್ಪಟ್ಟ ಅನ್ನವನ್ನು ಭೋಜನಮಾಡಬೇಕು.

೧೧೫. ಈರೀತಿ ಪ್ರತಿ ಮಂಗಳವಾರದಲ್ಲಿಯೂ ಒಂದು ವರ್ಷದವರೆಗೆ ಮಾಡಬೇಕು. ಬಳಿಕ ಎಳ್ಳಿನಿಂದ ಹೋಮಮಾಡಿ ಐವತ್ತು ಜನ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

೧೧೬. ಬಂಗಾರದಿಂದ ನಿರ್ಮಿತವಾದ ಅಂಗಾರಕನ ವಿಗ್ರಹವನ್ನು ಆಚಾರ್ಯರಿಗೆ ಸಮರ್ಪಿಸಬೇಕು. ಮಂಡಲದಮೇಲೆ ಇಟ್ಟಿರುವ ಕಲಶದಲ್ಲಿ ಮಕ್ಕಳು, ಸೌಭಾಗ್ಯ ಇವುಗಳ ಸಿದ್ಧಿಗಾಗಿ ಭೌಮನನ್ನು ಪೂಜಿಸಬೇಕು.

೧೧೭. ಈ ಪ್ರಕಾರ ವ್ರತಾನುಷ್ಠಾನ ಮಾಡಿದ ಸ್ತ್ರೀಯು ಮನೋಹರರಾದ ಮಕ್ಕಳನ್ನು ಪಡೆಯುವಳು. ಪುರುಷನೂ ಸಹ, ಋಣಪರಿಹಾರವಾಗಿ ಹಣಲಭಿಸುವುದಕ್ಕಾಗಿ ಭೌಮವ್ರತವನ್ನು ಮಾಡಬೇಕು.

೧೧೮-೧೨೦. ಬ್ರಾಹ್ಮಣನು "ಅಗ್ನಿರ್ಮೂರ್ಧಾ...." ಎಂಬ ವೈದಿಕ ಮಂತ್ರವನ್ನು ಜಪಿಸಬೇಕು. ಪೂಜೆಯ ಸಿದ್ಧಿಗಾಗಿ ಅಂಗಾರಕಗಾಯತ್ರಿಯನ್ನು

ಅಂಗಾರಕಾಯ ಶಬ್ದಾಂತೇ ವಿದ್ಮಹೇ ಪದಮೀರಯೇತ್ ।
ಶಕ್ತಿಹಸ್ತಾಯ ವರ್ಣಾಂತೇ ಧೀಮಹೀತಿ ಸಮುಚ್ಚರೇತ್ ॥ ೧೧೯ ॥

ತನ್ನೋ ಭೌಮಃ ಪ್ರಚೋವರ್ಣಾನ್ದಯಾದಿತಿ ಚ ಸಂವದೇತ್ ।
ಭೌಮಸ್ಯೈಷಾ ತು ಗಾಯತ್ರೀ ಜಪ್ತುಃ ಸರ್ವೇಷ್ಟಸಿದ್ಧಿದಾ ॥ ೧೨೦ ॥

ಭೌಮೋಪಾಸನಮೇತದ್ಧಿ ಬುಧಮಂತ್ರಮಥೋಚ್ಯತೇ ।
ಬಾಂತಃ ಕರ್ಣೇಂದುಸಂಯುಕ್ತೋ ಬುಧೋ ಜೇಂತೋ ಹೃದಂತಿಮಃ ॥

ರಸಾರ್ಣೋ ಬುಧಮಂತ್ರೋಯಂ ಮುನಿರ್ಬ್ರಹ್ಮಾಸ್ಯ ಕೀರ್ತಿತಃ ।
ಪಂಕ್ತಿಶ್ಛಂದೋ ದೇವತಾ ತು ಬುಧಃ ಸರ್ವೇಷ್ಟದೋ ನೃಣಾಂ ॥ ೧೨೨ ॥

ಆದ್ಯಂ ಬೀಜಂ ನಮಃ ಶಕ್ತಿರ್ವಿನಿಯೋಗೋಽಖಿಲಾಪ್ತಯೇ ।
ವಂದೇ ಬುಧಂ ಸದಾ ಭಕ್ತ್ಯಾ ಪೀತಾಂಬರವಿಭೂಷಣಂ ॥ ೧೨೩ ॥

---

ಹೇಳುವೆನು: —" ಅಂಗಾರಕಾಯ ವಿದ್ಮಹೇ ಶಕ್ತಿಹಸ್ತಾಯ ಧೀಮಹಿ, ತನ್ನೋ ಭೌಮಃ ಪ್ರಚೋದಯಾತ್ " ಎಂಬುದು ಜಪಿಸುವವರಿಗೆ ಸಕಲೇಷ್ಟಾರ್ಥಪ್ರದವಾದ ಅಂಗಾರಕಗಾಯತ್ರಿಯೆಂದು ಉಕ್ತವಾಗಿದೆ.

೧೨೧-೧೨೨. ಇದುವರೆಗೂ ಹೇಳಿರುವುದು ಅಂಗಾರಕೋಪಾಸನೆಯು. ಇನ್ನು ಬುಧಮಂತ್ರವನ್ನು ಹೇಳುವೆನು :—ಕರ್ಣ= ಋ, ಇಂದು= ಂ, ಹೃತ್= ನಮಃ. " ಬ್ರಂ ಬುಧಾಯ ನಮಃ " ಎಂಬುದು ಷಡಕ್ಷರ ಬುಧಮಂತ್ರವು. ಇದಕ್ಕೆ ಬ್ರಹ್ಮನು ಋಷಿ, ಪಂಕ್ತಿಯೇ ಛಂದಸ್ಸು, ಜನರಿಗೆ ಸಕಲೇಷ್ಟಾರ್ಥಪ್ರದನಾದ ಬುಧನು ದೇವತೆಯು.

೧೨೩-೧೨೪. ಆದ್ಯಾಕ್ಷರವು ಬೀಜ, ನಮಃ ಎಂಬುದು ಶಕ್ತಿ, ಸಮಸ್ತ ಇಷ್ಟಾರ್ಥಲಾಭಕ್ಕಾಗಿ ವಿನಿಯೋಗಿಸಲ್ಪಡತಕ್ಕದು. " ಪೀತಾಂಬರದಿಂದಲಂಕೃತನು, ಮೊಣಕಾಲಿನಮೇಲೆ ಎಡಗೈ, ಅಭಯಮುದ್ರೆಯುಕ್ತವಾದ ಬಲಗೈ

ಜಾನುಸ್ಥವಾಮಹಸ್ತಾಢ್ಯಂ ಸಾಭಯೇತರಪಾಣಿಕಂ ।
ಧ್ಯಾತ್ವೈವಂ ಪ್ರಜಪೇದ್ವರ್ಣಸಹಸ್ರಂ ವಿಜಿತೇಂದ್ರಿಯಃ ॥ ೧೨೪ ॥

ದಶಾಂತಂ ಜುಹುಯಾದಾಜ್ಯೈಃ ಪೀಠೇ ಪೂರ್ವೋದಿತೇರ್ಚಯೇತ್ ।
ಅಂಗಮಾತೃದಿಶಾಪಾಲಹೇತಿಭಿರ್ಬುಧಮರ್ಚಯೇತ್ ॥ ೧೨೫ ॥

ಏವಂ ಸಿದ್ಧೇ ಮನೌ ಮಂತ್ರೀ ಸಾಧಯೇತ್ಸ್ವಮನೋರಥಾನ್ ।
ಸಹಸ್ರಂ ಪ್ರಜಪೇನ್ಮಂತ್ರಂ ನಿತ್ಯಂ ದಶದಿನಾವಧಿ ॥ ೧೨೬ ॥

ತಸ್ಯಾಶುಗ್ರಹಜಾಪೀಡಾ ನಶ್ಯತ್ಯೇವ ನ ಸಂಶಯಃ ।
ಬುಧಸ್ಯಾರಾಧನಂ ಪ್ರೋಕ್ತಂ ಗುರೋರಾರಾಧನಂ ಶೃಣು ॥ ೧೨೭ ॥

ಬೃಹಸ್ಪತಿಪದಂ ಙೇಂತಂ ಸೇಂದ್ವಾದ್ಯವರ್ಣಾದ್ಯಮಂಡಿತಂ ।
ನಮೋಂತೋ ವಸುವರ್ಣೋಯಂ ಮುನಿರ್ಬ್ರಹ್ಮಾಸ್ಯ ಸಂಮತಃ ॥ ೧೨೮ ॥

---

ಇವುಗಳುಳ್ಳವನೂ ಆಗಿರುವ ಬುಧನನ್ನು ಯಾವಾಗಲೂ ಭಕ್ತಿಯಿಂದ ನಮಸ್ಕರಿಸುವೆನು " ಎಂಬದಾಗಿ ಧ್ಯಾನಿಸಿ, ಜಿತೇಂದ್ರಿಯನಾಗಿ ಈ ಮಂತ್ರವನ್ನು ಐವತ್ತು ಸಾವಿರ ಜಪಮಾಡಬೇಕು.

೧೨೫. ಜಪದ ಹತ್ತರಲ್ಲೊಂದು ಭಾಗದಷ್ಟು ಘೃತಹೋಮ ಮಾಡಬೇಕು. ಹಿಂದೆ ಹೇಳಿದ ಪೀಠದಲ್ಲಿ ಪೂಜೆಮಾಡಬೇಕು. ಅಂಗದೇವತೆ, ಮಾತೃಕಾದೇವತೆ, ಇಂದ್ರಾದಿದಿಕ್ಪಾಲಕರು, ಅವರ ಆಯುಧ ಇವುಗಳಿಂದ ಸಹಿತವಾಗಿ ಬುಧನನ್ನು ಪೂಜಿಸಬೇಕು.

೧೨೬-೧೨೭. ಈ ಪ್ರಕಾರ ಮಾಡಿ ಮಂತ್ರ ಸಿದ್ಧಿಯನ್ನು ಹೊಂದಿದರೆ ಮಂತ್ರಜಪಕರ್ತನು ತನ್ನ ಮನೋರಥಗಳನ್ನು ಸಾಧಿಸಿಕೊಳ್ಳುವನು. ಈ ಮಂತ್ರವನ್ನು ಪ್ರತಿದಿನವೂ ಒಂದೊಂದು ಸಾವಿರದಂತೆ ಹತ್ತು ದಿನಗಳು ಜಪಿಸುವವನಿಗೆ ಗ್ರಹಪೀಡೆಯು ಹೋಗುತ್ತದೆ. ಖಂಡಿತ; ಸಂಶಯವಿಲ್ಲ. ಇದುವರೆಗೆ ಬುಧಗ್ರಹದ ಆರಾಧನೆಯ ಪ್ರಕಾರವನ್ನು ಹೇಳಿದೆನು. ಇನ್ನು ಗುರುವಿನ ಆರಾಧನೆಯ ಕ್ರಮವನ್ನು ಹೇಳುವೆನು; ಕೇಳು.

೧೨೮. " ಬೃಂ ಬೃಹಸ್ಪತಯೇ ನಮಃ " ಎಂಬುದು ಅಷ್ಟವರ್ಣ ಬೃಹಸ್ಪತಿಮಂತ್ರವು. ಇದಕ್ಕೆ ಬ್ರಹ್ಮನೇ ಋಷಿಯು.

ಛಂದೋನುಷ್ಟುಪ್ಸುರಾಚಾರ್ಯೋ ದೇವತಾ ಬೀಜಮಾದಿಮಂ ।
ಹೃಚ್ಛಕ್ತಿರ್ದೀರ್ಘವಹ್ನೀಂದುಯುಗಲೇನಾಂಗಕಲ್ಪನಾ ॥ ೧೨೯ ॥

ನ್ಯಸ್ತವಾಮಕರಂ ರಾಶೌ ರತ್ನಾನಾಂ ದಕ್ಷಿಣಾತ್ಕರಾತ್ ।
ಕಿರಂತಂ ಪೀತಪುಷ್ಪಾಲಂಕಾರಾಲೇಪಾಂಶುಕಾರ್ಚಿತಂ ॥ ೧೩೦ ॥

ಸರ್ವವಿದ್ಯಾನಿಧಿಂ ದೇವಗುರುಂ ಸ್ವರ್ಣದ್ಯುತಿಂ ಸ್ಮರೇತ್ ।
ಲಕ್ಷಂ ಜಪೋ ದಶಾಂಶೇನ ಘೃತೇನಾನ್ನೇನ ವಾ ಹುನೇತ್ ॥ ೧೩೧ ॥

ಧರ್ಮಾಧಿಪೀಠೇ ಪ್ರಯಜೇದಂಗದಿಕ್ಪಾಲಹೇತಿಭಿಃ ।
ಏವಂ ಸಿದ್ಧೇ ಮನೌ ಮಂತ್ರೀ ಸಾಧಯೇದಿಷ್ಟಮಾತ್ಮನಃ ॥ ೧೩೨ ॥

---

೧೨೯. ಛಂದಸ್ಸು-ಅನುಷ್ಟುಪ್. ಸುರಾಚಾರ್ಯನೇ ದೇವತೆಯು. ಮೊದಲನೆಯ ಅಕ್ಷರವೇ ಬೀಜವು. ನಮಃ ಎಂಬುದೇ ಶಕ್ತಿಯು. "ಬ್ರಾಂ ಹೃದಯಂ ಬ್ರೀಂ ಶಿರಃ" ಇತ್ಯಾದಿಯಾಗಿ ಷಡಂಗನ್ಯಾಸಮಾಡಬೇಕು.

೧೩೦-೧೩೧. ರತ್ನಗಳ ರಾಶಿಯಮೇಲೆ ಎಡಗೈಯ್ಯನ್ನಿಟ್ಟು ಬಲಗೈಯಿಂದ ರತ್ನಗಳನ್ನು ಸುರಿಸುತ್ತಿರುವ, ಹಳದಿಯಹೂವು, ಆಭರಣ, ಗಂಧ, ವಸ್ತ್ರ ಇವುಗಳಿಂದ ಪೂಜಿಸಲ್ಪಟ್ಟ, ಸಕಲ ವಿದ್ಯೆಗಳಿಗೂ ಖನಿಯಂತಿರುವ, ಸುವರ್ಣದಂತೆ ಹೊಳೆಯುತ್ತಿರುವ ದೇವಗುರುವನ್ನು ಧ್ಯಾನಿಸಬೇಕು. ಈ ಮಂತ್ರವನ್ನು ಒಂದುಲಕ್ಷ ಜಪಿಸಬೇಕು. ಅದರಲ್ಲಿ ದಶಾಂಶ ಎಂದರೆ ಹತ್ತು ಸಾವಿರ ಹೋಮವನ್ನು ಅನ್ನ ಅಥವಾ ಘೃತದಿಂದ ಮಾಡಬೇಕು.

೧೩೨. ಧರ್ಮಾದಿ ಪೀಠದಲ್ಲಿ ಅಂಗದೇವತೆ, ಇಂದ್ರಾದಿ ದಿಕ್ಪಾಲಕರು, ವಜ್ರಾದ್ಯಾಯುಧ ಇವುಗಳೊಡನೆ ಬೃಹಸ್ಪತಿಯನ್ನು ಪೂಜಿಸಬೇಕು. ಈ ಪ್ರಕಾರ ಮಾಡಿ ಜಪಕರ್ತನು ಮಂತ್ರಸಿದ್ಧಿಯನ್ನು ಪಡೆದರೆ ತನ್ನ ಇಷ್ಟಾರ್ಥವನ್ನು ಸಾಧಿಸಿಕೊಳ್ಳುವನು.

ವಿಷರೋಗಾದಿಪೀಡಾಸು ಕಲಹೇ ಸ್ವಜನೋದ್ಭವೇ ।
ಪಿಪ್ಪಲೋತ್ಥಸಮಿದ್ಭಿಶ್ಚ ಜುಹುಯಾತ್ತನ್ನಿವೃತ್ತಯೇ　　|| ೧೩೩ ||

ಹುತ್ವಾದಿನತ್ರಯಂ ಮಂತ್ರೀ ನಿಶಾಪುಷ್ಪೈರ್ಘೃತಪ್ಲುತೈಃ ।
ಸ ವಿಂಶತಿ ಶತಂ ಶೀಘ್ರಂ ವಾಸಾಂಸಿ ಲಭತೇ ಮಹೀಂ　　|| ೧೩೪ ||

ಗುರೋರಾರಾಧನಂ ಪ್ರೋಕ್ತಂ ಶೃಣು ಶುಕ್ರಸ್ಯ ಸಾಂಪ್ರತಂ ।
ವಸ್ತ್ರಂ ಮೇ ದೇಹಿ ಶುಕ್ರಾಯ ಠದ್ವಯಾಂತೋ ಧ್ರುವಾದಿಕಃ　|| ೧೩೫ ||

ರುದ್ರಾರ್ಣೋಯಂ ಮನುರ್ಬ್ರಹ್ಮಾ ಮುನಿಶ್ಛಂದೋ ವಿರಾಡುತ ।
ದೈತ್ಯೇಜ್ಯೋ ದೇವತಾ ಬೀಜಂ ಧ್ರುವಃ ಶಕ್ತಿರ್ವಸುಪ್ರಿಯಾ　|| ೧೩೬ ||

---

೧೩೩. ವಿಷರೋಗಾದಿಗಳಿಂದ ಬಾಧೆಪಡುತ್ತಿರುವಾಗ ಮತ್ತು ಬಂಧು ಜನಗಳಲ್ಲಿ ಕಲಹವುಂಟಾದಾಗಲೂ ಅದನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಅರಳಿಯ ಸಮಿತ್ತುಗಳಿಂದ ಹೋಮಮಾಡಬೇಕು.

೧೩೪. ಮಂತ್ರಿಯು ತುಪ್ಪದಲ್ಲಿ ತೋಯಿಸಿದ ಪುಷ್ಪಗಳಿಂದ ಮೂರು ದಿನಗಳು ರಾತ್ರಿಕಾಲದಲ್ಲಿ ನೂರಿಪ್ಪತ್ತೊಂದಾವರ್ತಿ ಹೋಮಮಾಡಿದರೆ ವಸ್ತ್ರ ಮತ್ತು ಭೂಮಿ ಇವುಗಳು ಲಭಿಸುತ್ತವೆ.

೧೩೫-೧೩೬. ಗುರುವಿನ ಆರಾಧನೆಯ ಕ್ರಮವು ನಿರೂಪಿಸಲ್ಪಟ್ಟಿತು. ಈಗ ಶುಕ್ರನ ಆರಾಧನೆಯ ಕ್ರಮವನ್ನು ಹೇಳುವೆನು ಕೇಳು. (ಠದ್ವಯ= ಸ್ವಾಹಾ, ಧ್ರುವ= ಓಂಕಾರ.) "ಓಂ ವಸ್ತ್ರಂ ಮೇ ದೇಹಿ ಶುಕ್ರಾಯ ಸ್ವಾಹಾ" ಎಂಬುದು ಏಕಾದಶಾಕ್ಷರ ಶುಕ್ರಮಂತ್ರವು ಇದಕ್ಕೆ ಬ್ರಹ್ಮನು ಋಷಿ, ವಿರಾಟ್ ಛಂದಸ್ಸು, ದೈತ್ಯಪೂಜ್ಯನಾದ ಶುಕ್ರನೇ ದೇವತೆ, ಓಂಕಾರವು ಬೀಜ, ಸ್ವಾಹಾ ಎಂಬುದು ಶಕ್ತಿಯು.

ಭೂನೇತ್ರಚಂದ್ರನೇತ್ರಾಗ್ನಿನೇತ್ರಾರ್ಣೈಃ ಸ್ಯಾತ್ ಷಡಂಗಕಂ ।
ಶುಕ್ಲಾಂಬರಾಲೇಪಭೂಷಂ ಕರೇಣ ಪದತಂ ಧನಂ ॥ ೧೩೭ ॥

ವಾಮೇನ ಶುಕ್ರಂ ವ್ಯಾಖ್ಯಾನಮುದ್ರಾದೋಷಂ ಸ್ಮರೇತ್ಸುಧೀಃ ।
ಅಯುತಂ ಪ್ರಜಪೇನ್ಮಂತ್ರಂ ದಶಾಂಶಂ ಜುಹುಯಾದ್ಘೃತೈಃ ॥ ೧೩೮ ॥

ಧರ್ಮಾದಿಪೀಠೇ ಪ್ರಯಜೇದಂಗೇಂದ್ರಾದೀಂಸ್ತದಾಯುಧೈಃ ।
ಶ್ವೇತಪುಷ್ಪೈಃ ಸುಗಂಧೈಶ್ಚ ಜುಹುಯಾದ್ಭೃಗುವಾಸರೇ ॥ ೧೩೯ ॥

ಏಕವಿಂಶತಿವಾರಂ ಯೋ ಲಭತೇ ಸೋಂಶುಕಂ ಮಣೀನ್ ।
ಮನವೋಽಮೀ ಸದಾ ಗೋಪ್ಯಾ ನ ದೇಯಾ ಯಸ್ಯ ಕಸ್ಯಚಿತ್ ॥ ೧೪೦ ॥

---

೧೩೭. ಕ್ರಮವಾಗಿ ಈ ಮಂತ್ರದ ಒಂದು, ಎರಡು, ಒಂದು, ಎರಡು, ಮೂರು, ಎರಡು ಅಕ್ಷರಗಳುಳ್ಳ ಆರು ಪದಗಳಿಂದ ಹೃದಯಾದಿ ಷಡಂಗನ್ಯಾಸ ಮಾಡಬೇಕು. ಹೇಗೆಂದರೆ :—' ಓಂ ಹೃದಯಾಯ ನಮಃ ' ಎಂದು ಹೃದಯ ದಲ್ಲಿಯೂ, 'ವಸ್ತ್ರಂ ಶಿರಸೇ ಸ್ವಾಹಾ' ಎಂದು ಶಿರಸ್ಸಿನಲ್ಲಿಯೂ, 'ಮೇ ಶಿಖಾಯೈ ವಷಟ್' ಎಂದು ಶಿಖೆಯಲ್ಲಿಯೂ, 'ದೇಹಿ ಕವಚಾಯ ಹುಂ' ಎಂದು ತಲೆಯ ಸುತ್ತಲೂ, 'ಶುಕ್ರಾಯನೇತ್ರತ್ರಯಾಯ ಔಷಟ್' ಎಂದು ನೇತ್ರಗಳ ಲ್ಲಿಯೂ, 'ಸ್ವಾಹಾ ಅಸ್ತ್ರಾಯ ಫಟ್' ಎಂದು ಅಸ್ತ್ರವನ್ನೂ ನ್ಯಾಸಮಾಡಬೇಕು.

೧೩೭-೧೩೮. ಶುಕ್ಲವರ್ಣದ ವಸ್ತ್ರ, ಗಂಧ, ಆಭರಣಗಳನ್ನು ಧರಿಸಿರುವ, ಎಡಗೈಯಿಂದ ಧನಾದಿಗಳನ್ನು ಕೊಡುತ್ತಿರುವ, ಬಲಗೈಯಲ್ಲಿ ವ್ಯಾಖ್ಯಾನ ಮುದ್ರೆಯನ್ನು ತೋರಿಸುತ್ತಿರುವ ಶುಕ್ರನನ್ನು ಧ್ಯಾನಿಸಬೇಕು. ಈ ಮಂತ್ರ ವನ್ನು ಹತ್ತುಸಾವಿರ ಆವರ್ತಿ ಜಪಿಸಬೇಕು. ಅದರ ಹತ್ತನೆಯ ಒಂದು ಭಾಗ ಎಂದರೆ ಒಂದುಸಾವಿರ ಹೋಮವನ್ನು ಘೃತದಿಂದ ಮಾಡಬೇಕು.

೧೩೯-೧೪೦. ಧರ್ಮಾದಿ ಪೀಠದಲ್ಲಿ ಅಂಗದೇವತೆ, ಇಂದ್ರಾದಿ ದಿಕ್ಪಾಲ ಕರು, ಅವರ ಆಯುಧಗಳೊಡನೆ ಶುಕ್ರನನ್ನು ಪೂಜಿಸಬೇಕು. ಸುವಾಸನೆ ಯುಳ್ಳ ಬಿಳಿಯ ಹೂವುಗಳಿಂದ ಶುಕ್ರವಾರದದಿನ ಇಪ್ಪತ್ತೊಂದಾವರ್ತಿ ಹೋಮ ಮಾಡುವವನು ವಸ್ತ್ರ, ಮಣಿ ಮುಂತಾದುವುಗಳನ್ನು ಪಡೆಯುವನು.

ಭಕ್ತಿಯುಕ್ತಾಯ ಶಿಷ್ಯಾಯ ದೇಯೋ ವಾ ನಿಜಸೂನವೇ || ೧೪೧ ||

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ಮಂತ್ರವಿಧಾನನಿರೂಪಣಂ ನಾಮ
ಏಕೋನಸಪ್ತತಿತಮೋऽಧ್ಯಾಯಃ

---

೧೪೦-೧೪೧. ಈ ಮಂತ್ರಗಳೆಲ್ಲವೂ ಯಾವಾಗಲೂ ಗೋಪ್ಯವಾಗಿಡತಕ್ಕವುಗಳು. ಇವನ್ನು ಅಪರಿಚಿತಗುಣಶೀಲರಾದವರಿಗೆ ಉಪದೇಶಿಸಬಾರದು. ಭಕ್ತಿಯುಳ್ಳ ಶಿಷ್ಯನಿಗೆ ಅಥವಾ ಯೋಗ್ಯನಾದ ತನ್ನ ಮಗನಿಗೆ ಈ ಮಂತ್ರಗಳನ್ನು ಉಪದೇಶಿಸಬೇಕು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ಮೂರನೆಯ ಪಾದದಲ್ಲಿ ಮಂತ್ರವಿಧಾನನಿರೂಪಣೆಯೆಂಬ
ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

## ಕಥಾಸಂಗ್ರಹ.

ಅಷ್ಟಾಕ್ಷರಸೂರ್ಯಮಂತ್ರ, ಚಂದ್ರಮಂತ್ರ, ಮಾರ್ತಂಡಭೈರವಬೀಜಮಂತ್ರ, ಅಂಗಾರಕ, ಬುಧ, ಗುರು, ಶುಕ್ರ ಮಂತ್ರಗಳು, ಅವುಗಳ ಅಂಗನ್ಯಾಸ, ಜಪವಿಧಾನ, ಹೋಮ, ಬೀಜ, ಶಕ್ತಿ ಮುಂತಾದುವನ್ನು ಸಪರಿಕರವಾಗಿ ನಿರೂಪಿಸಲ್ಪಟ್ಟು ಅವುಗಳ ಫಲಾದಿಗಳೂ ಉಕ್ತವಾಗಿವೆ.

---

# ಸಪ್ತತಿತಮೋಽಧ್ಯಾಯಃ

---

ಸನತ್ಕುಮಾರ ಉವಾಚ

ಅಥ ವಕ್ಷ್ಯೇ ಮಹಾವಿಷ್ಣೋರ್ಮಂತ್ರಾನ್ಲೋಕೇಷು ದುರ್ಲಭಾನ್ ।
ಯಾನ್ಪ್ರಾಪ್ಯ ಮಾನನಾಸ್ತೂರ್ಣಂ ಪ್ರಾಪ್ನುವಂತಿ ನಿಜೇಪ್ಸಿತಂ ॥ ೧ ॥

ಯೇಷಾಮುಚ್ಚಾರಣೇನೈವ ಪಾಪಸಂಘಃ ಪ್ರಲೀಯತೇ ।
ಬ್ರಹ್ಮಾದಯೋಽಪಿ ಯಾನ್ ಜ್ಞಾತ್ವಾ ಸಮರ್ಥಾಃ ಸ್ಯುರ್ಜಗತ್ಕೃತೌ ॥ ೨ ॥

ತಾರಹೃತ್ಪೂರ್ವಕಂ ಚೇಂತಂ ನಾರಾಯಣಪದಂ ಭವೇತ್ ।
ಅಷ್ಟಾಕ್ಷರೋ ಮನುಶ್ಚಾಸ್ಯ ಸಾಧ್ಯೋ ನಾರಾಯಣೋ ಮುನಿಃ ॥ ೩ ॥

ಛಂದಃ ಪ್ರೋಕ್ತಂ ಚ ಗಾಯತ್ರೀ ದೇವತಾ ವಿಷ್ಣುರವ್ಯಯಃ ।
ಓಂ ಬೀಜಂ ಯಂ ತಥಾ ಶಕ್ತಿರ್ವಿನಿಯೋಗೋಽಖಿಲಾಪ್ತಯೇ ॥ ೪ ॥

---

## ಎಪ್ಪತ್ತನೆಯ ಅಧ್ಯಾಯವು.

೧–೨. ಸನತ್ಕುಮಾರನು ಹೇಳಿದನು.—ಯಾವ ಮಂತ್ರಗಳನ್ನಾರಾಧಿಸಿ ಮನುಷ್ಯರು ಬಹು ಬೇಗ ತಮ್ಮ ಇಷ್ಟಾರ್ಥವನ್ನು ಪಡೆಯುವರೋ, ಯಾವ ಮಂತ್ರಗಳ ಪಠನಮಾತ್ರದಿಂದ ಪಾಪರಾಶಿಯು ನಷ್ಟವಾಗುವುದೋ, ಬ್ರಹ್ಮಮುಂತಾದವರೂ ಸಹ ಯಾವ ಮಂತ್ರಗಳ ಅನುಸಂಧಾನದಿಂದ ಜಗತ್ಸೃಷ್ಟ್ಯಾದಿ ವ್ಯಾಪಾರಮಾಡಲು ಸಮರ್ಥರಾಗುವರೋ ಅಂತಹ, ಈ ಲೋಕದಲ್ಲಿ ದುರ್ಲಭವಾದ ಮಹಾವಿಷ್ಣುಮಂತ್ರಗಳನ್ನು ಈಗ ಹೇಳುವೆನು.

೩–೪. (ತಾರ= ಓಂ, ಹೃತ್= ನಮಃ) "ಓಂ ನಮೋ ನಾರಾಯಣಾಯ" ಎಂಬುದು ನಾರಾಯಣಾಷ್ಟಾಕ್ಷರ ಮಂತ್ರವು. ಇದಕ್ಕೆ ಸಾಧ್ಯ ನಾರಾಯಣನುಋಷಿಯು, ಛಂದಸ್ಸು ಗಾಯತ್ರಿಯು, ಅವ್ಯಯ ವಿಷ್ಣುವು ದೇವತೆಯು, ಓಂ ಎಂಬುದು ಬೀಜವು, ಯಂ ಎಂಬುದು ಶಕ್ತಿ, ಸಕಲೇಷ್ಟಾರ್ಥಪ್ರಾಪ್ತಿಗಾಗಿ ಜಪಾದಿಗಳನ್ನು ಮಾಡತಕ್ಕುದು.

ಕೃದ್ಧೋಲ್ಕಾಯ ಹೃದಾಖ್ಯಾತಂ ಮಹೋಲ್ಕಾಯ ಶಿರಃ ಸ್ಮೃತಂ ।
ವೀರೋಲ್ಕಾಯ ಶಿಖಾ ಪ್ರೋಕ್ತಾ ದ್ಯುಲ್ಕಾಯ ಕವಚಂ ಸ್ಮೃತಂ ॥ ೫ ॥

ಸಹಸ್ರೋಲ್ಕಾಯೇತಿ ಚಾಸ್ತ್ರಂ ಸ್ಯಾದಿತ್ಥಂ ಪಂಚಾಂಗಕಲ್ಪನಾ ।
ಪುನಃ ಷಡಂಗಂ ಮಂತ್ರೋತ್ಥೈಃ ಷಡ್ವರ್ಣೈಶ್ಚ ಸಮಾಚರೇತ್ ॥ ೬ ॥

ಅವಶಿಷ್ಟೌ ನ್ಯಸೇತ್ಕುಕ್ಷಿಪೃಷ್ಠಯೋರ್ಮಂತ್ರವರ್ಣಕೌ ।
ಸುದರ್ಶನಸ್ಯ ಮಂತ್ರೇಣ ಕುರ್ಯಾದ್ದಿಗ್ಬಂಧನಂ ತತಃ ॥ ೭ ॥

ತಾರೋ ನಮಶ್ಚತುರ್ಥ್ಯಂತಸುದರ್ಶನಪದಂ ವದೇತ್ ।
ಅಸ್ತ್ರಾಯಫಡಿತಿಪ್ರೋಕ್ತೋ ಮಂತ್ರೋ ದ್ವಾದಶವರ್ಣವಾನ್ ॥ ೮ ॥

ದಶಾವೃತ್ತಿಮಯಂ ನ್ಯಾಸಂ ವಕ್ಷ್ಯೇ ವಿಭೂತಿಪಂಜರಂ ।
ಮೂಲಾರ್ಣಾನ್ಸ್ವತನೌ ನ್ಯಸ್ಯೇದಾಧಾರೇ ಹೃದಯೇ ಮುಖೇ ॥ ೯ ॥

---

೫-೭. 'ಕೃದ್ಧೋಲ್ಕಾಯ ಹೃದಯಾಯ ನಮಃ' ಎಂದು ಹೃದಯವನ್ನೂ 'ಮಹೋಲ್ಕಾಯ ಶಿರಸೇ ಸ್ವಾಹಾ' ಎಂದು ತಲೆಯನ್ನೂ, 'ವೀರೋಲ್ಕಾಯ ಶಿಖಾಯೈ ವಷಟ್' ಎಂದು ಶಿಖೆಯನ್ನೂ, 'ದ್ಯುಲ್ಕಾಯ ಕವಚಾಯ ಹುಂ' ಎಂದು ತಲೆಯಸುತ್ತಲೂ, 'ಸಹಸ್ರೋಲ್ಕಾಯ ಅಸ್ತ್ರಾಯ ಫಟ್' ಎಂದು ಅಸ್ತ್ರವನ್ನೂ ನ್ಯಾಸಮಾಡಬೇಕು. ಇದೇ ಪಂಚಾಂಗನ್ಯಾಸವು. ಪುನಃ ಮಂತ್ರದ ಆರು ವರ್ಣಗಳಿಂದ ಷಡಂಗನ್ಯಾಸಮಾಡಬೇಕು. ಅಷ್ಟಾಕ್ಷರ ಮಂತ್ರದಲ್ಲಿನ ಉಳಿದ ಎರಡು ವರ್ಣಗಳನ್ನು ನಾಭಿ ಮತ್ತು ಪೃಷ್ಠಭಾಗಗಳಲ್ಲಿ ನ್ಯಾಸ ಮಾಡಬೇಕು. ಅನಂತರ ಸುದರ್ಶನಮಂತ್ರದಿಂದ ದಿಗ್ಬಂಧನೆಯನ್ನು ಮಾಡಬೇಕು.

೮. ಓಂ ಕಾರ, ನಮಃ ಎಂಬ ಶಬ್ದ ಸುದರ್ಶನಾಯ ಎಂಬ ಪದ ಅಸ್ತ್ರಾಯ ಫಟ್ ಇವುಗಳನ್ನು ಸೇರಿಸುವುದರಿಂದ ನಿಷ್ಪನ್ನವಾಗುವ ಹನ್ನೆರಡು ವರ್ಣಗಳನ್ನೊಳಗೊಂಡಿರುವ 'ಓಂ ನಮಃ ಸುದರ್ಶನಾಯ ಅಸ್ತ್ರಾಯ ಫಟ್' ಎಂಬುದು ಸುದರ್ಶನ ಮಂತ್ರವು.

೯-೧೦. ವಿಭೂತಿಪಂಜರನಾಮಕವಾದ ದಶಾವೃತ್ತಿನ್ಯಾಸವನ್ನು ಹೇಳುವೆನು :—ಮೂಲಮಂತ್ರದ ವರ್ಣಗಳನ್ನು ತನ್ನ ಶರೀರದಲ್ಲಿ ಆಧಾರ, ಹೃದಯ,

**ದೋಃ ಪನ್ಮೂಲೇಷು ನಾಸಾಯಾಂ ಪ್ರಥಮಾವೃತ್ತಿರೀರಿತಾ ।**
**ಗಲೇ ನಾಭೌ ಹೃದಿ ಕುಚಪಾರ್ಶ್ವಪೃಷ್ಠೇಷು ತತ್ಪರಾಃ ॥ ೧೦ ॥**

**ಮೂರ್ಧಾಸ್ಯನೇತ್ರಶ್ರವಣಘ್ರಾಣೇಷು ಚ ತೃತೀಯಕಾಃ ।**
**ದೋಃ ಪಾದ ಸಂಧ್ಯಂಗುಲಿಷು ವೇದಾವೃತ್ತ್ಯಾ ಚ ವಿನ್ಯಸೇತ್ ॥ ೧೧ ॥**

**ಧಾತುಪ್ರಾಣೇಷು ಹೃದಯೇ ವಿನ್ಯಸೇತ್ತದನಂತರಂ ।**
**ಶಿರೋನೇತ್ರಾಸ್ಯಹೃತ್ಕುಕ್ಷಿಸೋರುಜಂಘಾಪದದ್ವಯೇ ॥ ೧೨ ॥**

**ಏಕೈಕಶೋ ನ್ಯಸೇದ್ವರ್ಣಾನ್ಮಂತ್ರಸ್ಯ ಕ್ರಮತಃ ಸುಧೀಃ ।**
**ನ್ಯಸೇದ್ಧೃದಂ ಸೋರುಪದೇಷ್ವರ್ಣಾನ್ವೇದಮಿತಾನ್ಮನೋಃ ॥ ೧೩ ॥**

**ಚಕ್ರಶಂಖ ಗದಾಂಭೋಜಪದೇಷು ಸ್ವಸ್ವಮುದ್ರಯಾ ।**
**ಶೇಷಾಂಶ್ಚ ನ್ಯಾಸವರ್ಯೋಽಯಂ ವಿಭೂತಿಪಂಜರಾಭಿಧಃ ॥ ೧೪ ॥**

---

ಮುಖ, ಬಾಹು, ಪಾದಮೂಲ, ಮೂಗು ಈ ಪ್ರದೇಶಗಳಲ್ಲಿ ನ್ಯಾಸಮಾಡಬೇಕು. ಇದು ಮೊದಲನೆಯ ಆವೃತ್ತಿ ನ್ಯಾಸವೆನಿಸುವುದು. ಕುತ್ತಿಗೆ, ನಾಭಿ, ಹೃದಯ, ಸ್ತನ, ಪಕ್ಕಗಳು, ಹಿಂಭಾಗ ಇವುಗಳಲ್ಲಿ ಮಂತ್ರವರ್ಣಗಳನ್ನು ನ್ಯಾಸಮಾಡುವುದು ಎರಡನೆಯ ಆವೃತ್ತಿ ನ್ಯಾಸವೆನಿಸುವುದು.

೧೧. ಶಿರಸ್ಸು, ಬಾಯಿ, ಕಣ್ಣು, ಕಿವಿ, ಮೂಗು, ಇವುಗಳ ನ್ಯಾಸವು ಮೂರನೆಯದು. ಬಾಹು, ಪಾದ, ಸಂಧಿಸ್ಥಲ, ಬೆಟ್ಟುಗಳು ಇವುಗಳಲ್ಲಿ ನಾಲ್ಕನೆಯ ಆವೃತ್ತಿ ನ್ಯಾಸಮಾಡಬೇಕು.

೧೨-೧೩. ತರುವಾಯ ಧಾತು, ಪ್ರಾಣ, ಹೃದಯಗಳಲ್ಲಿ ನ್ಯಾಸಮಾಡಬೇಕು. ಮಂತ್ರದ ಒಂದೊಂದು ವರ್ಣಗಳನ್ನೂ ಕ್ರಮವಾಗಿ ಶಿರಸ್ಸು, ನೇತ್ರ, ಬಾಯಿ, ಹೃದಯ, ನಾಭಿ, ತೊಡೆ, ಜಂಘೆ, ಎರಡು ಕಾಲು ಇವುಗಳಲ್ಲಿ ನ್ಯಾಸಮಾಡಬೇಕು. ಮಂತ್ರದ ನಾಲ್ಕು ವರ್ಣಗಳನ್ನು ಹೃದಯ, ಭುಜ, ತೊಡೆ, ಪಾದ ಇವುಗಳಲ್ಲಿ ನ್ಯಾಸಮಾಡಬೇಕು.

೧೪. ಉಳಿದ ವರ್ಣಗಳನ್ನು ಚಕ್ರ, ಶಂಖ, ಗದೆ, ಪದ್ಮ ಸ್ಥಾನಗಳಲ್ಲಿ ಆದರದರ ಮುದ್ರೆಯನ್ನು ತೋರಿಸಿ ನ್ಯಾಸಮಾಡಬೇಕು. ಉತ್ತಮವಾದ ಈ ನ್ಯಾಸವು ವಿಭೂತಿಪಂಜರ ನ್ಯಾಸವೆನಿಸುವುದು.

ನ್ಯಸೇನ್ಮೂಲಾರ್ಣವೇಕೈಕಂ ಸಚಂದ್ರಂ ತಾರಸಂಪುಟಂ ।
ಅಥವಾ ನೈ ನಮೋಂತೇನ ನ್ಯಸೇದಿತ್ಯಪರೇ ಜಗುಃ || ೧೫ ||

ತತ್ವನ್ಯಾಸಂ ತತಃ ಕುರ್ಯಾದ್ವಿಷ್ಣುಭಾವಪ್ರಸಿದ್ಧಯೇ ।
ಅಷ್ಟಾರ್ಣೋಷ್ಟಪ್ರಕೃತ್ಯಾತ್ಮಾ ಗದಿತಃ ಪೂರ್ವಸೂರಿಭಿಃ || ೧೬ ||

ಪೃಥಿವ್ಯಾದೀನಿ ಭೂತಾನಿ ತತೋಹಂಕಾರವೇವ ಚ ।
ಮಹಾಂಶ್ಚ ಪ್ರಕೃತಿಶ್ಚೈವೇತ್ಯಷ್ಟೌ ಪ್ರಕೃತಯೋ ಮತಾಃ || ೧೭ ||

ಪಾದೇ ಲಿಂಗೇ ಹೃದಿ ಮುಖೇ ಮೂರ್ಧ್ನಿ ವಕ್ಷಸಿ ಹೃತ್ಸ್ಥಲೇ ।
ಸರ್ವಾಂಗೇ ವ್ಯಾಪಕಂ ಕುರ್ಯಾದೇಕೇನ ಸಾಧಕೋತ್ತಮಃ || ೧೮ ||

ಮಂತ್ರಾರ್ಣಂ ಹೃತ್ಪರಾಯಾದ್ಯಮಾತ್ಮನೇ ಹೃದಯಾಂತಿಮಂ ।
ತತ್ತನ್ನಾಮ ಸಮುಚ್ಚಾರ್ಯ ನ್ಯಸೇತ್ತತ್ತತ್ಸ್ಥಲೇ ಬುಧಃ || ೧೯ ||

---

೧೫. ಅನುಸ್ವಾರ ಸಹಿತವಾದ ಒಂದೊಂದು ಮಂತ್ರವರ್ಣವನ್ನು ಓಂಕಾರದಿಂದ ಸಂಪುಟೀಕೃತವಾಗಿ ನ್ಯಾಸಮಾಡಬೇಕು. 'ನಮಃ' ಎಂಬ ಶಬ್ದವನ್ನು ಕೊನೆಯಲ್ಲಿ ಸೇರಿಸಿ ನ್ಯಾಸಮಾಡಬೇಕೆಂದು ಕೆಲವರು ಹೇಳುತ್ತಾರೆ.

೧೬. ಅನಂತರ ವಿಷ್ಣುಭಾವಪ್ರಸಿಧ್ಯರ್ಥವಾಗಿ ತತ್ವನ್ಯಾಸವನ್ನು ಮಾಡಬೇಕು. ಜ್ಞಾನಿಗಳಾದ ಪ್ರಾಚೀನರು ಮಂತ್ರದ ಎಂಟುವರ್ಣಗಳು ಅಷ್ಟಪ್ರಕೃತ್ಯಾತ್ಮಕವೆಂದು ಹೇಳಿರುವರು.

೧೭. ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶಗಳೆಂಬ ಭೂತಗಳು, ಅಹಂಕಾರತತ್ವ, ಮಹತ್ತತ್ವ ಮತ್ತು ಪ್ರಕೃತಿ ಎಂಬಿವು ಎಂಟು ಪ್ರಕೃತಿಗಳೆನಿಸುವುವು.

೧೮. ಸಾಧಕವರ್ಯನು ಮಂತ್ರದ ವರ್ಣಗಳನ್ನು ಪಾದ, ಲಿಂಗ, ಹೃದಯ, ಮುಖ, ಶಿರಸ್ಸು, ವಕ್ಷಸ್ಥಲ, ನಾಭಿ ಇವುಗಳಲ್ಲಿ ನ್ಯಾಸಮಾಡಿ ಒಂದು ವರ್ಣದಿಂದ ಸರ್ವಾಂಗದಲ್ಲಿಯೂ ವ್ಯಾಪಕನ್ಯಾಸಮಾಡಬೇಕು.

೧೯. (ಹೃತ್= ಓಂ, ಹೃದಯ= ನಮಃ) "ಓಂ ಪರಾಯ ಶಕ್ತ್ಯಾತ್ಮನೇ ಶ್ರೀ ಲಕ್ಷ್ಮೀನಾರಾಯಣಾಭ್ಯಾಂ ನಮಃ" ಇತ್ಯಾದಿಯಾಗಿ ಹೇಳಿ ಹೃದಯ ಮುಂತಾದ ಆಯಾ ತತ್ವದೇವತೆಗಳ ಸ್ಥಾನದಲ್ಲಿ ನ್ಯಾಸಮಾಡಬೇಕು.

ಅಯಂ ತತ್ತ್ವಾಭಿಧೋ ನ್ಯಾಸಃ ಸರ್ವನ್ಯಾಸೋತ್ತಮೋತ್ತಮಃ ।
ಮೂರ್ತೀರ್ನ್ಯಸೇದ್ದ್ವಾದಶ ವೈ ದ್ವಾದಶಾದಿತ್ಯಸಂಯುತಾಃ ॥ ೨೦ ॥

ದ್ವಾದಶಾಕ್ಷರವರ್ಣಾದ್ಯಾ ದ್ವಾದಶಾದಿತ್ಯಸಂಯುತಾಃ ।
ಅಷ್ಟಾರ್ಣೋಽಯಂ ಮನುಶ್ಚಾಷ್ಟಪ್ರಕೃತ್ಯಾತ್ಮಾ ಸಮೀರಿತಃ ॥ ೨೧ ॥

ತಾಸಾಮಾತ್ಮಚತುಷ್ಕಸ್ಯ ಯೋಗಾದರ್ಕಾಕ್ಷರೋ ಭವೇತ್ ।
ಲಲಾಟಹೃತ್ಕುಕ್ಷಿ ಕಂಠದಕ್ಷಪಾರ್ಶ್ವಾಂಸಕೇಷು ಚ ॥ ೨೨ ॥

ಗಲೇ ಚ ವಾಮಪಾರ್ಶ್ವಾಂಸಗಲಪೃಷ್ಠೇಷ್ವನಂತರಂ ।
ಕಕುದ್ಯಪಿ ನ್ಯಸೇನ್ಮಂತ್ರೀ ಮೂರ್ತೀರ್ದ್ವಾದಶ ವೈ ಕ್ರಮಾತ್ ॥ ೨೩ ॥

ಧಾತ್ರಾ ತು ಕೇಶವಂ ನ್ಯಸ್ಯಾರ್ಯಮ್ಣಂ ನಾರಾಯಣಂ ಪುನಃ ।
ಮಿತ್ರೇಣ ಮಾಧವಂ ನ್ಯಸ್ಯ ಗೋವಿಂದಂ ವರುಣೇನ ಚ ॥ ೨೪ ॥

---

೨೦-೨೧. ಇದು ನ್ಯಾಸಗಳಲ್ಲೆಲ್ಲಾ ಉತ್ತಮವಾದ ನ್ಯಾಸವು. ತತ್ತ್ವನ್ಯಾಸವೆಂದು ಇದರ ಹೆಸರು. ದ್ವಾದಶಾಕ್ಷರ ಮಂತ್ರದ ವರ್ಣಗಳನ್ನು ಆದಿಯಲ್ಲಿ ಹೇಳಿ ದ್ವಾದಶಾದಿತ್ಯ ಸಹಿತರಾದ ಕೇಶವಾದಿ ಹನ್ನೆರಡು ಮೂರ್ತಿಗಳನ್ನು ನ್ಯಾಸಮಾಡಬೇಕು. ಈ ಮಂತ್ರವು ಎಂಟು ವರ್ಣಗಳುಳ್ಳದು ಮತ್ತು ಹಿಂದೆ ಹೇಳಿದ ಎಂಟು ಪ್ರಕೃತ್ಯಾತ್ಮಕವು ಎಂದು ಉಕ್ತವಾಗಿದೆ.

೨೨-೨೩. ಎಂಟು ಪ್ರಕೃತಿಗಳ ಜೊತೆಗೆ ಆತ್ಮ, ಅಂತರಾತ್ಮ, ಜ್ಞಾನಾತ್ಮ, ಪರಮಾತ್ಮ ಎಂಬ ಆತ್ಮಚತುಷ್ಟಯವನ್ನು ಸೇರಿಸಿದರೆ ಹನ್ನೆರಡಾಗುತ್ತವೆ. ಅವುಗಳನ್ನು ಸಂಯೋಜನೆಮಾಡಿ ಜಪಕರ್ತನು ಹಣೆ, ಹೃದಯ, ನಾಭಿ, ಕುತ್ತಿಗೆ, ಬಲಪಾರ್ಶ್ವ, ಬಲಭುಜ, ಕಂಠ, ಎಡಭಾಗ, ಎಡಭುಜ, ಗಲ, ಪೃಷ್ಠಭಾಗ, ಬೆನ್ನಿನ ಕೆಳಭಾಗ ಇವುಗಳಲ್ಲಿ ಕ್ರಮವಾಗಿ ಹನ್ನೆರಡು ಮೂರ್ತಿಗಳನ್ನು ನ್ಯಾಸಮಾಡಬೇಕು.

೨೪-೨೭. ಧಾತೃ ಸಹಿತ ಕೇಶವ, ಅರ್ಯಮಾಸಹಿತನಾದ ನಾರಾಯಣ, ಮಿತ್ರಸಹಿತ ಮಾಧವ, ವರುಣಸಹಿತ ಗೋವಿಂದ, ಅಂಶುಯುಕ್ತ ವಿಷ್ಣು, ಭಗಸಹಿತ ಮಧುಸೂದನ, ವಿವಸ್ವಂತನಿಂದ ಕೂಡಿದ ತ್ರಿವಿಕ್ರಮ, ಇಂದ್ರಸಹಿತ

ವಿಷ್ಣುಂ ಚೈವಾಂಶುನಾಯುಕ್ತಂ ಭಗೇನ ಮಧುಸೂದನಂ ।
ನ್ಯಸೇದ್ವಿವಸ್ವತಾ ಯುಕ್ತಂ ತ್ರಿವಿಕ್ರಮಮತಃ ಪರಂ ॥ ೨೫ ॥

ವಾಮನಂ ಚ ತಥೇಂದ್ರೇಣ ಪೂಷ್ಣಾ ಶ್ರೀಧರಮೇವ ಚ ।
ಹೃಷೀಕೇಶಂ ನ್ಯಸೇತ್ಪಶ್ಚಾತ್ಪರ್ಜನ್ಯೇನ ಸಮನ್ವಿತಂ ॥ ೨೬ ॥

ತ್ವಷ್ಟ್ರಾಯುತಂ ಪದ್ಮನಾಭಂ ದಾಮೋದರಂ ಚ ವಿಷ್ಣುನಾ ।
ದ್ವಾದಶಾರ್ಣಂ ತತೋ ಮಂತ್ರಂ ಸಮಸ್ತಂ ಶಿರಸಿ ನ್ಯಸೇತ್ ॥ ೨೭ ॥

ವ್ಯಾಪಕಂ ವಿನ್ಯಸೇತ್ಪಶ್ಚಾತ್ಕಿರೀಟಮನುನಾ ಸುಧೀಃ ।
ಧ್ರುವಃ ಕಿರೀಟಕೇಯೂರಹಾರಾಂತೇ ಮಕರೇತಿ ಚ ॥ ೨೮ ॥

ಕುಂಡಲಾಂತೇ ಚಕ್ರಶಂಖಗದಾಂತೇಂಭೋಜಹಸ್ತತಃ ।
ಪೀತಾಂಬರಾಂತೇ ಶ್ರೀವತ್ಸಾಂಕಿತವಕ್ಷಸ್ಥಲೇತಿ ಚ ॥ ೨೯ ॥

ಶ್ರೀಭೂಮಿಸಹಿತಸ್ವಾತ್ಮಜ್ಯೋತಿರ್ದ್ವಯಮತಃ ಪರಂ ।
ವದೇದ್ದೀಪ್ತಿಕರಾಯಾಂತೇ ಸಹಸ್ರಾದಿತ್ಯತೇಜಸೇ ॥ ೩೦ ॥

---

ವಾಮನ, ಪೂಷಾಸಹಿತ ಶ್ರೀಧರ, ಪರ್ಜನ್ಯಯುಕ್ತ ಹೃಷೀಕೇಶ, ತ್ವಷ್ಟೃಯುಕ್ತ ಪದ್ಮನಾಭ ಮತ್ತು ವಿಷ್ಣುಸಹಿತ ದಾಮೋದರ ಈಪ್ರಕಾರ ದ್ವಾದಶಾದಿತ್ಯಸಹಿತರಾದ ಕೇಶವಾದಿ ಹನ್ನೆರಡು ಮೂರ್ತಿಗಳನ್ನು ಒಂದೊಂದು ಮಂತ್ರವರ್ಣಸಹಿತವಾಗಿ ಹಿಂದೆ ಹೇಳಿದ ಅಂಗಗಳಲ್ಲಿ ನ್ಯಾಸಮಾಡಬೇಕು. ತರುವಾಯ ಸಮಸ್ತ ದ್ವಾದಶಾಕ್ಷರ ಮಂತ್ರವನ್ನು ಶಿರಸ್ಸಿನಲ್ಲಿ ನ್ಯಾಸಮಾಡಬೇಕು.

೨೮–೩೧. ತರುವಾಯ ಕಿರೀಟ ಮಂತ್ರದಿಂದ ಸರ್ವಾಂಗ ನ್ಯಾಸಮಾಡಬೇಕು. "ಓಂ ಕಿರೀಟ ಕೇಯೂರ ಹಾರ ಮಕರ ಕುಂಡಲ ಚಕ್ರ ಶಂಖ ಗದಾಂಭೋಜ ಹಸ್ತ ಪೀತಾಂಬರ ಶ್ರೀವತ್ಸಾಂಕಿತ ವಕ್ಷಸ್ಥಲ ಶ್ರೀಭೂಮೀಸಹಿತ ಸ್ವಾತ್ಮಜ್ಯೋತಿರ್ದ್ವಯ ದೀಪ್ತಿಕರಾಯ ಸಹಸ್ರಾದಿತ್ಯತೇಜಸೇ ನಮಃ" ಎಂಬ

ನವೋಂತೋ ಬಾಣಷಡ್ವರ್ಣೈಃ ಕಿರೀಟಮನುರೀರಿತಃ ।
ಏವಂ ನ್ಯಾಸವಿಧಿಂ ಕೃತ್ವಾ ಧ್ಯಾಯೇನ್ನಾರಾಯಣಂ ವಿಭುಂ ॥ ೩೧ ॥

ಉದ್ಯತ್ಕೋಟ್ಯರ್ಕಸದೃಶಂ ಶಂಖಂ ಚಕ್ರಂ ಗದಾಂಬುಜಂ ।
ದಧತಂ ಚ ಕರೈರ್ಭೂಮಿಶ್ರೀಭ್ಯಾಂ ಪಾರ್ಶ್ವದ್ವಯಾಂಚಿತಂ ॥ ೩೨ ॥

ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಾಸಕ್ತಕಂಧರಂ ।
ಹಾರಕೇಯೂರವಲಯಾಂಗದಂ ಪಿತಾಂಬರಂ ಸ್ಮರೇತ್ ॥ ೩೩ ॥

ವರ್ಣಲಕ್ಷಂ ಜಪೇನ್ಮಂತ್ರಂ ವಿಧಿವನ್ನಿಯತೇಂದ್ರಿಯಃ ।
ಪ್ರಥಮೇನ ತು ಲಕ್ಷೇಣ ಸ್ವಾತ್ಮಶುದ್ಧಿರ್ಭವೇದ್ಧ್ರುವಂ ॥ ೩೪ ॥

ಲಕ್ಷದ್ವಯಜಪೇನಾಥ ಮಂತ್ರಶುದ್ಧಿಮವಾಪ್ನುಯಾತ್ ।
ಲಕ್ಷತ್ರಯೇಣ ಜಪ್ತೇನ ಸ್ವರ್ಲೋಕಮಧಿಗಚ್ಛತಿ ॥ ೩೫ ॥

---

ಅರವತ್ತೈದು ವರ್ಣಗಳುಳ್ಳುದೇ ಕಿರೀಟಮಂತ್ರವೆಂದು ಉಕ್ತವಾಗಿದೆ. ಈರೀತಿಯಾಗಿ ನ್ಯಾಸ ವಿಧಾನವನ್ನಾಚರಿಸಿ ನಾರಾಯಣಸ್ವಾಮಿಯನ್ನು ಧ್ಯಾನಿಸಬೇಕು.

೩೨-೩೩. ಉದಯಿಸುತ್ತಿರುವ ಕೋಟಿಸೂರ್ಯರಿಗೆ ಸಮಾನನಾದ, ಶಂಖ' ಚಕ್ರ, ಗದೆ, ಪದ್ಮಗಳನ್ನು ಕೈಗಳಲ್ಲಿ ಧರಿಸಿರುವ ಭೂದೇವಿ ಶ್ರೀದೇವಿಯರಿಂದ ಆಲಿಂಗಿತವಾದ ಪಾರ್ಶ್ವದ್ವಯವುಳ್ಳ, ಶ್ರೀವತ್ಸಾಂಕಿತವಾದ ವಕ್ಷಸ್ಥಲವುಳ್ಳ, ಪ್ರಕಾಶಮಾನವಾದ ಕೌಸ್ತುಭಮಣಿಯಿಂದಲಂಕೃತವಾದ ಕುತ್ತಿಗೆಯುಳ್ಳ, ಹಾರ, ಕೇಯೂರ, ಅಂಗದ (ಬಾಹ್ವಾಭರಣ) ಗಳನ್ನು ಧರಿಸಿರುವ, ಪೀತಾಂಬರಧಾರಿಯಾದ, ಶ್ರೀ ವಿಷ್ಣುವನ್ನು ಧ್ಯಾನಿಸಬೇಕು.

೩೪. ವಿಧಾನೋಕ್ತರೀತಿಯಿಂದ ಜಿತೇಂದ್ರಿಯನಾಗಿ ಈ ಮಂತ್ರವನ್ನು ಐವತ್ತು ಲಕ್ಷ ಜಪಮಾಡಬೇಕು. ಮೊದಲನೆಯ ಲಕ್ಷ ಜಪದಿಂದ ಜಪಕರ್ತನ ಆತ್ಮಶುದ್ಧಿಯಾಗುವುದು.

೩೫. ಎರಡು ಲಕ್ಷ ಜಪಮಾಡಿದರೆ ಮಂತ್ರಶುದ್ಧಿಯಾಗುವುದು. ಮೂರು ಲಕ್ಷ ಜಪಮಾಡುವುದರಿಂದ ಸ್ವರ್ಗಲೋಕವು ಲಭಿಸುತ್ತದೆ.

ವಿಷ್ಣೋಸ್ಸಾಮೀಪ್ಯಮಾಪ್ನೋತಿ ವೇದಲಕ್ಷಜಪಾನ್ನರಃ ।
ತಥಾಚ ನಿರ್ಮಲಂ ಜ್ಞಾನಂ ಪಂಚಲಕ್ಷಜಪಾದ್ಭವೇತ್ ॥ ೩೬ ॥

ಲಕ್ಷಷಟ್ಕೇನ ಚಾಪ್ನೋತಿ ಮಂತ್ರೀ ವಿಷ್ಣೌ ಸ್ಥಿರಾಂ ಮತಿಂ ।
ಸಪ್ತಲಕ್ಷಜಪಾನ್ಮಂತ್ರೀ ವಿಷ್ಣೋಸ್ಸಾರೂಪ್ಯಮಾಪ್ನುಯಾತ್ ॥ ೩೭ ॥

ಅಷ್ಟಲಕ್ಷಂ ಜಪೇನ್ಮಂತ್ರೀ ನಿರ್ವಾಣಮಧಿಗಚ್ಛತಿ ।
ಏವಂ ಜಪ್ತ್ವಾ ತತಃ ಪ್ರಾಜ್ಞೋ ದಶಾಂಶಂ ಸರಸೀರುಹೈಃ ॥ ೩೮ ॥

ಮಧುರಾಕ್ತೈಃ ಪ್ರಜುಹುಯಾತ್ಸಂಸ್ಕೃತೇ ಹವ್ಯವಾಹನೇ ।
ಮಾಂಡೂಕಾತ್ಪರತತ್ವಾಂತಂ ಪೀಠೇ ಸಂಪೂಜಯೇತ್ತತಃ ॥ ೩೯ ॥

ವಿಮಲೋತ್ಕರ್ಷಣೀ ಜ್ಞಾನಾ ಕ್ರಿಯಾ ಯೋಗಾ ತತಃ ಪರಂ ।
ಪ್ರಹ್ವೀ ಸತ್ಯಾ ತಥೇಶಾನಾನುಗ್ರಹಾ ನವಮೀ ಮತಾ ॥ ೪೦ ॥

---

೩೬. ನಾಲ್ಕು ಲಕ್ಷ ಜಪಮಾಡುವ ಮನುಷ್ಯನು ನಾರಾಯಣನ ಸಾಮೀಪ್ಯವನ್ನು ಪಡೆಯುವನು ಹಾಗೆಯೇ ಐದು ಲಕ್ಷ ಜಪಮಾಡಿದರೆ ಪರಿಶುದ್ಧವಾದ ಜ್ಞಾನವು ಹುಟ್ಟುತ್ತದೆ.

೩೭. ಆರು ಲಕ್ಷ ಜಪಮಾಡಿದವನು ದೃಢವಾದ ನಾರಾಯಣ ಜ್ಞಾನವನ್ನು ಹೊಂದುವನು. ಏಳು ಲಕ್ಷ ಜಪದಿಂದ ಮಂತ್ರಿಯು ವಿಷ್ಣುಸಾರೂಪ್ಯವೆಂಬ ಮುಕ್ತಿಯನ್ನು ಪಡೆಯುವನು.

೩೮-೪೦. ಎಂಟು ಲಕ್ಷ ಜಪಮಾಡಿದರೆ ಮಂತ್ರಿಯು ಸಾಯುಜ್ಯ ಮುಕ್ತಿಯನ್ನು ಹೊಂದುವನು. ಪ್ರಾಜ್ಞನು ಈಪ್ರಕಾರ ಜಪಮಾಡಿ ಅನಂತರ ಸಂಸ್ಕಾರಮಾಡಿದ ಅಗ್ನಿಯಲ್ಲಿ ಮಧು ಮುಂತಾದ ಮಧುರ ದ್ರವ್ಯದಿಂದ ತೋಯಿಸಲ್ಪಟ್ಟ ಕಮಲಪುಷ್ಪಗಳಿಂದ ಜಪದ ಹತ್ತನೆಯ ಒಂದುಭಾಗದಷ್ಟು ಹೋಮ ಮಾಡಬೇಕು. ಅನಂತರ ವಿಮಲಾ, ಉತ್ಕರ್ಷಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ ಎಂಬ ಒಂಬತ್ತು ಶಕ್ತಿಗಳಿಂದ ಕೂಡಿದ ಪೀಠದಲ್ಲಿ ಮಂಡೂಕಾದಿ ಪರತತ್ವಾಂತವಾಗಿ ಪೂಜೆ ಮಾಡಬೇಕು.

ತಾರೋ ನಮೋ ಭಗವತೇ ವಿಷ್ಣವೇ ಸರ್ವಭೂ ತತಃ ।
ತಾತ್ಮನೇ ವಾಸುದೇವಾಯ ಸರ್ವಾತ್ಮೇತಿ ಪದಂ ವದೇತ್ ॥ ೪೧ ॥

ಸಂಯೋಗಯೋಗಪದ್ಮಾಂತೇ ಪೀಠಾಯ ಹೃದಯಾಂತಿಕಃ ।
ಷಡ್ತ್ರಿಂಶದಕ್ಷರಃ ಪೀಠಮಂತ್ರೋಽನೇನಾಸನಂ ದಿಶೇತ್ ॥ ೪೨ ॥

ಮೂರ್ತಿಂ ಸಂಕಲ್ಪ್ಯ ಮೂಲೇನ ತಸ್ಯಾಮಾವಾಹ್ಯ ಪೂಜಯೇತ್ ।
ಆದೌ ಚಾಂಗಾನಿ ಸಂಪೂಜ್ಯ ಮಂತ್ರಾರ್ಣಾನ್ ಕೇಸರೇಷು ಚ ॥ ೪೩ ॥

ಪ್ರಾಗಾದಿದಿಗ್ದಲೇ ವಾಸುದೇವಂ ಸಂಕರ್ಷಣಂ ತಥಾ ।
ಪ್ರದ್ಯುಮ್ನಮನಿರುದ್ಧಂ ಚ ಶಕ್ತೀಃ ಕೋಣೇಷ್ವಥಾರ್ಚಯೇತ್ ॥ ೪೪ ॥

ಶಾಂತಿಂ ಶ್ರಿಯಂ ಸರಸ್ವತೀಂ ರತಿಂ ಸಂಪೂಜಯೇತ್ಕ್ರಮಾತ್ ।
ಹೇಮಪೀತತಮಾಲೇಂದ್ರನೀಲಾಭಾಃ ಪೀತವಾಸಸಃ ॥ ೪೫ ॥

ಚತುರ್ಭುಜಾಃ ಶಂಖಚಕ್ರಗದಾಂಭೋಜಧರಾ ಇಮೇ ।
ಸಿತಕಾಂಚನಗೋದುಗ್ಧದೂರ್ವಾವರ್ಣಾಶ್ಚ ಶಕ್ತಯಃ ॥ ೪೬ ॥

---

೪೧-೪೨. "ತಾರೋ........ಹೃದಯಾಂತಿಕಃ" ಎಂಬ ಒಂದೂವರೆ ಶ್ಲೋಕದಿಂದ ಪೀಠಮಂತ್ರವನ್ನುದ್ಧರಿಸಿರುತ್ತಾರೆ. ಇಲ್ಲಿ ಎರಡುವಿಧ ಪೀಠ ಮಂತ್ರವು ಉಕ್ತವಾಗಿದೆ. (1) "ಓಂ ನಮೋ ಭಗವತೇ ವಿಷ್ಣವೇ ಸರ್ವ ಭೂತಾತ್ಮನೇ ಸಂಯೋಗ ಪದ್ಮ ಪೀಠಾಯನಮಃ" (2)"ಓಂನಮೋ ಭಗವತೇ ವಾಸುದೇವಾಯ ಸರ್ವಾತ್ಮನೇ ಸಂಯೋಗ ಪದ್ಮಪೀಠಾಯನಮಃ" ಇಪ್ಪತ್ತಾರು ಅಕ್ಷರಗಳುಳ್ಳ ಈ ಪೀಠಮಂತ್ರದಿಂದ ಅಸನವನ್ನು ಕೊಡಬೇಕು.

೪೩-೪೬. ವಿಗ್ರಹವನ್ನು ಸ್ಥಾಪಿಸಿ ಅದರಲ್ಲಿ ಮೂಲಮಂತ್ರದಿಂದ ದೇವತೆಯನ್ನು ಆವಾಹನೆಮಾಡಿ ಪೂಜಿಸಬೇಕು. ಆದಿಯಲ್ಲಿ ಅಂಗಪೂಜೆಮಾಡಿ, ಮಂತ್ರಾಕ್ಷರಗಳನ್ನು ನಾಗಸಂಪಿಗೆ ಹೂವುಗಳಲ್ಲಿಯೂ, ಪೂರ್ವ ಮುಂತಾದ ದಿಕ್ಕುಗಳಲ್ಲಿ ಕ್ರಮವಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಮೂರ್ತಿಗಳನ್ನೂ, ಆಗ್ನೇಯಾದಿ ಕೋಣಗಳಲ್ಲಿ ಶಾಂತಿ, ಶ್ರೀದೇವಿ, ಸರಸ್ವತಿ, ಮತ್ತು ರತಿ ಎಂಬ ಶಕ್ತಿಗಳನ್ನೂ ಕ್ರಮವಾಗಿ ಪೂಜಿಸಬೇಕು. ಈ ಅನಿರುದ್ಧಾದಿ

ದಲಾಗ್ರೇಷು ಚಕ್ರಶಂಖಗದಾಪಂಕಜಕೌಸ್ತುಭಾನ್ ।
ಪೂಜಯೇನ್ಮುಸಲಂ ಖಡ್ಗಂ ವನಮಾಲಾಂ ಯಥಾಕ್ರಮಂ ॥ ೪೭ ॥

ರಕ್ತಾಬ್ಜ ಪೀತಕನಕಶ್ಯಾಮಕೃಷ್ಣಾಸಿತಾರ್ಜುನಾನ್ ।
ಕುಂಕುಮಾಭಂ ಸಮಭ್ಯರ್ಚೇದ್ಬಹಿರಗ್ರೇ ಖಗೇಶ್ವರಂ ॥ ೪೮ ॥

ಪಾರ್ಶ್ವಯೋಃ ಪೂಜಯೇತ್ಪಶ್ಚಾಚ್ಛಂಖಪದ್ಮನಿಧೀ ಕ್ರಮಾತ್ ।
ಮುಕ್ತಾಮಾಣಿಕ್ಯಸಂಕಾಶೌ ಪಶ್ಚಿಮೇ ಧ್ವಜಮರ್ಚಯೇತ್ ॥ ೪೯ ॥

ರಕ್ತಂ ವಿಘ್ನಂ ತಥಾಗ್ನೇಯೇ ಶ್ಯಾಮಮಾರ್ಯಂ ಚ ರಾಕ್ಷಸೇ ।
ದುರ್ಗಾಂ ಶ್ಯಾಮಾಂ ವಾಯುಕೋಣೇ ಸೇನಾನ್ಯಂ ಪೀತಮೈಶ್ವರೇ ॥ ೫೦ ॥

---

ದೇವತೆಗಳು ಸುವರ್ಣ, ಹರಿದ್ರಾ, ತಮಾಲ, ಇಂದ್ರನೀಲಗಳಂತೆ ಹೊಳೆಯುತ್ತಿರುವವರು, ಹಳದಿ ವಸ್ತ್ರವನ್ನು ಧರಿಸಿರುವವರು, ನಾಲ್ಕು ಭುಜಗಳುಳ್ಳವರು ಮತ್ತು ಶಂಖ, ಚಕ್ರ, ಗದಾ, ಪದ್ಮಗಳನ್ನು ಕರದಲ್ಲಿ ಧರಿಸಿರುವವರೂ ಆಗಿರುತ್ತಾರೆ. ಶಕ್ತಿದೇವತೆಗಳು ಶುಕ್ಲ, ಪೀತ, ಗೋಕ್ಷೀರವರ್ಣ ಮತ್ತು ಗರಿಕೆ ಬಣ್ಣವುಳ್ಳವರು.

೪೭. ದಳಾಗ್ರಭಾಗಗಳಲ್ಲಿ ಕ್ರಮವಾಗಿ, ರಕ್ತ, ಅಬ್ಜ, ಪೀತ, ಕನಕ, ಶ್ಯಾಮ, ಕೃಷ್ಣ, ಅಸಿತ, ಧವಳವರ್ಣಗಳುಳ್ಳ, ಚಕ್ರ, ಶಂಖ, ಗದಾ, ಪದ್ಮ, ಕೌಸ್ತುಭ, ಮುಸಲ, (ಒನಕೆ) ಖಡ್ಗ, ವನಮಾಲೆಗಳನ್ನು ಪೂಜಿಸಬೇಕು.

೪೮–೪೯. ಹೊರಗೆ ಮುಂಭಾಗದಲ್ಲಿ ಕುಂಕುಮ ಪ್ರಭೆಯುಳ್ಳ ಗರುಡನನ್ನೂ ದೇವರ ಬಲ, ಎಡಬಾಗಗಳಲ್ಲಿ ಕ್ರಮವಾಗಿ ಮುತ್ತು, ಮಾಣಿಕ್ಯಗಳಂತೆ ಹೊಳೆಯುತ್ತಿರುವ ಶಂಖನಿಧಿ ಪದ್ಮನಿಧಿಗಳನ್ನೂ, ಪಶ್ಚಿಮ ದಿಕ್ಕಿನಲ್ಲಿ (ಹಿಂಭಾಗದಲ್ಲಿ) ಧ್ವಜವನ್ನೂ ಪೂಜಿಸಬೇಕು.

೫೦. ಆಗ್ನೇಯ ಮೂಲೆಯಲ್ಲಿ ಕೆಂಪು ಬಣ್ಣದಿಂದ ಯುಕ್ತವಾದ ವಿಘ್ನೇಶನನ್ನೂ, ನೈರುತ್ಯದಲ್ಲಿ ಶ್ಯಾಮವರ್ಣದ ಆರ್ಯನನ್ನೂ, ವಾಯುವ್ಯದಲ್ಲಿ ಶ್ಯಾಮವರ್ಣದ ದುರ್ಗೆಯನ್ನೂ, ಈಶಾನ್ಯದಲ್ಲಿ ಹಳದಿ ಬಣ್ಣದ ಸೇನಾನಿಯನ್ನೂ ಪೂಜಿಸಬೇಕು.

ಲೋಕೇಶಾನಾಯುಧೈರ್ಯುಕ್ತಾನ್ಬಹಿಃ ಸಂಪೂಜಯೇತ್ಸುಧೀಃ ।
ಏವಮಾವರಣೈರ್ಯುಕ್ತಂ ಯೋರ್ಚಯೇದ್ವಿಷ್ಣುಮವ್ಯಯಂ ॥ ೫೧ ॥

ಭುಕ್ತ್ವೇಹ ಸಕಲಾನ್ಭೋಗಾನಂತೇ ವಿಷ್ಣುಪದಂ ವ್ರಜೇತ್ ।
ಕ್ಷೇತ್ರಧಾನ್ಯಸುವರ್ಣಾನಾಂ ಪ್ರಾಪ್ತಯೇ ಧರಣೀಂ ಸ್ಮರೇತ್ ॥ ೫೨ ॥

ದೇವೀಂ ದೂರ್ವಾದಳಶ್ಯಾಮಾಂ ದಧಾನಾಂ ಶಾಲಿಮಂಜರೀಂ ।
ಚಿಂತಯೇದ್ಭಾರತೀಂ ದೇವೀಂ ವೀಣಾಪುಸ್ತಕಧಾರಿಣೀಂ ॥ ೫೩ ॥

ದಕ್ಷಿಣೇ ದೇವದೇವಸ್ಯ ಪೂರ್ಣಚಂದ್ರನಿಭಾನನಾಂ ।
ಕ್ಷೀರಾಬ್ಧಿಫೇನಪುಂಜಾಭೇ ವಸಾನಾಂಶ್ವೇತವಾಸಸೀ ॥ ೫೪ ॥

ಭಾರತ್ಯಾ ಸಹಿತಂ ವಿಷ್ಣುಂ ಧ್ಯಾಯೇದ್ದೇವಂ ಪರಾತ್ಪರಂ ।
ವೇದವೇದಾರ್ಥತತ್ವಜ್ಞೋ ಜಾಯತೇ ಸರ್ವವಿತ್ತಮಃ ॥ ೫೫ ॥

---

೫೧-೫೨. ಜ್ಞಾನಿಯು ಆಯುಧಗಳಿಂದ ಸಹಿತರಾದ ಲೋಕೇಶರನ್ನು ಹೊರಭಾಗದಲ್ಲಿ ಪೂಜಿಸಬೇಕು. ಈ ರೀತಿ ಆವರಣ (ಪರಿವಾರ) ಗಳಿಂದ ಯುಕ್ತನು., ನಾಶಹಿತನೂ ಆದ ವಿಷ್ಣುವನ್ನು ಪೂಜಿಸುವವನು ಈ ಲೋಕದಲ್ಲಿ ಸಕಲ ಭೋಗಗಳನ್ನು ಅನುಭವಿಸಿ ಕೊನೆಗೆ ವಿಷ್ಣುಸ್ಥಾನವಾದ ವೈಕುಂಠ ಲೋಕವನ್ನು ಪಡೆಯುವನು.

೫೨-೫೩. ಗರಿಕೆಯಹುಲ್ಲಿನಂತೆ ಶ್ಯಾಮವರ್ಣವುಳ್ಳ, ಬತ್ತದ ತೆನೆಯನ್ನು ಧರಿಸಿರುವ ಧರಣೀ ದೇವಿಯನ್ನು ಕ್ಷೇತ್ರ, ಧಾನ್ಯ, ಸುವರ್ಣಗಳನ್ನು ಪಡೆಯಲು ಧ್ಯಾನಿಸಬೇಕು.

೫೩-೫೫. ಕೈಗಳಲ್ಲಿ ವೀಣೆ ಮತ್ತು ಪುಸ್ತಕಗಳನ್ನು ಧರಿಸಿರುವ, ಪೂರ್ಣಚಂದ್ರನಂತೆ ಮುಖವುಳ್ಳ, ಕ್ಷೀರಸಮುದ್ರದ ನೊರೆಯ ರಾಶಿಯಂತೆ ಹೊಳೆಯುತ್ತಿರುವ ಶುಭ್ರವಸ್ತ್ರಗಳನ್ನು ಧರಿಸಿರುವ ಭಾರತೀ ದೇವಿಯನ್ನು ದೇವೋತ್ತಮನ ಬಲಭಾಗದಲ್ಲಿ ಧ್ಯಾನಿಸಬೇಕು. ಹೀಗೆ ಭಾರತೀ ದೇವಿಯರಿಂದ ಸಹಿತನಾದ ಉತ್ತಮೋತ್ತಮ ದೇವನನ್ನು ಧ್ಯಾನಿಸುವವನು ವೇದ ವೇದಾರ್ಥಗಳ ರಹಸ್ಯಾರ್ಥಜ್ಞಾನಿಯಾಗಿ ಸರ್ವಜ್ಞತಮನಾಗುವನು.

ನಾರಸಿಂಹಮಿವಾತ್ಮಾನಂ ದೇವಂ ಧ್ಯಾತ್ವಾತಿಭೈರವಂ ।
ಶಸ್ತ್ರಂ ಸಂಮಂತ್ರ್ಯ ಮಂತ್ರೇಣ ಶತ್ರೂನ್ಹತ್ವಾ ನಿವರ್ತತೇ ॥ ೫೬ ॥

ನಾರಸಿಂಹೇನ ಬೀಜೇನ ಮಂತ್ರಂ ಸಂಯೋಜ್ಯ ಸಾಧಕಃ ।
ಶತಮಷ್ಟೋತ್ತರಂ ಜಪ್ತ್ವಾ ವಾಮಹಸ್ತಾಭಿಮಂತ್ರಿತಾಃ ॥ ೫೭ ॥

ಪುನಃ ಪುನರಪಸ್ಸಿಂಚೇತ್ಸರ್ಪದಷ್ಟೋಽಪಿ ಜೀವತಿ ।
ಗಾರುಡೇನ ಚ ಸಂಯೋಜ್ಯ ಪಂಚಾರ್ಣೇನ ಜಪೇತ್ತದಾ ॥ ೫೮ ॥

ನಿರ್ವಿಷೀಕರಣೇ ಧ್ಯಾಯೇದ್ವಿಷ್ಣುಂ ಗರುಡವಾಹನಂ ।
ಅಶೋಕಫಲಕೇ ತಾರ್ಕ್ಷ್ಯಮಾಲಿಖ್ಯಾಶೋಕಸಂಹತೌ ॥ ೫೯ ॥

ಅಶೋಕಪುಷ್ಪೈಃ ಸಂಪೂಜ್ಯ ಭಗವಂತಂ ತದಗ್ರತಃ ।
ಜುಹುಯಾತ್ತಾನಿ ಪುಷ್ಪಾಣಿ ತ್ರಿಸಂಧ್ಯಂ ಸಪ್ತಸಪ್ತಕಂ ॥ ೬೦ ॥

---

೫೬. ನರಸಿಂಹನಂತೆ ಅತ್ಯಂತಭಯಂಕರವಾದ ತನ್ನ ಇಷ್ಟದೈವವನ್ನು ಧ್ಯಾನಿಸಿ, ಮಂತ್ರಪೂರ್ವಕವಾಗಿ ಶಸ್ತ್ರವನ್ನು ಪ್ರಯೋಗಿಸಿದರೆ ಅದು ಶತ್ರುಗಳನ್ನು ಸಂಹರಿಸಿ ಹಿಂತಿರುಗಿ ಬರುತ್ತದೆ.

೫೭-೫೮. ಸಾಧಕನು ನರಸಿಂಹ ಬೀಜಾಕ್ಷರದಿಂದ ಮಂತ್ರವನ್ನು ಸಂಯೋಜನೆಮಾಡಿ ಅದನ್ನು ನೂರೆಂಟಾವರ್ತಿ ಜಪಿಸಿ, ಅಭಿಮಂತ್ರಿಸಲ್ಪಟ್ಟ ಉದಕವನ್ನು ಪುನಃ ಪುನಃ ಎಡಗೈಯಿಂದ ಸೇಚನೆಮಾಡಿದರೆ ಹಾವು ಕಚ್ಚಿದವನೂ ಸಹ ಬದುಕುತ್ತಾನೆ. ಆಗ "ಕ್ಷಿಪ ಓಂ ಸ್ವಾಹಾ" ಎಂಬ ಪಂಚಾಕ್ಷರ ಗರುಡಮಂತ್ರವನ್ನು ಸೇರಿಸಿ ಜಪಿಸಬೇಕು.

೫೯-೬೦. ಗುರುಡಾರೂಢನಾದ ವಿಷ್ಣುವನ್ನು ವಿಷಪರಿಹಾರ ಮಾಡುವುದಕ್ಕಾಗಿ ಧ್ಯಾನಮಾಡಬೇಕು. ಅಶೋಕಮರದ ಹಲಗೆಯಲ್ಲಿ ಗರುಡಾಕೃತಿಯನ್ನು ಬರೆದು ಅಶೋಕವೃಕ್ಷದ ಸನ್ನಿಧಿಯಲ್ಲಿ ಅಶೋಕ ಪುಷ್ಪಗಳಿಂದ ಭಗವಂತನನ್ನು ಪೂಜಿಸಿ ಅದರ ಮುಂಭಾಗದಲ್ಲಿ ಮೂರು ಸಂಧ್ಯಾಕಾಲಗಳಲ್ಲಿಯೂ ಆ ಪುಷ್ಪಗಳಿಂದ ಏಳು ಏಳಾವರ್ತಿ ಹೋಮ ಮಾಡಬೇಕು.

ಪ್ರತ್ಯಕ್ಷೋ ಜಾಯತೇ ಪಕ್ಷೀ ವರಮಿಷ್ಟಂ ಪ್ರಯಚ್ಛತಿ ।
ಗಾಣಾಪತ್ಯೇನ ಸಂಯೋಜ್ಯ ಜಪೇಲ್ಲಕ್ಷಂ ಪಯೋವ್ರತಃ ॥ ೬೧ ॥

ಮಹಾಗಣಪತಿಂ ದೇವಂ ಪ್ರತ್ಯಕ್ಷಮಿಹ ಪಶ್ಯತಿ ।
ವಾಣೀಬೀಜೇನ ಸಂಯುಕ್ತಂ ಷಣ್ಮಾಸಂ ಯೋ ಜಪೇನ್ನರಃ ॥ ೬೨ ॥

ಮಹಾಕವಿವರೋ ಭೂತ್ವಾ ಮೋಹಯೇತ್ಸಕಲಂ ಜಗತ್ ।
ಹುತ್ವಾ ಗುಡೂಚೀಶಕಲಾನ್ಯರ್ಧಾಂಗುಲಮಿತಾನಿ ಚ ॥ ೬೩ ॥

ದಧಿಮಧ್ವಾಜ್ಯಯುಕ್ತಾನಿ ಮೃತ್ಯುಂ ಜಯತಿ ಸಾಧಕಃ ।
ಶನೈಶ್ಚರದಿನೇ ಸಮ್ಯಕ್ಸ್ಪೃಷ್ಟ್ವಾಶ್ವತ್ಥಂ ಚ ಪಾಣಿನಾ ॥ ೬೪ ॥

ಜಪ್ತ್ವಾ ಚಾಷ್ಟಶತಂ ಯುದ್ಧೇಹ್ಯಪಮೃತ್ಯುಂ ಜಯತ್ಯಸೌ ।
ಪಂಚವಿಂಶತಿಧಾ ಜಪ್ತ್ವಾ ನಿತ್ಯಂ ಪ್ರಾತಃ ಪಿಬೇಜ್ಜಲಂ ॥ ೬೫ ॥

---

೬೧. ಹಾಗೆ ಮಾಡಿದರೆ ಗರುಡನು ಪ್ರತ್ಯಕ್ಷನಾಗಿ ಅಪೇಕ್ಷಿಸಿದ ವರವನ್ನು ಕೊಡುವನು. ಈ ಮಂತ್ರವನ್ನು ಗಣಪತಿ ಮಂತ್ರದೊಡನೆ ಸೇರಿಸಿ, ಕ್ಷೀರವ್ರತವನ್ನು ಕೈಗೊಂಡು, ಒಂದು ಲಕ್ಷಜಪ ಮಾಡಬೇಕು.

೬೨-೬೩. ಆದರಿಂದ ಮಹಾಗಣಪತಿಸ್ವಾಮಿಯನ್ನು ಇಲ್ಲಿಯೇ ಪ್ರತ್ಯಕ್ಷವಾಗಿ ನೋಡುವನು. ವಾಣೀ ಬೀಜಾಕ್ಷರವನ್ನು ಸಂಯೋಜನೆಮಾಡಿ ಈ ಮಂತ್ರವನ್ನು ಆರು ತಿಂಗಳು ಜಪಿಸುವ ಪುರುಷನು ಮಹಾಕವಿಶ್ರೇಷ್ಠನಾಗಿ ಸಕಲ ಜಗತ್ತನ್ನೂ ವಿಸ್ಮಯ ಗೊಳಿಸುವನು.

೬೩-೬೪. ಸಾಧಕನು ಅರ್ಧಾಂಗುಲ ಉದ್ದವಾದ ಅಮೃತ ಬಳ್ಳಿಯ ತುಂಡುಗಳನ್ನು ಮೊಸರು, ಜೇನುತುಪ್ಪ, ತುಪ್ಪಗಳೊಡನೆ ಹೋಮಮಾಡಿದರೆ ಮೃತ್ಯುವನ್ನು ಜಯಿಸುವನು.

೬೪-೬೫. ಶನಿವಾರದ ದಿವಸ ಕೈಯಿಂದ ಅರಳಿಯಮರವನ್ನು ಸ್ಪರ್ಶ ಮಾಡಿಕೊಂಡು, ಎಂಟುನೂರಾವರ್ತಿ ಈ ಮಂತ್ರವನ್ನು ಜಪಿಸುವವನು ಯುದ್ಧದಲ್ಲಿ ಅಪಮೃತ್ಯುವನ್ನು ನೀಗಿ ಕೊಳ್ಳುವನು.

**ಸರ್ವಪಾಪವಿನಿರ್ಮುಕ್ತೋ ಜ್ಞಾನವಾನ್ ರೋಗವರ್ಜಿತಃ ।**
**ಕುಂಭಂ ಸಂಸ್ಥಾಪ್ಯ ವಿಧಿವದಾಪೂರ್ಯ ಶುದ್ಧವಾರಿಣಾ ॥ ೬೬ ॥**

**ಜಪ್ತ್ವಾಽಯುತಂ ತತಸ್ತೇನಾಭಿಷೇಕಃ ಸರ್ವರೋಗನುತ್ ।**
**ಚಂದ್ರಸೂರ್ಯೋಪರಾಗೇ ತು ಹ್ಯುಪೋಷ್ಯಾಷ್ಟಸಹಸ್ರಕಂ ॥ ೬೭ ॥**

**ಸ್ಪೃಷ್ಟ್ವಾ ಬ್ರಾಹ್ಮೀಘೃತಂ ಜಪ್ತ್ವಾ ಪಿಬೇತ್ಸಾಧಕಸತ್ತಮಃ ।**
**ಮೇಧಾಂ ಕವಿತ್ವಂ ವಾಕ್ಸಿದ್ಧಿಂ ಲಭತೇ ನಾತ್ರ ಸಂಶಯಃ ॥ ೬೮ ॥**

**ಜುಹುಯಾದಯುತಂ ಬಿಲ್ವೈರ್ಮಹಾಧನಪತಿರ್ಭವೇತ್ ।**
**ನಾರಾಯಣಸ್ಯ ಮಂತ್ರೋಽಯಂ ಸರ್ವಮಂತ್ರೋತ್ತಮೋತ್ತಮಃ ॥೬೯॥**

**ಆಲಯಃ ಸರ್ವಸಿದ್ಧೀನಾಂ ಕಥಿತಸ್ತವ ನಾರದ ।**
**ನಾರಾಯಣಾಯ ಶಬ್ದಾಂತೇ ವಿದ್ಮಹೇ ಪದಮೀರಯೇತ್ ॥ ೭೦ ॥**

---

೬೫-೬೬. ಪ್ರತಿದಿನವೂ, ಇಪ್ಪತ್ತೊಂದಾವರ್ತಿ ಈ ಮಂತ್ರಜಪಮಾಡಿ ಅಭಿಮಂತ್ರಿಸಿದ ನೀರನ್ನು ಕುಡಿದರೆ ಸಕಲ ಪಾಪಗಳನ್ನೂ ಕಳೆದುಕೊಂಡು ರೋಗರಹಿತನಾಗಿ ಜ್ಞಾನಿಯಾಗುವನು.

೬೬-೬೭. ವಿಧಾನೋಕ್ತ ಪ್ರಕಾರವಾಗಿ ಕಲಶವನ್ನು ಸ್ಥಾಪಿಸಿ ಅದರಲ್ಲಿ ಪರಿಶುದ್ಧವಾದ ನೀರನ್ನುತುಂಬಿ ಹತ್ತುಸಾವಿರ ಮಂತ್ರಜಪಮಾಡಿ ಅದನ್ನುಅಭಿಮಂತ್ರಿಸಿ ಅದರಿಂದ ಅಭಿಷೇಕ ಮಾಡಿದರೆ ಸಕಲ ರೋಗ ಪರಿಹಾರವಾಗುವುದು.

೬೭-೬೮ ಸಾಧಕ ವರ್ಯನು ಚಂದ್ರ ಸೂರ್ಯಗ್ರಹಣಕಾಲಗಳಲ್ಲಿ ಉಪವಾಸದಿಂದ ಎಂಟು ಸಹಸ್ರ ಜಪಮಾಡಿ, ಬ್ರಾಹ್ಮೀ ಘೃತವನ್ನು ಅಭಿಮಂತ್ರಿಸಿ, ಅದನ್ನು ಪಾನ ಮಾಡಿದರೆ ಮೇಧೆ, ಕವಿತ್ವ, ವಾಕ್ಸಿದ್ಧಿ ಇವುಗಳುಂಟಾಗುತ್ತವೆ. ಸಂಶಯವಿಲ್ಲ.

೬೯-೭೦. ಬಿಲ್ವಗಳಿಂದ ಹತ್ತು ಸಾವಿರ ಹೋಮಮಾಡಿದರೆ ಮಹದೈಶ್ವರ್ಯವಂತನಾಗುವನು. ನಾರದನೇ! ಸಕಲ ಸಿದ್ಧಿಗಳಿಗೂ ಆಶ್ರಯವು, ಸಕಲ ಮಂತ್ರಗಳಲ್ಲಿಯೂ ಉತ್ತಮೋತ್ತಮವೂ ಆಗಿರುವ ಈ ನಾರಾಯಣಮಂತ್ರವನ್ನು ನಿನಗಾಗಿ ಹೇಳಿರುವೆನು.

ವಾಸುದೇವಪದಂ ಜೇಂತಂ ಧೀಮಹೀತಿ ತತೋ ವದೇತ್ ।
ತನ್ನೋ ವಿಷ್ಣುಃ ಪ್ರಚೋವರ್ಣಾನ್ಪ್ರವದೇಚ್ಚ ದಯಾದಿತಿ ॥ ೭೧ ॥

ಏಷೋಕ್ತಾ ವಿಷ್ಣುಗಾಯತ್ರೀ ಸರ್ವಪಾಪಪ್ರಣಾಶಿನೀ ।
ತಾರೋ ಹೃದ್ಭಗವಾನ್‌ಜೇಂತೋ ವಾಸುದೇವಾಯ ಕೀರ್ತಿತಃ ॥ ೭೨ ॥

ದ್ವಾದಶಾರ್ಣೋ ಮಹಾಮಂತ್ರೋ ಭುಕ್ತಿಮುಕ್ತಿಪ್ರದಾಯಕಃ ।
ಸ್ತ್ರೀಶೂದ್ರಾಣಾಂ ವಿತಾರೋಽಯಂ ಸತಾರಸ್ತು ದ್ವಿಜನ್ಮನಾಂ ॥ ೭೩ ॥

ಪ್ರಜಾಪತಿರ್ಮುನಿಶ್ಚಾಸ್ಯ ಗಾಯತ್ರೀ ಛಂದ ಈರಿತಾ ।
ದೇವತಾ ವಾಸುದೇವಸ್ತು ಬೀಜಂ ಶಕ್ತಿರ್ಧ್ರುವಶ್ಚ ಹೃತ್ ॥ ೭೪ ॥

ಚಂದ್ರಾಕ್ಷಿವೇದಪಂಚಾರ್ಣೈಃ ಸಮಸ್ತೇನಾಂಗಕಲ್ಪನಂ ।
ಮೂರ್ಧ್ನಿ ಭಾಲೇ ದೃಶೋರಾಸ್ಯೇ ಗಲೇ ದೋರ್ಹೃದಯೋಃ ಪುನಃ ॥ ೭೫ ॥

---

೭೦-೭೨. "ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್" ಎಂಬೀ ಮಂತ್ರವುವಿಷ್ಣುಗಾಯತ್ರೀಯು. ಇದು ಸಕಲ ಪಾಪಗಳನ್ನೂ ನಾಶಪಡಿಸುತ್ತದೆಂದು ಉಕ್ತವಾಗಿದೆ.

೭೨-೭೩. "ಓಂ ನಮೋ ಭಗವತೇ ವಾಸುದೇವಾಯ" ಎಂಬುದು ದ್ವಾದಶಾಕ್ಷರ ಮಹಾಮಂತ್ರವು. ಅದು ಈ ಲೋಕದಲ್ಲಿ ಭೋಗವನ್ನಿತ್ತು ಕೊನೆಗೆ ಮುಕ್ತಿಯನ್ನು ಕೊಡುತ್ತದೆ. ಈ ಮಂತ್ರವನ್ನು ಸ್ತ್ರೀ ಶೂದ್ರರು ವಿತಾರ ಎಂದರೆ "ಓಂ" ಎಂಬುದನ್ನು ಬಿಟ್ಟು ಉಳಿದ ಭಾಗವನ್ನು ಮಾತ್ರ ಜಪಿಸ ಬೇಕು. ದ್ವಿಜರು ಅದರ ಸಹಿತವಾಗಿ ಎಂದರೆ ಸಂಪೂರ್ಣಮಂತ್ರವನ್ನು ಜಪಿಸಬೇಕು.

೭೪. ಈ ಮಂತ್ರಕ್ಕೆ ಪ್ರಜಾಪತಿಯು ಋಷಿ, ಗಾಯತ್ರಿಯೇ ಛಂದಸ್ಸು, ವಾಸುದೇವನೇ ದೇವತೆಯು, "ಓಂ" ಎಂಬುದು ಬೀಜ, 'ನಮಃ' ಎಂಬುದು ಶಕ್ತಿಯು.

೭೫-೭೬. ಓಂ ಎಂಬ ಏಕಾಕ್ಷರಪದದಿಂದ ಹೃದಯ, 'ನಮಃ, ಎಂಬು ದರಿಂದ ಶಿರಸ್ಸು, "ಭಗವತೇ" ಎಂಬುದರಿಂದ ಶಿಖೆ, "ವಾಸುದೇವಾಯ"/

ಕುಕ್ಷೌ ನಾಭೌ ಧ್ವಜೇ ಜಾನುದ್ವಯೋಃ ಪಾದದ್ವಯೋಃ ತಥಾ ।
ನ್ಯಸೇತ್ಕ್ರಮಾನ್ಮಂತ್ರವರ್ಣಾನ್ಸೃಷ್ಟಿನ್ಯಾಸೋಯಮೀರಿತಃ ॥ ೭೬ ॥

ಹೃದಾದಿಮಸ್ತಕಾಂತಂ ತು ಸ್ಥಿತಿನ್ಯಾಸಂ ಪ್ರಚಕ್ಷತೇ ।
ಪಾದಾದಾರಭ್ಯ ಮೂರ್ಧಾನಂ ನ್ಯಾಸಂ ಸಂಹಾರಕಂ ವಿದುಃ ॥ ೭೭ ॥

ತತ್ವನ್ಯಾಸಂ ತತಃ ಕುರ್ಯಾತ್ಸರ್ವತಂತ್ರೇಷು ಗೋಪಿತಂ ।
ಜೀವಂ ಪ್ರಾಣಂ ತಥಾ ಚಿತ್ತಂ ಹೃತ್ಪದ್ಮಂ ಸೂರ್ಯಮಂಡಲಂ ॥ ೭೮ ॥

ಚಂದ್ರಾಗ್ನಿಮಂಡಲೇ ಚೈವ ವಾಸುದೇವಂ ತತಃ ಪರಂ ।
ಸಂಕರ್ಷಣಂ ಚ ಪ್ರದ್ಯುಮ್ನಮನಿರುದ್ಧಂ ತತಃ ಪರಂ ॥ ೭೯ ॥

ನಾರಾಯಣಂ ಚ ಕ್ರಮತಸ್ತತ್ವಾನಿ ದ್ವಾದಶೈವ ತು ।
ಮೂಲಾರ್ಣಹೃತ್ಪರಾಯಾದ್ಯಮಾತ್ಮನೇ ಹೃದಯಾಂತಿಮಂ ॥ ೮೦ ॥

---

ಎಂಬುದರಿಂದ ಕವಚ, ಸಂಪೂರ್ಣ ಮಂತ್ರದಿಂದ ಅಸ್ತ್ರ ಈ ಪ್ರಕಾರವಾಗಿ ಪಂಚಾಂಗವನ್ನು ಅನುಸಂಧಾನಮಾಡಿ ನ್ಯಾಸಮಾಡಬೇಕು. ಈ ಮಂತ್ರದ ಒಂದೊಂದಕ್ಷರವನ್ನೂ ಕ್ರಮವಾಗಿ ಶಿರಸ್ಸು, ಹಣೆ, ಕಣ್ಣುಗಳು, ಬಾಯಿ, ಕುತ್ತಿಗೆ, ಬಾಹು, ಹೃದಯ, ಹೊಟ್ಟೆ, ಹೊಕ್ಕಳು, ಧ್ವಜ, ಎರಡು ಮೊಣಕಾಲು ಮತ್ತು ಎರಡು ಪಾದಗಳು ಈ ಅಂಗಗಳಲ್ಲಿ ನ್ಯಾಸಮಾಡಬೇಕು. ಈ ರೀತಿಯಾದ ನ್ಯಾಸಕ್ಕೆ ಸೃಷ್ಟಿನ್ಯಾಸ ವೆಂದು ಹೆಸರು.

೭೭. ಹೃದಯದಿಂದ ತಲೆಯವರೆಗೆ ಮಾಡುವನ್ಯಾಸವು ಸ್ಥಿತಿನ್ಯಾಸವೆನಿಸುವುದು. ಪಾದದಿಂದ ಮೊದಲುಮಾಡಿ ಶಿರಸ್ಸಿನವರೆಗೆ ಮಾಡುವ ನ್ಯಾಸವು ಸಂಹಾರ ನ್ಯಾಸವೆನಿಸುವುದು.

೭೮-೮೧. ತರುವಾಯ ಸಕಲ ತಂತ್ರಗಳಲ್ಲಿಯೂ ರಹಸ್ಯವಾಗಿರುವ ತತ್ವ ನ್ಯಾಸವನ್ನು ಮಾಡಬೇಕು. ಜೀವ, ಪ್ರಾಣ, ಚಿತ್ತ, ಹೃದಯಕಮಲ, ಸೂರ್ಯಮಂಡಲ, ಚಂದ್ರಮಂಡಲ, ಅಗ್ನಿಮಂಡಲ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಮತ್ತು ನಾರಾಯಣ ಎಂಬುದಾಗಿ ಹನ್ನೆರಡು ತತ್ವಗಳು.

ತತ್ವನಾಮ ಸಮುಚ್ಚಾರ್ಯ ನ್ಯಸೇನ್ಮೂರ್ಧಾದಿಷು ಕ್ರಮಾತ್ ।
ಪೂರ್ವೋಕ್ತಂ ಧ್ಯಾನಮತ್ರಾಪಿ ಭಾನುಲಕ್ಷಜಪೋ ಮನೋಃ ॥ ೮೧ ॥

ತದ್ದಶಾಂಶಂ ತಿಲೈರಾಜ್ಯಲೋಹಿತೈಃ ಹವನಂ ಚರೇತ್ ।
ಪೀಠೇ ಪೂರ್ವೋದಿತೇ ಮಂತ್ರೀ ಮೂರ್ತಿಂ ಸಂಕಲ್ಪ್ಯ ಮೂಲತಃ ॥ ೮೨ ॥

ತಸ್ಯಾಮಾವಾಹ್ಯ ದೇವೇಶಂ ವಾಸುದೇವಂ ಪ್ರಪೂಜಯೇತ್ ।
ಅಂಗಾನಿ ಪೂರ್ವಮಭ್ಯರ್ಚ್ಯ ವಾಸುದೇವಾದಿಕಾಸ್ತತಃ ॥ ೮೩ ॥

ಶಾಂತ್ಯಾದಿಶಕ್ತಯಃ ಪೂಜ್ಯಾಃ ಪ್ರಾಗಾದಿಷು ವಿದಿಕ್ಷು ಚ ।
ತೃತೀಯಾವರಣೇ ಪೂಜ್ಯಾಃ ಪ್ರೋಕ್ತಾ ದ್ವಾದಶಮೂರ್ತಯಃ ॥ ೮೪ ॥

---

ಆದಿಯಲ್ಲಿ ಅನುಸ್ವಾರ ಸಹಿತವಾದ ಮೂಲಮಂತ್ರದ ಒಂದೊಂದು ಅಕ್ಷರ, ಬಳಿಕ "ನಮಃ ಪರಾಯ" ಆಮೇಲೆ ಕ್ರಮವಾಗಿ ಒಂದೊಂದು ತತ್ವನಾಮ, ಅದರ ಮುಂದೆ 'ಆತ್ಮನೇ ನಮಃ' ಎಂಬ ಪದಗಳನ್ನು ಸೇರಿಸಿ "ಓಂ ನಮಃ ಪರಾಯ ಜೀವಾತ್ಮನೇ ನಮಃ" ಇತ್ಯಾದಿಯಾಗಿ ಹೇಳುತ್ತಾ ಶಿರಸ್ಸು ಮುಂತಾದ ಅವಯುವ ಗಳಲ್ಲಿ ಕ್ರಮವಾಗಿ ನ್ಯಾಸಮಾಡಬೇಕು. ಇಲ್ಲಿಯೂ ಸಹ ಹಿಂದೆ ಹೇಳಿರುವ ಪ್ರಕಾರ ಧ್ಯಾನ ಮಾಡಬೇಕು. ಈ ಮಂತ್ರವನ್ನು ಹನ್ನೆರಡುಲಕ್ಷ ಜಪ ಮಾಡಬೇಕು.

೮೨-೮೩. ಎಳ್ಳು, ತುಪ್ಪ, ಲೋಹಿತಗಳಿಂದ ಜಪದ ಹತ್ತನೆಯ ಒಂದು ಭಾಗದಷ್ಟು ಹೋಮಮಾಡಬೇಕು. ಮಂತ್ರಜಪಕರ್ತನು ಹಿಂದೆ ಹೇಳಿರುವ ಪೀಠದಲ್ಲಿ ಮೂರ್ತಿಯನ್ನು ಸ್ಥಾಪಿಸಿ ಅದರಲ್ಲಿ ಮೂಲಮಂತ್ರದಿಂದ ದೇವೇಶ ನಾದ ವಾಸುದೇವನನ್ನು ಆವಾಹನೆಮಾಡಿ ಪೂಜಿಸಬೇಕು.

೮೩-೮೪. ಮೊದಲು ಅಂಗಗಳನ್ನು ಪೂಜಿಸಿ, ಅನಂತರ ವಾಸುದೇವಾದಿ ಮೂರ್ತಿಗಳನ್ನೂ, ಆಮೇಲೆ ಹಿಂದೆ ಹೇಳಿದಂತೆ ಪೂರ್ವಾದಿ ದಿಕ್ಕು, ಆಗ್ನೇಯಾದಿ ಕೋಣ ಇವುಗಳಲ್ಲಿ ಶಾಂತಿ ಮುಂತಾದ ಶಕ್ತಿಗಳನ್ನೂ ಪೂಜಿಸಬೇಕು. ತೃತೀಯ (ಮೂರನೆಯ) ಆವರಣದಲ್ಲಿ ಉಕ್ತವಾದ ಹನ್ನೆರಡು ಮೂರ್ತಿಗಳನ್ನು ಪೂಜಿಸಬೇಕು.

ಇಂದ್ರಾದ್ಯಾನಾಯುಧೈರ್ಯುಕ್ತಾನ್ಪೂಜಯೇದ್ಧರಣೀಗೃಹೇ ।
ಏವಮಾವರಣೈರಿಷ್ಟ್ವಾ ಪಂಚಭಿರ್ವಿಷ್ಣುಮವ್ಯಯಂ ॥ ೮೫ ॥

ಸಂಪ್ರಾಪ್ನುಯಾತ್ಸಕಲಾನರ್ಥಾನಂತೇ ವಿಷ್ಣುಪದಂ ವ್ರಜೇತ್ ।
ಪುರುಷೋತ್ತಮಸಂಜ್ಞಸ್ಯ ವಿಷ್ಣೋರ್ಭೇದಚತುಷ್ಟಯಂ ॥ ೮೬ ॥

ತ್ರೈಲೋಕ್ಯಮೋಹನಸ್ತೇಷಾಂ ಪ್ರಥಮಃ ಪರಿಕೀರ್ತಿತಃ
ಶ್ರೀಕರಶ್ಚ ಹೃಷೀಕೇಶಃ ಕೃಷ್ಣಶ್ಚಾತ್ರ ಚತುರ್ಥಕಃ ॥ ೮೭ ॥

ತಾರಃ ಕಾಮೋ ರಮಾ ಪಶ್ಚಾತ್ ಙೇಂತಃ ಸ್ಯಾತ್ಪುರುಷೋತ್ತಮಃ ।
ವರ್ಮಾಸ್ತ್ರಾಣಿ ಹ್ಯಗ್ನಿಪ್ರಿಯಾಂತೋ ಮಂತ್ರೋ ವಸ್ವಿಂದುವರ್ಣವಾನ್ ॥ ೮೮ ॥

ಬ್ರಹ್ಮಾ ಮುನಿಸ್ಸ್ಯಾದ್ಗಾಯತ್ರೀ ಛಂದಃ ಪ್ರೋಕ್ತೋಥ ದೇವತಾ ।
ಪುರುಷೋತ್ತಮಸಂಜ್ಞಾತ್ರ ಬೀಜಶಕ್ತೀ ಸ್ಮರೇಂದಿರೇ ॥ ೮೯ ॥

---

೮೫. ಚತುರಸ್ರಮಂಡಲದಲ್ಲಿ ಅವರವರ ಆಯುಧಗಳಿಂದ ಸಹಿತರಾದ ಇಂದ್ರಾದಿ ದಿಕ್ಪಾಲಕರನ್ನು ಪೂಜಿಸಬೇಕು. ಈಪ್ರಕಾರ ಐದು ಆವರಣಗಳ ಪೂಜೆಸಹಿತವಾಗಿ ನಾಶರಹಿತನಾದ ವಿಷ್ಣುವನ್ನು ಪೂಜಿಸಿದರೆ ಈಲೋಕದಲ್ಲಿ ಸಕಲ ಇಷ್ಟಾರ್ಥಗಳೂ ಸಿದ್ಧಿಸಿ ಕೊನೆಗೆ ವಿಷ್ಣುಲೋಕ (ವೈಕುಂಠ)ವನ್ನು ಪಡೆಯುವನು.

೮೬-೮೭. ಪುರುಷೋತ್ತಮ ನಾಮಕನಾದ ವಿಷ್ಣುವಿಗೆ ನಾಲ್ಕುರೂಪಗಳಿವೆ. ಅವುಗಳಲ್ಲಿ ತ್ರೈಲೋಕ್ಯ ಮೋಹನವೆಂಬುದು ಮೊದಲನೆಯದು. ಶ್ರೀಕರವು ಎರಡನೆಯದು, ಮೂರನೆಯದು ಹೃಷೀಕೇಶ, ನಾಲ್ಕನೆಯದು ಕೃಷ್ಣ ಎಂಬುದಾಗಿ ಉಕ್ತವಾಗಿದೆ.

೮೮. (ತಾರಃ= ಓಂ, ಕಾಮಃ= ಕ್ಲೀಂ, ರಮಾ= ಪಂ, ವರ್ಮ= ಹುಂ, ಅಸ್ತ್ರಾಣಿ= ಫಟ್, ಅಗ್ನಿಪ್ರಿಯಾ= ಸ್ವಾಹಾ) "ಓಂ ಕ್ಲೀಂ ಪಂ ಪುರುಷೋತ್ತಮಾಯ ಹುಂ ಫಟ್ ಸ್ವಾಹಾ" ಎಂಬ ಹದಿಮೂರು ವರ್ಣಗಳುಳ್ಳದೇ ಪುರುಷೋತ್ತಮ ಮಂತ್ರವು.

೮೯. ಈ ಮಂತ್ರಕ್ಕೆ ಬ್ರಹ್ಮನು ಋಷಿಯು, ಗಾಯತ್ರೀ ಛಂದಸ್ಸು, ಪುರುಷೋತ್ತಮನೇ ದೇವತೆಯು. 'ಪಂ' ಎಂಬುದು ಬೀಜವು, 'ಕ್ಲೀಂ' ಎಂಬುದು ಶಕ್ತಿಯು.

ಭೂಚಂದ್ರೈಕರಸಾಕ್ಷ್ಯಕ್ಷಿಮಂತ್ರವರ್ಣೈರ್ವಿಭಾಗಶಃ ।
ಕೃತ್ವಾಂಗಾನಿ ತತೋ ಧ್ಯಾಯೇದ್ವಿಧಿವತ್ಪುರುಷೋತ್ತಮಂ ॥ ೯೦ ॥

ಸಮುದ್ಯದಾದಿತ್ಯನಿಭಂ ಶಂಖಚಕ್ರಗದಾಂಬುಜೈಃ ।
ಲಸತ್ಕರಂ ಪೀತವಸ್ತ್ರಂ ಸ್ಮರೇಚ್ಛ್ರೀಪುರುಷೋತ್ತಮಂ ॥ ೯೧ ॥

ಮಹಾರತ್ನೌಘಖಚಿತಸ್ಫುರತ್ತೋರಣಮಂಡಪೇ ।
ಮುಕ್ತಾಕೋಶವದನೋಘವಿರಾಜಿತವಿತಾನಕೇ ॥ ೯೨ ॥

ನೃತ್ಯದ್ದೇವಾಂಗನಾವೃಂದಕ್ವಣತ್ಕಿಂಕಿಣಿನೂಪುರೇ ।
ಲಸನ್ಮಾಣಿಕ್ಯವೇದ್ಯಾಂ ತು ದೀಪ್ತಾರ್ಕಾಯುತತೇಜಸಿ ॥ ೯೩ ॥

ವೃಂದಾರಕವ್ರಾತಕಿರೀಟಾಗ್ರರತ್ನಾಭಿಚರ್ಚಿತೇ ।
ನವಲಕ್ಷಂ ಜಪೇನ್ಮಂತ್ರಂ ಜುಹುಯಾತ್ತದ್ದಶಾಂಶತಃ ॥ ೯೪ ॥

---

೯೦. ಈ ಮಂತ್ರ ವರ್ಣಗಳನ್ನು ಓಂ, ಕ್ಲೀಂ, ಪಂ, ಪುರುಷೋತ್ತಮಾಯ, ಹುಂ ಫಟ್, ಸ್ವಾಹಾ ಎಂಬುದಾಗಿ ಆರುಭಾಗವಾಗಿ ವಿಂಗಡಿಸಿ ಅದರಿಂದ ಹೃದಯಾದಿ ಷಡಂಗಗಳನ್ನು ನ್ಯಾಸಮಾಡಿ ಅನಂತರ ವಿಧಾನೋಕ್ತಪ್ರಕಾರವಾಗಿ ಪುರುಷೋತ್ತಮನನ್ನು ಧ್ಯಾನಿಸಬೇಕು.

೯೧-೯೪. ಮಹಾರತ್ನ ಸಮೂಹಗಳಿಂದ ಖಚಿತವಾಗಿ ಪ್ರಕಾಶಿಸುತ್ತಿರುವ ತೋರಣಗಳುಳ್ಳ, ಅನರ್ಘ್ಯವಾದ ಮುತ್ತಿನ ಗೊಂಚಲುಗಳಿಂದ ಪ್ರಕಾಶಿಸಲ್ಪಡುತ್ತಿರುವ ವಿತಾನ (ಝಾಲರಿ)ಗಳುಳ್ಳ, ನರ್ತನಮಾಡುತ್ತಿರುವ ದೇವಸ್ತ್ರೀಸಮೂಹದ ಪಾದಾಭರಣಗಳ ಧ್ವನಿಯಿಂದ ಕೂಡಿದ ಮಂಟಪದಲ್ಲಿನ ಹೊಳೆಯುತ್ತಿರುವ ಮಾಣಿಕ್ಯವೇದಿಕೆಯಲ್ಲಿ ಪ್ರಕಾಶಮಾನರಾದ ಹತ್ತುಸಾವಿರ ಸೂರ್ಯರಿಗೆ ಸಮವಾದ ತೇಜಸ್ಸುಳ್ಳ, ದೇವಸಂಘದ ಕಿರೀಟಗಳ ಕೊನೆಯಲ್ಲಿರುವ ರತ್ನಗಳ ಪ್ರಕಾಶದಿಂದ ತುಂಬಿರುವ, ಉದಯಿಸುತ್ತಿರುವ ಆದಿತ್ಯನಿಗೆ ಸಮಾನನಾದ ಶಂಖ, ಚಕ್ರ, ಗದೆ, ಪದ್ಮ ಇವುಗಳಿಂದ ಹೊಳೆಯುತ್ತಿರುವ ಹಸ್ತಗಳುಳ್ಳ ಪೀತಾಂಬರ ಧಾರಿಯಾದ ಶ್ರೀಪುರುಷೋತ್ತಮನನ್ನು ಧ್ಯಾನಿಸಬೇಕು. ಈ ಮಂತ್ರವನ್ನು ಒಂಬತ್ತು ಲಕ್ಷಜಪಿಸಿ, ಅದರ ಹತ್ತನೆಯ ಒಂದು ಭಾಗದಷ್ಟು ಹೋಮ ಮಾಡಬೇಕು.

ಉತ್ಫುಲ್ಲೈಃ ಕಮಲೈಃ ಪೀಠೇ ಪೂರ್ವೋಕ್ತೇ ವೈಷ್ಣವೇsರ್ಚಯೇತ್ ।
ಏವಮಾರಾಧ್ಯ ದೇವೇಶಂ ಪ್ರಾಪ್ನೋತಿ ಮಹತೀಂ ಶ್ರಿಯಂ ॥ ೯೫ ॥

ಪುತ್ರಾನ್ಪೌತ್ರಾನ್ಯಶಃ ಕಾಂತಿಂ ಭುಕ್ತಿಂ ಮುಕ್ತಿಂ ಚ ವಿಂದತಿ ।
ಉತ್ತಿಷ್ಠೇತಿಪದಂ ಪಶ್ಚಾಚ್ಛ್ರೀಕರಾಗ್ನಿಪ್ರಿಯಾಂತಿಮಃ ॥ ೯೬ ॥

ಅಷ್ಟಾರ್ಣೋsಸ್ಯ ಮುನಿರ್ವ್ಯಾಸಃ ಪಂಕ್ತಿಶ್ಛಂದ ಉದಾಹೃತಂ ।
ಶ್ರೀಕರಾಖ್ಯೋ ಹರಿಃ ಪ್ರೋಕ್ತೋ ದೇವತಾ ಸಕಲೇಷ್ಟದಃ ॥ ೯೭ ॥

ಭೀಷಯದ್ವಿತಯಂ ಹೃತ್ಸ್ಯಾತ್ತ್ರಾಸಯದ್ವಿತಯಂ ಶಿರಃ ।
ಶಿಖಾ ಪ್ರಮರ್ದಯದ್ವಂದ್ವಂ ವರ್ಮ ಪ್ರಧ್ವಂಸಯದ್ವಯಂ ॥ ೯೮ ॥

ಅಸ್ತ್ರಂ ರಕ್ಷದ್ವಯಂ ಸರ್ವೇ ಹುಮಂತಾಸ್ಸಮುದೀರಿತಾಃ ।
ಮಸ್ತಕೇ ನೇತ್ರಯೋಃ ಕಂಠೇ ಹೃದಯೇ ನಾಭಿದೇಶಕೇ ॥ ೯೯ ॥

---

೯೫-೯೬. ಹಿಂದೆ ಹೇಳಿದ ವಿಷ್ಣುಸಂಬಂಧಿಯಾದ ಪೀಠದಲ್ಲಿ ವಿಕಸಿತ ಕಮಲ ಪುಷ್ಪಗಳಿಂದ ಪೂಜಿಸಬೇಕು. ಈರೀತಿಯಾಗಿ ದೇವಸ್ವಾಮಿಯನ್ನು ಆರಾಧಿಸಿದರೆ ಮಹದೈಶ್ವರ್ಯವನ್ನು ಪಡೆಯುವನು. ಅಂತಹ ವನುಮಕ್ಕಳು, ಮೊಮ್ಮಕ್ಕಳು, ಕೀರ್ತಿ, ತೇಜಸ್ಸು, ಭೋಗ, ಮತ್ತು ಮುಕ್ತಿ ಇವುಗಳನ್ನು ಪಡೆಯುತ್ತಾನೆ.

೯೬-೯೭. "ಉತ್ತಿಷ್ಠ ಶ್ರೀಕರ ಸ್ವಾಹಾ" ಎಂಬುದು ಅಷ್ಟಾಕ್ಷರ ಶ್ರೀಕರ ಮಂತ್ರವು. ಇದಕ್ಕೆ ವ್ಯಾಸನು ಋಷಿ, ಪಂಕ್ತಿ ಎಂಬುದು ಛಂದಸ್ಸು, ಶ್ರೀಕರ ನಾಮಕ ಹರಿಯು ದೇವತೆ, ಈ ಮಂತ್ರವು ಸಕಲೇಷ್ಟಪ್ರದಾಯಕವೆಂದು ಹೇಳಲ್ಪಟ್ಟಿದೆ.

೯೮-೯೯. 'ಭೀಷಯ ಭೀಷಯ ಹುಂ' ಎಂದು ಹೃದಯದಲ್ಲಿಯೂ, 'ತ್ರಾಸಯ ತ್ರಾಸಯ ಹುಂ' ಎಂದು ಶಿರಸ್ಸಿನಲ್ಲಿಯೂ, ಪ್ರಮರ್ದಯ ಪ್ರಮರ್ದಯ ಹುಂ, ಎಂದು ಶಿಖೆಯಲ್ಲಿಯೂ, 'ಪ್ರಧ್ವಂಸಯ ಪ್ರಧ್ವಂಸಯ ಹುಂ' ಎಂದು ಕವಚವಾಗಿಯೂ, 'ರಕ್ಷ ರಕ್ಷ ಹುಂ' ಎಂದು ಅಸ್ತ್ರವಾಗಿಯೂ ಪಂಚಾಂಗ ನ್ಯಾಸ ಮಾಡಬೇಕು.

ಊರುಜಂಘಾಂಘ್ರಿಯುಗ್ಮೇಷು ಮಂತ್ರವರ್ಣಾನ್ಕ್ರಮಾನ್ನ್ಯಸೇತ್ ।
ತತಃ ಪುರುಷಸೂಕ್ತೋತ್ಥಮಂತ್ರೈರ್ನ್ಯಾಸಂ ಸಮಾಚರೇತ್ ॥ ೧೦೦ ॥

ಮುಖೇ ನ್ಯಸೇದ್ಬ್ರಾಹ್ಮಣೋಽಸ್ಯ ಮುಖಮಾಸೀದಿಮಂ ಮನುಂ ।
ಬಾಹುಯುಗ್ಮೇ ತಥಾ ಬಾಹೂ ರಾಜನ್ಯ ಇತಿ ವಿನ್ಯಸೇತ್ ॥ ೧೦೧ ॥

ಊರೂ ತದಸ್ಯ ಯದ್ವೈಶ್ಯ ಇಮಮೂರುದ್ವಯೇ ನ್ಯಸೇತ್ ।
ನ್ಯಸೇತ್ಪಾದದ್ವಯೇ ಮಂತ್ರೇ ಪದ್ಭ್ಯಾಂ ಶೂದ್ರೋ ಅಜಾಯತ ॥೧೦೨॥

ಚಕ್ರಂ ಶಂಖಂ ಗದಾ ಪದ್ಮಂ ಕರಾಗ್ರೇಷ್ವಥ ವಿನ್ಯಸೇತ್ ।
ಏವಂ ನ್ಯಾಸವಿಧಿಂ ಕೃತ್ವಾ ಧ್ಯಾಯೇತ್ಪೂರ್ವೋಕ್ತಮಂಡಲೇ ॥ ೧೦೩ ॥

ಅರುಣಾಬ್ಜಾಸನಸ್ಥಂ ತು ತಾರ್ಕ್ಷ್ಯಸ್ಯೋಪರಿ ಸಂಸ್ಥಿತಂ ।
ಪೂರ್ವೋಕ್ತರೂಪಿಣಂ ದೇವಂ ಶ್ರೀಕರಂ ಲೋಕಮೋಹನಂ ॥ ೧೦೪ ॥

---

೯೯-೧೦೦. ಶಿರಸ್ಸು, ಕಣ್ಣುಗಳು, ಕುತ್ತಿಗೆ, ಹೃದಯ, ನಾಭಿ, ತೊಡೆ, ಅದರ ಕೆಳಗಿನ ಸಂಧಿಪ್ರದೇಶ, ಪಾದದ್ವಯ ಈ ಅವಯವಗಳಲ್ಲಿ ಮಂತ್ರದ ಒಂದೊಂದಕ್ಷರವನ್ನು ಕ್ರಮವಾಗಿ ನ್ಯಾಸಮಾಡಬೇಕು. ಅನಂತರ ಪುರುಷ ಸೂಕ್ತ ಮಂತ್ರಗಳಿಂದ ನ್ಯಾಸವನ್ನಾಚರಿಸಬೇಕು.

೧೦೧-೧೦೨. "ಬ್ರಾಹ್ಮಣೋಽಸ್ಯ ಮುಖಮಾಸೀತ್' ಎಂಬ ಮಂತ್ರದಿಂದ ಮುಖದಲ್ಲಿಯೂ, "ಬಾಹೂ ರಾಜನ್ಯಃ" ಎಂಬ ಮಂತ್ರದಿಂದ ಎರಡು ತೋಳುಗಳಲ್ಲಿಯೂ "ಊರೂ ತದಸ್ಯ ಯದ್ವೈಶ್ಯಃ' ಎಂಬ ಮಂತ್ರದಿಂದ ಎರಡು ತೊಡೆಗಳಲ್ಲಿಯೂ "ಪದ್ಭ್ಯಾಂ ಶೂದ್ರೋ ಅಜಾಯತ" ಎನ್ನುವುದರಿಂದ ಪಾದದ್ವಯದಲ್ಲಿಯೂ ನ್ಯಾಸಮಾಡಬೇಕು.

೧೦೩-೧೦೪. ತರುವಾಯ ಕೈಗಳ ಅಗ್ರಭಾಗಗಳಲ್ಲಿ ಚಕ್ರ, ಶಂಖ, ಗದೆ, ಪದ್ಮ ಇವುಗಳನ್ನು ವಿನ್ಯಾಸಮಾಡಬೇಕು. ಈಪ್ರಕಾರ ನ್ಯಾಸವಿಧಾನವನ್ನಾಚರಿಸಿ, ರಕ್ತಕಮಲಾಸನದಲ್ಲಿ ಕುಳಿತಿರುವ ಗರುಢಾರೂಢನೂ, ಹಿಂದೆ ವರ್ಣಿಸಿರುವ ಗುಣಯುಕ್ತನೂ, ಲೋಕಮೋಹಕನೂ ಆಗಿರುವ ಶ್ರೀಕರದೇವನನ್ನು ಹಿಂದೆ ಹೇಳಿರುವ ಮಂಟಪದಲ್ಲಿ ಧ್ಯಾನಮಾಡಬೇಕು.

ಧ್ಯಾತ್ವೈವಂ ಪೂಜಯೇದಷ್ಟಲಕ್ಷಂ ಮಂತ್ರದಶಾಂಶತಃ ।
ರಕ್ತಾಂಬುಜೈಸ್ಸಮಿದ್ಭಿಶ್ಚ ಬಿಲ್ವಕ್ಷೀರದ್ರುಮೋದ್ಭವೈಃ ॥ ೧೦೫ ॥

ಪಯೋಽನ್ನೈಸ್ಸರ್ಪಿಷಾ ಹುತ್ವಾ ಪ್ರತ್ಯೇಕಂ ಸುಸಮಾಹಿತಃ ।
ಅಶ್ವತ್ಥೋದುಂಬರಪ್ಲಕ್ಷವಟಾಃ ಕ್ಷೀರದ್ರುಮಾಃ ಸ್ಮೃತಾಃ ॥ ೧೦೬ ॥

ಪೂಜಯೇದ್ವೈಷ್ಣವೇ ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ।
ಅಂಗಾವರಣದಿಕ್ಪಾಲಹೇತಿಭಿಃ ಸಹಿತಂ ವಿಭುಂ ॥ ೧೦೭ ॥

ಇತ್ಥಂ ಸಿದ್ಧೇ ಮನೌ ಮಂತ್ರೀ ಪ್ರಯೋಗಾನ್ಪೂರ್ವವಚ್ಚರೇತ್ ।
ತಾರೋ ಹೃದ್ಭಗವಾನ್ ಙೇಂತೋ ವರಾಹೇತಿ ತತಃ ಪರಂ ॥ ೧೦೮ ॥

ರೂಪಾಯ ಭೂರ್ಭುವಃ ಸ್ವಃ ಸ್ಯಾಲ್ಲೋಹಿತಕಾಮಿಕಾ ಚ ಯೇ ।
ಭೂಪತಿತ್ವಂ ಚ ಮೇ ದೇಹಿ ದದಾಪಯ ಶುಚಿಪ್ರಿಯಾ ॥ ೧೦೯ ॥

---

೧೦೫-೧೦೬. ಈ ಪ್ರಕಾರವಾಗಿ ಧ್ಯಾನಿಸಿ ಈ ಮಂತ್ರವನ್ನು ಎಂಟುಲಕ್ಷ ಜಪಮಾಡಬೇಕು. ತರುವಾಯ ಏಕಾಗ್ರಚಿತ್ತದಿಂದ ಕೆಂಪುತಾವರೆ, ಬಿಲ್ವ, ಮತ್ತು ಕ್ಷಿರದ್ರುಮ ಇವುಗಳ ಸಮಿತ್ತು, ಕ್ಷೀರಾನ್ನ, ತುಪ್ಪ ಇವುಗಳಿಂದ ಪ್ರತ್ಯೇಕವಾಗಿ ಜಪದ ಹತ್ತನೆಯ ಒಂದು ಭಾಗದಷ್ಟು ಹೋಮ ಮಾಡಬೇಕು. ಅರಳಿ, ಅತ್ತಿ, ಬಸರೀ, ಆಲ ಇವು ಕ್ಷೀರದ್ರುಮಗಳೆಂದು ಉಕ್ತವಾಗಿವೆ.

೧೦೭-೧೦೮. ವೈಷ್ಣವಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಕಲ್ಪಿಸಿ ಅಂಗ, ಆವರಣ, ದಿಕ್ಪಾಲಕರು, ಅವರ ಆಯುಧ ಇವುಗಳಿಂದ ಸಹಿತನಾದ ಸ್ವಾಮಿಯನ್ನು ಪೂಜಿಸಬೇಕು. ಈರೀತಿಯಾಗಿ ಮಂತ್ರಸಿದ್ಧಿಯಾದ ಮೇಲೆ ಜಪಕರ್ತನು ಪೂರ್ವದಂತೆ ವಿಧಾನವನ್ನಾಚರಿಸಬೇಕು.

೧೦೮-೧೧೦. (ತಾರಃ= ಓಂ, ಹೃತ್= ನಮಃ, ಲೋಹಿತ= ಪ, ಕಾಮಿಕಾ= ತ, ಶುಚಿಪ್ರಿಯಾ= ಸ್ವಾಹಾ) “ಓಂ ನಮೋ ಭಗವತೇ ವರಾಹರೂಪಾಯ ಭೂರ್ಭುವಃ ಸ್ವಃ ಪತಯೇ ಭೂಪತಿತ್ವಂ ಮೇ ದೇಹಿ ದದಾಪಯ

ರಾಮಾಗ್ನಿವರ್ಣೋಽ ಮಂತ್ರೋಽಯಂ ಭಾರ್ಗವೋಽಸ್ಯ ಮುನಿರ್ಮತಃ ।
ಛಂದೋಽನುಷ್ಟುಬ್ದೇವತಾಽಽದಿವರಾಹಸ್ಸಮುದೀರಿತಃ ॥ ೧೧೦ ॥

ಏಕದಂಷ್ಟ್ರಾಯ ಹೃದಯಂ ವ್ಯೋಮೋಲ್ಕಾಯ ಶಿರಃ ಸ್ಮೃತಂ ।
ಶಿಖಾ ತೇಜೋಽಧಿಪತಯೇ ವಿಶ್ವರೂಪಾಯ ವರ್ಮ ಚ ॥ ೧೧೧ ॥

ಮಹಾದಂಷ್ಟ್ರಾಯ ಚಾಸ್ತ್ರಂ ಸ್ಯಾತ್ಪಂಚಾಂಗಮಿತಿಕಲ್ಪಯೇತ್ ।
ಅಥವಾ ಗಿರಿಷಟ್ಸಪ್ತಬಾಣೈರ್ವಸುಭಿರಕ್ಷರೈಃ ॥ ೧೧೨ ॥

ವಿಭಕ್ತೈರ್ಮಂತ್ರವರ್ಣಸ್ಯ ಪಂಚಾಂಗಾನಿ ಪ್ರಕಲ್ಪಯೇತ್ ।
ತತೋ ಧ್ಯಾಯೇದನೇಕಾರ್ಕನಿಭಮಾದಿವರಾಹಕಂ ॥ ೧೧೩ ॥

---

ಸ್ವಾಹಾ'' ಎಂಬುದು ಮೂವತ್ತುಮೂರು ಅಕ್ಷರಗಳುಳ್ಳ ವರಾಹಮಂತ್ರವು. ಇದಕ್ಕೆ ಋಷಿಯು ಭಾರ್ಗವನು, ಅನುಷ್ಟುಪ್ ಛಂದಸ್ಸು, ಆದಿವರಾಹನೇ ದೇವತೆ ಎಂದು ಉಕ್ತವಾಗಿದೆ.

೧೧೧-೧೧೨ "ಓಂ ಏಕದಂಷ್ಟ್ರಾಯ ಹೃದಯಾಯ ನಮಃ'' ಎಂಬುದಾಗಿ ಹೃದಯ, "ಓಂ ವ್ಯೋಮೋಲ್ಕಾಯ ಶಿರಸೇ ಸ್ವಾಹಾ" ಎಂದು ತಲೆ, "ಓಂ ತೇಜೋಽಧಿಪತಯೇ ಶಿಖಾಯೈ ವಷಟ್'' ಎಂಬುದಾಗಿ ಶಿಖೆ, "ಓಂ ವಿಶ್ವರೂಪಾಯ ಕವಚಾಯ ಹುಂ'' ಎಂದು ಕವಚ, "ಓಂ ಮಹಾ ದಂಷ್ಟ್ರಾಯಾಸ್ತ್ರಾಯ ಫಟ್" ಎಂದು ಅಸ್ತ್ರ ಈಪ್ರಕಾರವಾಗಿ ಪಂಚಾಂಗ ನ್ಯಾಸಮಾಡಬೇಕು.

೧೧೨-೧೧೩. ಅಥವಾ ಮಂತ್ರಾಕ್ಷರಗಳನ್ನು ವಿಭಾಗಿಸಿ ಅದರಲ್ಲಿ "ಓಂ ನಮೋ ಭಗವತೇ'' ಎಂಬ ಏಳು ಅಕ್ಷರಗಳಿಂದ ಹೃದಯ, "ವರಾಹ ರೂಪಾಯ'' ಎಂಬ ಆರು ವರ್ಣಗಳಿಂದ ಶಿರಸ್ಸು, "ಭೂರ್ಭುವಃ ಸ್ವಃ ಪತಯೇ'' ಎಂಬ ಏಳು ವರ್ಣಗಳಿಂದ ಶಿಖೆ, "ಭೂಪತಿತ್ವಂ ಮೇ'' ಎಂಬ ಐದು ಅಕ್ಷರಗಳಿಂದ ಕವಚ, "ದೇಹಿ ದದಾಪಯ ಸ್ವಾಹಾ'' ಎಂಬ ಎಂಟು ಅಕ್ಷರಗಳಿಂದ ಅಸ್ತ್ರ. ಈರೀತಿಯಾಗಿಯಾದರೂ ಪಂಚಾಂಗಗಳನ್ನು ನ್ಯಾಸ ಮಾಡಬಹುದು.

ವಂ ಹ್ರೀಂ ಸ್ವರ್ಣನಿಭಂ ಜಾನ್ವೋರಧೋ ನಾಭೇಃ ಸಿತಪ್ರಭಂ ।
ಇಷ್ಟಾಭೀತಿಗದಾಶಂಖಚಕ್ರಶಕ್ತ್ಯಸಿಖೇಟಕಾನ್ ॥ ೧೧೪ ॥

ದಧತಂ ಚ ಕರೈರ್ದಂಷ್ಟ್ರಾಗ್ರಲಸದ್ಧರಣೀಂ ಸ್ಮರೇತ್ ।
ಏವಂ ಧ್ಯಾತ್ವಾ ಜಪೇಲ್ಲಕ್ಷಂ ದಶಾಂಶಂ ಸರಸೀರುಹೈಃ ॥ ೧೧೫ ॥

ಮಧ್ವಾಕ್ತೈರ್ಜುಹುಯಾತ್ಪೀಠೇ ಪೂರ್ವೋಕ್ತೇ ವೈಷ್ಣವೇ ಯಜೇತ್ ।
ಮೂಲೇನ ಮೂರ್ತಿಂ ಸಂಕಲ್ಪ್ಯ ತಸ್ಯಾಂ ಸಂಪೂಜಯೇದ್ವಿಭುಂ ॥೧೧೬॥

ಅಂಗಾವರಣದಿಕ್ಪಾಲಹೇತಿಯುಕ್ತಂ ಪ್ರಸಿದ್ಧಯೇ ।
ಜಪಾದೇವಾವನಿಂ ದದ್ಯಾದ್ಧನಂ ಧಾನ್ಯಂ ಮಹೀಂ ಶ್ರಿಯಂ ॥ ೧೧೭ ॥

---

೧೧೩-೧೧೫. ಅನಂತರ ಅನೇಕ ಸೂರ್ಯರಂತೆ ಹೊಳೆಯುತ್ತಿರುವ, "ವಂ ಹ್ರೀಂ" ಎಂಬ ಬೀಜಶಕ್ತಿಯುತವಾದ, ಬಂಗಾರಕ್ಕೆ ಸಮಾನವಾದ ಮೊಣಕಾಲುಗಳ ಕೆಳಭಾಗಗಳುಳ್ಳ, ಮುತ್ತಿನಂತೆ ಹೊಳೆಯುತ್ತಿರುವ ನಾಭಿಯ ಅಧೋಭಾಗವುಳ್ಳ, ದಾನಮುದ್ರೆ, ಅಭಯಮುದ್ರೆ, ಗದೆ, ಶಂಖ, ಚಕ್ರ, ಖಡ್ಗ ಮತ್ತು ಖೇಟ ಇವುಗಳನ್ನು ಕೈಗಳಲ್ಲಿ ಧರಿಸಿರುವ, ಕೋರೆಹಲ್ಲಿನ ಅಗ್ರಭಾಗದಲ್ಲಿ ಪ್ರಕಾಶಿಸುತ್ತಿರುವ ಧರಣಿಯುಳ್ಳ ಆದಿವರಾಹನನ್ನು ಸ್ಮರಿಸುತ್ತಾ ಧ್ಯಾನಿಸಬೇಕು.

೧೧೫-೧೧೬. ಈ ರೀತಿ ಧ್ಯಾನಿಸಿ ಒಂದುಲಕ್ಷಸಾರಿ ಮಂತ್ರವನ್ನು ಜಪಿಸಬೇಕು. ಜಪದ ಹತ್ತನೆಯ ಒಂದುಭಾಗದಷ್ಟು ಜೇನುತುಪ್ಪದಲ್ಲಿ ತೋಯಿಸಿದ ಕಮಲಗಳಿಂದ ಹೋಮಮಾಡಬೇಕು.

೧೧೬-೧೧೭. ಪೂರ್ವೋಕ್ತ ವೈಷ್ಣವ ಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ, ಅದರಲ್ಲಿ ಅಂಗ, ಆವರಣ, ದಿಕ್ಪಾಲಕರು, ಆಯುಧ ಇವುಗಳಿಂದ ಸಹಿತನಾದ ಸ್ವಾಮಿಯನ್ನು ಮಂತ್ರಸಿದ್ಧಿಗಾಗಿ ಪೂಜಿಸಬೇಕು. ಈ ಮಂತ್ರವನ್ನು ಜಪಮಾಡುವ ಮಾತ್ರದಿಂದ ಭೂಮಿ, ಧನ, ಧಾನ್ಯ ಮುಂತಾದ ಸಂಪತ್ತನ್ನು ಹೊಂದುವನು.

**ಸಿಂಹಾರ್ಕೇ ಸಿತಪಕ್ಷಸ್ಯಾಷ್ಟಮ್ಯಾಂ ಗವ್ಯೇಷು ಪಂಚಸು |**
**ಶಿಲಾಂ ಶುದ್ಧಾಂ ವಿನಿಕ್ಷಿಪ್ಯ ಸ್ಪೃಷ್ಟ್ವಾ ತಾಮಯುತಂ ಜಪೇತ್ || ೧೧೮ ||**

**ಉದಙ್ಮುಖಸ್ತತೋ ಮಂತ್ರೀ ತಾಂ ಶಿಲಾಂ ನಿಖನೇದ್ಭುವಿ |**
**ಭೂತಪ್ರೇತಾಹಿಚೋರಾದಿಕೃತಾಂ ಬಾಧಾಂ ನಿವಾರಯೇತ್ || ೧೧೯ ||**

**ಪ್ರಾತರ್ಭೃಗುದಿನೇ ಸಾಧ್ಯಭೂತಲಾನ್ಮೃದಮಾಹರೇತ್ |**
**ಮಂತ್ರಿತಾಂ ಮೂಲಮಂತ್ರೇಣ ವಿಭಜೇತ್ತ್ರಾಂ ತಥಾ ಪುನಃ || ೧೨೦ ||**

**ಚುಲ್ಯಾಮೇಕಾಂಶಮಾಲಿಪ್ಯಾಪ್ಯಪರಂ ಪಾಕಭಾಜನೇ |**
**ಗೋದುಗ್ಧೇ ಪರಮಾಲೋಡ್ಯ ಶೋಧಿತಾಂಸ್ತಂಡುಲಾನ್ಕ್ಷಿಪೇತ್ ||೧೨೧||**

**ಸಂಸ್ಕೃತೇಽಗ್ನೌ ಪಚೇತ್ಸಮ್ಯಕ್ಚರುಂ ಮಂತ್ರೀ ಜಪನ್ಮನುಂ |**
**ಅವತೀರ್ಯ ಚರುಂ ಪಶ್ಚಾದ್ವಹ್ನೌ ದೇಯಂ ಯಥಾವಿಧಿ || ೧೨೨ ||**

---

೧೧೮-೧೧೯. ಸಿಂಹಮಾಸದ ಶುಕ್ಲಪಕ್ಷದ ಅಷ್ಟಮೀದಿನದಲ್ಲಿ ಪಂಚಗವ್ಯದಲ್ಲಿ ಪರಿಶುದ್ಧಶಿಲೆಯನ್ನು ಸ್ಥಾಪಿಸಿ, ಅದನ್ನು ಸ್ಪರ್ಶಮಾಡಿ ಈ ಮಂತ್ರವನ್ನು ಹತ್ತುಸಾವಿರಸಾರಿ ಜಪಿಸಿ, ಉತ್ತರದಿಕ್ಕಿಗೆ ಕುಳಿತು ಆ ಶಿಲೆಯನ್ನು ಭೂಮಿಯಲ್ಲಿ ಅಗೆದು ಸ್ಥಾಪಿಸಬೇಕು. ಹಾಗೆ ಮಾಡಿದರೆ ಭೂತ, ಸರ್ಪ, ಕಳ್ಳರು ಇವರಿಂದುಂಟಾಗುವ ಪೀಡೆಪರಿಹಾರವಾಗುವುದು.

೧೨೦. ಶುಕ್ರವಾರದ ದಿನ ಪ್ರಾತಃಕಾಲದಲ್ಲಿ ಸಾಧ್ಯಕ್ಷೇತ್ರ (ವ್ಯವಸಾಯ ಮಾಡಬೇಕೆಂದಿರುವ ಭೂಮಿ) ದಿಂದ ಮಣ್ಣನ್ನು ತಂದು ಅದನ್ನು ಮೂಲಮಂತ್ರದಿಂದ ಅಭಿಮಂತ್ರಿಸಿ ಮೂರುಭಾಗಮಾಡಬೇಕು.

೧೨೧. ಅದರಲ್ಲಿ ಒಂದುಭಾಗವನ್ನು ಒಲೆಗೆ ಸವರಿ, ಮತ್ತೊಂದು ಭಾಗವನ್ನು ಅಡಿಗೆಮಾಡುವ ಪಾತ್ರೆಗೆ ಹಚ್ಚಿ, ಆ ಪಾತ್ರೆಯಲ್ಲಿ ಗೋಕ್ಷೀರವನ್ನು ತುಂಬಿ, ಕಲಕಿ, ಅದರಲ್ಲಿ ತೊಳೆದ ಅಕ್ಕಿಯನ್ನು ಹಾಕಬೇಕು.

೧೨೨. ಜಪಕರ್ತನು ಮಂತ್ರವನ್ನು ಜಪಿಸುತ್ತಾ ಅದನ್ನು ಸಂಸ್ಕೃತಾಗ್ನಿಯಲ್ಲಿ ಬೇಯಿಸಿ ಅನ್ನಮಾಡಬೇಕು. ಅನ್ನವಾದಮೇಲೆ ಅದನ್ನು ಇಳಿಸಿ ವಿಧಾನೋಕ್ತಪ್ರಕಾರ ಅಗ್ನಿಯಲ್ಲಿ ಹೋಮಮಾಡಬೇಕು.

ಸಂಪೂಜ್ಯ ಧೂಪದೀಪಾದ್ಯೈಃ ಪಶ್ಚಾದಾಜ್ಯಪ್ಲುತಂ ಚರುಂ ।
ಜುಹುಯಾತ್ಸಂಸ್ಕೃತೇ ವಹ್ನೌ ಅಷ್ಟೋತ್ತರಶತಂ ಸುಧೀಃ　　|| ೧೨೩ ||

ಏವಂ ಪ್ರಜುಹುಯಾನ್ಮಂತ್ರೀ ಕವಿವಾರೇಷು ಸಪ್ತಸು ।
ವಿರೋಧೋ ನಶ್ಯತಿ ಕ್ಷೇತ್ರೇ ಶತ್ರುಚೋರಾದ್ಯುಪದ್ರವಾಃ　　|| ೧೨೪ ||

ಭಾನೂದಯೇಽಸ್ಯಾರವಾರೇ ಸಾಧ್ಯಕ್ಷೇತ್ರಾನ್ಮೃದಂ ಪುನಃ ।
ಆದಾಯ ಪೂರ್ವವಿಧಿನಾ ಹವಿರಾಪಾದ್ಯ ಪೂರ್ವವತ್　　|| ೧೨೫ ||

ಜುಹುಯಾದೇಧಿತೇ ವಹ್ನೌ ಪೂರ್ವಸಂಖ್ಯಾಕಮಾದರಾತ್ ।
ಏವಂ ಸ ಸಪ್ತವಾರೇಷು ಜುಹುಯಾತ್ ಕ್ಷೇತ್ರಸಿದ್ಧಯೇ　　|| ೧೨೬ ||

ಜುಹುಯಾಲ್ಲಕ್ಷಸಂಖ್ಯಾಕಂ ಗವ್ಯೈಕ್ಷೀರೈವ ಸಪಾಯಸೈಃ ।
ಅಭೀಷ್ಟಭೂಮ್ಯಾಧಿಪತ್ಯಂ ಲಭತೇ ನಾತ್ರ ಸಂಶಯಃ　　|| ೧೨೭ ||

---

೧೨೩. ಧೂಪ, ದೀಪಾದಿಗಳಿಂದ ಪೂಜಿಸಿ, ಅನಂತರ ಅಭಿಘಾರಮಾಡಿ ಆ ಚರುವನ್ನು ಸಂಸ್ಕಾರಮಾಡಲ್ಪಟ್ಟ ಅಗ್ನಿಯಲ್ಲಿ ನೂರೆಂಟಾವರ್ತಿ ಹೋಮ ಮಾಡಬೇಕು.

೧೨೪. ಈ ಪ್ರಕಾರ ಏಳು ಶುಕ್ರವಾರ ಹೋಮಮಾಡಿದರೆ ಆ ಕ್ಷೇತ್ರದಲ್ಲಿನ ದೋಷವು ಮತ್ತು ಶತ್ರು ಚೋರರ ಬಾಧೆಯೂ ಸಹ ನಾಶವಾಗುವುದು.

೧೨೫-೧೨೬. ಮಂಗಳವಾರದ ದಿನ ಸೂರ್ಯೋದಯ ಕಾಲದಲ್ಲಿ ಸಾಧ್ಯ ಭೂಮಿಯಿಂದ ಮಣ್ಣನ್ನು ತಂದು ಮೇಲೆ ಹೇಳಿದ ವಿಧಾನಪ್ರಕಾರ ಹವಿಸ್ಸನ್ನು (ಹೋಮಕ್ಕೆ ಬೇಕಾದ ಅನ್ನವನ್ನು) ಮಾಡಿ ಹಿಂದಿನಂತೆ ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ನೂರೆಂಟಾವರ್ತಿ ಭಕ್ತಿಯಿಂದ ಹೋಮಮಾಡಬೇಕು. ಈರೀತಿ ಏಳು ಮಂಗಳವಾರಗಳಲ್ಲಿ ಹೋಮಮಾಡಿದರೆ ಕ್ಷೇತ್ರಸಿದ್ಧಿಯಾಗುವುದು.

೧೨೭. ಇದೇಪ್ರಕಾರವಾಗಿ ಪಾಯಸ ಸಹಿತವಾದ ಗೋಕ್ಷೀರಗಳಿಂದ ಒಂದುಲಕ್ಷ ಹೋಮಮಾಡಿದರೆ ಇಷ್ಟಭೂಮಿಯ ಆಧಿಪತ್ಯವು ಲಭಿಸುವುದು : ಸಂದೇಹವಿಲ್ಲ.

**ಉದ್ಯದೋಃ ಪರಿಘಂ ದಿವ್ಯಂ ಸಿತದಂಷ್ಟ್ರಾಗ್ರಭೂಧರಂ |**
**ಸ್ವರ್ಣಾಭಂ ಪಾರ್ಥಿವೇ ಪೀತೇ ಮಂಡಲೇ ಸುಸಮಾಹಿತಃ || ೧೨೮ ||**

**ಧ್ಯಾತ್ವಾಪ್ನೋತಿ ಮಹೀಂ ರಮ್ಯಾಂ ವರಾಹಸ್ಯ ಪ್ರಸಾದತಃ |**
**ವಾರುಣೇ ಮಂಡಲೇ ಧ್ಯಾಯೇದ್ವಾರಾಹಂ ಹಿಮಸನ್ನಿಭಂ || ೧೨೯ ||**

**ಮಹೋಪದ್ರವಶಾಂತಿಸ್ಸ್ಯಾತ್ಸಾಧಕಸ್ಯ ನ ಸಂಶಯಃ |**
**ವಶ್ಯಾರ್ಥಂ ಚ ಸದಾ ಧ್ಯಾಯೇದ್ವಹ್ನ್ಯಾಭಂ ವಹ್ನಿಮಂಡಲೇ || ೧೩೦ ||**

**ಧ್ಯಾಯೇದೇವಂ ರಿಪೂಚ್ಚಾಟೇ ಕೃಷ್ಣಾಭಂ ವಾಯುಮಂಡಲೇ |**
**ಖಮಂಡಲಗತಂ ಸ್ವಚ್ಛಂ ವಾರಾಹಂ ಸರ್ವಸಿದ್ಧಿದಂ || ೧೩೧ ||**

**ಶತ್ರುಭೂತಗ್ರಹಕ್ಷ್ವೇಡಾಮಪಪೀಡಾದಿಶಾಂತಯೇ |**
**ಅರ್ಘೀಶಸಹಿತಂ ವ್ಯೋಮ ಬಿಂದುಭೂಷಿತಮಸ್ತಕಂ || ೧೩೨ ||**

---

೧೨೮-೧೩೦. ಸಾಧಕನು ಸಮಾಧಾನ ಚಿತ್ತನಾಗಿ ಪೃಥಿವೀ ಮಯವಾದ ಪೀತಮಂಡಲದಲ್ಲಿ ಸುವರ್ಣದಂತೆ ಕಾಂತಿಯುಳ್ಳ, ಶುಭ್ರವಾದ ಕೋರೆಹಲ್ಲಿನ ಕೊನೆಯಭಾಗದಲ್ಲಿ ಭೂಮಿಯನ್ನು ಧರಿಸಿರುವ ದಿವ್ಯವರಾಹಮೂರ್ತಿಯನ್ನು ಧ್ಯಾನಿಸಿದರೆ ಅವನ ಅನುಗ್ರಹದಿಂದ ಮನೋಹರವಾದ ಭೂಮಿಯನ್ನು ಪಡೆಯುವನು. ವರುಣಮಂಡಲದಲ್ಲಿ ಹಿಮಸದೃಶನಾದ ವರಾಹಮೂರ್ತಿಯನ್ನು ಧ್ಯಾನಿಸುವವನಿಗೆ ಮಹಾದುಃಖವು ನಾಶವಾಗುವುದು : ಸಂದೇಹವಿಲ್ಲ. ಅಗ್ನಿಯಂತೆ ತೇಜಸ್ಸುಳ್ಳ, ವರಾಹಮೂರ್ತಿಯನ್ನು ವಶೀಕರಣಕ್ಕೋಸ್ಕರ ಅಗ್ನಿಮಂಡಲದಲ್ಲಿ ಯಾವಾಗಲೂ ಧ್ಯಾನಿಸಬೇಕು.

೧೩೧-೧೩೨. ಶತ್ರುಗಳನ್ನು ಹೊರಡಿಸಲು ವಾಯುಮಂಡಲದಲ್ಲಿ ಕೃಷ್ಣಸದೃಶ ತೇಜಸ್ಕನಾದ ವರಾಹಮೂರ್ತಿಯನ್ನು ಧ್ಯಾನಿಸಬೇಕು. ಆಕಾಶಮಂಡಲದಲ್ಲಿರುವ, ಸರ್ವಸಿದ್ಧಿಪ್ರದವೂ, ಸ್ವಚ್ಛವೂ ಆದ ವರಾಹನನ್ನು ಶತ್ರು, ಭೂತ, ಗ್ರಹ ಮತ್ತು ವಿಷಗಳ ಬಾಧೆಯನ್ನು ಪರಿಹರಿಸಿಕೊಳ್ಳಲು ಧ್ಯಾನಿಸಬೇಕು.

ಏಕಾಕ್ಷರೋ ವರಾಹಸ್ಯ ಮಂತ್ರಃ ಕಲ್ಪದ್ರುಮೋಽಪರಃ ।
ಪೂಜಾಹೋಮಾದಿಕಂ ಸರ್ವಮಸ್ಯಾಂ ಪೂರ್ವೋಕ್ತವಚ್ಚರೇತ್ ॥ ೧೩೩ ॥

ಸವಾಮಕರ್ಣಾ ನಿದ್ರಾಸ್ಯಾದ್ವರಾಹಾಯ ಹೃದಂತಿಮಃ ।
ತಾರಾದ್ಯೋಽ ವಸುವರ್ಣೋಽಯಂ ಸರ್ವೈಶ್ವರ್ಯಪ್ರದಾಯಕಃ ॥ ೧೩೪ ॥

ಬ್ರಹ್ಮಾಮುನಿಸ್ಸ್ಯಾದ್ಗಾಯತ್ರೀ ಛಂದೋ ವಾರಾಹಸಂಜ್ಞಕಃ ।
ದೇವಶ್ಚಂದ್ರೇಂದ್ವಬ್ಧಿನೇತ್ರೈಃ ಸರ್ವೇಣಾಂಗಕ್ರಿಯಾ ಮತಾಃ ॥ ೧೩೫ ॥

ಧ್ಯಾನಪೂಜಾಪ್ರಯೋಗಾದಿ ಪ್ರಾಗ್ವದಸ್ಯಾಪಿ ಕಲ್ಪಯೇತ್ ।
ಪ್ರಣವಾದಿ ನಮೋಽಂತಂ ಭಗವತೀತಿ ಪದಂ ತತಃ ।
ಧರಣಿದ್ವಿತಯಂ ಪಶ್ಚಾದ್ಧರೇದ್ವಯಮುದೀರಯೇತ್ ॥ ೧೩೬ ॥

---

೧೩೨-೧೩೩. (ಅರ್ಘೀಶ= ಊ, ವ್ಯೋಮ= ಹ, ಬಿಂದು= ೦) "ಓಂ ಹೂಂ" ಎಂಬುದು ಇನ್ನೊಂದು ಏಕಾಕ್ಷರ ವರಾಹಮಂತ್ರವು. ಇದು ಕಲ್ಪವೃಕ್ಷಸಮಾನವಾದುದು. ಹಿಂದಿನ ಮಂತ್ರಕ್ಕೆ ಹೇಳಿರುವಂತೆ ಪೂಜೆ, ಹೋಮ ಮುಂತಾದವೆಲ್ಲವನ್ನೂ ಇಲ್ಲಿಯೂ ಆಚರಿಸಬೇಕು.

೧೩೪. (ವಾಮಕರ್ಣ= ಊ, ನಿದ್ರಾ= ಭ) "ಓಂ ಭೂವರಾಹಾಯ ನಮಃ" ಎಂಬುದು ಅಷ್ಟಾಕ್ಷರ ವರಾಹಮಂತ್ರವು. ಇದು ಜಪಿಸುವವರಿಗೆ ಸಕಲೈಶ್ವರ್ಯಗಳನ್ನೂ ಕೊಡುತ್ತದೆ.

೧೩೫-೧೩೬. ಈ ಮಂತ್ರಕ್ಕೆ ಬ್ರಹ್ಮನು ಋಷಿ, ಗಾಯತ್ರಿಯೇ ಛಂದಸ್ಸು, ವರಾಹನು ದೇವತೆಯು. ಈ ಮಂತ್ರದಲ್ಲಿನ "ಓಂ" ಎಂಬ ಒಂದಕ್ಷರದಿಂದ ಹೃದಯ, "ಭೂ" ಎಂಬ ಒಂದು ವರ್ಣದಿಂದ ಶಿರಸ್ಸು, "ವರಾಹಾಯ" ಎಂಬ ನಾಲ್ಕು ಅಕ್ಷರಗಳಿಂದ ಶಿಖೆ, "ನಮಃ" ಎಂಬ ಎರಡು ಅಕ್ಷರಗಳಿಂದ ಕವಚ, ಸಂಪೂರ್ಣ ಮಂತ್ರದಿಂದ ಅಸ್ತ್ರ ಈರೀತಿ ಪಂಚಾಂಗ ನ್ಯಾಸವನ್ನಾಚರಿಸಬೇಕು. ಧ್ಯಾನ ಮತ್ತು ಪೂಜೆಗಳ ವಿಧಾನವನ್ನು ಹಿಂದಿನ ಮಂತ್ರಕ್ಕೆ ಹೇಳಿರುವಂತೆ ಇದಕ್ಕೂ ತಿಳಿಯಬೇಕು.

ಏಕೋನವಿಂಶತ್ಯರ್ಣಾಢ್ಯೋ ಮಂತ್ರೋ ಮುಕ್ತಿಪ್ರಿಯಾಂತಿಮಃ |
ವರಾಹೋಸ್ಯ ಮುನಿಶ್ಛಂದೋ ಗಾಯತ್ರೀ ನಿವೃದಾದಿಕಾ || ೧೩೭ ||

ದೇವತಾ ಧರಣೀ ಬೀಜಂ ತಾರಃ ಶಕ್ತಿರ್ವಸುಪ್ರಿಯಾ |
ರಾಮವೇದಾಗ್ನಿಬಾಣಾಕ್ಷಿನೇತ್ರಾರ್ಣೈರಂಗಕಲ್ಪನಂ || ೧೩೮ ||

ಶ್ಯಾಮಾಂ ಚಿತ್ರವಿಭೂಷಾಢ್ಯಾಂ ಪದ್ಮಸ್ಥಾಂ ತುಂಗಸುಸ್ತನೀಂ |
ನಿಲಾಂಬುಜದ್ವಯಂ ಶಾಲಿಮಂಜರೀಂ ಚ ಶುಕಂ ಕರೈಃ || ೧೩೯ ||

ದಧತೀಂ ಚಿತ್ರವಸನಾಂ ಧರಾಂ ಭಗವತೀಂ ಸ್ಮರೇತ್ |
ಏವಂ ಧ್ಯಾತ್ವಾ ಜಪೇಲ್ಲಕ್ಷಂ ದಶಾಂಶಂ ಪಾಯಸೇನ ತು || ೧೪೦ ||

---

೧೩೬-೧೩೭. "ಓಂ ನಮೋ ಭಗವತ್ಯೈ ಧರಣ್ಯೈ ಧರಣಿಧರೇ ಧರೇ ಸ್ವಾಹಾ" ಎಂಬುದು ಹತ್ತೊಂಬತ್ತು ವರ್ಣಗಳುಳ್ಳ ಧರಣಿಮಂತ್ರವು.

೧೩೭-೧೩೮. ಇದಕ್ಕೆ ವರಾಹನೇ ಋಷಿ, ನಿವೃದಾದಿ ಗಾಯತ್ರಿಯು ಛಂದಸ್ಸು, ಧರಣಿಯು ದೇವತೆಯು ಓಂ ಎಂಬುದು ಬೀಜ, 'ಸ್ವಾಹಾ' ಎಂಬುದು ಶಕ್ತಿಯು.

೧೩೮. ಈ ಮಂತ್ರದ ವರ್ಣಗಳಲ್ಲಿ ಕ್ರಮವಾಗಿ 3, 4, 3, 5, 2, 2, ವರ್ಣಗಳನ್ನು ಪ್ರತ್ಯೇಕವಾಗಿ ಅನುಸಂಧಾನಮಾಡಿಕೊಂಡು ಅದರಿಂದ ಹೃದಯಾದಿ ಷಡಂಗಗಳನ್ನು ನ್ಯಾಸಮಾಡಬೇಕು.

೧೩೯-೧೪೦. ಶ್ಯಾಮವರ್ಣಯುಕ್ತಳು, ವಿಚಿತ್ರಾಭರಣಗಳಿಂದಲಂಕೃತಳು, ಪದ್ಮಸಂಸ್ಥಿತಳು, ಸಮಿಾಚೀನವಾದ ಉನ್ನತ ಸ್ತನಗಳುಳ್ಳವಳು, ಎರಡು ನೀಲಪದ್ಮಗಳು, ಭತ್ತದ ತೆನೆ, ಗಿಳಿ ಇವುಗಳನ್ನು ಕೈಗಳಲ್ಲಿ ಧರಿಸಿರುವವಳು, ವಿಚಿತ್ರ ವಸ್ತ್ರಗಳನ್ನುಟ್ಟಿರುವವಳೂ ಆದ ಭಗವದ್ಧರಾದೇವಿಯನ್ನು ಚಿಂತಿಸಬೇಕು.

ಸಾಜ್ಯೇನ ಜುಹುಯಾನ್ಮಂತ್ರೀ ವಿಷ್ಣೋಃ ಪೀಠೇ ಸಮರ್ಚಯೇತ್ ।
ಮೂರ್ತಿಂ ಸಂಕಲ್ಪ್ಯ ಮೂಲೇನ ತಸ್ಯಾಂ ವಸುಮತೀಂ ಯಜೇತ್ ॥

ಅಂಗಾನಿ ಪೂರ್ವಮಾರಾಧ್ಯ ಭೂವಹ್ನಿಜಲಮಾರುತಾನ್ ।
ದಿಕ್ಪಾತ್ರೇಷು ಚ ಸಂಪೂಜ್ಯ ಕೋಣಪತ್ರೇಷು ತತ್ಕಲಾಃ । ॥ ೧೪೨ ॥

ನಿವೃತ್ತಿಶ್ಚ ಪ್ರತಿಷ್ಠಾ ಚ ವಿದ್ಯಾ ಶಾಂತಿಶ್ಚ ತತ್ಕಲಾಃ ।
ಇಂದ್ರಾದ್ಯಾನಪಿ ವಜ್ರಾದೀನ್ಪೂಜಯೇತ್ತದನಂತರಂ ॥ ೧೪೩ ॥

ಏವಂ ಸಿದ್ಧೇ ಮನೌ ಮಂತ್ರೀ ಸಾಧಯೇದಿಷ್ಟಮಾತ್ಮನಃ ।
ಧರಣೀಂ ಪ್ರಭಜನ್ನೇವಂ ಪಶುರತ್ನಾಂಬರಾದಿಭಿಃ ॥ ೧೪೪ ॥

ಧರಣ್ಯಾವಲ್ಲಭಃ ಸಸ್ಯಾತ್ಸುಖೀ ಜೀವೇಚ್ಛತಂ ಸಮಾಃ ।
ತ್ರೈಲೋಕ್ಯಮೋಹಿನೀಮಂತ್ರೋ ಜಗನ್ನಾಥಸ್ಯ ಕೀರ್ತ್ಯತೇ ॥ ೧೪೫ ॥

---

೧೪೦-೧೪೧. ಈರೀತಿ ಧ್ಯಾನಿಸಿ ಈ ಮಂತ್ರವನ್ನು ಒಂದುಲಕ್ಷ ಜಪ ಮಾಡಬೇಕು. ಅದರಲ್ಲಿ ಹತ್ತನೆಯ ಒಂದುಭಾಗ ಎಂದರೆ ಹತ್ತುಸಾವಿರ ಹೋಮವನ್ನು ಘೃತಸಹಿತ ಪಾಯಸದಿಂದ ಮಾಡಬೇಕು. ವಿಷ್ಣು ಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ, ಅದರಲ್ಲಿ ವಸುಮತಿಯನ್ನು ಪೂಜಿಸಬೇಕು.

೧೪೨. ಮೊದಲು ಅಂಗಗಳನ್ನು ಪೂಜಿಸಿ ಪೂರ್ವಾದಿ ದಿಕ್ಕುಗಳಲ್ಲಿ ಭೂ, ವಹ್ನಿ, ಜಲ, ಮಾರುತಗಳನ್ನೂ, ಆಗ್ನೇಯಾದಿ ಕೋಣಗಳಲ್ಲಿ ಅದರ ಕಲೆಗಳನ್ನೂ ಪೂಜಿಸಬೇಕು.

೧೪೩. ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ ಇವು ಅದರ ಕಲೆಗಳು. ಅನಂತರ ಇಂದ್ರಾದಿ ದಿಕ್ಪಾಲಕರನ್ನೂ, ಅವರ ವಜ್ರಾದ್ಯಾಯುಧಗಳನ್ನೂ ಪೂಜಿಸಬೇಕು.

೧೪೪-೧೪೫. ಈರೀತಿಯಾಗಿ ಅನುಷ್ಠಾನಮಾಡಿ ಸಿದ್ಧಿಯನ್ನು ಪಡೆದ ಮಂತ್ರಿಯು ತನ್ನ ಇಷ್ಟಾರ್ಥವನ್ನೆಲ್ಲಾ ಸಾಧಿಸುವನು. ಧರಣೀದೇವಿಯನ್ನು ಈರೀತಿಯಾಗಿ ಸೇವಿಸಿದವನು ಪಶು, ರತ್ನ, ವಸ್ತ್ರ ಮುಂತಾದುವುಗಳಿಂದ ಸುಖ ಪಡುತ್ತಾ ದೊರೆಯಾಗಿ ನೂರುವರ್ಷಗಳು ಜೀವಿಸುವನು. ಜಗನ್ನಾಥನ ತ್ರೈಲೋಕ್ಯಮೋಹನ ಮಂತ್ರವು ಹೇಳಲ್ಪಡುತ್ತದೆ.

ತಾರಃ ಕಾಮೋ ರಮಾಬೀಜಂ ಹೃದಂತೇ ಪುರುಷೋತ್ತಮ ।
ಶ್ರೀಕಂಠಾಪ್ರತಿರೂಪಾಂತೇ ಲಕ್ಷ್ಮೀತಿ ಚ ನಿವಾಸ ಚ ॥ ೧೪೬ ॥

ಸಕಲಾಂತೇ ಜಗತ್ಪಶ್ಚಾತ್ ಕ್ಷೋಭಣೇತಿ ಪದಂ ವದೇತ್ ।
ಸರ್ವಸ್ತ್ರೀಹೃದಯಾಂತೇ ತು ವಿದಾರಣಪದಂ ವದೇತ್ ॥ ೧೪೭ ॥

ತತಸ್ತ್ರಿಭುವನಾಂತಂ ತು ಮದೋನ್ಮಾದಕರೇತಿ ಚ ।
ಸುರಾಸುರಾಂತೇ ಮನುಜಸುಂದರೀಜನಶಬ್ದತಃ ॥ ೧೪೮ ॥

ಮನಾಂಸಿ ತಾಪಯದ್ವಂದ್ವಂ ದೀಪಯದ್ವಿತಯಂ ತತಃ ।
ಶೋಷಯದ್ವಿತಯಂ ಪಶ್ಚಾನ್ಮಾರಯದ್ವಿತಯಂ ತತಃ ॥ ೧೪೯ ॥

ಸ್ತಂಭಯದ್ವಿತಯಂ ಭೂಯೋ ಮೋಹಯದ್ವಿತಯಂ ತತಃ ।
ದ್ರಾವಯದ್ವಿತಯಂ ತಾವದಾಕರ್ಷಯಯುಗಂ ತತಃ ॥ ೧೫೦ ॥

ಸಮಸ್ತಪರಮೋ ಯೇನ ಸುಭಗೇನ ಚ ಸಂಯುತಂ ।
ಸರ್ವಸೌಭಾಗ್ಯಶಬ್ದಾಂತೇ ಕರಸರ್ವಪದಂ ವದೇತ್ ॥ ೧೫೧ ॥

---

೧೪೬-೧೫೫. "ತಾರಃ...." ಇತ್ಯಾದಿ ಒಂಬತ್ತನೆಯ ಶ್ಲೋಕಗಳಿಂದ ಇನ್ನೂರು ವರ್ಣಗಳನ್ನೊಳಗೊಂಡ ತ್ರೈಲೋಕ್ಯಮೋಹನ ನಾಮಕವಾದ ಮಹಾಮಂತ್ರವು ಸಂಗ್ರಹಿಸಲ್ಪಟ್ಟಿದೆ. ಅದು ಯಾವುದೆಂದರೆ :—"ಓಂ ಕ್ಲೀಂ ಶ್ರೀಂ ನಮಃ ಪುರುಷೋತ್ತಮ ಶ್ರೀಕಂಠಾಪ್ರತಿರೂಪ ಲಕ್ಷ್ಮೀನಿವಾಸ ಸಕಲ ಜಗತ್‌ಕ್ಷೋಭಣ ಸರ್ವಸ್ತ್ರೀಹೃದಯವಿದಾರಣ ತ್ರಿಭುವನಮದೋನ್ಮಾದಕರ ಸುರಾಸುರಮನುಜಸುಂದರೀಜನಮನಾಂಸಿ ತಾಪಯ ತಾಪಯ ದೀಪಯ ದೀಪಯ ಶೋಷಯ ಶೋಷಯ ಮಾರಯ ಮಾರಯ ಸ್ತಂಭಯ ಸ್ತಂಭಯ ಮೋಹಯ ಮೋಹಯ ದ್ರಾವಯ ದ್ರಾವಯಾಕರ್ಷಯಾಕರ್ಷಯ ಸಮಸ್ತ ಪರಮಸುಭಗ ಸರ್ವಸೌಭಾಗ್ಯಕರ ಸರ್ವಕಾಮಪ್ರದಾಮುಕಂ ಹನಹನ

ಕಾಮಪ್ರದಾಪದಮುಬ್ರಹ್ಮಾ ಸೇಂದುರ್ಹನಯುಗಂ ತತಃ |
ಚಕ್ರೇಣ ಗದಯಾ ಪಶ್ಚಾತ್ಖಡ್ಗೇನ ತದನಂತರಂ || ೧೫೨ ||

ಸರ್ವಬಾಣೈರ್ಭೇದಿಯುಗಂ ಪಾಶೇನಾಂತೇ ಕಟದ್ವಯಂ |
ಅಂಕುಶೇನೇತಿ ಸಂಪ್ರೋಚ್ಯ ತಾಡಯದ್ವಿತಯಂ ಪುನಃ || ೧೫೩ ||

ಕುರು ಶಬ್ದದ್ವಯಮಥೋ ಕಿಂ ತಿಷ್ಠಸಿ ಪದಂ ವದೇತ್ |
ತಾವದ್ಯಾವತ್ಪದಸ್ಯಾಂತೇ ಸಮಾಹಿತಮನಂತರಂ |
ತತೋ ಮೇ ಸಿದ್ಧಮಾಭಾಷ್ಯ ಭವತ್ಯಂತೇ ಚ ವರ್ಮ ಫಟ್ || ೧೫೪ ||

ಹೃದಂತೋಯಂ ಮಹಾಮಂತ್ರೋ ದ್ವಿಶತಾರ್ಣಸ್ಸಮೀರಿತಃ |
ಜೈಮಿನಿರ್ಮುನಿರಸ್ಯೋಕ್ತಶ್ಛಂದಶ್ಚಾಮಿತಮೀರಿತಂ || ೧೫೫ ||

ದೇವತಾ ಜಗತಾಂ ಮೋಹೋ ಜಗನ್ನಾಥಃ ಪ್ರಕೀರ್ತಿತಃ |
ಕಾಮೋ ಬೀಜಂ ರಮಾ ಶಕ್ತಿರ್ವಿನಿಯೋಗೋಽಖಿಲಾಪ್ತಯೇ || ೧೫೬ ||

ಪುರುಷೋತ್ತಮ ತ್ರಿಭುವನೋನ್ಮಾದಕರ ವರ್ಮ ಚ |
ಹೃದಯಂ ಕೀರ್ತಿತಂ ಪಶ್ಚಾಜ್ಜಗತ್ ಕ್ಷೋಭಣಶಬ್ದತಃ || ೧೫೭ ||

---

ಚಕ್ರೇಣ ಗದಯಾ ಖಡ್ಗೇನ ಸರ್ವಬಾಣೈಃ ಭೇದಿ ಭೇದಿ ಪಾಶೇನ ಕಟ ಕಟಾಂಕುಶೇನ ತಾಡಯ ತಾಡಯ ಕುರುಕುರು ಕಿಂ ತಿಷ್ಠಸಿ ತಾವದ್ಯಾವತ್ಸಮಾಹಿತಂ ಮೇ ಸಿದ್ದಂ ಭವತಿ ಹುಂ ಫಟ್ ನಮಃ '' ಇದೇ ತ್ರೈಲೋಕ್ಯಮೋಹನ ಮಹಾಮಂತ್ರವು.

೧೫೫-೧೫೬. ಈ ಮಂತ್ರಕ್ಕೆ ಜೈಮಿನಿಯು ಋಷಿಯು. ಅಮಿತ ಛಂದಸ್ಸು. ಜಗನ್ಮೋಹಕನಾದ ಜಗನ್ನಾಥನೇ ದೇವತೆಯು. '' ಕ್ಲೀಂ '' ಎಂಬುದೇ ಬೀಜ. '' ಹ್ರೀಂ '' ಎಂಬುದೇ ಶಕ್ತಿಯು. ಸಕಲೇಷ್ಟಾರ್ಥ ಲಾಭಕ್ಕಾಗಿ ವಿನಿಯೋಗಿಸಲ್ಪಡಬೇಕು. ಎಂದರೆ ಜಪಾದಿಗಳನ್ನು ಮಾಡಬೇಕೆಂದು ತಾತ್ಪರ್ಯ.

೧೫೭-೧೬೫. '' ಓಂ ಪುರುಷೋತ್ತಮ ತ್ರಿಭುವನೋನ್ಮಾದಕರ ಹುಂ ಫಟ್ ನಮಃ '' ಎಂದು ಹೃದಯ, '' ಓಂ ಜಗತ್ ಕ್ಷೋಭಣಲಕ್ಷ್ಮೀದಯಿತ

ಲಕ್ಷ್ಮೀದಯಿತವರ್ಮಾಂತಃ ಶಿರಃ ಪ್ರೋಕ್ತಂ ಶಿಖಾ ಪುನಃ ।
ಮನ್ಮಥೋತ್ತಮಸಂಯುಕ್ತಮಂಗಜೇ ಪದಮೀರಯೇತ್ ॥ ೧೫೮ ॥

ಕಾಮದಾಯಿನಿ ಹುಂ ಪ್ರೋಚ್ಯ ನ್ಯಸೇದ್ವರ್ಮ ತತಃ ಪರಂ ।
ಪರಮಸುಭಗಾಂತೇ ತು ಸರ್ವೇತಿ ಪದಮೀರಯೇತ್ ॥ ೧೫೯ ॥

ಸೌಭಾಗ್ಯಕರವರ್ಮಾಂತೇ ಕವಚಂ ಪರಿಕೀರ್ತಿತಂ ।
ಸುರಾಸುರಾಂತೇ ಮನುಜಸುಂದರೀತಿ ಪದಂ ವದೇತ್ ॥ ೧೬೦ ॥

ಹೃದಯಾಂತೇ ವಿದಾಪಶ್ಚಾದ್ರಣ ಸರ್ವಪದಂ ವದೇತ್ ।
ತತಃ ಪ್ರಹರಣಧರ ಸರ್ವಕಾಮುಕತತ್ಪರಂ ॥ ೧೬೧ ॥

ಹನಯುಗ್ಮಂ ಚ ಹೃದಯಂ ಬಂಧನಾನಿ ತತೋ ವದೇತ್ ।
ಆಕರ್ಷಯದ್ವಯಂ ಪಶ್ಚಾನ್ಮಹಾಬಲಪದಂ ತತಃ ॥ ೧೬೨ ॥

ವರ್ಮ ಚಾಸ್ತ್ರಂ ಸಮಾಖ್ಯಾತಂ ನೇತ್ರಂ ಸ್ಯಾತ್ತದನಂತರಂ ।
ವದೇತ್ತ್ರಿಭುವನ ಪಶ್ಚಾಚ್ಚರ ಸರ್ವಜನೇತಿ ಚ ॥ ೧೬೩ ॥

ಮನಾಂಸಿ ಹರ ಯುಗ್ಮಾಂತೇ ದಾರಯದ್ವಿತಯಂ ಚ ಮೇ ।
ವಶಮಾನಯ ವರ್ಮಾಂತೇ ನೇತ್ರಮಂತ್ರಃ ಸಮೀರಿತಃ ॥ ೧೬೪ ॥

---

ಹುಂ ಫಟ್ ನಮಃ" ಎಂದು ಶಿರಸ್ಸು, "ಓಂ ಮನ್ಮಥೋತ್ತಮಾಂಗಜೇ ಕಾಮದಾಯಿನಿ ಹುಂ ಫಟ್ ನಮಃ" ಎಂದು ಶಿಖೆ, "ಓಂ ಪರಮಸುಭಗ ಸರ್ವಸೌಭಾಗ್ಯಕರ ಹುಂ ಪಟ್ ನಮಃ" ಎಂದು ಕವಚ, "ಓಂ ಸುರಾಸುರ ಮನುಜ ಸುಂದರೀ ಹೃದಯ ವಿದಾರಣಸರ್ವಪ್ರಹರಣಧರ ಸರ್ವಕಾಮುಕಹನಹನ ಹೃದಯಂ ಬಂಧನಾನಿ ಆಕರ್ಷಯಾಕರ್ಷಯ ಮಹಾಬಲ ಹುಂ ಫಟ್ ನಮಃ" ಎಂದು ಅಸ್ತ್ರ, ಅನಂತರ "ಓಂ ತ್ರಿಭುವನಚರ ಸರ್ವಜನಮನಾಂಸಿ ಹರಹರ ದಾರಯ ದಾರಯ ಮೇ ವಶಮಾನಯ ಹುಂ ಫಟ್ ನಮಃ" ಎಂದು ನೇತ್ರ ಈ ಪ್ರಕಾರವಾಗಿ ಉಕ್ತ ಓಂಕಾರಾದಿ ನಮೋಂತ ಮಂತ್ರಗಳಿಂದ ಷಡಂಗ ನ್ಯಾಸಮಾಡಬೇಕು.

ಷಡಂಗಮಂತ್ರಾಸ್ತ್ರಾರಾದ್ಯಾಃ ಫಟ್ ನಮೋಂತಾಃ ಪ್ರಕೀರ್ತಿತಾಃ ।
ತಾರಸ್ತ್ರೈಲೋಕ್ಯಶಬ್ದಾಂತೇ ಮೋಹನೇತಿ ಪದಂ ವದೇತ್ ॥ ೧೬೫ ॥

ಹೃಷೀಕೇಶೇತಿ ಸಂಪ್ರೋಚ್ಯಾಪ್ರತಿರೂಪಾದಿಶಬ್ದತಃ ।
ಮನ್ಮಥಾನಂತರಂ ಸರ್ವಸ್ತ್ರೀಣಾಂ ಹೃದಯಮಾರಯೇತ್ ॥ ೧೬೬ ॥

ಆಕರ್ಷಯಪದಾದಾಗಚ್ಛಾಗಚ್ಛ ಹೃದಯಾಂತಿಮಃ ।
ಅನೇನ ವ್ಯಾಪಕಂ ಕೃತ್ವಾ ಜಗನ್ನಾಥಂ ಸ್ಮರೇತ್ಸುಧೀಃ ॥ ೧೬೭ ॥

ಕ್ಷೀರಾಬ್ಧೇಸ್ತು ತಟೇ ರಮ್ಯಂ ಸುರದ್ರುಮಲತಾಂಚಿತಂ ।
ಉದ್ಯದರ್ಕಾಭುಜಾಲಾಭಂ ಸ್ವಧಾಮ್ನೋಜ್ಜ್ವಲದಿಙ್ಮುಖಂ ॥ ೧೬೮ ॥

ಪ್ರಸೂನಾವಳಿಸೌರಭ್ಯಮಾದ್ಯನ್ಮಧುಕರಾರವಂ ।
ದಿವ್ಯವಾತೋಚ್ಚಲತ್ಕಂಜಪರಾಗೋದ್ಧೂಲಿತಾಂಬರಂ ॥ ೧೬೯ ॥

---

೧೬೫-೧೬೭. "ಓಂ ತ್ರೈಲೋಕ್ಯ ಮೋಹನ ಹೃಷೀಕೇಶಾಪ್ರತಿರೂಪ ಮನ್ಮಥ ಸರ್ವಸ್ತ್ರೀಣಾಂ ಹೃದಯಮಾಕರ್ಷಯಾಗಚ್ಛಾಗಚ್ಛ ನಮಃ" ಎಂಬ ಮಂತ್ರದಿಂದ ಸರ್ವಾಂಗನ್ಯಾಸಮಾಡಿ ಜಗನ್ನಾಥನನ್ನು ಧ್ಯಾನಿಸಬೇಕು.

೧೬೮-೧೭೩. ಕ್ಷೀರಸಮುದ್ರದ ದಡದಲ್ಲಿ ಮನೋಹರವು, ಕಲ್ಪವೃಕ್ಷದ ಬಳ್ಳಿಗಳಿಂದ ಯುಕ್ತವೂ ಆದ, ಉದಯಿಸುತ್ತಿರುವ ಸೂರ್ಯಕಿರಣಗಳ ರಾಶಿಯಂತೆ ಹೊಳೆಯುತ್ತಿರುವ, ತನ್ನ ಕಾಂತಿಯಿಂದಲೇ ದಿಕ್ಕುಗಳನ್ನು ಬೆಳಗುತ್ತಿರುವ, ಪುಷ್ಪ ಸಮೂಹಗಳ ಸೌರಭ್ಯದಿಂದ ಮದಿಸಿ ಝೇಂಕಾರಮಾಡುತ್ತಿರುವ ದುಂಬಿಗಳುಳ್ಳ, ದಿವ್ಯವಾದ ಗಾಳಿಯಿಂದ ಹಾರುತ್ತಿರುವ ಪದ್ಮಪರಾಗದಿಂದ ತುಂಬಿದ ಆಕಾಶವುಳ್ಳ, ಸ್ವರ್ಗಲೋಕದ ಸ್ತ್ರೀಯರ ಗಾನಮಾಧುರ್ಯದಿಂದ ಮನೋಹರವಾಗಿರುವ ತೋಟವನ್ನು ಅನುಸಂಧಾನಮಾಡಬೇಕು. ಅದರೊಳಗೆ ಮಣಿ ಸಮೂಹದಿಂದ ಪ್ರಕಾಶಮಾನವಾದ ತೋರಣಗಳುಳ್ಳ ಮಂಟಪದಲ್ಲಿ ಪ್ರಕಾಶಮಾನವಾದ ಮುತ್ತಿನ ಗೊಂಚಲುಗಳಿಂದ ವಿರಾಜಿಸುತ್ತಿರುವ ಡೇರ (ವಸ್ತ್ರಗೃಹ)

ಸ್ವರ್ವಧೂಗೀತಮಾಧುರ್ಯಾಭಿರಾಮಂ ಚಿಂತಯೇದ್ವನಂ ।
ತದಂತರ್ಮಣಿಸಂಪತ್ತಿಸ್ಫುರತ್ತೋರಣಮಂಡಪೇ ॥ ೧೭೦ ॥

ವಿಲಸನ್ಮೌಕ್ತಿಕೋದ್ದಾಮದಾಮರಾಜದ್ವಿತಾನಕೇ ।
ಮಾಣಿಕ್ಯವೇದ್ಯಾದಿವಿಯುಕ್ತಿಕಿರೀಟಾಗ್ರಸಮರ್ಚಿತೇ ॥ ೧೭೧ ॥

ದಿವ್ಯಸಿಂಹಾಸನೇ ವಿಪ್ರ ಸಮಾಸೀನಂ ಸ್ಮರೇದ್ವಿಭುಂ ।
ಶಂಖಪಾಶೇಷು ಚಾಪಾನಿ ಮುಸಲಂ ನಂದಕಂ ಗದಾಂ ॥ ೧೭೨ ॥

ಅಂಕುಶಂ ದಧತಂ ದೋರ್ಭಿಃ ಶ್ಲಿಷ್ಟೇ ಕಮಲಯೋರಸಿ ।
ಪಶ್ಯತ್ಯಂಕಸ್ಥಯಾಂಭೋಜಶ್ರಿಯಾ ರಾಗೋಲ್ಲಸದ್ದೃಶಾ ॥ ೧೭೩ ॥

ಧ್ಯಾತ್ವೈವಂ ಪ್ರಜಪೇಲ್ಲಕ್ಷಚತುಷ್ಕಂ ತದ್ದಶಾಂಶತಃ ।
ಕುಂಡೇರ್ಧಚಂದ್ರೇ ಪದ್ಮೈರ್ವಾ ಜಾತೀಪುಷ್ಪೈಶ್ಚ ಹೋಮಯೇತ್ ೧೭೪

ಯಾಗಭೂಮಿಂ ತಥಾತ್ಮಾನಂ ಯಾಗೋಪಕರಣಂ ತಥಾ ।
ಪೂಜಯಿಷ್ಯನ್ಜಗನ್ನಾಥಂ ಗಾಯತ್ರ್ಯಾ ಪ್ರೋಕ್ಷಯೇದ್ಬುಧಃ ॥ ೧೭೫ ॥

---

ದಲ್ಲಿ ಮಾಣಿಕ್ಯ ಮುಂತಾದುವುಗಳಿಂದ ಯುಕ್ತವಾದ ಕಿರೀಟಾಗ್ರಗಳಿಂದ ಪೂಜಿತವಾದ ದಿವ್ಯಸಿಂಹಾಸನದಲ್ಲಿ ಕುಳಿತಿರುವ, ಶಂಖ, ಪಾಶ, ಬಾಣ, ಧನುಸ್ಸು, ಮುಸಲ, ನಂದಕ, ಗದೆ ಮತ್ತು ಅಂಕುಶ ಇವುಗಳನ್ನು ಕೈಗಳಲ್ಲಿ ಧರಿಸಿರುವ, ವಕ್ಷಃಸ್ಥಳದಲ್ಲಿ ಲಕ್ಷ್ಮಿಯಿಂದಾಲಿಂಗಿತನು, ತೊಡೆಯಮೇಲೆ ಕುಳಿತಿರುವ ಶ್ರೀದೇವಿಯ ಪ್ರೇಮದೃಷ್ಟಿಪಾತ್ರನೂ ಆಗಿರುವ ಸ್ವಾಮಿಯನ್ನು ಧ್ಯಾನಿಸಬೇಕು.

೧೭೪. ಈರೀತಿ ಧ್ಯಾನಿಸಿ ಈ ಮಂತ್ರವನ್ನು ನಾಲ್ಕುಲಕ್ಷ ಜಪಮಾಡಿ ಅದರ ಹತ್ತನೆಯ ಒಂದುಭಾಗದಷ್ಟು ಅರ್ಧಚಂದ್ರಾಕಾರವಾದ ಕುಂಡದಲ್ಲಿ ಪದ್ಮ ಅಥವಾ ಜಾಜೀ ಹೂವುಗಳಿಂದ ಹೋಮಮಾಡಬೇಕು.

೧೭೫. ಜಗನ್ನಾಥನನ್ನು ಪೂಜಿಸುವವನಾಗಿ ಯಾಗಮಾಡತಕ್ಕ ಸ್ಥಳ, ಕರ್ತೃ, ಯಾಗೋಪಯುಕ್ತಪದಾರ್ಥಗಳು ಇವನ್ನು ಜ್ಞಾನಿಯು ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಬೇಕು.

ತ್ರೈಲೋಕ್ಯಮೋಹನಾಯಾಂತೇ ವಿದ್ಮಹೇ ಪದಮೀರಯೇತ್ ।
ಸ್ಮರಾಯ ಧೀಮಹೀತ್ಯುಕ್ತ್ವಾ ತನ್ನೋವಿಷ್ಣುಃ ಪ್ರಚೋದಯಾತ್ ॥೧೭೬॥

ಗಾಯತ್ರ್ಯೇಷಾ ಸಮಾಖ್ಯಾತಾ ಸರ್ವಶುದ್ಧಿಕರೀ ಪರಾ ।
ಕಲ್ಪಯೇದಾಸನಂ ಪೀಠೇ ಪೂರ್ವೋಕ್ತೇ ವೈಷ್ಣವೇ ಸುಧೀಃ ॥ ೧೭೭ ॥

ಪಕ್ಷಿರಾಜಾಯ ತದ್ವಂದ್ವಂ ಪೀಠಮಂತ್ರೋಯಮೀರಿತಃ ।
ಮೂರ್ತಿಂ ಸಂಕಲ್ಪ್ಯ ಮೂಲೇನ ತಸ್ಯಾಮಾವಾಹಯೇದತಃ ॥ ೧೭೮ ॥

ನ್ಯಾಪಕನ್ಯಾಸಮಂತ್ರೇಣ ತತಃ ಸಂಪೂಜ್ಯ ಭಕ್ತಿತಃ ।
ಶ್ರೀವತ್ಸಾಯ ಹೃದಂತೇನ ಶ್ರೀವತ್ಸಂ ಸ್ತನಯೋರ್ಯಜೇತ್ ॥ ೧೭೯ ॥

ಕೌಸ್ತುಭಾಯ ಹೃದಂತೇನ ಯಜೇದ್ವಕ್ಷಸಿ ಕೌಸ್ತುಭಂ ।
ಪೂಜಯೇದ್ವನಮಾಲಾಯೈ ಹೃದಂತೇನ ಗಲೇ ಚ ತಾಂ ॥ ೧೮೦ ॥

---

೧೭೬-೧೭೭. "ತ್ರೈಲೋಕ್ಯಮೋಹನಾಯ ವಿದ್ಮಹೇ ಸ್ಮರಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್" ಎಂಬೀ ಮಂತ್ರವೇ ಉತ್ತಮವಾದ ಸಕಲ ಶುದ್ಧಿಕರ ಗಾಯತ್ರಿಯೆಂದು ಹೇಳಲ್ಪಟ್ಟಿದೆ.

೧೭೭-೧೭೯. ಪೂರ್ವೋಕ್ತ ವೈಷ್ಣವಪೀಠದಲ್ಲಿ ಆಸನವನ್ನು ಕಲ್ಪಿಸಬೇಕು. ಅದಕ್ಕೆ "ಪಕ್ಷಿರಾಜಾಯ ಸ್ವಾಹಾ" ಎಂಬ ಮಂತ್ರವನ್ನು ಹೇಳಬೇಕು. ಇದೇ ಪೀಠಮಂತ್ರವೆಂದುಕ್ತವಾಗಿದೆ. ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ ಅದರಲ್ಲಿ ಮಂತ್ರದೇವತೆಯನ್ನು ಆವಾಹನೆಮಾಡಿ ಸರ್ವಾಂಗನ್ಯಾಸಮಂತ್ರದಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು. "ಶ್ರೀವತ್ಸಾಯ ನಮಃ" ಎಂದು ಸ್ತನಗಳಲ್ಲಿ ಶ್ರೀವತ್ಸವನ್ನು ಪೂಜಿಸಬೇಕು.

೧೮೦. "ಕೌಸ್ತುಭಾಯ ನಮಃ" ಎಂದು ವಕ್ಷಃ ಸ್ಥಳದಲ್ಲಿ ಕೌಸ್ತುಭವನ್ನೂ "ವನಮಾಲಾಯೈ ನಮಃ" ಎಂದು ಕುತ್ತಿಗೆಯಲ್ಲಿ ವನಮಾಲೆಯನ್ನೂ ಪೂಜಿಸಬೇಕು.

ಕರ್ಣಿಕಾಯಾಂ ತತೋಭ್ಯರ್ಚೇದ್ವಿಧಿವಚ್ಛಾಂಗದೇವತಾಃ ।
ದಲೇಷು ಪೂಜಯೇತ್ಪಶ್ಚಾಲ್ಲಕ್ಷ್ಮ್ಯಾದ್ಯಾ ವೃತಚಾಮರಾಃ ॥ ೧೮೧ ॥

ಬಂಧೂಕಕುಸುಮಾಭಾಸಾ ಮುಕ್ತಾಹಾರಲಸತ್ಕುಚಾಃ ।
ಉತ್ಫುಲ್ಲಾಂಭೋಜನಯನಾ ಮದವಿಭ್ರಮಮಂಥರಾಃ ॥ ೧೮೨ ॥

ಲಕ್ಷ್ಮೀ ಸರಸ್ವತೀ ಚೈವ ಧೃತಿಃ ಪ್ರೀತಿಸ್ತತಃ ಪರಂ ।
ಕಾಂತಿಃ ಶಾಂತಿಸ್ತುಷ್ಟಿಪುಷ್ಟಿಬೀಜಾದ್ಯಾ ಙೇನನೋಂತಿಕಾಃ ॥ ೧೮೩ ॥

ಭೃಗುಃ ಖಡ್ಗೀಶಚಂದ್ರಾಢ್ಯೋ ದೇವ್ಯಾ ಬೀಜಮುದಾಹೃತಂ ।
ಹ್ರಸ್ವತ್ರಯಕ್ಲೀಬಸರ್ಗರಹಿತಸ್ವರಸಂಯುತಂ । ॥ ೧೮೪ ॥

ದೇವ್ಯಾ ಬೀಜಂ ಕ್ರಮಾದಾಸಾಮಾದೌ ಚ ವಿನಿಯೋಜಯೇತ್ ।
ದಲಾಗ್ರೇಷು ಯಜೇಚ್ಛಂಖಂ ಶಾರ್ಙ್ಗಂ ಚಕ್ರಮಸಿಂ ಗದಾಂ ॥ ೧೮೫ ॥

---

೧೮೧-೧೮೩. ವಿಧಾನೋಕ್ತಪ್ರಕಾರವಾಗಿ ಪದ್ಮಕೋಶದಲ್ಲಿ ಅಂಗ ದೇವತೆಗಳನ್ನು ಪೂಜಿಸಬೇಕು. ತರುವಾಯ ಕೆಂಪಗಿರುವ ಬಂದುಗೇ ಹೂವಿನಂತೆ ಹೊಳೆಯುತ್ತಿರುವ, ಮುತ್ತಿನಹಾರಗಳಿಂದ ಪ್ರಕಾಶಮಾನವಾದ ಸ್ತನಗಳುಳ್ಳ, ವಿಕಸಿತಕಮಲದಂತೆ ನೇತ್ರವುಳ್ಳ, ಮದವಿಲಾಸಭರಿತವಾದ, ಚಾಮರಗಳಿಂದ ಆವರಿಸಲ್ಪಟ್ಟ ಲಕ್ಷ್ಮೀ ಮುಂತಾದ ಎಂಟು ದೇವತೆಗಳನ್ನು ಆದಿಯಲ್ಲಿ ಬೀಜಾಕ್ಷರ, ಚತುರ್ಥೀವಿಭಕ್ತ್ಯಂತ ಲಕ್ಷ್ಮೀ, ಸರಸ್ವತೀ, ಧೃತಿ, ಪ್ರೀತಿ, ಕಾಂತಿ, ಶಾಂತಿ, ತುಷ್ಟಿ, ಪುಷ್ಟಿ ಶಬ್ದಗಳು, ಕೊನೆಯಲ್ಲಿ "ನಮಃ" ಎಂಬ ಶಬ್ದ ಇವನ್ನು ಸೇರಿಸುವುದರಿಂದ ನಿಷ್ಪನ್ನವಾಗುವ "ಶ್ರೀಂ ಲಕ್ಷ್ಮ್ಯೈನಮಃ" ಮುಂತಾಗಿ ಹೇಳಿ ದಳಗಳಲ್ಲಿ ಪೂಜಿಸಬೇಕು.

೧೮೪-೧೮೫. (ಭೃಗು=ಸ, ಖಡ್ಗೀಶ=ವ, ಚಂದ್ರ=ಂ) 'ಸ್ವಂ' ಎಂಬುದು ದೇವೀಬೀಜವೆಂದು ಹೇಳಿದೆ. ಹ್ರಸ್ವತ್ರಯ=ಅ, ಇ, ಉ. ಕ್ಲೀಬ=ಋ, ೠ, ಌ, ೡ. ಸರ್ಗ=ಃ ಇವುಗಳನ್ನು ಬಿಟ್ಟು ಉಳಿದ ಎಂಟು ಸ್ವರಯುಕ್ತವಾದ ದೇವೀಬೀಜವನ್ನು ಕ್ರಮವಾಗಿ ಲಕ್ಷ್ಮೀ ಮುಂತಾದ ದೇವತೆಗಳ ನಾಮದ ಆದಿಯಲ್ಲಿ ಸಂಯೋಜನೆಮಾಡಿ ಹೇಳಬೇಕು.

ಅಂಕುಶಂ ಮುಸಲಂ ಪಾಶಂ ಸ್ವಮುದ್ರಾಮನುಭಿಃ ಪೃಥಕ್ ।
ಮಹಾಜಲಚರಾಯಾಂತೇ ವರ್ಮಾಸ್ತ್ರಂ ವಹ್ನಿವಲ್ಲಭಾ ॥ ೧೮೬ ॥

ಪಾಂಚಜನ್ಯಾಯ ತಾರಾದ್ಯೋ ನಮೋಂತಃ ಶಂಖಪೂಜನೇ ।
ಶಾರ್ಙ್ಗಾಯ ಸಶರಾಯಾಂತೇ ವರ್ಮಾಸ್ತ್ರಂ ವಹ್ನಿವಲ್ಲಭಾ ॥ ೧೮೭ ॥

ಶಾರ್ಙ್ಗಾಯ ಹೃದಯಂ ಮಂತ್ರೋ ಮಹಾದ್ಯಃ ಶಾರ್ಙ್ಗಪೂಜನೇ ।
ಸುದರ್ಶನಮಹಾಂತೇ ತು ಚಕ್ರರಾಜಪದಂ ವದೇತ್ ॥ ೧೮೮ ॥

ದಹಯುಗ್ಮಂ ಸರ್ವದುಷ್ಟಭಯಮಂತೇ ಕುರುದ್ವಯಂ ।
ಛಿಂಧಿದ್ವಯಂ ತತಃ ಪಶ್ಚಾದ್ವಿದಾರಯಯುಗಂ ತತಃ ॥ ೧೮೯ ॥

ಪರಮಂತ್ರಾನ್ ಗ್ರಸದ್ವಂದ್ವಂ ಭಕ್ಷಯದ್ವಿತಯಂ ಪುನಃ ।
ಭೂತಾನಿ ತ್ರಾಸಯದ್ವಂದ್ವಂ ವರ್ಮ ಫಡ್ವಹ್ನಿಸುಂದರೀ ॥ ೧೯೦ ॥

---

೧೮೫-೧೮೬. ದಳಗಳ ಅಗ್ರಭಾಗಗಳಲ್ಲಿ ಶಂಖ, ಶಾರ್ಙ್ಗ, ಚಕ್ರ, ಕತ್ತಿ, ಗದೆ, ಅಂಕುಶ, ಮುಸಲ ಮತ್ತು ಪಾಶ ಇವುಗಳನ್ನು ತಮ್ಮ ತಮ್ಮ ಮುದ್ರೆ, ಮತ್ತು ಮಂತ್ರಗಳಿಂದ ಪ್ರತ್ಯೇಕವಾಗಿ ಪೂಜಿಸಬೇಕು.

೧೮೬-೧೮೭. "ಓಂ ಮಹಾಜಲಚರಾಯ ಹುಂ ಫಟ್ ಸ್ವಾಹಾ ಪಾಂಚಜನ್ಯಾಯ ನಮಃ" ಎಂಬ ಮಂತ್ರವನ್ನು ಶಂಖಪೂಜೆಗೆ ಉಪಯೋಗಿಸಬೇಕು.

೧೮೭-೧೮೮. "ಓಂ ಮಹಾಶಾರ್ಙ್ಗಾಯ ಸಶರಾಯ ಹುಂ ಫಟ್ ಸ್ವಾಹಾ ಶಾರ್ಙ್ಗಾಯ ನಮಃ" ಎಂಬ ಮಂತ್ರವನ್ನು ಶಾರ್ಙ್ಗಪೂಜೆಗೆ ಉಪಯೋಗಿಸಬೇಕು.

೧೮೮-೧೯೧. "ಓಂ ಸುದರ್ಶನ ಮಹಾಚಕ್ರರಾಜ ದಹದಹ ಸರ್ವ ದುಷ್ಟಭಯಂ ಕುರು ಕುರು ಛಿಂಧಿ ಛಿಂಧಿ ವಿದಾರಯ ವಿದಾರಯ ಪರಮಂತ್ರಾ

ಸುದರ್ಶನಾಯ ಹೃದಯಂ ಪ್ರೋಕ್ತಶ್ಚಕ್ರಾರ್ಚನೇ ಮನುಃ ।
ಮಹಾಖಡ್ಗ ತೀಕ್ಷ್ಣಪದಾಚ್ಛಿಂಧಿಯುಗ್ಮಂ ಸಮೀರಯೇತ್ ॥ ೧೯೧ ॥

ಹುಂ ಫಟ್ ಸ್ವಾಹಾ ಚ ಖಡ್ಗಾಯ ನಮಃ ಖಡ್ಗಾರ್ಚನೇ ಮನುಃ ।
ಮಹಾಕೌಮೋದಕೀತ್ಯಂತೇ ವದೇಚ್ಚೈವ ಮಹಾಬಲೇ ॥ ೧೯೨ ॥

ಸರ್ವಾಸುರಾಂತಕೇ ಪಶ್ಚಾತ್ಪ್ರಸೀದ ಯುಗಲೇತಿ ಚ ।
ವರ್ಮಾಸ್ತ್ರವಹ್ನಿಜಾಯಾಂತಕೌಮೋದಕ್ಯೈ ಹೃದಂತಿಮಃ ॥ ೧೯೩ ॥

ಕೌಮೋದಕ್ಯರ್ಚನೇ ಪ್ರೋಕ್ತೋ ಮಂತ್ರಃ ಸರ್ವಾರ್ಥಸಾಧಕಃ ।
ಮಹಾಂಕುಶಪದಾತ್ಕುಟ್ಟಯುಗ್ಮಂ ಹುಂ ಫಟ್ ವಸುಪ್ರಿಯಾ ॥ ೧೯೪ ॥

ಅಂಕುಶಾಯ ನಮಃ ಪ್ರೋಕ್ತೋ ಮಂತ್ರಶ್ಚೈವಾಂಕುಶಾರ್ಚನೇ ।
ಸಂವರ್ತಕಮಹಾಂತೇ ತು ಮುಸಲೇತಿ ಪದಂ ವದೇತ್ ॥ ೧೯೫ ॥

---

ಗ್ರಸ ಗ್ರಸ ಭಕ್ಷಯ ಭಕ್ಷಯ ಭೂತಾನಿ ತ್ರಾಸಯ ತ್ರಾಸಯ ಹುಂ ಫಟ್ ಸ್ವಾಹಾ ಸುದರ್ಶನಾಯ ನಮಃ" ಎಂಬ ಮಂತ್ರವನ್ನು ಚಕ್ರಾರ್ಚನೆಗೆ ಉಪಯೋಗಿಸಬೇಕು.

೧೯೧-೧೯೨. "ಓಂ ಮಹಾ ಖಡ್ಗ ತೀಕ್ಷ್ಣ ಛಿಂಧಿ ಛಿಂಧಿ ಹುಂ ಫಟ್ ಸ್ವಾಹಾ ಖಡ್ಗಾಯ ನಮಃ" ಎಂಬ ಮಂತ್ರವು ಖಡ್ಗಾರ್ಚನೆಗೆ ಉಪಯೋಗಿಸಲ್ಪಡಬೇಕು.

೧೯೨-೧೯೪. "ಓಂ ಮಹಾಕೌಮೋದಕಿ ಮಹಾಬಲೇ ಸರ್ವಾಸುರಾಂತಕೇ ಪ್ರಸೀದ ಪ್ರಸೀದ ಹುಂ ಫಟ್ ಸ್ವಾಹಾ ಕೌಮೋದಕ್ಯೈ ನಮಃ" ಎಂಬುದು ಕೌಮೋದಕೀ ಪೂಜೆಗಾಗಿ ಉಪಯೋಗಿಸುವ ಮಂತ್ರವು. ಇದು ಸಕಲೇಷ್ಟಾರ್ಥಸಾಧಕವು.

೧೯೪-೧೯೫. "ಓಂ ಮಹಾಂಕುಶ ಕುಟ್ಟ ಕುಟ್ಟ ಹುಂ ಫಟ್ ಸ್ವಾಹಾ ಅಂಕುಶಾಯ ನಮಃ" ಎಂಬ ಮಂತ್ರವನ್ನು ಅಂಕುಶಪೂಜೆಗೆ ಉಪಯೋಗಿಸಬೇಕು.

ಪೋಥಯದ್ವಿತಯಂ ವರ್ಮ ಫಡಂತೇ ವಹ್ನಿಸುಂದರೀ ।
ಮುಸಲಾಯ ನಮಃ ಪ್ರೋಕ್ತೋ ಮಂತ್ರೋ ಮುಸಲಪೂಜನೇ ॥೧೯೬॥

ಮಹಾಪಾಶಪದಾದ್ಬಂಧದ್ವಯಮಾಕರ್ಷಯದ್ವಯಂ ।
ಹುಂ ಫಟ್ ಸ್ವಾಹಾ ಚ ಪಾಶಾಯ ನಮಃ ಪಾಶಾರ್ಚನೇ ಮನುಃ ॥೧೯೭॥

ತಾರಾದ್ಯಾ ಮನವೋ ಹ್ಯೇತೇ ತತಃ ಶಕ್ರಾದಿಕಾನ್ಯಜೇತ್ ।
ವಜ್ರಾದ್ಯಾನಪಿ ಸಂಪೂಜ್ಯ ಸರ್ವಸಿದ್ಧೀಶ್ವರೋ ಭವೇತ್ ॥ ೧೯೮ ॥

ಮಾಸಮಾತ್ರಂ ತು ಕುಸುಮೈಃ ಪೂಜಯಿತ್ವಾ ಹಯಾರಜೈಃ ।
ಕುಮುದೈರ್ವಾ ಪ್ರಜುಹಯಾದಷ್ಟೋತ್ತರಸಹಸ್ರಕಂ ॥ ೧೯೯ ॥

ಮಾಸಮಾತ್ರೇಣ ವಶ್ಯಾಸ್ಸ್ಯುಸ್ತಸ್ಯ ಸರ್ವೇ ನೃಪೋತ್ತಮಾಃ ॥ ೨೦೦ ॥

---

೧೯೫-೧೯೬. "ಓಂ ಸಂವರ್ತಕ ಮಹಾಮುಸಲ ಪೋಥಯ ಪೋಥಯ ಹುಂ ಫಟ್ ಸ್ವಾಹಾ ಮುಸಲಾಯ ನಮಃ" ಎಂಬುದು ಮುಸಲಪೂಜೆಗೆ ಉಪಯೋಗಿಸಬೇಕಾದ ಮಂತ್ರವು ಎಂದು ಉಕ್ತವಾಗಿದೆ.

೧೯೭. "ಓಂ ಮಹಾಪಾಶ ಬಂಧ ಬಂಧ ಆಕರ್ಷಯಾಕರ್ಷಯ ಹುಂ ಫಟ್ ಸ್ವಾಹಾ ಪಾಶಾಯ ನಮಃ" ಎಂಬುದು ಪಾಶಾರ್ಚನ ಮಂತ್ರವು.

೧೯೮-೧೯೯. ಈಪ್ರಕಾರ ಶಂಖಾದಿ ಆಯುಧಗಳನ್ನು ಪೂಜಿಸಲು ಆಯಾಯಾ ಮಂತ್ರಗಳು ವಿಹಿತವಾಗಿವೆ. ಅವುಗಳಿಂದ ಆಯಾಯಾ ಆಯುಧ ಗಳನ್ನು ಪೂಜಿಸಿದ ತರುವಾಯ ಇಂದ್ರ ಮುಂತಾದ ದಿಕ್ಪಾಲಕರನ್ನೂ, ವಜ್ರ ಮುಂತಾದ ಅವರ ಆಯುಧಗಳನ್ನೂ ಪೂಜಿಸಿ ಒಂದುತಿಂಗಳಕಾಲ ಕರವೀರ ಪುಷ್ಪಗಳಿಂದ ಪೂಜಿಸಿದರೆ ಸಕಲ ಸಿದ್ಧೀಶ್ವರನಾಗುವನು.

೧೯೯-೨೦೦. ಅಥವಾ ಕನ್ನೈದಿಲೇ ಹೂವುಗಳಿಂದ ಸಾವಿರದೆಂಟು ಹೋಮಮಾಡುತ್ತಿದ್ದರೆ ಒಂದು ತಿಂಗಳಲ್ಲಿ ಸಕಲ ರಾಜವರ್ಯರೂ ಅವನಿಗೆ ಅಧೀನರಾಗುವರು.

**ಯಸ್ಯ ನಾಮಯುತಂ ಮಂತ್ರಂ ಜಪೇದಯುತಸಂಖ್ಯಯಾ ।**
**ಸಭವೇದ್ದಾಸವತ್ಸದ್ಯೋ ಮಂತ್ರಸ್ಯಾಸ್ಯ ಪ್ರಭಾವತಃ ॥ ೨೦೧ ॥**

**ಬಹುನಾ ಕಿಮಿಹೋಕ್ತೇನ ಮನುನಾನೇನ ಸಾಧಕಃ ।**
**ಸಾಧಯೇತ್ಸಕಲಾನ್ಕಾಮಾನ್ವಿಷ್ಣುತುಲ್ಯೋ ನ ಸಂಶಯಃ ॥ ೨೦೨ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ಸಪ್ತತಿತಮೋಽಧ್ಯಾಯಃ**

---

೨೦೧. ಯಾರ ನಾಮಧೇಯವನ್ನುದ್ದೇಶಿಸಿ ಈ ಮಂತ್ರವು ಹತ್ತು ಸಾವಿರ ಜಪಮಾಡಲ್ಪಡುತ್ತದೆಯೋ ಅವನು ಈ ಮಂತ್ರ ಸಾಮರ್ಥ್ಯದಿಂದ ತಕ್ಷಣದಲ್ಲಿಯೇ ಜಪಮಾಡಿದವನಿಗೆ ದಾಸನಂತಾಗುವನು.

೨೦೨. ಹೆಚ್ಚು ಮಾತಿನಿಂದೇನು ! ಈ ಮಂತ್ರದಿಂದ ಸಾಧನೆಮಾಡುವವನು ಸಕಲ ಇಷ್ಟಾರ್ಥಗಳನ್ನೂ ಸಾಧಿಸಿಕೊಂಡು, ಕೊನೆಗೆ ವಿಷ್ಣುಸಾರೂಪ್ಯವನ್ನೂ ಪಡೆಯುವನು ಸಂಶಯವಿಲ್ಲ.

ಇಂತು ಶ್ರೀ ನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ಮೂರನೆಯ ಪಾದದಲ್ಲಿ ಎಪ್ಪತ್ತನೆಯ ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ಮಹಾವಿಷ್ಣುಮಂತ್ರಗಳು ನಿರೂಪಿತವಾಗಿವೆ. ಆದಿಯಲ್ಲಿ ನಾರಾಯಣಾಷ್ಟಾಕ್ಷರ ಮಂತ್ರ, ಅದರ ಋಷಿ, ದೇವತಾ, ಛಂದಸ್ಸು, ನ್ಯಾಸ ಮುಂತಾದುವನ್ನು ನಿರೂಪಿಸಿ ವಾಸುದೇವದ್ವಾದಶಾಕ್ಷರ ಮಂತ್ರವನ್ನೂ ಸಪರಿಕರವಾಗಿ ಹೇಳಿ, ತತ್ವನ್ಯಾಸಕ್ರಮವನ್ನು ವಿವರಿಸಿ, ಪುರುಷೋತ್ತಮ ಮಂತ್ರ, ಕಿರೀಟ ಮಂತ್ರ ಮುಂತಾದುವನ್ನೂ ಹೇಳಿ ತ್ರೈಲೋಕ್ಯಮೋಹನವೆಂಬ ಮಹಾಮಂತ್ರವು ಸಪರಿಕರವಾಗಿ ನಿರೂಪಿಸಲ್ಪಟ್ಟಿದೆ.

# ಏಕಸಪ್ತತಿತಮೋಽಧ್ಯಾಯಃ



## ಸನತ್ಕುಮಾರ ಉವಾಚ

ಶೃಣು ನಾರದ ವಕ್ಷ್ಯಾಮಿ ದಿವ್ಯಾನ್ನರಹರೇರ್ಮನೂನ್ ।
ಯಾನ್ಸಮಾರಾಧ್ಯ ಬ್ರಹ್ಮಾದ್ಯಾಶ್ಚಕ್ರುಃ ಸೃಷ್ಟ್ಯಾದಿಕರ್ಮ ವೈ ॥ ೧ ॥

ಸಂವರ್ತಕಶ್ಚಂದ್ರಮೌಳಿರ್ಮನುರ್ವಹ್ನಿವಿಭೂಷಿತಃ ।
ಏಕಾಕ್ಷರಃ ಸ್ಮೃತೋ ಮಂತ್ರೋ ಭಜತಾಂ ಸುರಪಾದಪಃ ॥ ೨ ॥

ಮುನಿರತ್ರಿಶ್ಚ ಜಗತೀ ಛಂದೋ ಬುದ್ಧಿಮತಾಂ ವರ ।
ದೇವತಾ ನೃಹರಿಃ ಪ್ರೋಕ್ತೋ ವಿನಿಯೋಗೋಽಖಿಲಾಪ್ತಯೇ ॥ ೩ ॥

---

## ಎಪ್ಪತ್ತೊಂದನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ನಾರದಾ ! ಬ್ರಹ್ಮಾದಿದೇವತೆಗಳು ಯಾವ ಮಂತ್ರಗಳನ್ನು ಆರಾಧಿಸಿ ಸೃಷ್ಟ್ಯಾದಿ ವ್ಯಾಪಾರವನ್ನು ಮಾಡಿದರೋ ಅಂತಹ ದಿವ್ಯವಾದ ನರಸಿಂಹಮಂತ್ರಗಳನ್ನು ಹೇಳುವೆನು ; ಕೇಳು.

೨. ಸಂವರ್ತಕ= ಕ್ಷ, ಚಂದ್ರ= ೦, ಮನು= ಔ, ವಹ್ನಿ= ರ, ಇವುಗಳ ಸಂಯೋಜನೆಯಿಂದ ನಿಷ್ಪನ್ನವಾಗುವ “ಕ್ಷ್ರೌಂ” ಎಂಬುದು ಏಕಾಕ್ಷರಮಂತ್ರವೆಂದು ಸ್ಮೃತವಾಗಿದೆ. ಅದು ಜಪಾದಿಗಳಿಂದ ಸೇವಿಸುವವರಿಗೆ ಕಲ್ಪವೃಕ್ಷದಂತೆ ಇಷ್ಟಾರ್ಥಪ್ರದವಾಗುತ್ತದೆ.

೩. ಬುದ್ಧಿಮದ್ವರೇಣ್ಯ ! ಈ ಮಂತ್ರಕ್ಕೆ ಅತ್ರಿಯೇ ಋಷಿಯು. ಜಗತೀ ಎಂಬುದೇ ಛಂದಸ್ಸು. ನರಹರಿಯು ದೇವತೆ. ಈ ಮಂತ್ರವು ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುವುದಕ್ಕಾಗಿ ಉಪಯೋಗಿಸಲ್ಪಡಬೇಕು.

ಕ್ಷಂ ಬೀಜಂ ಶಕ್ತಿರೀ ಪ್ರೋಕ್ತಾ ಷಡ್ದೀರ್ಘೇಣ ಷಡಂಗಕಂ ।
ಅರ್ಕೇಂದುವಹ್ನಿನಯನಂ ಶರದಿಂದುರುಚಿಂ ಕರೈಃ ॥ ೪ ॥

ಧನುಶ್ಚಕ್ರಾಭಯವರಾನ್ದಧತಂ ನೃಹರಿಂ ಸ್ಮರೇತ್ ।
ಲಕ್ಷಂ ಜಪಸ್ತದ್ದಶಾಂಶಹೋಮಶ್ಚ ಘೃತಪಾಯಸೈಃ ॥ ೫ ॥

ಯಜೇತ್ಪೀಠೇ ವೈಷ್ಣವೇ ತು ಕೇಸರೇಷ್ವಂಗಪೂಜನಂ ।
ಖಗೇಶಂ ಶಂಕರಂ ಶೇಷಂ ಶತಾನಂದಂ ದಿಗಾದಿಷು ॥ ೬ ॥

ಶ್ರಿಯಂ ಹ್ರಿಯಂ ಧೃತಿಂ ಪುಷ್ಟಿಂ ಕೋಣಪತ್ರೇಷು ಪೂಜಯೇತ್ ।
ದಂತಛದೇಷು ನೃಹರೀಂಸ್ತಾವತಃ ಪೂಜಯೇತ್ಕ್ರಮಾತ್ ॥ ೭ ॥

---

೪. 'ಕ್ಷಂ' ಎಂಬುದು ಬೀಜ, 'ಈ' ಎಂಬುದು ಶಕ್ತಿ, 'ಆ, ಈ, ಊ' ಮುಂತಾದ ಆರು ದೀರ್ಘಗಳಿಂದ ಯುಕ್ತವಾದ ಬೀಜಾಕ್ಷರದಿಂದ ಷಡಂಗನ್ಯಾಸವನ್ನು ಮಾಡಬೇಕು.

೪-೫. ಸೂರ್ಯ, ಚಂದ್ರ, ಅಗ್ನಿಗಳಂತೆ ನೇತ್ರಗಳುಳ್ಳ, ಶರತ್ಕಾಲದ ಚಂದ್ರನಂತೆ ಪ್ರಕಾಶಿಸುತ್ತಿರುವ, ಧನುಸ್ಸು, ಚಕ್ರ, ಅಭಯವರಮುದ್ರೆಗಳು ಇವನ್ನು ಕೈಗಳಲ್ಲಿ ಧರಿಸಿರುವ ನರಸಿಂಹನನ್ನು ಧ್ಯಾನಿಸಬೇಕು. ಈ ಮಂತ್ರ ವನ್ನು ಒಂದು ಲಕ್ಷ ಜಪಮಾಡಿ ಬಳಿಕ ಅದರ ಹತ್ತನೆಯ ಒಂದು ಭಾಗ ಅಂದರೆ ಹತ್ತುಸಾವಿರ ಹೋಮಗಳನ್ನು ತುಪ್ಪ ಮತ್ತು ಪಾಯಸಗಳಿಂದ ಮಾಡಬೇಕು.

೬-೭. ವೈಷ್ಣವಪೀಠದಲ್ಲಿ ಪೂಜೆಮಾಡಬೇಕು. ಕೇಸರಗಳಲ್ಲಿ ಅಂಗ ಪೂಜೆಯು ವಿಹಿತವು. ಪೂರ್ವಾದಿ ದಿಗ್ದಳಗಳಲ್ಲಿ ಖಗೇಶ, ಶಂಕರ, ಶೇಷ, ಬ್ರಹ್ಮ ಇವರನ್ನೂ, ಆಗ್ನೇಯಾದಿ ಕೋಣಪತ್ರಗಳಲ್ಲಿ ಶ್ರೀ, ಹ್ರೀ, ಧೃತಿ, ಪುಷ್ಟಿ ಇವರನ್ನೂ ಪೂಜಿಸಬೇಕು- ಮೂವತ್ತೆರಡು 'ದಂತಪತ್ರಗಳಲ್ಲಿ (ಯಂತ್ರದಲ್ಲಿ ಸುತ್ತಲಿರುವ ಮೂವತ್ತೆರಡು ಪತ್ರದ ಮಧ್ಯದಲ್ಲಿ) ನರಸಿಂಹನ ಮೂವತ್ತೆರಡು ರೂಪಗಳನ್ನು ಕ್ರಮವಾಗಿ ಪೂಜಿಸಬೇಕು.

ಕೃಷ್ಣೋ ರುದ್ರೋ ಮಹಾಘೋರೋ ಭೀಮೋ ಭೀಷಣ ಉಜ್ಜ್ವಲಃ ।
ಕರಾಲೋ ವಿಕರಾಲಶ್ಚ ದೈತ್ಯಾಂತೋ ಮಧುಸೂದನಃ　　　　　॥ ೮ ॥

ರಕ್ತಾಕ್ಷಃ ಪಿಂಗಲಾಕ್ಷಶ್ಚಾಂಜನೋ ದೀಪ್ತರುಚಿಸ್ತಥಾ ।
ಸುಘೋರಕಶ್ಚ ಸುಹನುರ್ವಿಶ್ವಾಕ್ಷೋ ರಾಕ್ಷಸಾಂತಕಃ　　　　　॥ ೯ ॥

ವಿಶಾಲಕೋ ಧೂಮ್ರಕೇಶೋ ಹಯಗ್ರೀವೋ ಘನಸ್ವನಃ ।
ಮೇಘವರ್ಣಃ ಕುಂಭಕರ್ಣಃ ಕೃತಾಂತತೀವ್ರತೇಜಸೌ　　　　　॥ ೧೦ ॥

ಅಗ್ನಿವರ್ಣೋ ಮಹೋಗ್ರಶ್ಚ ತತೋ ವಿಶ್ವವಿಭೂಷಣಃ ।
ವಿಘ್ನಕ್ಷಮೋ ಮಹಾಸೇನಃ ಸಿಂಹೋ ದ್ವಾತ್ರಿಂಶದೀರಿತಾಃ　　　　　॥ ೧೧ ॥

ತದ್ಬಹಿಃ ಪ್ರಾರ್ಚಯೇದ್ವಿದ್ವಾನ್ ಲೋಕಪಾಲಾನ್ಸಹೇತಿಕಾನ್ ।
ಏವಂ ಸಿದ್ಧೇ ಮನೌ ಮಂತ್ರೀ ಸಾಧಯೇದಖಿಲೇಪ್ಸಿತಾನ್　　　　　॥ ೧೨ ॥

---

೮-೧೧. ಕೃಷ್ಣ, ರುದ್ರ, ಮಹಾಘೋರ, ಭೀಮ, ಭೀಷಣ, ಉಜ್ಜ್ವಲ, ಕರಾಲ, ವಿಕರಾಲ, ದೈತ್ಯಾಂತ, ಮಧುಸೂದನ, ರಕ್ತಾಕ್ಷ, ಪಿಂಗಲಾಕ್ಷ, ಅಂಜನ, ದೀಪ್ತರುಚಿ, ಸುಘೋರ, ಸುಹನು, ವಿಶ್ವಾಕ್ಷ, ರಾಕ್ಷಸಾಂತಕ, ವಿಶಾಲ, ಧೂಮ್ರಕೇಶ, ಹಯಗ್ರೀವ, ಘನಸ್ವನ, ಮೇಘವರ್ಣ, ಕುಂಭಕರ್ಣ, ಕೃತಾಂತ, ತೀವ್ರತೇಜಸ್ಸು, ಅಗ್ನಿವರ್ಣ, ಮಹೋಗ್ರ, ವಿಶ್ವಭೂಷಣ, ವಿಘ್ನಕ್ಷಮ, ಮಹಾಸೇನ ಮತ್ತು ಸಿಂಹ ಇವು ಮೂವತ್ತೆರಡೂ ನರಸಿಂಹನ ಮೂರ್ತಿಗಳೆಂದು ಉಕ್ತವಾಗಿದೆ.

೧೨. ಅದರ ಹೊರಭಾಗದಲ್ಲಿ ಜ್ಞಾನಿಯು ಆಯುಧಸಹಿತರಾದ ದಿಕ್ಪಾಲಕರನ್ನು ಪೂಜಿಸಬೇಕು. ಈ ರೀತಿಯಾಗಿ ಅನುಷ್ಠಾನವನ್ನು ಮಾಡಿ ಮಂತ್ರಸಿದ್ಧಿಯನ್ನು ಪಡೆದವನು ಸಕಲ ಇಷ್ಟಾರ್ಥಗಳನ್ನೂ ಸಾಧಿಸುವನು.

ವಿಷ್ಣುಃ ಪ್ರದ್ಯುಮ್ನಯುಕ್ ಶಾಙ್ಗೀ ಸಾಗ್ನಿರ್ವೀರಂ ಮಹಾಂಸ್ತತಃ ।
ವಿಷ್ಣುಂ ಜ್ವಲಂತಂ ಭೃಗ್ವೀಶೋ ಜಲಂ ಪದ್ಮಾಸನಂ ತತಃ ॥ ೧೩ ॥

ಹರಿಸ್ತು ವಾಸುದೇವಾಯ ವೈಕುಂಠೋ ವಿಷ್ಣುಸಂಯುತಃ ।
ಗದೀ ಸೇಂದು ನೃಸಿಂಹಂ ಚ ಭೀಷಣಂ ಭದ್ರಮೇವ ಚ ॥ ೧೪ ॥

ಮೃತ್ಯುಮೃತ್ಯುಂ ತತಃ ಶೌರಿರ್ಭಾನೋರ್ನಾರಾಯಣಾನ್ವಿತಃ ।
ನೃಹರೇರ್ದ್ವಾತ್ರಿಂಶದರ್ಣೋಯಂ ಮಂತ್ರಸ್ಸಾಮ್ರಾಜ್ಯದಾಯಕಃ ॥ ೧೫ ॥

ಬ್ರಹ್ಮಾ ಮುನಿಸ್ಸಮುದ್ದಿಷ್ಟಃ ಛಂದೋಽನುಷ್ಟುಬುದಾಹೃತಂ ।
ದೇವತಾ ನೃಹರಶ್ಚಾಸ್ಯ ಸರ್ವೇಷ್ಟಫಲದಾಯಕಃ ॥ ೧೬ ॥

ಹಂ ಬೀಜಂ ಇಂ ತಥಾಶಕ್ತಿರ್ವಿನಿಯೋಗೋಽಖಿಲಾಪ್ತಯೇ ।
ವೇದೈಶ್ಚತುರ್ಭಿರ್ವಸುಭಿಃ ಷಡ್ಭಿಃ ಷಡ್ಭಿರ್ಯುಗಾಕ್ಷರೈಃ ॥ ೧೭ ॥

---

೧೩-೧೫. (ವಿಷ್ಣು= ಉ, ಪ್ರದ್ಯುಮ್ನ= ಂ, ಶಾಙ್ಗೀ= ಗ, ಅಗ್ನಿ= ರ, ಭೃಗ್ವೀಶ= ಸ, ಜಲಂಪದ್ಮಾಸನಂ= ರ್ವ, ಹರಿ= ತ, ವಾಸುದೇವ= ಓ, ವೈಕುಂಠ= ಮು, ವಿಷ್ಣು= ಉ, ಗದೀ= ಬ, ಇಂದು= ಂ, ಉಳಿದುದು ಶಬ್ದಸ್ವರೂಪ. ಇದು ವೈದಿಕಮಂತ್ರವಾದ್ದರಿಂದ ಆದಿಯಲ್ಲಿ ಪ್ರಣವವನ್ನು ಸೇರಿಸಬೇಕು.)

" ಓಂ ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಂ ।
ನೃಸಿಂಹಂ ಭೀಷಣಂ ಭದ್ರಂ ಮೃತ್ಯುಮೃತ್ಯುಂ ನಮಾಮ್ಯಹಂ ॥ "

ಎಂಬುದು ಮೂವತ್ತೆರಡು ಅಕ್ಷರಗಳುಳ್ಳ ಶ್ಲೋಕರೂಪವಾದ ನರಸಿಂಹಮಂತ್ರವು. ಈ ಮಂತ್ರವು ಜಪಿಸುವವರಿಗೆ ಸಾಮ್ರಾಜ್ಯಪ್ರದವು.

೧೬. ಈ ಮಂತ್ರಕ್ಕೆ ಬ್ರಹ್ಮನು ಋಷಿಯು. ಛಂದಸ್ಸು ಅನುಷ್ಟುಪ್. ನರಹರಿಯೇ ದೇವತೆ. ಇದು ಸಮಸ್ತ ಇಷ್ಟಾರ್ಥಗಳನ್ನೂ ಕೊಡುತ್ತದೆ.

೧೭-೧೯. ' ಹಂ ' ಎಂಬುದು ಬೀಜ. ' ಈಂ ' ಎಂಬುದು ಶಕ್ತಿ. ಈ ಮಂತ್ರವು ಸಕಲ ಇಷ್ಟಾರ್ಥವನ್ನು ಪಡೆಯಲು ಜಪಿಸಲ್ಪಡತಕ್ಕುದು. ಸಾಧಕವರ್ಯನು ಈ ಮಂತ್ರದಲ್ಲಿ ಕ್ರಮವಾಗಿ 4, 4, 8, 6, 6, 4 ವರ್ಣಗಳನ್ನು

ಷಡಂಗಾನಿ ವಿಧಾಯೊಥ ಮೂರ್ಧ್ನಿ ಭಾಲೇ ಚ ನೇತ್ರಯೋಃ ।
ಮುಖಬಾಹ್ವಂಘ್ರಿಸಂಧ್ಯಗ್ರೇಷ್ವಥ ಕುಕ್ಷೌ ತಥಾ ಹೃದಿ ॥ ೧೮ ॥

ಗಲೇ ಪಾರ್ಶ್ವದ್ವಯೇ ಪೃಷ್ಠೇ ಕಕುದ್ಯರ್ಣಾನ್ಮನೂದ್ಭವಾನ್ ।
ಪ್ರಣವಾಂತರಿತಾನ್ಕೃತ್ವಾ ನ್ಯಸೇತ್ಸಾಧಕಸತ್ತಮಃ ॥ ೧೯ ॥

ನೃಸಿಂಹಸಾನ್ನಿಧ್ಯಕರೋ ನ್ಯಾಸೋ ದಶವಿಧೋ ಯಥಾ ।
ಕರಾಂಗುಷ್ಠಾದ್ಯಂಗುಲೀಷು ಪೃಥಗಾದ್ಯಂತಪರ್ವಣೋಃ ॥ ೨೦ ॥

ಸರ್ವಾಂಗುಲೀಷು ವಿನ್ಯಸ್ಯಾವಶಿಷ್ಟಂ ತಲಯೋರ್ನ್ಯಸೇತ್ ।
ಶಿರೋ ಲಲಾಟೇ ಭ್ರೂಮಧ್ಯೇ ನೇತ್ರಯೋಃ ಕರ್ಣಯೋಸ್ತಥಾ ॥ ೨೧ ॥

ಕಪೋಲಕರ್ಣಮೂಲೇ ಚ ಚುಬುಕೋರ್ಧ್ವಾಧರೋಷ್ಠಕೇ ।
ಕಂಠೇ ಘೋಣೇ ಚ ಭುಜಯೋರ್ಹೃತ್ಸ್ತನೌ ನಾಭಿಮಂಡಲೇ ॥ ೨೨ ॥

---

ವಿಭಾಗಿಸಿ ಅವುಗಳಿಂದ ಷಡಂಗನ್ಯಾಸವನ್ನಾಚರಿಸಿ, ಶಿರಸ್ಸು, ಹಣೆ, ಕಣ್ಣುಗಳು, ಮುಖ, ಬಾಹು, ಪಾದ, ಸಂಧಿಪ್ರದೇಶ, ಅಗ್ರಭಾಗ, ಕುಕ್ಷಿ, ಹೃದಯ, ಕಂಠ, ಉಭಯಪಾರ್ಶ್ವಗಳು, ಪೃಷ್ಠ, ಬೆನ್ನಿನ ಕೆಳಭಾಗ ಇವುಗಳಲ್ಲಿ ಮಂತ್ರದ ಅಕ್ಷರಗಳನ್ನು ಓಂಕಾರಮಧ್ಯದಲ್ಲಿ ಸೇರಿಸಿ ನ್ಯಾಸಮಾಡಬೇಕು.

೨೦-೨೧. ನರಸಿಂಹನ ಸಾನ್ನಿಧ್ಯವನ್ನು ಉಂಟುಮಾಡುವ ದಶವಿಧ ನ್ಯಾಸವು ಹೇಗೆಂದರೆ:—ಹೆಬ್ಬೆಟ್ಟು ಮುಂತಾದ ಕೈ ಬೆರಳುಗಳಲ್ಲಿ, ಆದ್ಯಂತಪರ್ವಗಳಲ್ಲಿ ಪ್ರತ್ಯೇಕವಾಗಿಯೂ ಸಕಲ ಬೆಟ್ಟುಗಳಲ್ಲಿಯೂ ಸಹ ನ್ಯಾಸಮಾಡಿ ಉಳಿದುದನ್ನು ಅಂಗೈಗಳಲ್ಲಿ ನ್ಯಾಸಮಾಡಬೇಕು.

೨೧-೨೪. ತಲೆ, ಹಣೆ, ಹುಬ್ಬುಗಳ ಮಧ್ಯ, ಕಣ್ಣು, ಕಿವಿ, ಕೆನ್ನೆ, ಕಿವಿಯ ಮೂಲಭಾಗ, ಕೆಳತುಟಿಯ ಕೆಳಭಾಗ, ಮೇಲಿನ ಮತ್ತು ಕೆಳಗಿನ ತುಟಿ, ಕುತ್ತಿಗೆ, ಮೂಗು, ಭುಜಗಳು, ಹೃದಯ, ಸ್ತನ, ನಾಭಿಮಂಡಲ, ಕುಕ್ಷಿ, ಪಾದತಲ, ನಡುವು, ಮೇಢ್ರ, ತೊಡೆ, ಮೊಣಕಾಲು, ಜಂಘೆ, ಗುಲ್ಫ, ಕಾಲು

ಕುಕ್ಷೌ ಪದೋಸ್ತಲೇ ಕಟ್ಯೋಂ ಮೇಢ್ರೋರ್ವೋರ್ಜಾನುಜಂಘಯೋಃ ||
ಗುಲ್ಫೇ ಪಾದಕರಾಂಗುಲ್ಯೋಃ ಸರ್ವಸಂಧಿಷು ರೋಮಸು || ೨೩ ||

ರಕ್ತಾಸ್ಥಿಮಜ್ಜಾಸು ತನೌ ನ್ಯಸೇದ್ವರ್ಣಾನ್ವಿಚಕ್ಷಣಃ |
ದ್ವ್ಯರ್ಣಾನ್ಪದೇ ಗುಲ್ಫಜಾನುಕಟಿನಾಭಿಹೃದಿಸ್ಥಲೇ || ೨೪ ||

ಬಾಹ್ವೋಃ ಕಂಠೇ ಚ ಚಿಬುಕೇ ಚೋಷ್ಠೇ ಗಂಡೇ ಪ್ರವಿನ್ಯಸೇತ್ |
ಕರ್ಣಯೋರ್ವದನೇ ನಾಸಾಪುಟೇ ನೇತ್ರೇ ಚ ಮೂರ್ಧನಿ || ೨೫ ||

ಪದಾನಿ ತು ಮುಖೇ ಮೂರ್ಧ್ನಿ ನಸಿ ಚಕ್ಷುಷಿ ಕರ್ಣಯೋಃ |
ಆಸ್ಯೇ ಚ ಹೃದಯೇ ನಾಭೌ ಕಟಿ ಜಾನುಪದೇಷ್ವಪಿ || ೨೬ ||

ಅರ್ಧದ್ವಯಂ ನ್ಯಸೇನ್ಮೂರ್ಧ್ನಿ ಆಹೃತ್ಪಾದಾತ್ತದಂಗಕಂ |
ಉಗ್ರಾದೀನಿ ಪದಾನೀಹ ಮೃತ್ಯುಮೃತ್ಯುಂ ನಮಾಮ್ಯಹಂ || ೨೭ ||

---

ಮತ್ತು ಕೈಗಳ ಬೆರಳುಗಳು, ಸಕಲ ಸಂಧಿಪ್ರದೇಶಗಳು, ರೋಮ, ರಕ್ತ, ಮೂಳೆ, ಕೊಬ್ಬು, ಶರೀರ ಇವುಗಳಲ್ಲಿ ವಿವೇಕಿಯಾದವನು ವರ್ಣಗಳನ್ನು ನ್ಯಾಸಮಾಡಬೇಕು.

೨೪–೨೫. ಗುಲ್ಫ, ಮೊಣಕಾಲು, ನಡುವು, ನಾಭಿ, ಹೃದಯ, ಬಾಹು, ಕಂಠ, ಚಿಬುಕ (ತುಟಿಯ ಕೆಳಭಾಗ), ತುಟಿ, ಗಂಡಸ್ಥಲ, ಕಿವಿ, ಮುಖ, ಮೂಗು, ಕಣ್ಣು, ಶಿರಸ್ಸು ಇವುಗಳಲ್ಲಿ ಎರಡೆರಡು ವರ್ಣಗಳನ್ನು ನ್ಯಾಸ ಮಾಡಬೇಕು.

೨೬. ಮುಖ, ಶಿರಸ್ಸು, ಮೂಗು, ಕಣ್ಣು, ಕಿವಿಗಳು, ಬಾಯಿ, ಹೃದಯ, ನಾಭಿ, ನಡುವು, ಮೊಣಕಾಲು ಮತ್ತು ಪಾದ ಇವುಗಳಲ್ಲಿ ಮಂತ್ರದ ಪದಗಳನ್ನು ನ್ಯಾಸಮಾಡಬೇಕು.

೨೭–೨೮. ಈ ಮಂತ್ರದೆರಡು ಅರ್ಧಭಾಗಗಳನ್ನು ಶಿರಸ್ಸು ಮತ್ತು ಹೃದಯದಿಂದ ಪಾದಪರ್ಯಂತವಾಗಿರುವ ಅಂಗಗಳಲ್ಲಿ ನ್ಯಾಸಮಾಡಬೇಕು. ಈ ಮಂತ್ರದಲ್ಲಿ ಆದಿಯಿಂದ 'ನಮಾಮ್ಯಹಂ' ಎಂಬುದರವರೆಗಿನ 'ಉಗ್ರ' ಎಂಬ ಪದ ಮೊದಲು, 'ಮೃತ್ಯುಮೃತ್ಯುಂ' ಎಂಬ ಪದವೂ ಸೇರಿ

ಇತ್ಯಂತಾನ್ಯಾಸ್ಯಕಘ್ರಾಣಚಕ್ಷುಃ ಶ್ರೋತ್ರೇಷು ಪಕ್ಷ್ಮಸು ।
ಹೃದಿ ನಾಭೌ ಚ ಕಟ್ಯಾದಿಪಾದಾಂತಂ ನವಸು ನ್ಯಸೇತ್ ॥ ೨೮ ॥

ವೀರಾದ್ಯಾನಪಿ ತಾನ್ಯೇವ ಯಥಾಪೂರ್ವಂ ಪ್ರವಿನ್ಯಸೇತ್ ।
ನೃಸಿಂಹಾದ್ಯಾನಿ ತಾನ್ಯೇವ ಪೂರ್ವವದ್ವಿನ್ಯಸೇತ್ಸುಧೀಃ ॥ ೨೯ ॥

ಚಂದ್ರಾಗ್ನಿವೇದಷಡ್ರಾಮನೇತ್ರದಿಗ್ಬಾಹುಭೂಮಿತಾನ್ ।
ವಿಭಕ್ತಾನ್ಮಂತ್ರವರ್ಣಾಂಶ್ಚ ಕ್ರಮಾತ್ಸ್ಥಾನೇಷು ವಿನ್ಯಸೇತ್ ॥ ೩೦ ॥

ಮೂಲೇ ಮೂಲಾಚ್ಚ ನಾಭ್ಯಂತಂ ನಾಭ್ಯಾದಿಹೃದಯಾವಧಿ ।
ಹೃದಯಾದ್ಭ್ರೂಯುಗಾಂತಂ ತು ನೇತ್ರತ್ರಯೇ ಚ ಮಸ್ತಕೇ ॥ ೩೧ ॥

ಬಾಹೋರಂಗುಲಿಷು ಪ್ರಾಣೇ ಮೂರ್ಧಾದಿಚರಣಾವಧಿ ।
ವಿನ್ಯಸೇನ್ನಾಮತೋ ಧೀಮಾನ್ ಹರಿನ್ಯಾಸೋಯಮೀರಿತಃ ॥ ೩೨ ॥

---

ಒಂಬತ್ತು ಪದಗಳನ್ನು ಬಾಯಿ, ಶಿರಸ್ಸು, ಮೂಗು, ಕಣ್ಣು, ಕಿವಿ, ರೆಪ್ಪೆ, ಹೃದಯ, ನಾಭಿ, ನಡುವಿನಿಂದ ಕಾಲಿನವರೆಗೆ ಈ ಒಂಬತ್ತು ಅಂಗಗಳಲ್ಲಿ ನ್ಯಾಸಮಾಡಬೇಕು.

೨೯. ವೀರಾದಿಯಾದ ಆ ಪದಗಳನ್ನು ಹಿಂದಿನಂತೆ ನ್ಯಾಸಮಾಡಬೇಕು. ಜ್ಞಾನಿಯು 'ನೃಸಿಂಹ' ಎಂಬ ಪದಾದಿಯಾದ ಅದೇ ಪದಗಳನ್ನು ಪೂರ್ವದಂತೆ ನ್ಯಾಸಮಾಡಬೇಕು.

೩೦-೩೨. 1, 3, 4, 6, 3, 2, 10, 2, 1 ಈ ರೀತಿಯಾಗಿ ವಿಭಾಗಿಸಿದ ಮಂತ್ರವರ್ಣಗಳನ್ನು ಕ್ರಮವಾಗಿ ಮೂಲಾಧಾರದಿಂದ ನಾಭಿಯ ಪರ್ಯಂತವಾದ ಅಂಗ, ನಾಭಿಯಿಂದ ಹೃದಯದವರೆಗೆ ಇರುವ ಅವಯವ, ಹೃದಯದಿಂದ ಹುಬ್ಬುಗಳವರೆಗಿನ ಅಂಗ, ಮೂರು ಕಣ್ಣುಗಳು, ತಲೆ, ಬಾಹುದ್ವಯ, ಬೆರಳುಗಳು, ಪ್ರಾಣ ಮತ್ತು ಶಿರಸ್ಸಿನಿಂದ ಕಾಲಿನವರೆಗೆ ಸರ್ವಾಂಗ ಇವುಗಳಲ್ಲಿ ನ್ಯಾಸಮಾಡಬೇಕು. ಈ ರೀತಿ ಮಾಡುವ ನ್ಯಾಸವು ಹರಿನ್ಯಾಸವೆನಿಸುತ್ತದೆ.

ನ್ಯಾಸಸ್ಯಾಸ್ಯ ತು ಮಾಹಾತ್ಮ್ಯಂ ಜಾನಾತ್ಯೇಕೋ ಹರಿಃ ಸ್ವಯಂ |
ಏವಂ ನ್ಯಾಸವಿಧಿಂ ಕೃತ್ವಾ ಧ್ಯಾಯೇಚ್ಚ ನೃಹರಿಂ ಹೃದಿ || ೩೩ ||

ಗಲಾಸಕ್ತಲಸದ್ಬಾಹುಸ್ಪೃಷ್ಟಕೇಶೋಬ್ಜಚಕ್ರಧೃಕ್ |
ನಖಾಗ್ರಭಿನ್ನದೈತ್ಯೇಶೋ ಜ್ವಾಲಾಮಾಲಾಸಮನ್ವಿತಃ || ೩೪ ||

ದೀಪ್ತಜಿಹ್ವಸ್ತ್ರಿನಯನೋ ದಂಷ್ಟ್ರೋಗ್ರಂ ವದನಂ ವಹನ್ |
ನೃಸಿಂಹೋಽಸ್ಮಾನ್ಸದಾ ಪಾತು ಸ್ಥಲಾಂಬುಗಗನೋಽಪಗಃ || ೩೫ ||

ಧ್ಯಾತ್ವೈವಂ ದರ್ಶಯೇಽಸ್ಮದ್ರಾಂ ನೃಸಿಂಹಸ್ಯ ಮಹಾತ್ಮನಃ |
ಜಾನುಮಧ್ಯಗತೌ ಕೃತ್ವಾ ಚಿಬುಕೋಷ್ಠೌ ಸಮಾವುಭೌ | ೩೬ ||

ಹಸ್ತೌ ಚ ಭೂಮಿಸಂಲಗ್ನೌ ಕಂಪಮಾನಃ ಪುನಃ ಪುನಃ |
ಮುಖಂ ವಿಜೃಂಭಿತಂ ಕೃತ್ವಾ ಲೇಲಿಹಾನಾಂ ಚ ಜಿಹ್ವಿಕಾಂ || ೩೭ ||

---

೩೩. ಈ ನ್ಯಾಸದ ಮಹಿಮೆಯನ್ನು ಹರಿಯೊಬ್ಬನೇ ಸ್ವತಃ ತಿಳಿದಿರುವನು. ಈ ರೀತಿ ನ್ಯಾಸವಿಧಾನವನ್ನು ಆಚರಿಸಿ ಮನಸ್ಸಿನಲ್ಲಿ ನರಸಿಂಹನನ್ನು ಧ್ಯಾನಿಸಬೇಕು.

೩೪-೩೫. ಕುತ್ತಿಗೆಯಲ್ಲಿರುವ, ಪ್ರಕಾಶಮಾನವಾದ, ಬಾಹುಗಳಿಂದ ಸ್ಪರ್ಶಮಾಡಲ್ಪಟ್ಟ ಕೇಸರವುಳ್ಳ, ಪದ್ಮಚಕ್ರಧಾರಿಯಾದ, ಉಗುರಿನ ಕೊನೆಯಿಂದ ದೈತ್ಯಪತಿಯಾದ ಹಿರಣ್ಯಕಶಿಪುವನ್ನು ಸೀಳಿದ, ಜ್ವಾಲೆಯ ಮಾಲಿಕೆಯಿಂದ ಯುಕ್ತನಾದ, ಪ್ರಕಾಶಮಾನನಾದ, ನಾಲಿಗೆ ಮತ್ತು ಮೂರು ಕಣ್ಣುಗಳು ಇವುಗಳುಳ್ಳ, ಕೋರೆಹಲ್ಲಿನಿಂದ ಭಯಂಕರವಾದ ಮುಖವುಳ್ಳ, ಭೂಮಿ, ಜಲ, ಆಕಾಶಗಳಲ್ಲಿ ವ್ಯಾಪ್ತನಾದ ನರಸಿಂಹನು ನಮ್ಮನ್ನು ಯಾವಾಗಲೂ ರಕ್ಷಿಸಲಿ ಎಂದು ಧ್ಯಾನಮಾಡಬೇಕು.

೩೬-೩೮. ಈ ರೀತಿಯಾಗಿ ಧ್ಯಾನಿಸಿ ಮಹಾತ್ಮನಾದ ನರಸಿಂಹನ ಮುದ್ರೆಯನ್ನು ತೋರಿಸಬೇಕು. ತುಟಿಯ ಕೆಳಭಾಗ, ತುಟಿ ಇವೆರಡನ್ನೂ ಮೊಣಕಾಲುಗಳ ಮಧ್ಯಭಾಗದಲ್ಲಿ ಸಮನಾಗಿ ಸೇರಿಸಿ, ಕೈಗಳನ್ನು ಭೂಮಿಯಲ್ಲಿ

ಏಷಾ ಮುದ್ರಾ ನಾರಸಿಂಹೀ ಪ್ರಧಾನೇತಿ ಪ್ರಕೀರ್ತಿತಾ ।
ನಾಮಸ್ಯಾಂಗುಷ್ಠತೋ ಬಧ್ವಾ ಕನಿಷ್ಠಾಮಂಗುಲಿತ್ರಯಂ ॥ ೩೮ ॥

ತ್ರಿಶೂಲವತ್ಸಮ್ಮುಖೋರ್ಧ್ವಂ ಕುರ್ಯಾನ್ಮುದ್ರಾಂ ನೃಸಿಂಹಗಾಂ ।
ಅಂಗುಷ್ಠಾಭ್ಯಾಂ ಚ ಕರಯೋಸ್ತಥಾಕ್ರಮ್ಯ ಕನಿಷ್ಠಕೇ ॥ ೩೯ ॥

ಅಧೋಮುಖಾಭಿಃ ಶಿಷ್ಟಾಭಿಃ ಶೇಷಾಭಿರ್ನ್ಯಹತಾ ತತಃ ।
ಹಸ್ತಾವಧೋಮುಖೌ ಕೃತ್ವಾ ನಾಭಿದೇಶೇ ಪ್ರಸಾರ್ಯ ಚ ॥ ೪೦ ॥

ತರ್ಜನೀಭ್ಯಾಂ ನಯೇತ್ಸ್ಕಂಧೌ ಪ್ರೋಕ್ತಾ ಚಾಂತ್ರಾಖ್ಯಮುದ್ರಿಕಾ ।
ಹಸ್ತಾವೂರ್ಧ್ವಮುಖೌ ಕೃತ್ವಾ ತಲೇ ಸಂಯೋಜ್ಯ ಮಧ್ಯಮೇ ॥ ೪೧ ॥

ಅನಾಮಾಯಾಂ ತು ವಾಮಾಯಾಂ ದಕ್ಷಿಣಾಂ ತು ವಿನಿಕ್ಷಿಪೇತ್ ।
ತರ್ಜನ್ಯೌ ಪೃಷ್ಠತೋ ಲಗ್ನಾ ಅಂಗುಷ್ಠೌ ತರ್ಜನೀಸ್ಥಿತೌ ॥ ೪೨ ॥

---

ಊರಿಕೊಂಡು, ಶರೀರವನ್ನು ಪುನಃ ಪುನಃ ನಡುಗಿಸುವವನಾಗಿ ಮುಖವನ್ನು ಕೋಪಾವಿಷ್ಟವನ್ನಾಗಿ ಮಾಡಿ, ನಾಲಗೆಯನ್ನು ಕಚ್ಚಿಕೊಂಡು ಕ್ರೋಧಾವೇಶವನ್ನು ಬೀರುವ ಅವಸ್ಥೆಯು ನರಸಿಂಹಮುದ್ರೆಯು. ಇದು ಪ್ರಧಾನವೆಂದು ಹೇಳಲ್ಪಟ್ಟಿದೆ.

೩೮-೩೯. ಎಡಗೈ ಹೆಬ್ಬೆಟ್ಟಿನಿಂದ ಕಿರುಬೆಟ್ಟನ್ನು ಮಡಿಸಿ ಹಿಡಿದು, ಉಳಿದ ಮೂರು ಬೆಟ್ಟುಗಳನ್ನು ತ್ರಿಶೂಲದಂತೆ ಮೇಲಕ್ಕೆತ್ತಿ ನರಸಿಂಹಮುದ್ರೆಯನ್ನು ಮಾಡಬೇಕು.

೩೯-೪೧. ಎರಡು ಕೈಗಳಲ್ಲಿಯೂ ಹೆಬ್ಬೆಟ್ಟಿನಿಂದ ಕಿರುಬೆರಳನ್ನು ಹಿಡಿದು ಉಳಿದ ಬೆಟ್ಟುಗಳನ್ನು ಒಟ್ಟಾಗಿ ಸೇರಿಸಿ, ಕೆಳಕ್ಕೆ ಬಗ್ಗಿಸಿ, ಕೈಗಳನ್ನು ಅಧೋಮುಖವಾಗಿಟ್ಟುಕೊಂಡು, ಅವನ್ನು ನಾಭಿಪ್ರದೇಶದಲ್ಲಿ, ಪ್ರಸರಿಸಿ, ತರ್ಜನಿಗಳಿಂದ ಸ್ಕಂಧಪ್ರದೇಶಗಳನ್ನು ಮುಟ್ಟುವಂತಹ ದೃಶ್ಯವು ಆಂತ್ರಮುದ್ರಿಕೆಯೆಂದ ಉಕ್ತವಾಗಿದೆ.

೪೧-೪೩. ಕೈಗಳನ್ನು ಊರ್ಧ್ವಮುಖವಾಗಿ ಮಾಡಿಕೊಂಡು, ಅಂಗೈಯಲ್ಲಿ ಮಧ್ಯಮ ಬೆರಳುಗಳನ್ನು ಸೇರಿಸಿ, ಎಡಗೈಯ ಅನಾಮಿಕಾ ಎಂಬ ಬೆಟ್ಟೆ

ಚಕ್ರಮುದ್ರಾಭವೇದೇಷಾ ನೃಹರೇಸ್ಸನ್ನಿಧೌ ಮತಾ ।
ಚಕ್ರಮುದ್ರಾಂ ತಥಾ ಕೃತ್ವಾ ತರ್ಜನೀಭ್ಯಾಂ ತು ಮಧ್ಯಮೇ ॥ ೪೩ ॥

ಪೀಡಯೇದ್ದಂಷ್ಟ್ರಮುದ್ರೈಷಾ ಸರ್ವಪಾಪಪ್ರಣಾಶಿನೀ ।
ಏತಾ ಮುದ್ರಾ ನೃಸಿಂಹಸ್ಯ ಸರ್ವಮಂತ್ರೇಷು ಸಂಮತಾಃ ॥ ೪೪ ॥

ವರ್ಣಲಕ್ಷಂ ಜಪೇನ್ಮಂತ್ರಂ ತದ್ದಶಾಂಶಂ ಚ ಪಾಯಸೈಃ ।
ಘೃತಾಕ್ತೈರ್ಜುಹುಯಾದ್ವನ್ಹೌ ಪೀಠೇ ಪೂರ್ವೋದಿತೇರ್ಚಯೇತ್ ॥ ೪೫ ॥

ಅಂಗಾನ್ಯಾದೌ ಸಮಾರಾಧ್ಯ ದಿಕ್ಪತ್ರೇಷು ಯಜೇತ್ಪುನಃ ।
ಗರುಡಾದೀನ್ ಶ್ರೀಮುಖಾಂಶ್ಚ ವಿದಿಕ್ಷು ಲೋಕಪಾನ್ಬಹಿಃ ॥ ೪೬ ॥

---

ನಲ್ಲಿ ಬಲಗೈ ಅನಾಮಿಕೆಯನ್ನಿಟ್ಟು, ತರ್ಜನಿಗಳನ್ನು ಹಿಂದಕ್ಕೆ ಬಗ್ಗಿಸಿ, ಹೆಬ್ಬೆಟ್ಟುಗಳನ್ನು ತರ್ಜನಿಗಳಿಗಾಶ್ರಿತಗಳನ್ನಾಗಿ ಮಾಡಿಕೊಂಡು ನರಸಿಂಹನ ಸನ್ನಿಧಿಯಲ್ಲಿ ತೋರಿಸುವ ದೃಶ್ಯವು ಚಕ್ರಮುದ್ರೆಯೆನಿಸುವುದು.

೪೩-೪೪. ಹಾಗೆಯೇ ಚಕ್ರಮುದ್ರೆಯನ್ನು ಮಾಡಿ, ತರ್ಜನೀಬೆರಳುಗಳಿಂದ ಮಧ್ಯಮ ಬೆರಳುಗಳನ್ನು ಒತ್ತಿಹಿಡಿದರೆ ಅದು ದಂಷ್ಟ್ರಮುದ್ರೆಯೆನಿಸುವುದು. ಅದು ಸಕಲ ಪಾಪಪರಿಹಾರಕವು. ಈ ನರಸಿಂಹ ಮುದ್ರೆಗಳು ಸಕಲ ಮಂತ್ರಗಳಲ್ಲಿಯೂ ಪ್ರದರ್ಶಿಸಲ್ಪಡತಕ್ಕುವುಗಳೆಂದು ಜ್ಞಾನಿಗಳ ಮತವು.

೪೫. ಈ ಮಂತ್ರವನ್ನು ಮೂವತ್ತೆರಡುಲಕ್ಷ ಜಪಮಾಡಬೇಕು. ಅದರಹತ್ತನೆಯ ಒಂದು ಭಾಗದಷ್ಟು ಹೋಮವನ್ನು ತುಪ್ಪದಿಂದ ಅಭಿಗಾರ ಮಾಡಲ್ಪಟ್ಟ ಪಾಯಸಗಳಿಂದ ಅಗ್ನಿಯಲ್ಲಿ ಮಾಡಬೇಕು. ಪೂರ್ವೋಕ್ತಪೀಠದಲ್ಲಿ ಪೂಜೆಮಾಡಬೇಕು.

೪೬. ಆದಿಯಲ್ಲಿ ಅಂಗಗಳನ್ನು ಪೂಜಿಸಿ, ದಿಕ್ಪತ್ರಗಳಲ್ಲಿ ಪುನಃ ಗರುಡಾದಿಗಳನ್ನು, ಆಗ್ನೇಯಾದಿ ಕೋಣಗಳಲ್ಲಿ ಶ್ರೀ ಮುಂತಾದವರನ್ನೂ, ಬಾಹ್ಯದಲ್ಲಿ ಲೋಕಪಾಲಕರನ್ನೂ ಪೂಜಿಸಬೇಕು.

ಏವಂ ಸಂಸಾಧಿತೋ ಮಂತ್ರಃ ಸರ್ವಾನ್ಕಾಮಾನ್ಪ್ರಪೂರಯೇತ್ ।
ಸೌಮ್ಯೇ ಕಾರ್ಯೇ ಸ್ಮರೇತ್ಸೌಮ್ಯಂ ಕ್ರೂರಂ ಕ್ರೂರೇ ಸ್ಮರೇದ್ಬುಧಃ ॥ ೪೭ ॥

ಪೂರ್ವಮೃತ್ಯುಪದೇ ಶತ್ರೋರ್ನಾಮ ಕೃತ್ವಾ ಸ್ವಯಂ ಹರಿಃ ।
ನಿಶಿತೈರ್ನಖದಂಷ್ಟ್ರಾಗ್ರೈಃ ಖಾದ್ಯಮಾನಂ ಚ ಸಂಸ್ಮರೇತ್ ॥ ೪೮ ॥

ಅಷ್ಟೋತ್ತರಶತಂ ನಿತ್ಯಂ ಜಪೇನ್ಮಂತ್ರಮತಂದ್ರಿತಃ ।
ಜಾಯತೇ ಮಂಡಲಾದರ್ವಾಕ್ ಶತ್ರುರ್ವೈವಸ್ವತಾತಿಥಿಃ ॥ ೪೯ ॥

ಧ್ಯಾನಭೇದಾನಥೋ ವಕ್ಷ್ಯೇ ಸರ್ವಸಿದ್ಧಿಪ್ರದಾಯಕಾನ್ ।
ಶ್ರೀಕಾಮಸ್ಸತತಂ ಧ್ಯಾಯೇತ್ಪೂರ್ವೋಕ್ತಂ ನೃಹರಿಂ ಸಿತಂ ॥ ೫೦ ॥

ವಾಮಾಂಕಸ್ಥಿತಯಾ ಲಕ್ಷ್ಮ್ಯಾಽಲಿಂಗಿತಂ ಪದ್ಮಹಸ್ತಯಾ ।
ವಿಷಮೃತ್ಯುಪರೋಗಾದಿಸರ್ವೋಪದ್ರವನಾಶನಂ ॥ ೫೧ ॥

ನರಸಿಂಹಂ ಮಹಾಭೀಮಂ ಕಾಲಾನಲಸಮಪ್ರಭಂ ।
ಆಂತ್ರಮಾಲಾಧರಂ ರೌದ್ರಂ ಕಂಠಹಾರೇಣ ಭೂಷಿತಂ ॥ ೫೨ ॥

---

೪೭. ಈ ರೀತಿ ಸಾಧಿಸಲ್ಪಟ್ಟ ಮಂತ್ರವು ಸಕಲೇಷ್ಟಾರ್ಥಗಳನ್ನೂ ಪೂರ್ಣಗೊಳಿಸುವುದು. ಸೌಮ್ಯಕಾರ್ಯದಲ್ಲಿ ಸೌಮ್ಯಮೂರ್ತಿಯನ್ನೂ ಕ್ರೂರಕಾರ್ಯದಲ್ಲಿ ಭಯಂಕರ ಮೂರ್ತಿಯನ್ನೂ ಧ್ಯಾನಿಸಬೇಕು.

೪೮. ಮಂತ್ರದ ಮೊದಲಿನ ಮೃತ್ಯು ಪದಸ್ಥಾನದಲ್ಲಿ ಶತ್ರುವಿನ ನಾಮವನ್ನುಸೇರಿಸಿ ನರಸಿಂಹನೇ ತನ್ನಲ್ಲಿ ನಿಂತು ಮೊನೆಯಾಗಿರುವ ಉಗುರು, ಕೋರೆ ಹಲ್ಲು ಇವುಗಳ ಅಗ್ರಭಾಗಗಳಿಂದ ಅವನನ್ನು ಸೀಳುತ್ತಿರುವನೆಂದು ಅನುಸಂಧಾನಮಾಡಿ ನರಹರಿಯನ್ನು ಧ್ಯಾನಿಸಬೇಕು.

೪೯. ಜಪಕರ್ತನು ಆಲಸ್ಯವಿಲ್ಲದೆ ನಿತ್ಯವೂ ನೂರೆಂಟಾವರ್ತಿ ಈ ಮಂತ್ರವನ್ನು ಜಪಿಸಬೇಕು- ಹಾಗೆ ಜಪಿಸಿದರೆ ಒಂದು ಮಂಡಲಕ್ಕಿಂತ ಮುಂಚೆಯೇ ಶತ್ರುವು ಯಮನಿಗೆ ಅತಿಥಿಯಾಗುವನು. ಎಂದರೆ ಸಾಯುವನು.

೫೦-೫೭. ಈಗ ಸಕಲ ಸಿದ್ಧಿ ಪ್ರದಾಯಕಗಳಾದ ಧ್ಯಾನಪ್ರಭೇದಗಳನ್ನು ಹೇಳುವೆನು:— ಸಂಪತ್ತನ್ನು ಬಯಸುವವನು, ಎಡತೊಡೆಯಮೇಲೆ ಕುಳಿತಿರುವ, ಕೈಯಲ್ಲಿ ಪದ್ಮವನ್ನು ಧರಿಸಿರುವ ಲಕ್ಷ್ಮೀದೇವಿಯಿಂದ ಆಲಿಂಗಿಸಲ್ಪಟ್ಟ

**ನಾಗಯಜ್ಞೋಪವೀತಂ ಚ ಪಂಚಾನನಸುಶೋಭಿತಂ ।**
**ಚಂದ್ರಮೌಳಿಂ ನೀಲಕಂಠಂ ಪ್ರತಿವಕ್ತ್ರಂ ತ್ರಿನೇತ್ರಕಂ ॥ ೫೩ ॥**

**ಭುಜೈಃ ಪರಿಘಸಂಕಾಶೈರ್ದಶಭಿಶ್ಚೋಪಶೋಭಿತಂ ।**
**ಅಕ್ಷಸೂತ್ರಂ ಗದಾಪದ್ಮಂ ಶಂಖ ಗೋಕ್ಷೀರಸನ್ನಿಭಂ ॥ ೫೪ ॥**

**ಧನುಶ್ಚ ಮುಸಲಂ ಚೈವ ಬಿಭ್ರಾಣಂ ಚಕ್ರಮುತ್ತಮಂ ।**
**ಖಡ್ಗಂ ಶೂಲಂ ಚ ಬಾಣಂ ಚ ನೃಹರಿಂ ರುದ್ರರೂಪಿಣಂ ॥ ೫೫ ॥**

**ಇಂದ್ರಚಾಪಾಭನೀಲಾಭಂ ಚಂದ್ರಾಭಂ ಸ್ವರ್ಣಸನ್ನಿಭಂ ।**
**ಪೂರ್ವಾದಿಚೋತ್ತರಂ ಯಾವದೂರ್ಧ್ವಾಸ್ಯಂ ಸರ್ವವರ್ಣಕಂ ॥ ೫೬ ॥**

**ಏವಂ ಧ್ಯಾತ್ವಾ ಜಪೇನ್ಮಂತ್ರೀ ಸರ್ವವ್ಯಾಧಿವಿಮುಕ್ತಯೇ ।**
**ಸರ್ವಮೃತ್ಯುಹರಂ ದಿವ್ಯಂ ಸ್ಮರಣಾತ್ಸರ್ವಸಿದ್ಧಿದಂ ॥ ೫೭ ॥**

---

ಶುಕ್ಲವರ್ಣೋಪೇತನಾದ, ಪೂರ್ವೋಕ್ತನರಹರಿಯನ್ನು ಯಾವಾಗಲೂ ಧ್ಯಾನಿಸಬೇಕು. ವಿಷ, ಮೃತ್ಯು, ಉಪರೋಗ, ಮುಂತಾದ ಸಕಲ ರೋಗಗಳನ್ನೂ ನಾಶಪಡಿಸುವಂತಹ, ಮಹಾಭಯಂಕರನಾದ, ಕಾಲಾಗ್ನಿಗೆ ಸಮಾನವಾದ ಕಾಂತಿಯುಳ್ಳ, ಕರಳಿನ ಮಾಲೆಯನ್ನು ಧರಿಸಿರುವ, ಉಗ್ರರೂಪಿಯಾದ, ಕಂಠ ಹಾರದಿಂದ ಅಲಂಕರಿಸಲ್ಪಟ್ಟ, ಸರ್ಪವನ್ನು ಯಜ್ಞೋಪವೀತದಂತೆ ಧರಿಸಿರುವ, ಐದು ಮುಖಗಳಿಂದ ಅಲಂಕೃತವಾದ, ಶಿರಸ್ಸಿನಲ್ಲಿ ಚಂದ್ರನನ್ನಿಟ್ಟುಕೊಂಡಿರುವ ಕಂಠದಲ್ಲಿ ನೀಲವುಳ್ಳ, ಒಂದೊಂದು ಮುಖದಲ್ಲಿಯೂ ಮೂರು ಕಣ್ಣುಗಳುಳ್ಳ, ಲೋಹದಂಡದಂತಿರುವ ಹತ್ತು ಭುಜಗಳಿಂದ ಶೋಭಿಸುತ್ತಿರುವ, ಅಕ್ಷಸೂತ್ರ, ಗದೆ, ಪದ್ಮ, ಗೋಕ್ಷೀರಸದೃಶವಾದ ಶಂಖ, ಧನುಸ್ಸು, ಮುಸಲ, ಉತ್ತಮವಾದ ಚಕ್ರ, ಖಡ್ಗ, ಶೂಲ ಮತ್ತು ಬಾಣ ಇವುಗಳನ್ನು ಧರಿಸಿರುವ, ಇಂದ್ರನಧನುಸ್ಸಿನಂತೆ ಹೊಳೆಯುತ್ತಿರುವ ನೀಲವರ್ಣವುಳ್ಳ, ಚಂದ್ರನಂತೆ ಪ್ರಕಾಶಿಸುತ್ತಿರುವ, ಸುವರ್ಣಸದೃಶ ಕಾಂತಿಯುಳ್ಳ, ಪೂರ್ವದಿಂದ ಉತ್ತರದವರೆಗೂ ವಿಸ್ತಾರವಾಗಿರುವ ಬಾಯುಳ್ಳ, ಸಕಲ ವರ್ಣಗಳುಳ್ಳ, ಉಗ್ರರೂಪಿಯಾದ ನರಹರಿಯನ್ನು ಉಕ್ತಪ್ರಕಾರ ಧ್ಯಾನಿಸಿ, ಜಪಕರ್ತನು ಸಕಲ ರೋಗಪರಿಹಾರಕ್ಕಾಗಿ ಸರ್ವಮೃತ್ಯುಪರಿಹಾರಕವೂ, ಸ್ಮರಣೆಮಾಡುವ ಮಾತ್ರದಿಂದ ಸಕಲಸಿದ್ಧಿಪ್ರದವೂ, ಆಗಿರುವ ದಿವ್ಯನರಸಿಂಹಮಂತ್ರವನ್ನು ಜಪಿಸಬೇಕು.

ಧ್ಯಾಯೇದ್ಯದಾ ಮಹತ್ಕರ್ಮ ತದಾ ಷೋಡಶಹಸ್ತವಾನ್ ।
ನೃಸಿಂಹಃ ಸರ್ವಲೋಕೇಶಃ ಸರ್ವಾಭರಣಭೂಷಿತಃ ॥ ೫೮ ॥

ದ್ವೌ ವಿದಾರಣಕರ್ಮಾಪ್ತೌ ದ್ವೌ ಚಾಂತ್ರೋದ್ಧರಣಾನ್ವಿತೌ ।
ಶಂಖಚಕ್ರಧರೌ ದ್ವೌ ತು ದ್ವೌ ಚ ಬಾಣಧನುರ್ಧರೌ ॥ ೫೯ ॥

ಖಡ್ಗಖೇಟಧರೌ ದ್ವೌ ಚ ದ್ವೌ ಗದಾಪದ್ಮಧಾರಿಣೌ ।
ಪಾಶಾಂಕುಶಧರೌ ದ್ವೌ ಚ ದ್ವೌ ರಿಪೋರ್ಮುಕುಟಾರ್ಪಿತೌ ॥ ೬೦ ॥

ಇತಿ ಷೋಡಶದೋರ್ದಂಡಮಂಡಿತಂ ನೃಹರಿಂ ವಿಭುಂ ।
ಧ್ಯಾಯೇನ್ನಾರದ ನೀಲಾಭಮುಗ್ರಕರ್ಮಣ್ಯನನ್ಯಧೀಃ ॥ ೬೧ ॥

ಧ್ಯೇಯೋ ಮಹತ್ತಮೇ ಕಾರ್ಯೇ ದ್ವಾತ್ರಿಂಶದ್ಧಸ್ತವಾನ್ಬುಧೈಃ ।
ನೃಸಿಂಹಃ ಸರ್ವಭೂತೇಶಃ ಸರ್ವಸಿದ್ಧಿಕರಃ ಪರಃ ॥ ೬೨ ॥

---

೫೮. ಮಹಾಕಾರ್ಯಸಿದ್ಧಿಯನ್ನು ಪಡೆಯಬೇಕೆಂದು ಅಪೇಕ್ಷಿಸಿದಾಗ ಸಕಲ ಲೋಕೇಶ್ವರನು, ಸರ್ವಾಭರಣಾಲಂಕೃತನು, ಹದಿನಾರು ಹಸ್ತಗಳುಳ್ಳವನೂ ಆದ ನರಸಿಂಹನನ್ನು ಧ್ಯಾನಿಸಬೇಕು.

೫೯-೬೧. ದೈತ್ಯನನ್ನು ಸೀಳುತ್ತಿರುವ ಎರಡು ಹಸ್ತಗಳು, ಕರುಳನ್ನು ತೆಗೆಯುತ್ತಿರುವುದು ಎರಡು, ಶಂಖ, ಚಕ್ರಗಳನ್ನು ಧರಿಸಿರುವವೆರಡು, ಬಾಣ, ಧನುಸ್ಸನ್ನುಧರಿಸಿರುವವೆರಡು, ಖಡ್ಗ, ಖೇಟಧಾರಿಗಳೆರಡು, ಗದೆ, ಪದ್ಮಗಳನ್ನು ಹಿಡಿದಿರುವವೆರಡು, ಪಾಶ, ಅಂಕುಶಗಳನ್ನು ಧರಿಸಿರುವವೆರಡು, ಶತ್ರುವಿನ ಶಿರಸ್ಸನ್ನು ಹಿಡಿದುಕೊಂಡಿರುವವೆರಡು ಈ ರೀತಿ ಒಟ್ಟು ಹದಿನಾರು ದಂಡದಂತಿರುವ ಹಸ್ತಗಳಿಂದ ಅಲಂಕೃತನು, ನೀಲಮೇಘಶ್ಯಾಮನೂ ಆಗಿರುವ ನರಹರಿ ಸ್ವಾಮಿಯನ್ನು ಅನನ್ಯಮನಸ್ಕನಾಗಿ ಕ್ರೂರಕರ್ಮಗಳ ಸಿದ್ಧಿಗಾಗಿ ಧ್ಯಾನಿಸಬೇಕು.

೬೨. ಅತ್ಯಂತ ಮಹತ್ತಾದ ಕಾರ್ಯಸಿದ್ಧಿಯನ್ನು ಪಡೆಯಬೇಕಾದರೆ ಸಕಲ ಪ್ರಾಣಿಗಳಿಗೂ ಸ್ವಾಮಿಯು, ಸಕಲ ಸಿದ್ಧಿಪ್ರದನು, ಸರ್ವೋತ್ತಮನು, ಮುವತ್ತೆರಡು ಹಸ್ತಗಳುಳ್ಳವನೂ ಆಗಿರುವ ನರಸಿಂಹನು ಧ್ಯಾನಿಸಲ್ಪಡಬೇಕು

ದಕ್ಷಿಣೇ ಚಕ್ರಪದ್ಮೇ ಚ ಪರಶುಂ ಪಾಶಮೇವ ಚ ।
ಹಲಂ ಚ ಮುಸಲಂ ಚೈವ ಅಭಯಂ ಚಾಂಕುಶಂ ತಥಾ ॥ ೬೩ ॥

ಪಟ್ಟಿಶಂ ಭಿಂದಿಪಾಲಂ ಚ ಖಡ್ಗಮುದ್ಗರತೋಮರಾನ್ ।
ವಾಮಭಾಗೇ ಕರೈಃ ಶಂಖಂ ಖೇಟಂ ಪಾಶಂ ಚ ಶೂಲಕಂ ॥ ೬೪ ॥

ಅಗ್ನಿಂ ಚ ವರದಂ ಶಕ್ತಿಂ ಕುಂಡಿಕಾಂ ಚ ತತಃ ಪರಂ ।
ಕಾರ್ಮುಕಂ ತರ್ಜನೀಮುದ್ರಾಂ ಗದಾಂ ಡಮರುಶೂರ್ಪಕೌ ॥ ೬೫ ॥

ದ್ವಾಭ್ಯಾಂ ಕರಾಭ್ಯಾಂ ಚ ರಿಪೋರ್ಜಾನುಮಸ್ತಕಪೀಡನಂ ।
ಊರ್ಧ್ವೀಕೃತಾಭ್ಯಾಂ ಬಾಹುಭ್ಯಾಂ ಆಂತ್ರಮಾಲಾಧರಂ ವಿಭುಂ ॥ ೬೬ ॥

ಅಧಃ ಸ್ಥಿತಾಭ್ಯಾಂ ಬಾಹುಭ್ಯಾಂ ಹಿರಣ್ಯಕವಿದಾರಣಂ ।
ಪ್ರಿಯಂ ಕರಂ ಚ ಭಕ್ತಾನಾಂ ದೈತ್ಯಾನಾಂ ಚ ಭಯಂಕರಂ ॥ ೬೭ ॥

ನೃಸಿಂಹಂ ತಂ ಸ್ಮರೇದಿತ್ಥಂ ಮಹಾಮೃತ್ಯುಭಯಾಪಹಂ ।
ಏವಂ ಧ್ಯಾತ್ವಾ ಜಪೇನ್ಮಂತ್ರೀ ಸರ್ವಕಾರ್ಯಾರ್ಥಸಿದ್ಧಯೇ ॥ ೬೮ ॥

---

೬೩-೬೮. ಬಲಭಾಗದ ಕೈಗಳಲ್ಲಿ ಚಕ್ರ, ಪದ್ಮ, ಕೊಡಲಿ, ಪಾಶ, ನೇಗಿಲು, ಒನಕೆ, ಅಭಯಮುದ್ರೆ, ಅಂಕುಶ, ಪಟ್ಟಿಶ, (ಸುತ್ತಿಗೆ) ಕೈಗುದ್ದಲಿ ಕತ್ತಿ, ಮುದ್ಗರ, ತೋಮರ ಇವುಗಳನ್ನೂ ಎಡಭಾಗದ ಕೈಗಳಲ್ಲಿ ಶಂಖ, ಖೇಟ, ಪಾಶ, ಶೂಲ, ಅಗ್ನಿ, ವರದ, ಶಕ್ತಿ, ಕುಂಡಿಕೆ, ಕಾರ್ಮುಕ, ತರ್ಜನೀಮುದ್ರೆ, ಗದೆ, ಡಮರು, ಶೂರ್ಪ ಇವುಗಳನ್ನು ಧರಿಸಿ, ಎರಡು ಕೈಗಳಿಂದ ಶತ್ರುವಿನ ತಲೆ ಮೊಣಕಾಲುಗಳನ್ನು ಬಗೆಯುತ್ತಾ, ಬಾಹುಗಳೆರಡನ್ನು ಮೇಲಕ್ಕೆತ್ತಿ ಕರಳಿನ ಮಾಲೆಯನ್ನು ಹಿಡಿದಿರುವ, ಕೆಳಗಿನ ಎರಡು ಬಾಹುಗಳಿಂದ ಹಿರಣ್ಯಕಶಿಪುವನ್ನು ಸೀಳುತ್ತಿರುವ, ಭಕ್ತರಿಗೆ ಇಷ್ಟಾರ್ಥವನ್ನು ಕೊಡುತ್ತಿರುವ, ದೈತ್ಯರಿಗೆ ಭಯಂಕರವಾದ, ಮಹಾಮೃತ್ಯುಭಯವನ್ನು ಪರಿಹರಿಸುವಂತಹ ಆನೃಸಿಂಹನನ್ನು ಈ ರೀತಿ ಧ್ಯಾನಿಸಬೇಕು. ಈ ಪ್ರಕಾರ ಧ್ಯಾನಿಸಿ ಮಂತ್ರಿಯು ಸಕಲ ಇಷ್ಟಾರ್ಥಸಿದ್ಧಿಯನ್ನು ಪಡೆಯಲು ಮಂತ್ರಜಪಮಾಡಬೇಕು.

ಅಥೋಚ್ಯತೇ ಧ್ಯಾನಮನ್ಯನ್ಮುಖರೋಗಹರಂ ಶುಭಂ ।
ಸ್ವರ್ಣವರ್ಣಸುಪರ್ಣಸ್ಥಂ ವಿದ್ಯುನ್ಮಾಲಾಸಟಾನ್ವಿತಂ　　॥ ೬೯ ॥

ಕೋಟಿಪೂರ್ಣೇಂದುವರ್ಣಂ ಚ ಸುಮುಖಂ ತ್ರ್ಯಕ್ಷವೀಕ್ಷಣಂ ।
ಪೀತವಸ್ತ್ರೋರುಭೂಷಾಢ್ಯಂ ನೃಸಿಂಹಂ ಶಾಂತವಿಗ್ರಹಂ ।
ಚಕ್ರಶಂಖಾಭಯವರಾನ್ದಧತಂ ಕರಪಲ್ಲವೈಃ　　॥ ೭೦ ॥

ಕ್ಷ್ವೇಲರೋಗಾದಿಶಮನಂ ಸ್ವೈರ್ಧ್ಯಾನೈಸ್ಸುರವಂದಿತಂ ।
ಶತ್ರೋಸ್ಸೇನಾನಿರೋಧೇನ ಯತ್ನಂ ಕುರ್ಯಾಚ್ಚ ಸಾಧಕಂ　　॥ ೭೧ ॥

ಅಕ್ಷಕಾಷ್ಠೈರೇಧಿತೇಗ್ನೌ ವಿಚಿಂತ್ಯ ರಿಪುಮರ್ದನಂ ।
ದೇವಂ ನೃಸಿಂಹಂ ಸಂಪೂಜ್ಯ ಕುಸುಮಾದ್ಯುಪಚಾರಕೈಃ　　॥ ೭೨ ॥

ಸಮೂಲಮೂಲೈರ್ಜುಹುಯಾಚ್ಛರೈರ್ದಶಶತಂ ಪೃಥಕ್ ।
ರಿಪುಂ ಖಾದನ್ನಿವ ಜಪೇನ್ನಿರ್ದಹನ್ನಿವ ತಂ ಕ್ಷಿಪೇತ್　　॥ ೭೩ ॥

---

೬೯-೭೧. ಈಗ ಮುಖರೋಗಪರಿಹಾರಕವಾದ ಬೇರೆ ಮಂಗಳಧ್ಯಾನವನ್ನು ಹೇಳುವೆನು :—ಬಂಗಾರ ಬಣ್ಣದ ಗರುಡನ ಮೇಲೆ ಕುಳಿತಿರುವ, ಮಿಂಚಿನಂತೆ ಹೊಳೆಯುತ್ತಿರುವ ಮಾಲಿಕೆಯನ್ನು ಧರಿಸಿರುವ, ಕೋಟಿ ಪೂರ್ಣಚಂದ್ರರಂತೆ ಶುಭ್ರವರ್ಣವುಳ್ಳ, ಸೌಮ್ಯಮುಖವನ್ನು ಹೊಂದಿರುವ, ಮೂರು ಕಣ್ಣುಗಳಿಂದ ನೋಡುತ್ತಿರುವ, ಪೀತಾಂಬರ ಮತ್ತು ಉತ್ಕೃಷ್ಟಾಭರಣಗಳಿಂದ ಕೂಡಿದ ತನ್ನ ಧ್ಯಾನಮಾತ್ರದಿಂದ ವಿಷ, ರೋಗಾದಿಗಳನ್ನು ನಾಶಮಾಡುವ, ದೇವತೆಗಳಿಂದ ನಮಸ್ಕೃತನಾದ ನರಸಿಂಹನನ್ನು ಧ್ಯಾನಿಸಬೇಕು. ಶತ್ರುವಿನ ಸೈನ್ಯವನ್ನು ತಡೆಯಲು ಸಾಧಕಯತ್ನವನ್ನು ಮಾಡಬೇಕು.

೭೨-೭೩. ತಾರೇಕಟ್ಟಿಗೆಗಳಿಂದ ಜಾಜ್ವಲ್ಯಮಾನವಾದ ಅಗ್ನಿಯಲ್ಲಿ ಶತ್ರುಮರ್ದನವನ್ನು ಅನುಸಂಧಾನಮಾಡಿ, ಪುಷ್ಪ ಮುಂತಾದ ಉಪಚಾರಗಳಿಂದ ನರಸಿಂಹಸ್ವಾಮಿಯನ್ನು ಪೂಜಿಸಿ, ಬುಡಸಹಿತವಾದ ಶಿಫೆಗಳಿಂದ ಕೂಡಿದ ಕಾಗಿಬಿದುರುಗಳಿಂದ ಬೇರೆಯಾಗಿ ಒಂದು ಸಾವಿರ ಹೋಮವನ್ನು ಮಾಡಬೇಕು. ಶತ್ರುವನ್ನು ತಿನ್ನುವಂತೆ, ಜಪಿಸಬೇಕು. ಅವನನ್ನು ಸುಡುವಂತೆ ಎಸೆಯಬೇಕು.

ಹುತ್ವಾ ಸಪ್ತದಿನಂ ಮಂತ್ರೀ ಸೇನಾಮಿಷ್ಟಾಂ ಮಹೀಪತೇಃ ।
ಪ್ರಸ್ಥಾಪಯೇಚ್ಛುಭೇ ಲಗ್ನೇ ಪರರಾಷ್ಟ್ರಜಯೇಚ್ಛಯಾ ॥ ೭೪ ॥

ತಸ್ಯಾಃ ಪುರಸ್ತಾನ್ನೃಹರಿಂ ನಿಘ್ನಂತಂ ರಿಪುಮಂಡಲಂ ।
ಸ್ಮೃತ್ವಾ ಜಪಂ ಪ್ರಕುರ್ವೀತ ಯಾವದಾಯಾತಿ ಸಾ ಪುನಃ ॥ ೭೫ ॥

ನಿರ್ಜಿತ್ಯ ನಿಖಿಲಾನ್ ಶತ್ರೂನ್ ಸಹ ವೀರಶ್ರಿಯಾ ಸುಖಾತ್ ।
ಪ್ರೀಣಯೇನ್ಮಂತ್ರಿಣಂ ರಾಜಾ ವಿಭವೈಃ ಪ್ರೀತಮಾನಸಃ ॥ ೭೬ ॥

ಗಜಾಶ್ವ ರಥರತ್ನೈಶ್ಚ ಗ್ರಾಮಕ್ಷೇತ್ರಧನಾದಿಭಿಃ ।
ಯದಿ ಮಂತ್ರೀ ನ ತುಷ್ಯೇತ ತದಾನರ್ಥೋ ಮಹೀಪತೇಃ ॥ ೭೭ ॥

ಜಾಯತೇ ತಸ್ಯ ರಾಷ್ಟ್ರೇಷು ಪ್ರಾಣೇಭ್ಯೋಽಪಿ ಮಹಾಭಯಂ ।
ಅಷ್ಟೋತ್ತರಶತಂ ಮೂಲಮಂತ್ರಮಂತ್ರಿತಭಸ್ಮನಾ ॥ ೭೮ ॥

---

೭೪. ಈ ಪ್ರಕಾರ ಏಳು ದಿನಗಳು ಹೋಮಮಾಡಿ, ಮಂತ್ರಿಯು ಇಷ್ಟವಾದ ದೊರೆಯ ಸೈನ್ಯವನ್ನು ಶುಭಲಗ್ನದಲ್ಲಿ ಶತ್ರುದೇಶವನ್ನು ಜಯಿಸುವುದಕ್ಕಾಗಿ ಹೊರಡಿಸಬೇಕು.

೭೫-೭೬. ಆ ಸೈನ್ಯದ ಮುಂಭಾಗದಲ್ಲಿ ಶತ್ರುಸಂಘವನ್ನು ಸಂಹರಿಸುವಂತಹ ನರಸಿಂಹನನ್ನು ಧ್ಯಾನಿಸುತ್ತಾ ಆ ಸೇನೆಯು ಸಕಲ ಶತ್ರುವನ್ನೂ ಸೋಲಿಸಿ ವೀರಸಂಪತ್ತಿನೊಡನೆ ಸುಖವಾಗಿ ಪುನಃ ಹಿಂತಿರುಗಿ ಬರುವವರೆಗೂ ಜಪವನ್ನು ಮಾಡುತ್ತಿರಬೇಕು. ಐಶ್ವರ್ಯಪ್ರಾಪ್ತಿಯಿಂದ ಸಂತುಷ್ಟನಾಗಿ ದೊರೆಯು ಮಂತ್ರಿಯನ್ನು ಸತ್ಕರಿಸಿ ಸಂತೋಷಪಡಿಸಬೇಕು.

೭೭. ಆನೆ, ಕುದುರೆ, ರಥ, ರತ್ನ, ಗ್ರಾಮ, ಭೂಮಿ ಮತ್ತು ಧನ ಮುಂತಾದುವುಗಳಿಂದ ಮಂತ್ರಿಯು ಸಂತುಷ್ಟನಾಗದಿದ್ದರೆ ದೊರೆಗೆ ಕೇಡುಂಟಾಗುವುದು.

೭೮-೭೯. ಅವನ ರಾಜ್ಯದಲ್ಲಿ ಪ್ರಾಣಭಯಕ್ಕಿಂತಲೂ ಹೆಚ್ಚಾದ ಭಯವು ಉಂಟಾಗುವುದು. ನೂರೆಂಟಾವರ್ತಿ ಮೂಲಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಭಸ್ಮವನ್ನು ಲೇಪನಮಾಡುವುದರಿಂದ ಹೆಗ್ಗಣ, ಜೇಡರಹುಳ ಮತ್ತು ಚೇಳು

**ನಾಶಯೇನ್ಮೂಷಿಕಾನಾತಾನ್ವೃಶ್ಚಿಕಾದ್ಯುತ್ಥಿತಂ ವಿಷಂ ।**
**ಲಿಪ್ತಾಂಗಃ ಸರ್ವರೋಗೈಶ್ಚ ಮುಚ್ಯತೇ ನಾತ್ರ ಸಂಶಯಃ ॥ ೭೯ ॥**

**ಸೇವಂತೀಕುಸುಮೈರ್ಹುತ್ವಾ ಮಹತೀಂ ಶ್ರಿಯಮಾಪ್ನುಯಾತ್ ।**
**ಔದುಂಬರಸಮಿದ್ಭಿಸ್ತು ಭವೇದ್ಧಾನ್ಯಸಮೃದ್ಧಿಮಾನ್ ॥ ೮೦ ॥**

**ಅಪೂಪಲಕ್ಷಹೋಮೇ ತು ಭವೇದ್ವೈಶ್ರವಣೋಪಮಃ ।**
**ಕ್ರುದ್ಧಸ್ಯ ಸನ್ನಿಧೌ ರಾಜ್ಞೋ ಜಪೇದಷ್ಟೋತ್ತರಂ ಶತಂ ॥ ೮೧ ॥**

**ಸದ್ಯೋ ನೈರ್ಮಲ್ಯಮಾಪ್ನೋತಿ ಪ್ರಸಾದಂ ಚಾಧಿಗಚ್ಛತಿ ।**
**ಕುಂದಪ್ರಸೂನೈರುದಯಂ ಮೋಚಾಭಿರ್ವಿಘ್ನನಾಶನಂ ॥ ೮೨ ॥**

**ತುಲಸೀಪತ್ರಹೋಮೇನ ಮಹತೀಂ ಕೀರ್ತಿಮಾಪ್ನುಯಾತ್ ।**
**ಶಾಲ್ಯುತ್ಥಸಕ್ತುಹೋಮೇನ ವಶಯೇದಖಿಲಂ ಜಗತ್ ॥ ೮೩ ॥**

---

ಮುಂತಾದುವುಗಳಿಂದ ಉಂಟಾಗುವ ವಿಷವು ನಾಶವಾಗುವುದು. ಆ ಭಸ್ಮವನ್ನು ಅವಯವಗಳಿಗೆಲ್ಲಾ ಲೇಪನಮಾಡಿದರೆ ಸಕಲ ರೋಗಗಳೂ ಹೋಗುವುವು. ಸಂದೇಹವಿಲ್ಲ.

೮೦. ಸೇವಂತಿಗೆ ಹೂವುಗಳಿಂದ ಹೋಮಮಾಡಿದರೆ ಮಹದೈಶ್ವರ್ಯವು ಲಭಿಸುವುದು. ಅತ್ತಿಯ ಸಮಿತ್ತುಗಳಿಂದ ಹೋಮಮಾಡಿದರೆ ಧಾನ್ಯ ಸಮೃದ್ಧಿಯುಂಟಾಗುವುದು.

೮೧-೮೩. ಅಪೂಪಗಳಿಂದ ಒಂದು ಲಕ್ಷ ಹೋಮಮಾಡಿದರೆ ಕುಬೇರ ನಿಗೆ ಸಮನಾದ ಧನಿಕನಾಗುವನು. ಕೋಪಗೊಂಡ ರಾಜನ ಸನ್ನಿಧಿಯಲ್ಲಿ ನೂರೆಂಟಾವರ್ತಿ ಜಪಮಾಡಿದರೆ ತತ್ಕ್ಷಣದಲ್ಲಿಯೇ ಕೋಪಪರಿಹಾರವಾಗು ವುದು ಮತ್ತು ರಾಜನ ಅನುಗ್ರಹವೂ ಲಭಿಸುವುದು. ಮಲ್ಲೇ ಹೂವುಗಳಿಂದ ಹೋಮಮಾಡಿದರೆ ಶ್ರೇಯೋಭಿವೃದ್ಧಿಯೂ, ಬಾಳೇಹಣ್ಣುಗಳಿಂದ ಹೋಮ ಮಾಡಿದರೆ ವಿಘ್ನಪರಿಹಾರವೂ, ತುಲಸೀಪತ್ರಗಳಿಂದ ಹೋಮಮಾಡಿದರೆ ಮಹಾಯಶಸ್ಸೂ ಲಭಿಸುವುದು. ಅಕ್ಕಿಹಿಟ್ಟಿನ ಹೋಮದಿಂದ ಸಕಲ ಜಗ ತ್ತನ್ನೂ ವಶಪಡಿಸಿಕೊಳ್ಳಬಹುದು.

ಮಧೂಕಪುಷ್ಪೈರಿಷ್ಟಂ ಸ್ಯಾತ್ತ್ಸಂಭನಂ ಧಾತ್ರಿಖಂಡಕೈಃ ।
ದಧಿಮಧ್ವಾಜ್ಯಮಿಶ್ರಾಂ ತು ಗುಡೂಚೀಂ ಚತುರಂಗುಲಾಂ ॥ ೮೪ ॥

ಜುಹುಯಾದಯುತಂ ಯೋಽಸೌ ಶತಂ ಜೀವತಿ ರೋಗಜಿತ್ ।
ಶನೈಶ್ಚರದಿನೇಽಶ್ವತ್ಥಂ ಸ್ಪೃಷ್ಟ್ವಾ ಚಾಷ್ಟೋತ್ತರಂ ಶತಂ ॥ ೮೫ ॥

ಜಪೇಜ್ಜಿತ್ವಾ ಸೋಽಪಮೃತ್ಯುಂ ಶತವರ್ಷಾಣಿ ಜೀವತಿ ।
ಅಥ ತೇ ಸಂಪ್ರವಕ್ಷ್ಯಾಮಿ ಯಂತ್ರಂ ತ್ರೈಲೋಕ್ಯಮೋಹನಂ ॥ ೮೬ ॥

ಯಸ್ಯ ಸಂಧಾರಣಾದೇವ ಭವೇಯುಃ ಸರ್ವಸಂಪದಃ ।
ಶ್ವೇತಭೂರ್ಜೇ ಲಿಖೇತ್ಪದ್ಮಂ ದ್ವಾತ್ರಿಂಶತ್ಸಿಂಹಸಂಯುತಂ ॥ ೮೭ ॥

ಮಧ್ಯೇ ಸಿಂಹೇ ಸ್ವಬೀಜಂ ಚ ಲಿಖೇತ್ಪೂರ್ವವದೇವ ತು ।
ಶ್ರೀಬೀಜೇನ ತು ಸಂವೇಷ್ಟ್ಯ ವಲಯತ್ರಯಸಂಯುತಂ ॥ ೮೮ ॥

---

೮೪-೮೫. ಅತಿಮಧುರದ ಪುಷ್ಪಗಳಿಂದ ಹೋಮಮಾಡಿದರೆ ಇಷ್ಟಸಿದ್ಧಿಯಾಗುವುದು. ನೆಲ್ಲಿಯ ಖಂಡಗಳಿಂದ ಹೋಮಮಾಡಿದರೆ ಸ್ತಂಭನಶಕ್ತಿಯುಂಟಾಗುವುದು. ಮೊಸರು, ಜೇನುತುಪ್ಪ, ತುಪ್ಪ ಇವುಗಳನ್ನು ಸೇರಿಸಿ ನಾಲ್ಕಂಗುಲ ಉದ್ದವಾದ ಅಮೃತಬಳ್ಳಿಯನ್ನು ಹತ್ತುಸಾವಿರ ಹೋಮಮಾಡಿದರೆ ರೋಗವನ್ನು ಜಯಸಿ ಎಂದರೆ ನೀರೋಗಿಯಾಗಿ ನೂರು ವರ್ಷ ಬದುಕುತ್ತಾನೆ.

೮೫-೮೬. ಶನಿವಾರದ ದಿವಸ ಅಶ್ವತ್ಥವೃಕ್ಷವನ್ನು ಮುಟ್ಟಿಕೊಂಡು ಈ ಮಂತ್ರವನ್ನು ನೂರೆಂಟಾವರ್ತಿ ಜಪಮಾಡಿದರೆ ಅಪಮೃತ್ಯುವನ್ನು ಗೆದ್ದು ನೂರು ವರ್ಷಗಳು ಬದುಕುತ್ತಾನೆ.

೮೬-೯೦. ಈಗ ಧಾರಣೆ ಮಾಡುವ ಮಾತ್ರದಿಂದ ಸಕಲೈಶ್ವರ್ಯಗಳನ್ನೂ ಕೊಡುವ ತ್ರೈಲೋಕ್ಯಮೋಹನವೆಂಬ ಯಂತ್ರವನ್ನು ನಿನಗೆ ಹೇಳುವೆನು :— ಶ್ವೇತಭುಜಪತ್ರದಲ್ಲಿ ಮೂವತ್ತೆರಡು ಸಿಂಹಗಳಿಂದ ಯುಕ್ತವಾದ ಪದ್ಮವನ್ನು ಬರೆಯಬೇಕು. ಮಂತ್ರ ಬೀಜಾಕ್ಷರವನ್ನು ಮಧ್ಯಸಿಂಹದಲ್ಲಿ ಬರೆಯಬೇಕು. ಹಿಂದಿನಂತೆಯೇ ಶ್ರೀ ಬೀಜದಿಂದ ವೇಷ್ಟನೆಮಾಡಿ (ಸುತ್ತುಗಟ್ಟಿ) ಮೂರು

ಪಾಶಾಂಕುಶೈಶ್ಚ ಸಂವೇಷ್ಟ್ಯ ಪೂಜಯೇದ್ಯಂತ್ರಮುತ್ತಮಂ ।
ತ್ರೈಲೋಕ್ಯಮೋಹನಂ ನಾಮ ಸರ್ವಕಾಮಾರ್ಥಸಾಧನಂ ॥ ೮೯ ॥

ಚಕ್ರರಾಜಂ ಮಹಾರಾಜಂ ಸರ್ವಚಕ್ರೇಶ್ವರೇಶ್ವರಂ ।
ಧಾರಣಾಜ್ಜಯಮಾಪ್ನೋತಿ ಸತ್ಯಂ ಸತ್ಯಂ ನ ಸಂಶಯಃ ॥ ೯೦ ॥

ಅಥ ಯಂತ್ರಾಂತರಂ ವಕ್ಷ್ಯೇ ಶೃಣು ನಾರದ ಸಿದ್ಧಿದಂ ।
ಅಷ್ಟಾರಂ ವಿಲಿಖೇದ್ಯಂತ್ರಂ ಶ್ಲಕ್ಷ್ಣಂ ಕರ್ಣಿಕಯಾ ಯುತಂ ॥ ೯೧ ॥

ಮೂಲಮಂತ್ರಂ ಲಿಖೇತ್ತತ್ರ ಪ್ರಣವೇನ ಸಮನ್ವಿತಂ ।
ಏಕಾಕ್ಷರಂ ನಾರಸಿಂಹಂ ಮಧ್ಯೇ ಚೈವ ಸಸಾಧ್ಯಕಂ ॥ ೯೨ ॥

ಜಪೇದಷ್ಟಸಹಸ್ರಂ ತು ಸೂತ್ರಣಾವೇಷ್ಟ್ಯ ತದ್ಬಹಿಃ ।
ಸ್ವರ್ಣರೌಪ್ಯಸುತಾಮ್ರೈಶ್ಚ ವೇಷ್ಟಯೇತ್ಕ್ರಮತಃ ಸುಧೀಃ ॥ ೯೩ ॥

---

ವಲಯುಗಳಿಂದ ಸಹಿತವಾದ ಆ ಯಂತ್ರವನ್ನು ಪಾಶ, ಅಂಕುಶಗಳಿಂದಲೂ ವೇಷ್ಟನೆಮಾಡಿ, ಉತ್ತಮವಾದ ಸಕಲೇಷ್ಟಾರ್ಥವನ್ನೂ ಕೊಡುವಂತಹ ತ್ರೈಲೋಕ್ಯಮೋಹನನಾಮಕವಾದ, ಸಕಲ ಚಕ್ರಗಳಲ್ಲಿಯೂ ಉತ್ತಮೋತ್ತಮವಾಗಿ ಮಹಾರಾಜಸ್ಥಾನೀಯವಾದ ಶ್ರೇಷ್ಠಚಕ್ರಯಂತ್ರವನ್ನು ಪೂಜಿಸಬೇಕು. ಇಂತಹ ಚಕ್ರವನ್ನು ಧರಿಸುವುದರಿಂದ ಜಯವನ್ನು ಪಡೆಯುವನು. ಸತ್ಯ! ಸತ್ಯ! ಸಂದೇಹವಿಲ್ಲ.

೯೧-೯೩. ನಾರದಾ! ಈಗ ಸಿದ್ಧಿದಾಯಕವಾದ ಇನ್ನೊಂದು ಮಂತ್ರವನ್ನು ಹೇಳುವೆನು:— ಅಷ್ಟದಳ ಕರ್ಣಿಕೆಗಳಿಂದ ಯುಕ್ತವಾದ ಶುಕ್ಲಯಂತ್ರವನ್ನು ಬರೆಯಬೇಕು. ಅದರಲ್ಲಿ ಪ್ರಣವಸಹಿತವಾದ ಮೂಲಮಂತ್ರವನ್ನು ಬರೆಯಬೇಕು. ಮಧ್ಯದಲ್ಲಿ ಸಾಧ್ಯನಾಮಸಹಿತವಾದ ಏಕಾಕ್ಷರ ನರಸಿಂಹಮಂತ್ರವನ್ನು ಎಂಟುಸಾವಿರ ಸಾರಿ ಜಪಮಾಡಬೇಕು. ಪ್ರಾಜ್ಞನು ದಾರದಿಂದ ಸುತ್ತಿ ಅದರ ಹೊರಭಾಗದಲ್ಲಿ ಕ್ರಮವಾಗಿ ಸುವರ್ಣ, ಬೆಳ್ಳಿ, ಒಳ್ಳೆಯ ತಾಮ್ರ ಇವುಗಳಿಂದ ವೇಷ್ಟನೆಮಾಡಬೇಕು.

**ಲಾಕ್ಷಯಾ ವೇಷ್ಟಿತಂ ಕೃತ್ವಾ ಪುನರ್ಮಂತ್ರೇಣ ಮಂತ್ರಯೇತ್ ।**
**ಕಂಠೇ ಭುಜೇ ಶಿಖಾಯಾಂ ವಾ ಧಾರಯೇದ್ಯಂತ್ರಮುತ್ತಮಂ ॥ ೯೪ ॥**

**ನರನಾರೀನರೇಂದ್ರಾಶ್ಚ ಸರ್ವೇ ಸ್ಯುರ್ವಶಗಾ ಭುವಿ ।**
**ದುಷ್ಟಾಸ್ತಂ ನೈವ ಬಾಧಂತೇ ಪಿಶಾಚೋರಗರಾಕ್ಷಸಾಃ ॥ ೯೫ ॥**

**ಯಂತ್ರರಾಜಪ್ರಸಾದೇನ ಸರ್ವತ್ರ ಜಯಮಾಪ್ನುಯಾತ್ ।**
**ಅಥಾನ್ಯತ್ಸಂಪ್ರವಕ್ಷ್ಯಾಮಿ ಯಂತ್ರಂ ಸರ್ವವಶಂಕರಂ ॥ ೯೬ ॥**

**ದ್ವಾದಶಾರಂ ಮಹಾಚಕ್ರಂ ಪೂರ್ವವದ್ವಿಲಿಖೇತ್ಸುಧೀಃ ।**
**ಮಾತ್ರಾ ದ್ವಾದಶಸಂಭಿನ್ನಂ ದಲಂ ತದ್ವಿಲಿಖೇದ್ಬುಧಃ ॥ ೯೭ ॥**

**ಮಧ್ಯೇ ಮಂತ್ರಂ ಶಕ್ತಿಯುಕ್ತಂ ಸುರಾಸುರವಶಂಕರಂ ॥ ೯೮ ॥**

---

೯೪. ಹೀಗೆ ವೇಷ್ಟನಮಾಡಿದ ಉತ್ತಮ ಯಂತ್ರವನ್ನು ಅರಗಿನಿಂದಲೇ ವೇಷ್ಟನಮಾಡಿ, ಪುನಃ ಮಂತ್ರದಿಂದ ಅಭಿಮಂತ್ರಿಸಿ, ಕುತ್ತಿಗೆ, ಭುಜ ಅಥವಾ ಶಿಖೆ ಇವುಗಳಲ್ಲಿ ಧರಿಸಬೇಕು.

೯೫. ಅದರಿಂದ ಪುರುಷ, ಸ್ತ್ರೀ ಮತ್ತು ದೊರೆ ಇವರೆಲ್ಲರೂ ಅಧೀನ ರಾಗುವರು. ದುಷ್ಟರು ಮತ್ತು ಪಿಶಾಚ, ಸರ್ಪ, ರಾಕ್ಷಸ ಇವರೂ ಸಹ ಆ ಯಂತ್ರಧಾರಿಯನ್ನು ಬಾಧಿಸುವುದಿಲ್ಲ.

೯೬. ಶ್ರೇಷ್ಠ ಯಂತ್ರದ ಅನುಗ್ರಹದಿಂದ ಎಲ್ಲಾ ವಿಷಯದಲ್ಲಿಯೂ ಜಯವನ್ನು ಪಡೆಯುವನು. ಸರ್ವ ವಶಪ್ರದವಾದ ಇನ್ನೊಂದು ಯಂತ್ರ ವನ್ನು ಹೇಳುವೆನು.

೯೭-೯೯. ಪ್ರಾಜ್ಞನು ಹಿಂದಿನಂತೆ ಭುಜಪತ್ರದಲ್ಲಿ ಹನ್ನೆರಡು ದಳ ಗಳಿಂದ ಕೂಡಿದ ಮಹಾಚಕ್ರವನ್ನು ಬರೆದು, ಒಂದೊಂದು ದಳದಲ್ಲಿಯೂ ಮಧ್ಯದಲ್ಲಿ ಹನ್ನೆರಡು ಮಾತ್ರೆಗಳನ್ನು ಬರೆಯಬೇಕು. ಮಧ್ಯದಲ್ಲಿ ಶಕ್ತಿಸಹಿತ ವಾಗಿ ಮಂತ್ರವನ್ನು ಬರೆದು, ಶ್ರೀ ಬೀಜದಿಂದ ವೇಷ್ಟನೆಮಾಡಬೇಕು. ಭೂರ್ಜ

ಚಕ್ರಮುಲ್ಲೇಖಯೇದ್ಭೂರ್ಜೇ ಸರ್ವಶತ್ರುನಿವಾರಣಂ ।
ಯಸ್ಯ ಧಾರಣಮಾತ್ರೇಣ ಸರ್ವತ್ರ ವಿಜಯೀ ಭವೇತ್ ॥ ೯೯ ॥

ಅಥ ಸರ್ವೇಷ್ಟದಂ ಜ್ವಾಲಾಮಾಲಿಸಂಜ್ಞಂ ವದಾಮ್ಯಹಂ ।
ಬೀಜಂ ಹೃದ್ಭಗವಾನ್ ಙೇಂತೋ ನರಸಿಂಹಾಯ ತತ್ಪರಂ ॥ ೧೦೦ ॥

ಸ್ಯಾಜ್ಜ್ವಲಾಮಾಲಿನೇ ದೀಪ್ತದಂಷ್ಟ್ರಾಯಾಂತೇಗ್ನಿನೇ ಪದಂ ।
ತ್ರಾಯಸರ್ವಾದಿರಕ್ಷೋಘ್ನಾಯ ಚಾನ್ತೇ ಸರ್ವಭೂಪದಂ ॥ ೧೦೧ ॥

ಹರಿರ್ವಿನಾಶನಾಯಾಂತೇ ಸರ್ವಜ್ವರವಿನಾಶಕಃ ।
ನಾಯಾಂತೇ ದಹಯುಗ್ಮಂ ಚ ಪಚದ್ವಯಮುದೀರಯೇತ್ ॥ ೧೦೨ ॥

ರಕ್ಷಯುಗ್ಮಂ ಚ ವರ್ಮಾಸ್ತ್ರಂ ಠದ್ವಯಾಂತೋ ಧ್ರುವಾದಿಕಃ ।
ಅಷ್ಟಷಷ್ಟ್ಯಕ್ಷರೈಃ ಪ್ರೋಕ್ತೋ ಜ್ವಾಲಾಮಾಲೀ ಮನೂತ್ತಮಃ ॥ ೧೦೩ ॥

---

ಪತ್ರದಲ್ಲಿ ಬರೆದ ಕಾಲಾಂತಕವೆಂಬ ಈ ಚಕ್ರವು ಸುರಾಸುರವಶಪ್ರದವು ಮತ್ತು ಶತ್ರುವಿನಾಶಕವಾಗುವುದು. ಇದನ್ನು ಧರಿಸಿದರೆ ಸರ್ವತ್ರ ಜಯವು ಲಭಿಸುತ್ತದೆ.

೧೦೦-೧೦೩. ಈಗ ಸರ್ವೇಷ್ಟದಾಯಕವಾದ ಜ್ವಾಲಾಮಾಲಿ ಎಂಬ ಮಂತ್ರವನ್ನು ಹೇಳುವೆನು :—(ಬೀಜ=ಕ್ಷ್ರೌಂ, ಹರಿ=ತ, ವರ್ಮ=ಹುಂ, ಅಸ್ತ್ರ=ಫಟ್, ಠದ್ವಯ=ಸ್ವಾಹಾ, ಧ್ರುವ=ಓಂ.) "ಓಂ ಕ್ಷ್ರೌಂ ನಮೋ ಭಗವತೇ ನರಸಿಂಹಾಯ ಜ್ವಾಲಾಮಾಲಿನೇ ದೀಪ್ತ ದಂಷ್ಟ್ರಾಯ ಅಗ್ನಿ ನೇತ್ರಾಯ ಸರ್ವರಕ್ಷೋಘ್ನಾಯ ಸರ್ವಭೂತವಿನಾಶನಾಯ ಸರ್ವಜರ ವಿನಾಶ ನಾಯ ದಹ ದಹ ಪಚ ಪಚ ರಕ್ಷ ರಕ್ಷ ಹುಂ ಫಟ್ ಸ್ವಾಹಾ" ಎಂಬ ಅರವತ್ತೆಂಟು ಅಕ್ಷರಗಳುಳ್ಳ ಮಂತ್ರೋತ್ತಮವು ಜ್ವಾಲಾಮಾಲಿ ಮಂತ್ರ ವೆನಿಸುವುದು.

**ಮುನ್ಯಾದಿಕುಂ ತು ಪೂರ್ವೋಕ್ತಂ ತ್ರಯೋದಶಭಿರಕ್ಷರೈಃ ।**
**ಪಂಕ್ತಿಭೀರುದ್ರಸಂಖ್ಯಾಕೈರಷ್ಟಾದಶಭಿರಕ್ಷರೈಃ ॥ ೧೦೪ ॥**

**ಭಾನುಭಿಃ ಕರಣೈರ್ಮಂತ್ರೀ ವರ್ಣೈರಂಗಾನಿ ಕಲ್ಪಯೇತ್ ।**
**ಪೂರ್ವೋಕ್ತರೂಪಿಣಂ ಜ್ವಾಲಾಮಾಲಿನಂ ನೃಹರಿಂ ಸ್ಮರೇತ್ ॥ ೧೦೫ ॥**

**ಲಕ್ಷಂ ಜಪೋ ದಶಾಂಶಂ ಚ ಜುಹುಯಾತ್ಕಪಿಲಾಘೃತೈಃ ।**
**ರೌದ್ರಾಪಸ್ಮಾರಭೂತಾದಿನಾಶಕೋಽಯಂ ಮನೂತ್ತಮಃ ॥ ೧೦೬ ॥**

**ಪಾಶೋ ಮಾಯಾ ನೃಸಿಂಹಶ್ಚಾಂಕುಶೋ ವರ್ಮಫಟ್ ಮನುಃ ।**
**ಷಡಕ್ಷರೋ ನರಹರೇಸ್ಸರ್ವಾಭೀಷ್ಟಪ್ರದಾಯಕಃ ॥ ೧೦೭ ॥**

---

೧೦೪-೧೦೫. ಈ ಮಂತ್ರಕ್ಕೆ ಹಿಂದಿನ ಮಂತ್ರದ ಋಷ್ಯಾದಿಗಳೇ ಋಷಿ ಮುಂತಾದವರೆಂದು ತಿಳಿಯಬೇಕು. 'ಓಂ ಕ್ಷ್ರೌಂ ನಮೋ ಭಗವತೇ ನರಸಿಂಹಾಯ' ಎಂಬ ಹದಿಮೂರು ಅಕ್ಷರಗಳಿಂದ ಹೃದಯ, 'ಜ್ವಾಲಾ ಮಾಲಿನೇ ದೀಪ್ತದಂಷ್ಟ್ರಾಯ' ಎಂಬ ಹತ್ತು ಅಕ್ಷರಗಳಿಂದ ಶಿರಸ್ಸು, 'ಅಗ್ನಿ ನೇತ್ರಾಯ ಸರ್ವ ರಕ್ಷೋಘ್ನಾಯ' ಎಂಬ ಹನ್ನೊಂದು, ಅಕ್ಷರಗಳಿಂದ ಶಿಖೆ 'ಸರ್ವಭೂತ ವಿನಾಶನಾಯ ಸರ್ವ ಜ್ವರ ವಿನಾಶನಾಯ' ಎಂಬ ಹದಿನೆಂಟು ಅಕ್ಷರಗಳಿಂದ ಕವಚ, 'ದಹದಹ ಪಚಪಚ ರಕ್ಷರಕ್ಷ' ಎಂಬ ಹನ್ನೆರಡು ಅಕ್ಷರ ಗಳಿಂದ ನೇತ್ರ, 'ಹುಂ ಫಟ್ ಸ್ವಾಹಾ' ಎಂಬ ನಾಲ್ಕು ಅಕ್ಷರಗಳಿಂದ ಅಸ್ತ್ರ ಎಂಬೀರೀತಿಯಾಗಿ ಷಡಂಗಗಳನ್ನು ನ್ಯಾಸಮಾಡಬೇಕು. ಹಿಂದೆ ಹೇಳಿದ ಜ್ವಾಲಾಮಾಲಿಯಾದ ನರಹರಿಯನ್ನು ಧ್ಯಾನಿಸಬೇಕು.

೧೦೬. ಈ ಮಂತ್ರವನ್ನು ಒಂದು ಲಕ್ಷ ಜಪಮಾಡಿ ಹತ್ತುಸಾವಿರ ಹೋಮವನ್ನು ಕಪಿಲ ಗೋಘೃತದಿಂದ ಮಾಡಬೇಕು. ಈ ಶ್ರೇಷ್ಠಮಂತ್ರವು ಭಯಂಕರವಾದ ಅಪಸ್ಮಾರ, ಭೂತ ಮುಂತಾದುವುಗಳ ಪೀಡೆಯನ್ನು ಪರಿಹರಿಸುತ್ತದೆ.

೧೦೭. ಪಾಶ= ಆಂ, ಮಾಯಾ= ಹ್ರೀಂ, ನೃಸಿಂಹ= ಕ್ಷ್ರೌಂ, ಅಂಕುಶ= ಕ್ರೋಂ, ವರ್ಮ= ಹುಂ, ಇವುಗಳ ಸಂಯೋಜನೆಯಿಂದ "ಆಂ, ಹ್ರೀಂ, ಕ್ಷ್ರೌಂ, ಕ್ರೋಂ, ಹುಂ, ಫಟ್" ಎಂಬ ಆರು ಅಕ್ಷರಗಳ ನರಹರಿ ಮಂತ್ರವು ನಿಷ್ಪನ್ನವಾಗುವುದು. ಇದು ಸಕಲ ಇಷ್ಟಾರ್ಥಪ್ರದಾಯಕವು.

ಮುನಿರ್ಬ್ರಹ್ಮಾ ತಥಾ ಛಂದಃ ಪಂಕ್ತಿರ್ದೇವೋ ನೃಕೇಸರೀ ।
ಷಡ್ದೀರ್ಘಭಾಜಾ ಬೀಜೇನ ಷಡಂಗಾನಿ ಸಮಾಚರೇತ್ ॥ ೧೦೮ ॥

ಪೂರ್ವೋಕ್ತೇನೈವ ವಿಧಿನಾ ಧ್ಯಾನಂ ಪೂಜಾಂ ಸಮಾಚರೇತ್ ।
ಸಿದ್ಧೇನ ಮನುನಾನೇನ ಸರ್ವಸಿದ್ಧಿರ್ಭವೇನ್ನೃಣಾಂ ॥ ೧೦೯ ॥

ರಮಾಬೀಜಾದಿಕೋಽನುಷ್ಟುಪ್ತ್ರಯಸ್ತ್ರಿಂಶಾರ್ಣವೋ ಮನುಃ ।
ಪ್ರಜಾಪತಿರ್ಮುನಿಶ್ಛಂದೋಽನುಷ್ಟುಪ್ ಲಕ್ಷ್ಮೀನೃಕೇಸರೀ ॥ ೧೧೦ ॥

ದೇವತಾ ಚ ಪದೈಃ ಸರ್ವೈರಂಗಕಲ್ಪನಮೀರಿತಂ ।
ವಿನ್ಯಸ್ಯೈವಂ ತು ಪಂಚಾಂಗಂ ಸ್ವಾತ್ಮರಕ್ಷಾಂ ಸಮಾಚರೇತ್ ॥ ೧೧೧ ॥

ಸಂಸ್ಪೃಶನ್ದಕ್ಷಿಣಂ ಬಾಹುಂ ಶರಭಸ್ಯ ಮನುಂ ಜಪೇತ್ ।
ಪ್ರಣವೋ ಹೃಚ್ಛಿವಾಯೇತಿ ಮಹತೇ ಶರಭಾಯ ಚ ॥ ೧೧೨ ॥

---

೧೦೮. ಇದಕ್ಕೆ ಬ್ರಹ್ಮನು ಋಷಿಯು, ಛಂದಸ್ಸು ಪಂಕ್ತಿ, ನೃಸಿಂಹನು ದೇವತೆ, ದೀರ್ಘಸಹಿತವಾದ ಆರು ಬೀಜಾಕ್ಷರಗಳಿಂದ ಷಡಂಗನ್ಯಾಸವನ್ನು ಮಾಡಬೇಕು.

೧೦೯. ಪೂರ್ವೋಕ್ತವಿಧಾನದಿಂದಲೇ ಧ್ಯಾನ, ಪೂಜೆಗಳನ್ನು ಮಾಡಬೇಕು. ಈ ಮಂತ್ರವು ಸಿದ್ಧಿಸಿದರೆ ಮನುಷ್ಯರಿಗೆ ಸರ್ವಸಿದ್ಧಿಯಾಗುವುದು.

೧೧೦-೧೧೧. ಉಕ್ತವಾದ ಅನುಷ್ಟುಪ್ ವೃತ್ತದ ಶ್ಲೋಕಕ್ಕೆ ರಮಾಬೀಜ= ಶ್ರೀಂ ಎಂಬುದನ್ನು ಸೇರಿಸಿದರೆ ಮೂವತ್ತುಮೂರು ಅಕ್ಷರಗಳ ಮಂತ್ರವಾಗುವುದು. ಇದೇ ಲಕ್ಷ್ಮೀನರಸಿಂಹಮಂತ್ರವು. ಇದಕ್ಕೆ ಪ್ರಜಾಪತಿಯು ಋಷಿ, ಛಂದಸ್ಸು ಅನುಷ್ಟುಪ್, ಲಕ್ಷ್ಮೀನರಸಿಂಹನು ದೇವತೆ, ಮಂತ್ರದ ಸರ್ವ ಪದಗಳಿಂದ ಅಂಗಗಳನ್ನು ನ್ಯಾಸಮಾಡಬೇಕು. ಈ ರೀತಿಯಾಗಿ ಪಂಚಾಂಗಗಳನ್ನು ನ್ಯಾಸಮಾಡಿ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕು.

೧೧೨-೧೧೩. ಬಲಬಾಹುವನ್ನು ಹಿಡಿದುಕೊಂಡು ಶರಭಮಂತ್ರವನ್ನು ಜಪಿಸಬೇಕು. "ಓಂ ನಮಃ ಶಿವಾಯ ಮಹತೇ ಶರಭಾಯ ಸ್ವಾಹಾ"

**ವಹ್ನಿಪ್ರಿಯಾಂತೋ ಮಂತ್ರಸ್ತು ರಕ್ಷಾರ್ಥೇ ಸಮುದಾಹೃತಃ ।**
**ಅಥವಾ ರಾಮಮಂತ್ರಾಂತೇ ಪಠೇತ್ ಕ್ಷದ್ವಿತಯಂ ಪಠೇತ್ ॥ ೧೧೩ ॥**

**ಅಥವಾ ಕೇಶವಾದ್ಯೈಸ್ತು ರಕ್ಷಾಂ ಕುರ್ಯಾತ್ಪ್ರಯತ್ನತಃ ।**
**ಕೇಶವಃ ಪಾತು ಪಾದೌ ಮೇ ಜಂಘೇ ನಾರಾಯಣೋಽವತು ॥ ೧೧೪ ॥**

**ಮಾಧವೋ ಮೇ ಕಟಿಂ ಪಾತು ಗೋವಿಂದೋ ಗುಹ್ಯಮೇವ ಚ ।**
**ನಾಭಿಂ ವಿಷ್ಣುಶ್ಚ ಮೇ ಪಾತು ಜಠರಂ ಮಧುಸೂದನಃ ॥ ೧೧೫ ॥**

**ಊರೂ ತ್ರಿವಿಕ್ರಮಃ ಪಾತು ಹೃದಯಂ ಪಾತು ಮೇ ನರಃ ।**
**ಶ್ರೀಧರಃ ಪಾತು ಕಂಠಂ ಚ ಹೃಷೀಕೇಶೋ ಮುಖಂ ಮಮ ॥ ೧೧೬ ॥**

**ಪದ್ಮನಾಭಃ ಸ್ತನೌ ಪಾತು ಶೀರ್ಷಂ ದಾಮೋದರೋಽವತು ।**
**ಏವಂ ವಿನ್ಯಸ್ಯ ಚಾಂಗೇಷು ಜಪಕಾಲೇ ತು ಸಾಧಕಃ ॥ ೧೧೭ ॥**

---

ಎಂಬುದೇ ಶರಭಮಂತ್ರವು. ಇದು ರಕ್ಷಾರ್ಥವಾಗಿ ಉದಾಹರಿಸಲ್ಪಟ್ಟಿದೆ. ಅಥವಾ ರಾಮಮಂತ್ರವನ್ನು ಹೇಳಿ ಅದರ ಮುಂದೆ 'ರಕ್ಷ ರಕ್ಷ' ಎಂಬುದನ್ನು ರಕ್ಷಾರ್ಥವಾಗಿ ಪಠನೆ ಮಾಡಬೇಕು.

೧೧೪-೧೧೭. ಅಥವಾ ಕೇಶವಾದಿ ಮೂರ್ತಿಗಳಿಂದ ಪ್ರಯತ್ನಪುರಸ್ಸರವಾಗಿ ರಕ್ಷೆಯನ್ನು ಮಾಡಬೇಕು. ಅದರ ವಿಧಾನವನ್ನು ವಿವರಿಸುತ್ತಾರೆ. ಕೇಶವನು ಪಾದಗಳನ್ನು ರಕ್ಷಿಸಲಿ, ಜಂಘೆಗಳನ್ನು ನಾರಾಯಣನು ಕಾಪಾಡಲಿ. ಮಾಧವನು ನನ್ನ ಕಟಿ (ಸೊಂಟ) ಯನ್ನು ಸಲಹಲಿ, ಗೋವಿಂದನು ಗುಹ್ಯ ಪ್ರದೇಶವನ್ನೂ, ನಾಭಿಯನ್ನು ವಿಷ್ಣುವೂ, ಮಧುಸೂದನನು ಹೊಟ್ಟೆಯನ್ನೂ ಕಾಪಾಡಲಿ. ತೊಡೆಗಳನ್ನು ತ್ರಿವಿಕ್ರಮನೂ, ಹೃದಯವನ್ನು ವಾಮನನೂ ಸಲಹಲಿ, ಶ್ರೀಧರನು ಕಂಠವನ್ನೂ, ಹೃಷೀಕೇಶನು ನನ್ನ ಮುಖವನ್ನೂ ರಕ್ಷಿಸಲಿ. ಪದ್ಮನಾಭನು ಸ್ತನಗಳನ್ನು ಸಂರಕ್ಷಿಸಲಿ, ತಲೆಯನ್ನು ದಾಮೋದರನು ಕಾಪಾಡಲಿ.

ನಿರ್ಭಯೋ ಜಾಯತೇ ಭೂತವೇತಾಲಗ್ರಹರಾಕ್ಷಸಾತ್ ।
ಪುನರ್ನ್ಯಸೇತ್ಪ್ರಯತ್ನೇನ ಧ್ಯಾನಂ ಕುರ್ವನ್ಸಮಾಹಿತಃ ॥ ೧೧೮ ॥

ಪುರಸ್ತಾತ್ಕೇಶವಃ ಪಾತು ಚಕ್ರೀ ಜಾಂಬೂನದಪ್ರಭಃ ।
ಪಶ್ಚಾನ್ನಾರಾಯಣಃ ಶಂಖೀ ನೀಲಜೀಮೂತಸನ್ನಿಭಃ ॥ ೧೧೯ ॥

ಊರ್ಧ್ವಮಿಂದೀವರಶ್ಯಾಮೋ ಮಾಧವಸ್ತು ಗದಾಧರಃ ।
ಗೋವಿಂದೋ ದಕ್ಷಿಣೇ ಪಾರ್ಶ್ವೇ ಧನ್ವೀ ಚಂದ್ರಪ್ರಭೋ ಮಹಾನ್ ॥೧೨೦॥

ಉತ್ತರೇ ಹಲಧೃಗ್ವಿಷ್ಣುಃ ಪದ್ಮಕಿಂಜಲ್ಕಸನ್ನಿಭಃ ।
ಆಗ್ನೇಯ್ಯಾಮರವಿಂದಾಕ್ಷೋ ಮುಸಲೀ ಮಧುಸೂದನಃ ॥ ೧೨೧ ॥

ತ್ರಿವಿಕ್ರಮಃ ಖಡ್ಗಪಾಣಿಃ ನೈಋತ್ಯಾಂ ಜ್ವಲನಪ್ರಭಃ ।
ವಾಯವ್ಯಾಂ ಮಾಧವೋ ವಜ್ರೀ ತರುಣಾದಿತ್ಯಸನ್ನಿಭಃ ॥ ೧೨೨ ॥

---

೧೧೭-೧೧೮. ಈ ಪ್ರಕಾರವಾಗಿ ಸಾಧಕನು ಜಪಮಾಡುವಕಾಲದಲ್ಲಿ ಅಂಗಗಳಲ್ಲಿ ನ್ಯಾಸಮಾಡಿದರೆ ಭೂತ, ಬೇತಾಳ, ಗ್ರಹ ಮತ್ತು ರಾಕ್ಷಸ ಇವರುಗಳ ದೆಸೆಯಿಂದ ಭಯವಿಲ್ಲದಂತಾಗುವನು. ಪುನಃ ಪುನಃ ಸಾಧಕನು ಸಮಾಧಾನಚಿತ್ತನಾಗಿ ಧ್ಯಾನಮಾಡುತ್ತಾ ಪ್ರಯತ್ನಪೂರ್ವಕವಾಗಿ ಈರೀತಿ ನ್ಯಾಸಮಾಡಬೇಕು.

೧೧೯-೧೨೫. ಪೂರ್ವದಿಕ್ಕಿನಲ್ಲಿ ಚಕ್ರಪಾಣಿಯಾದ, ಸುವರ್ಣದಂತೆ ಹೊಳೆಯುತ್ತಿರುವ ಕೇಶವನೂ, ಪಶ್ಚಿಮದಿಕ್ಕಿನಲ್ಲಿ ಶಂಖಧಾರಿಯಾದ, ನೀಲಮೇಘ ಸದೃಶನೂ ಆದ ನಾರಾಯಣನೂ, ಊರ್ಧ್ವದಿಕ್ಕಿನಲ್ಲಿ ಇಂದೀವರಶ್ಯಾಮನೂ, ಗದೆಯನ್ನು ಧರಿಸಿರುವವನೂ ಆದ ಮಾಧವನೂ, ದಕ್ಷಿಣದಿಕ್ಕಿನಲ್ಲಿ ಧನುರ್ಧಾರಿಯು, ಚಂದ್ರನಂತೆ ಪ್ರಕಾಶಮಾನನೂ ಆದ ಗೋವಿಂದಮಹಾತ್ಮನೂ, ಉತ್ತರದಿಕ್ಕಿನಲ್ಲಿ ಹಲ (ನೇಗಿಲು) ಧಾರಿಯು, ಕಮಲದೊಳಗಿನ ಕುಸರಿನಂತೆ ಹೊಳೆಯುತ್ತಿರುವವನೂ ಆದ ವಿಷ್ಣುವೂ, ಆಗ್ನೇಯ ಮೂಲೆಯಲ್ಲಿ ಕಮಲ

ಐಶಾನ್ಯಾಂ ಪುಂಡರೀಕಾಕ್ಷಃ ಶ್ರೀಧರಃ ಪಟ್ಟಿಶಾಯುಧಃ ।
ವಿದ್ಯುತ್ಪ್ರಭೋ ಹೃಷೀಕೇಶ ಊರ್ಧ್ವೇ ಪಾತು ಸಮುದ್ಗರಃ ॥ ೧೨೩ ॥

ಅಧಶ್ಚ ಪದ್ಮನಾಭೋ ಮೇ ಸಹಸ್ರಾಂಶುಸಮಪ್ರಭಃ ।
ಸರ್ವಾಯುಧಃ ಸರ್ವಶಕ್ತಿಃ ಸರ್ವಾದ್ಯಃ ಸರ್ವತೋಮುಖಃ ॥ ೧೨೪ ॥

ಇಂದ್ರಗೋಪಸಪ್ರಭಃ ಪಾಯೊತ್ಪಾಶಹಸ್ತೋಪರಾಜಿತಃ ।
ಸ ಬಾಹ್ಯಾಭ್ಯಂತರೇ ದೇಹಮವ್ಯಾದ್ದಾಮೋದರೋ ಹರಿಃ ॥ ೧೨೫ ॥

ಏವಂ ಸರ್ವತ್ರ ನಿಶ್ಛಿದ್ರಂ ನಾಮದ್ವಾದಶಪಂಜರಂ ।
ಪ್ರವಿಷ್ಟೋಽಹಂ ನ ಮೇ ಕಿಂಚಿದ್ಭಯಮಸ್ತಿ ಕದಾಚನ ॥ ೧೨೬ ॥

---

ನೇತ್ರನು, ಮುಸಲ (ಒನಕೆ) ಧಾರಿಯೂ ಆದ ಮಧುಸೂದನನೂ, ಕೈಯಲ್ಲಿ ಖಡ್ಗವನ್ನು ಹಿಡಿದಿರುವ, ಅಗ್ನಿಗೆ ಸಮಾನವಾದ ಕಾಂತಿಯುಳ್ಳ ತ್ರಿವಿಕ್ರಮನು ನೈಋತ್ಯದಿಗ್ಭಾಗಗಳಲ್ಲಿಯೂ, ವಾಯುವ್ಯಕೋಣದಲ್ಲಿ ಮಧ್ಯಾಹ್ನದ ಸೂರ್ಯನಿಗೆ ಸದೃಶನಾದ, ವಜ್ರಾಯುಧವನ್ನು ಧರಿಸಿರುವ ಮಾಧವನೂ, ಈಶಾನ್ಯದಿಕ್ಕಿನಲ್ಲಿ ಅರವಿಂದನೇತ್ರನು, ಪಟ್ಟಿಶವನ್ನು ಧರಿಸಿರುವವನೂ ಆಗಿರುವ ಶ್ರೀಧರನೂ, ಊರ್ಧ್ವದಿಕ್ಕಿನಲ್ಲಿ ಮಿಂಚಿನಂತೆ ಪ್ರಕಾಶಮಾನನಾದ, ದಂಡಧಾರಿಯಾದ ಹೃಷೀಕೇಶನೂ, ಅಧೋಭಾಗದಲ್ಲಿ ಸೂರ್ಯನಿಗೆ ಸಮಾನಪ್ರಭೆಯುಳ್ಳ, ಸಕಲಾಯುಧ ಧಾರಿಯು, ಸರ್ವಶಕ್ತನು, ಸಕಲಜಗತ್ತಿಗೆ ಮೂಲಕಾರಣನು, ವ್ಯಾಪ್ತನೂ ಆಗಿರುವ ಪದ್ಮನಾಭನು ನನ್ನನ್ನು ಕಾಪಾಡಲಿ. ಬಾಹ್ಯ ಮತ್ತು ಅಭ್ಯಂತರ ಪ್ರದೇಶಗಳಲ್ಲಿ (ಹೊರಗೂ ಒಳಗೂ) ಕಾಮುನ ಬಿಲ್ಲಿನಂತೆ ವಿರಾಜಿಸುತ್ತಿರುವ, ಕೈಯಲ್ಲಿ ಪಾಶವನ್ನು ಹಿಡಿದಿರುವ, ಪರಾಜಯವಿಲ್ಲದವನಾದ ದಾಮೋದರ ರೂಪಿಯಾದ ಹರಿಯು ನನ್ನನ್ನು ರಕ್ಷಿಸಲಿ ಎಂಬುದಾಗಿ ಪ್ರಾರ್ಥಿಸಬೇಕು.

೧೨೬. ಈ ಪ್ರಕಾರವಾಗಿ ಎಲ್ಲಾ ಕಡೆಯಲ್ಲಿಯೂ ಛಿದ್ರವಿಲ್ಲದೇ ನಿಬಿಡ ವಾಗಿರುವ ಹನ್ನೆರಡು ನಾಮಗಳೆಂಬ ಪಂಜರವನ್ನು ನಾನು ಪ್ರವೇಶಮಾಡಿರು ವೆನು, ಆದುದರಿಂದ ನನಗೆ ಯಾರಿಂದಲೂ ಸ್ವಲ್ಪವೂ ಭಯವಿಲ್ಲ.

ಏವಂ ರಕ್ಷಾಂ ವಿಧಾಯಾಥ ದುರ್ಧರ್ಷೋ ಜಾಯತೇ ನರಃ ।
ಸರ್ವೇಷು ನೃಹರೇರ್ಮಂತ್ರವರ್ಗೇಷ್ವೇವಂ ವಿಧಿರ್ಮತಃ　　॥ ೧೨೭ ॥

ಪೂರ್ವೋಕ್ತವಿಧಿನಾ ಸರ್ವಂ ಧ್ಯಾನಪೂಜಾದಿಕಂ ಚರೇತ್ ।
ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ　　॥ ೧೨೮ ॥

ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ತೇ ನಮಃ ।
ಇತ್ಥಂ ಸಂಪ್ರಾರ್ಥ್ಯ ಜಪ್ತ್ವಾ ಚ ಪಠಿತ್ವಾ ವಿಸೃಜೇದ್ವಿಭುಂ　　॥ ೧೨೯ ॥

ಏವಂ ಸಿದ್ಧೇ ಮನೌ ಮಂತ್ರೀ ಜಾಯತೇ ಸಂಪದಾಂ ಪದಂ ।
ಜಯದ್ವಯಂ ಶ್ರೀನೃಸಿಂಹೇತ್ಯಷ್ಟಾರ್ಣೋಽಯಂ ಮನೂತ್ತಮಃ　　॥೧೩೦॥

ಮುನಿರ್ಬ್ರಹ್ಮಾ ಚ ಗಾಯತ್ರೀ ಛಂದಃ ಪ್ರೋಕ್ತೋಽಸ್ಯ ದೇವತಾ ।
ಶ್ರೀಮಾನ್ ಜಯನೃಸಿಂಹಸ್ತು ಸರ್ವಾಭೀಷ್ಟಪ್ರದಾಯಕಃ　　॥ ೧೩೧ ॥

---

೧೨೭. ಈ ರೀತಿ ರಕ್ಷೆಯನ್ನುಮಾಡಿದ ಮೇಲೆ ಮನುಷ್ಯನು ದುರ್ಧರ್ಷನಾಗುವನು. ನರಸಿಂಹಮಂತ್ರವರ್ಗಗಳಲ್ಲೆಲ್ಲಾ ಈ ರೀತಿಯಾದ ವಿಧಾನವೇ ಅನುಸರಿಸಲ್ಪಡಬೇಕು

೧೨೮-೧೩೦. ಹಿಂದೆ ಹೇಳಿದ ವಿಧಾನದಿಂದ ಧ್ಯಾನ, ಪೂಜೆ ಮುಂತಾದುವುಗಳನ್ನೆಲ್ಲಾ ಮಾಡಬೇಕು. ಪುಂಡರೀಕಾಕ್ಷನೇ! ನಿನಗೆ ಜಯವಾಗಲಿ, ಜಗತ್ಸೃಷ್ಟಿಕರ್ತನೇ! ನಿನಗೆ ನಮಸ್ಕಾರ. ಹೃಷೀಕೇಶನೇ! ನಿನಗೆ ನಮಸ್ಕಾರ. ಮಹಾಪುರುಷನೇ! ನಿನಗೆ ನಮಸ್ಕಾರ. ಎಂಬುದಾಗಿ ಚನ್ನಾಗಿ ಪ್ರಾರ್ಥಿಸಿ, ಜಪಿಸಿ, ಪಠನೆಮಾಡಿ ಸ್ವಾಮಿಯನ್ನು ವಿಸರ್ಜನೆಮಾಡಬೇಕು. ಈ ಪ್ರಕಾರವಾಗಿ ಅನುಷ್ಠಾನಮಾಡಿ ಮಂತ್ರಸಿದ್ಧಿಯನ್ನು ಪಡೆದವನು ಐಶ್ವರ್ಯಕ್ಕೆ ಆವಾಸಸ್ಥಾನನಾಗುವನು.

೧೩೦-೧೩೧. "ಜಯ ಜಯ ಶ್ರೀ ನೃಸಿಂಹ" ಎಂಬುದು ಉತ್ತಮವಾದ ಎಂಟು ಅಕ್ಷರಗಳುಳ್ಳ ನರಸಿಂಹ ಮಂತ್ರವು. ಈ ಮಂತ್ರಕ್ಕೆ ಬ್ರಹ್ಮನು ಋಷಿ, ಗಾಯತ್ರಿಯೇ ಛಂದಸ್ಸು, ಶ್ರೀಮಜ್ಜಯನೃಸಿಂಹನು ದೇವತೆ, ಇದು ಸಕಲೇಷ್ಟಾರ್ಥದಾಯಕವು.

ಸೇಂದುಗೋವಿಂದಪೂರ್ವೇಣ ವಿಯತಾ ಸೇಂದುನಾ ಪುನಃ ।
ಷಡ್ದೀರ್ಘಾಢ್ಯೇನ ಕುರ್ವೀತ ಷಡಂಗಾನಿ ವಿಶಾಲಧೀಃ ॥ ೧೩೨ ॥

ತತೋ ಧ್ಯಾಯೇದ್ಧೃದಿ ವಿಭುಂ ನೃಸಿಂಹಂ ಚಂದ್ರಶೇಖರಂ ॥ ೧೩೩ ॥

ಶ್ರೀಮನ್ನೃಕೇಸರಿತನೋ ಜಗದೇಕಬಂಧೋ
ಶ್ರೀನೀಲಕಂಠ ಕರುಣಾರ್ಣವ ಸಾಮರಾಜ ।
ವಹ್ನೀಂದುತೀವ್ರಕರನೇತ್ರ ಪಿನಾಕಪಾಣೇ
ಶೀತಾಂಶುಶೇಖರ ರಮೇಶ್ವರ ಪಾಹಿ ವಿಷ್ಣೋ ॥ ೧೩೪ ॥

ಧ್ಯಾತ್ವೈವಂ ಪ್ರಜಪೇಲ್ಲಕ್ಷಾಷ್ಟಕಂ ಮಂತ್ರೀ ದಶಾಂಶತಃ ।
ಸಾಜ್ಯೇನ ಪಾಯಸಾನ್ನೇನ ಜುಹುಯಾತ್ಪ್ರಾಗ್ವದರ್ಚನಂ ॥ ೧೩೫ ॥

---

೧೩೨. (ಗೋವಿಂದ= ಈ, ವಿಯತ್= ಹ, ಷಡ್ದೀರ್ಘ= ಆ, ಈ, ಊ, ಐ, ಔ, ಅಃ) ಉದಾರಮನಸ್ಕನು 'ಈಂ ಹಾಂ ಹೃದಯಾಯ ನಮಃ' ಎಂದು ಹೃದಯದಲ್ಲಿಯೂ, 'ಈಂ ಹೀಂ ಶಿರಸೇ ಸ್ವಾಹಾ' ಎಂದು ಶಿರಸ್ಸಿನಲ್ಲಿಯೂ, 'ಈಂ ಹೂಂ ಶಿಖಾಯೈ ವಷಟ್' ಎಂದು ಶಿಖೆಯಲ್ಲಿಯೂ, 'ಈಂ ಹ್ರೂಂ ನೇತ್ರಾಯ ಔಷಟ್' ಎಂದು ನೇತ್ರಗಳಲ್ಲಿಯೂ, 'ಈಂ ಹೈಂ ಕವಚಾಯ ಹುಂ' ಎಂದು ತಲೆಯಸುತ್ತಲೂ, 'ಈಂ ಹೌಂ ಅಸ್ತ್ರಾಯ ಫಟ್' ಎಂದು ಅಸ್ತ್ರವನ್ನೂ ನ್ಯಾಸಮಾಡಬೇಕು. ಇದೇ ಈ ಮಂತ್ರಾಂಗವಾದ ಷಡಂಗನ್ಯಾಸವು.

೧೩೩-೧೩೪. ಅನಂತರ ಹೃದಯದಲ್ಲಿ ಚಂದ್ರಮೌಳಿಯಾದ ನರಸಿಂಹಸ್ವಾಮಿಯನ್ನು ಹೀಗೆ ಧ್ಯಾನಿಸಬೇಕು. "ಶ್ರೀಮನ್ನರಸಿಂಹರೂಪಧಾರಿಯು, ಜಗತ್ತಿಗೆ ಮುಖ್ಯ ಹಿತಕರ್ತನು, ನೀಲಕಂಠನು, ದಯಾಸಮುದ್ರನು, ಸಾಮರಾಜನು, ಅಗ್ನಿ, ಚಂದ್ರ, ಸೂರ್ಯರೆಂಬ ಮೂರು ಕಣ್ಣುಗಳುಳ್ಳವನು, ಧನುಷ್ಪಾಣಿಯು, ಚಂದ್ರಶೇಖರನು ಮತ್ತು ಲಕ್ಷ್ಮೀಪತಿಯೂ ಆಗಿರುವ ಶ್ರೀ ಮಹಾವಿಷ್ಣುವೇ ನನ್ನನ್ನು ರಕ್ಷಿಸು" ಎಂಬುದಾಗಿ ಧ್ಯಾನಿಸಬೇಕು.

೧೩೫. ಈ ರೀತಿಯಾಗಿ ಧ್ಯಾನಿಸಿ, ಈ ಮಂತ್ರವನ್ನು ಎಂಟು ಲಕ್ಷ ಜಪಮಾಡಿ, ಅದರ ಹತ್ತನೆಯ ಒಂದುಭಾಗದಷ್ಟು ತುಪ್ಪ ಮತ್ತು ಪಾಯಸಗಳಿಂದ ಹೋಮಮಾಡಬೇಕು. ಅನಂತರ ಹಿಂದಿನ ಮಂತ್ರವಿಧಾನದಲ್ಲಿ ಹೇಳಿದಂತೆ ಪೂಜೆಮಾಡಬೇಕು.

ತಾರೋ ಮಾಯಾ ಸ್ವಬೀಜಾಂತೇ ಕರ್ಣೋಗ್ರಂ ವೀರಮೀರಯೇತ್ ।
ಮಹಾವಿಷ್ಣುಂ ತತೋ ಬ್ರೂಯಾಜ್ಜ್ವಲಂತಂ ಸರ್ವತೋ ಮುಖಂ ॥

ಸ್ಫುರದ್ವಯಂ ಪ್ರಸ್ಫುರೇತಿ ದ್ವಯಂ ಘೋರಪದಂ ತತಃ ।
ವದೇದ್ಘೋರತರಾಂ ತೇ ತು ತನುರೂಪಂ ಚ ಠದ್ವಯಂ ॥ ೧೩೭ ॥

ಪ್ರಚಟದ್ವಯಮಾಭಾಷ್ಯ ಕಹಯುಗ್ಮಂ ಚಮದ್ವಯಂ ।
ಬಂಧದ್ವಯಂ ಘಾತಯೇತಿ ದ್ವಯಂ ವರ್ಮಾಸ್ತ್ರವಿಾರಯೇತ್ ॥ ೧೩೮ ॥

ನೃಸಿಂಹಂ ಭೀಷಣಂ ಭದ್ರಂ ಮೃತ್ಯುಮೃತ್ಯುಂ ನಮಾಮ್ಯಹಂ ।
ಪಂಚಾಶೀತ್ಯಕ್ಷರೋ ಮಂತ್ರೋ ಭಜತಾಮಿಷ್ಟದಾಯಕಃ ॥ ೧೩೯ ॥

ಋಷೀ ಅಘೋರಬ್ರಹ್ಮಾಣೌ ತಥಾ ತ್ರಿಷ್ಟುಭನುಷ್ಟುಭೌ ।
ಛಂದಸೀ ಚ ತಥಾ ಘೋರನೃಸಿಂಹೋ ದೇವತಾ ಮತಃ ॥ ೧೪೦ ॥

---

೧೩೭-೧೩೯. " ಓಂ ಹ್ರೀಂ ಕ್ಷ್ರೌಂ ಕರ್ಣೋಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಂ ಸ್ಫುರ ಸ್ಫುರ ಪ್ರಸ್ಫುರ ಪ್ರಸ್ಫುರ ಘೋರ ಘೋರತರ ತನುರೂಪ ಸ್ವಾಹಾ ಪ್ರಚಟ ಪ್ರಚಟ ಕಹ ಕಹ ಚಮ ಚಮ ಬಂಧ ಬಂಧ ಘಾತಯ ಘಾತಯ ಹುಂ ಫಟ್ ನರಸಿಂಹಂ ಭೀಷಣ ಭದ್ರಂ ಮೃತ್ಯು।ಮೃತ್ಯುಂ ನಮಾಮ್ಯಹಂ" ಎಂಬುದು ಎಂಬತ್ತೈದು ಅಕ್ಷರಗಳನ್ನೊಳಗೊಂಡಿರುವ ನರಸಿಂಹ ಮಂತ್ರವು. ಇದರ ಜಪಾದಿಗಳನ್ನು ಮಾಡುವವರಿಗೆ ಸಕಲ ಇಷ್ಟಾರ್ಥ ಸಿದ್ಧಿಯುಂಟಾಗುವುದು.

೧೪೦. ಈ ಮಂತ್ರಕ್ಕೆ ಅಘೋರ ಮತ್ತು ಬ್ರಹ್ಮ ಇವರು ಋಷಿಗಳು. ತ್ರಿಷ್ಟುಪ್, ಅನುಷ್ಟುಪ್ ಇವೆರಡು ಛಂದಸ್ಸುಗಳು. ಘೋರನರಸಿಂಹನೇ ದೇವತೆ.

ಧ್ಯಾನಾರ್ಚನಾದಿಕಂ ಚಾಸ್ಯ ಕುರ್ಯಾದಾನುಷ್ಟುಭಂ ಸುಧೀಃ ।
ವಿಶೇಷಾನ್ಮಂತ್ರವರ್ಯೋಽಯಂ ಸರ್ವರಕ್ಷಾಕರೋ ಮತಃ ॥ ೧೪೧ ॥

ಬೀಜಂ ಜಯಯುಗಂ ಪಶ್ಚಾನ್ನೃಸಿಂಹೇತ್ಯಷ್ಟವರ್ಣವಾನ್ ।
ಋಷಿಃ ಪ್ರಜಾಪತಿಶ್ಚಾಸ್ಯಾನುಷ್ಟುಪ್ಛಂದ ಉದಾಹೃತಂ ॥ ೧೪೨ ॥

ವಿದಾರಣನೃಸಿಂಹೋಽಸ್ಯ ದೇವತಾ ಪರಿಕೀರ್ತಿತಃ ।
ಜಂ ಬೀಜಂ ಹಂ ತಥಾ ಶಕ್ತಿರ್ವಿನಿಯೋಗೋಽಖಿಲಾಪ್ತಯೇ ॥ ೧೪೩ ॥

ದೀರ್ಘಾರ್ಢ್ಯೇನ ನೃಸಿಂಹೇನ ಷಡಂಗನ್ಯಾಸಮಾಚರೇತ್ ।
ರೌದ್ರಂ ಧ್ಯಾಯೇನ್ನೃಸಿಂಹಂ ತು ಶತ್ರುವಕ್ಷೋವಿದಾರಣಂ ॥ ೧೪೪ ॥

ನಖದಂಷ್ಟ್ರಾಯುಧಂ ಭಕ್ತಾಭಯದಂ ಶ್ರೀನಿಕೇತನಂ ।
ತಪ್ತಹಾಟಕಕೇಶಾಂತಜ್ವಲತ್ಪಾವಕಲೋಚನಂ ॥ ೧೪೫ ॥

---

೧೪೧. ಈ ಮಂತ್ರಾಂಗವಾದ ಧ್ಯಾನ, ಅರ್ಚನೆ ಮುಂತಾದುವನ್ನು ಅನುಷ್ಟುಪ್ ಛಂದೋಬದ್ಧವಾದ ಭಾಗದಿಂದ ನಡೆಯಿಸಬೇಕು. ಈ ಉತ್ತಮವಾದ ಮಂತ್ರವು ವಿಶೇಷವಾಗಿ ಸಕಲ ಪೀಡೆಗಳನ್ನೂ ಪರಿಹರಿಸಿ ಕಾಪಾಡುತ್ತದೆ.

೧೪೨. "ಜಂ ಜಯ ಜಯ ನೃಸಿಂಹ" ಎಂಬುದೊಂದು ಅಷ್ಟಾಕ್ಷರ ನೃಸಿಂಹ ಮಂತ್ರವು. ಇದಕ್ಕೆ ಪ್ರಜಾಪತಿಯು ಋಷಿ, ಅನುಷ್ಟುಪ್ ಛಂದಸ್ಸು.

೧೪೩-೧೪೪. ವಿದಾರಣ ನರಸಿಂಹನು ದೇವತೆ ಎಂದು ಉಕ್ತವಾಗಿದೆ. 'ಜಂ' ಎಂಬುದು ಬೀಜ, 'ಹಂ' ಎಂಬುದು ಶಕ್ತಿ, ಸಕಲ ಇಷ್ಟಾರ್ಥ ಪ್ರಾಪ್ತಿಗಾಗಿ ಜಪಾದಿಗಳನ್ನು ಮಾಡತಕ್ಕುದು. ದೀರ್ಘಯುಕ್ತವಾದ ನೃಸಿಂಹ ಎಂಬುದರಿಂದ ಷಡಂಗನ್ಯಾಸಮಾಡಬೇಕು.

೧೪೪-೧೪೫. ಭಯಂಕರನು, ಶತ್ರುವಾದ ಹಿರಣ್ಯಕಶಿಪುವಿನ ವಕ್ಷಃಸ್ಥಲವನ್ನು ಸೀಳುತ್ತಿರುವವನು, ಉಗುರು, ಕೋರೆಹಲ್ಲುಗಳೆಂಬ ಆಯುಧಗಳುಳ್ಳವನು; ಭಕ್ತರಿಗೆ ಅಭಯಪ್ರದನು, ಲಕ್ಷ್ಮೀಧಾಮನು, ಕಾಯಿಸಿದ ಬಂಗಾರದಂತೆ ಕೇಶಮಧ್ಯದಲ್ಲಿ ಪ್ರಕಾಶಮಾನವಾದ ಅಗ್ನಿನೇತ್ರವುಳ್ಳವನೂ ಆಗಿರುವ ನರಸಿಂಹಸ್ವಾಮಿಯನ್ನು ಧ್ಯಾನಿಸಬೇಕು.

ವಜ್ರಾಧಿಕನಖಸ್ಪರ್ಶ ದಿವ್ಯಸಿಂಹ ನಮೋಽಸ್ತು ತೇ ।
ಮುನಿರ್ಬ್ರಹ್ಮಾ ಸಮಾಖ್ಯಾತೋಽನುಷ್ಟುಪ್ಛಂದಃ ಸಮೀರಿತಃ ॥ ೧೪೬ ॥

ದೇವತಾಸ್ಯ ರದಾರ್ಣಸ್ಯ ದಿವ್ಯಪೂರ್ವೋ ನೃಕೇಸರೀ ।
ಪದೈಶ್ಚತುರ್ಭಿಃ ಸರ್ವೇಣ ಪಂಚಾಂಗಾನಿ ಸಮಾಚರೇತ್ ॥ ೧೪೭ ॥

ಧ್ಯಾನಪೂಜಾದಿಕಂ ಸರ್ವಂ ಪ್ರಾಗ್ವತ್ಪ್ರೋಕ್ತಂ ಮುನೀಶ್ವರ ।
ಪೂರ್ವೋಕ್ತಾನಿ ಚ ಸರ್ವಾಣಿ ಕಾರ್ಯಾಣ್ಯಾಯಾಂತಿ ಸಿದ್ಧತಾಂ ॥ ೧೪೮ ॥

ತಾರೋ ನಮೋ ಭಗವತೇ ನರಸಿಂಹಾಯ ಹೃಚ್ಚ ತೇ ।
ಜಸ್ತೇಜಸೇ ಆವಿರಾವಿರ್ಭವ ವಜ್ರನಖಾಂತತಃ ॥ ೧೪೯ ॥

ವಜ್ರದಂಷ್ಟ್ರೇತಿ ಕರ್ಮಾಂತೇ ತ್ವಾಶಯಾನ್ರಂಧಯಯುದ್ವಯಂ ।
ತಮೋಗ್ರಸದ್ವಯಂ ಪಶ್ಚಾತ್ಸ್ವಾಹಾಂತೇ ಚಾಭಯಂ ತತಃ ॥ ೧೫೦ ॥

---

೧೪೬-೧೪೭. " ವಜ್ರಾಧಿಕನಖಸ್ಪರ್ಶ ದಿವ್ಯಸಿಂಹ ನಮೋಽಸ್ತು ತೇ " ಎಂಬುದೊಂದು ಷೋಡಶವರ್ಣ ನರಸಿಂಹಮಂತ್ರವು. ಇದಕ್ಕೆ ಬ್ರಹ್ಮನು ಋಷಿ, ಛಂದಸ್ಸು ಅನುಷ್ಟುಪ್, ದಿವ್ಯ ನೃಕೇಸರಿಯು ದೇವತೆ, ಪ್ರತ್ಯೇಕವಾಗಿ ಮಂತ್ರದ ನಾಲ್ಕುಪದಗಳು, ಸಂಪೂರ್ಣ ಮಂತ್ರ ಇವುಗಳಿಂದ ಹೃದಯಾದಿ ಪಂಚಾಂಗ ನ್ಯಾಸಮಾಡಬೇಕು.

೧೪೮. ಈ ಮಂತ್ರಾಂಗವಾದ ಧ್ಯಾನ, ಪೂಜೆ ಮುಂತಾದುವೆಲ್ಲವನ್ನೂ ಹಿಂದಿನ ಮಂತ್ರದಂತೆಯೇ ಅನುಷ್ಠಾನಮಾಡಬೇಕು. ಮುನಿವರ್ಯನೇ! ಈ ಮಂತ್ರವನ್ನು ಸೇವಿಸಿದರೆ ಹಿಂದೆ ಹೇಳಿರುವ ಸಕಲ ಇಷ್ಟಕಾರ್ಯವೂ ನೆರವೇರುವುದು.

೧೪೯-೧೫೧. " ಓಂ ನಮೋ ಭಗವತೇ ನರಸಿಂಹಾಯ ನಮಸ್ತೇಜಸ್ತೇಜಸೇ ಆವಿರಾವಿರ್ಭವ ವಜ್ರನಖ ವಜ್ರದಂಷ್ಟ್ರ ಕರ್ಮಾಶಯಾನ್ರಂಧಯ ರಂಧಯ

**ಆತ್ಮನ್ಯಂತೇ ಚ ಭೂಯಿಷ್ಠಾ ಧ್ರುವೋ ಬೀಜಾಂತಿಮೋ ಮನುಃ ।**
**ದ್ವಿಷಷ್ಟ್ಯರ್ಣೋಽಸ್ಯ ಮುನ್ಯಾದಿ ಸರ್ವಂ ಪೂರ್ವವದೀರಿತಂ ॥ ೧೫೧ ॥**

**ತಾರೋ ನೃಸಿಂಹಬೀಜಂ ಚ ನಮೋ ಭಗವತೇ ತತಃ ।**
**ನರಸಿಂಹಾಯ ತಾರಶ್ಚ ಬೀಜಮತ್ಸ್ಯಪದಾಂತತಃ ॥ ೧೫೨ ॥**

**ರೂಪಾಯ ತಾರಃ ಸ್ವಬೀಜಂ ಕೂರ್ಮರೂಪಾಯ ತಾರಕಂ ।**
**ಬೀಜಂ ವರಾಹರೂಪಾಯ ತಾರೋ ಬೀಜಂ ನೃಸಿಂಹತಃ ॥ ೧೫೩ ॥**

**ರೂಪಾಯ ತಾರಃ ಸ್ವಬೀಜಂ ವಾಮನಾಂತೇ ಚ ರೂಪತಃ ।**
**ಪಾಯಧ್ರುವತ್ರಯಂ ಬೀಜಂ ರಾಮಾಯ ನಿಗಮಾದಿತಃ ॥ ೧೫೪ ॥**

**ಬೀಜಂ ಕೃಷ್ಣಾಯ ತಾರಾಂತೇ ಬೀಜಂ ಚ ಕಲ್ಕಿನೇ ತತಃ ।**
**ಜಯದ್ವಯಂ ತತಃ ಶಾಲಗ್ರಾಮಾಂತೇ ಚ ನಿವಾಸಿನೇ ॥ ೧೫೫ ॥**

**ದಿವ್ಯಸಿಂಹಾಯ ಚೇಂತಃ ಸ್ಯಾತ್ಸ್ವಯಂಭುಃ ಪುರುಷಾಯ ಹೃತ್ ।**
**ತಾರಃ ಸ್ವಂ ಬೀಜಮಿತ್ಯೇಷ ಮಹಾಸಾಮ್ರಾಜ್ಯದಾಯಕಃ ॥ ೧೫೬ ॥**

---

ತಪೋಗ್ರಸಗ್ರಸ ಸ್ವಾಹಾ ಅಭಯಂ ಆತ್ಮನಿ ಭೂಯಿಷ್ಠಾ ಓಂ ಕ್ಷ್ರೌಂ" ಎಂಬುದು ಅರವತ್ತೆರಡಕ್ಷರಗಳನ್ನೊಳಗೊಂಡಿರುವ ನೃಸಿಂಹಮಂತ್ರವು. ಹಿಂದಿನ ಮಂತ್ರದಲ್ಲಿ ಹೇಳಿರುವ ಋಷಿ ಛಂದೋ ದೇವತೆ ಮುಂತಾದವೆಲ್ಲವನ್ನೂ ಈ ಮಂತ್ರದಲ್ಲಿಯೂ ಅನುಸಂಧಾನಮಾಡಬೇಕು.

೧೫೨–೧೫೬. (ತಾರಃ=ಓಂ, ನೃಸಿಂಹಬೀಜ=ಕ್ಷ್ರೌಂ) "ಓಂ ಕ್ಷ್ರೌಂ ನಮೋ ಭಗವತೇ ನರಸಿಂಹಾಯ ಓಂ ಕ್ಷ್ರೌಂ ಮತ್ಸ್ಯರೂಪಾಯ ಓಂ ಕ್ಷ್ರೌಂ ಕೂರ್ಮರೂಪಾಯ ಓಂ ಕ್ಷ್ರೌಂ ವರಾಹರೂಪಾಯ ಓಂ ಕ್ಷ್ರೌಂ ನೃಸಿಂಹ ರೂಪಾಯಓಂ ಕ್ಷ್ರೌಂ ವಾಮನರೂಪಾಯ ಓಂ ಕ್ಷ್ರೌಂ ಓಂ ಕ್ಷ್ರೌಂ ಓಂ ಕ್ಷ್ರೌಂ ರಾಮಾಯ ಓಂ ಕ್ಷ್ರೌಂ ಕೃಷ್ಣಾಯ ಓಂ ಕ್ಷ್ರೌಂ ಕಲ್ಕಿನೇ ಜಯ ಜಯ ಶಾಲಿಗ್ರಾಮನಿವಾಸಿನೇ ದಿವ್ಯಸಿಂಹಾಯ ಸ್ವಯಂಭುವೇ ಪುರುಷಾಯ ನಮಃ ಓಂ ಕ್ಷ್ರೌಂ" ಎಂಬುದು ತೊಂಬತ್ತೊಂಬತ್ತಕ್ಷರಗಳುಳ್ಳ ನರಸಿಂಹ ಮಂತ್ರವು. ಇದು ಮಹಾಸಾಮ್ರಾಜ್ಯದಾಯಕವು.

**ನೃಸಿಂಹಮಂತ್ರೇ ಖಾಂಕಾರ್ಣೋ ಮುನಿರತ್ರಿಃ ಪ್ರಕೀರ್ತಿತಃ ।**
**ಛಂದೋಽತಿಜಗತೀ ಪ್ರೋಕ್ತಂ ದೇವತಾ ಕಥಿತಾ ಮನೋಃ ॥ ೧೫೭ ॥**

**ದಶಾವತಾರೋ ನೃಹರಿಃ ಬೀಜಂ ಸ್ವಂ ಶಕ್ತಿರವ್ಯಯಃ ।**
**ಷಡ್ದೀರ್ಘಾಢ್ಯೇನ ಬೀಜೇನ ಕೃತ್ವಾಂಗಾನಿ ಚ ಭಾವಯೇತ್ ॥ ೧೫೮ ॥**

**ಅನೇಕಚಂದ್ರಪ್ರತಿಮೋ ಲಕ್ಷ್ಮೀಮುಖಕೃತೇಕ್ಷಣಃ ।**
**ದಶಾವತಾರೈಸ್ಸಹಿತಸ್ತನೋತು ನೃಹರೀ ಸುಖಂ ॥ ೧೫೯ ॥**

**ಜಪೋಽಯುತಂ ದಶಾಂಶೇನ ಹೋಮಃ ಸ್ಯಾತ್ಪಾಯಸೇನ ತು ।**
**ಪ್ರಾಗುಕ್ತೇ ಪೂಜಯೇತ್ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ॥೧೬೦॥**

**ಅಂಗಾನ್ಯಾದೌ ಚ ಮತ್ಸ್ಯಾದ್ಯಾನ್ದಿಗ್ದಲೇಷು ತತೋಽರ್ಚಯೇತ್ ।**
**ಇಂದ್ರಾದ್ಯಾನಪಿ ವಜ್ರಾದ್ಯಾನ್ಸಂಪೂಜ್ಯೇಷ್ಟಮವಾಪ್ನುಯಾತ್ ॥ ೧೬೧ ॥**

---

೧೫೭–೧೫೮. ಇದಕ್ಕೆ ಅತ್ರಿಯೇ ಋಷಿ, ಅತಿಜಗತೀ ಎಂಬುದು ಛಂದಸ್ಸು, ದಶಾವತಾರ ನರಸಿಂಹನೇ ದೇವತೆಯು. 'ಕ್ಷ್ರೌಂ' ಎಂಬುದೇ ಬೀಜ. 'ಓಂ' ಎಂಬುದೇ ಶಕ್ತಿಯು ಆ, ಈ ಇತ್ಯಾದಿ ಆರು ದೀರ್ಘಗಳ ಸಹಿತವಾಗಿ ಬೀಜಾಕ್ಷರಗಳಿಂದ ಷಡಂಗನ್ಯಾಸವನ್ನು ಮಾಡಬೇಕು.

೧೫೯. "ಅನೇಕ ಚಂದ್ರರಂತೆ ವಿರಾಜಮಾನನು, ಲಕ್ಷ್ಮೀದೇವಿಯ ವರಮುಖಾವಲೋಕನಾಸಕ್ತವಾದ ನೇತ್ರಗಳುಳ್ಳವನು, ಹತ್ತು ಅವತಾರಗಳಿಂದ ಯುಕ್ತನೂ ಆಗಿರುವ ನರಹರಿಯು ಸುಖವನ್ನು ವೃದ್ಧಿಗೊಳಿಸಲಿ" ಎಂದು ಪ್ರಾರ್ಥನೆರೂಪವಾದ ಧ್ಯಾನವನ್ನು ಮಾಡಬೇಕು.

೧೬೦. ಈ ಮಂತ್ರವನ್ನು ಹತ್ತು ಸಾವಿರ ಜಪಮಾಡಿ, ಪಾಯಸದಿಂದ ಒಂದು ಸಾವಿರ ಹೋಮಮಾಡಬೇಕು. ಪೂರ್ವೋಕ್ತವಾದ ವೈಷ್ಣವಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಪ್ರತಿಷ್ಠೆಮಾಡಿ ಪೂಜಿಸಬೇಕು.

೧೬೧. ಆದಿಯಲ್ಲಿ ಅಂಗಗಳನ್ನೂ ತರುವಾಯ ದಿಕ್ಕು, ಕೋಣಗಳಲ್ಲಿ ಮತ್ಸ್ಯಾದಿ ಮೂರ್ತಿಗಳನ್ನೂ ಪೂಜಿಸಬೇಕು. ಇಂದ್ರ ಮುಂತಾದ ದಿಕ್ಪಾಲಕರು ಮತ್ತು ಅವರ ವಜ್ರ ಮುಂತಾದ ಆಯುಧ ಇವುಗಳನ್ನು ಪೂಜಿಸಿ ಇಷ್ಟಾರ್ಥವನ್ನು ಪಡೆಯಬೇಕು.

ಸಹಸ್ರಾಣಾಂ ಮಹಾಮಂತ್ರಂ ವಕ್ಷ್ಯೇ ತಂತ್ರೇಷು ಗೋಪಿತಂ ।
ತಾರೋ ಮಾಯಾ ರಮಾ ಕಾಮೋ ಬೀಜಂ ಕ್ರೋಧಪದಂ ತತಃ॥ ೧೬೨ ॥

ಭೂತಂ ನೃಸಿಂಹಶಬ್ದಾಂತೇ ಮಹಾಪುರುಷ ಈರಯೇತ್ ।
ಪ್ರಧಾನಧರ್ಮಾಧರ್ಮಾಂತೇ ನಿಗಡೇತಿ ಪದಂ ವದೇತ್ ॥ ೧೬೩ ॥

ನಿರ್ಮೋಚನಾಂತೇ ಕಾಲೇತಿ ತತಃ ಪುರುಷ ಈರಯೇತ್ ।
ಕಾಲಾಂತಕ ಸದ್ಯಕ್ಕೋಽಯಂ ಸ್ವೇಶ್ವರಾಂತೇ ಸದ್ಯಗ್ಜ್ವಲಂ ॥ ೧೬೪ ॥

ಶ್ರಾಂತಾಂತೇ ತು ನಿವಿಷ್ಟೇತಿ ಚೈತನ್ಯಚಿತ್ಸದಾ ತತಃ ।
ಭಾಸಕಾಂತೇ ತು ಕಾಲಾದ್ಯತೀತನಿತ್ಯೋದಿತೇತಿ ಚ ॥ ೧೬೫ ॥

ಉದಯಾಸ್ತಮಯಾಕ್ರಾಂತ ಮಹಾಕಾರುಣಿಕೇತಿ ಚ ।
ಹೃದಯಾಬ್ಜ ಚತುಶ್ಶ್ಲೋಕ್ತಾ ದಲಾಂತೇ ತು ನಿವಿಷ್ಟತಃ ॥ ೧೬೬ ॥

ಚೈತನ್ಯಾತ್ಮಂಶ್ಚತುರಾತ್ಮನ್ಸಾಪ್ತದಶಾತ್ಮಂಸ್ತತಃ ಪರಂ ।
ಚತುರ್ವಿಂಶಾತ್ಮನ್ನಂತೇ ತು ಪಂಚವಿಂಶಾತ್ಮನ್ನಿತ್ಯಪಿ ॥ ೧೬೭ ॥

ಬಕೋ ಹರಿಸ್ಸಹಸ್ರಾಂತೇ ಮೂರ್ತೇ ಏಹ್ಯೇಹಿ ಶಬ್ದತಃ ।
ಭಗವನ್ನೃಸಿಂಹಪುರುಷ ಕ್ರೋಧೇಶ್ವರರಸಾ ಸಹ ॥ ೧೬೮ ॥

ಸ್ರವಂದಿತಾಂ ತೇ ಪಾದೇತಿ ಕಲ್ಪಾಂತಾಗ್ನಿಸಹಸ್ರ ಚ ।
ಕೋಟ್ಯಾಭಾಂತೇ ಮಹಾದೇವ ನಿಕಾಯ ದಶಶಬ್ದತಃ ॥ ೧೬೯ ॥

---

೧೬೨-೨೦೫. ತಂತ್ರಗಳಲ್ಲಿ ಗೋಪ್ಯವಾಗಿರುವ ಸಹಸ್ರಾಕ್ಷರ ಮಹಾ ಮಂತ್ರವನ್ನು ಹೇಳುವೆನು :—“ ಓಂ ಹ್ರೀಂ ಶ್ರೀಂ ಕ್ಲೀಂ ಕ್ಷ್ರೌಂ ಕ್ರೋಧ ಭೂತ ನೃಸಿಂಹ ಮಹಾಪುರುಷ ಪ್ರಧಾನ ಧರ್ಮಾಧರ್ಮ ನಿಗಡ ನಿರ್ಮೋಚನ ಕಾಲಪುರುಷ ಕಾಲಾಂತಕ ಸದ್ಯಕ್ಕೋಯ ಸ್ವೇಶ್ವರ ಸದ್ಯಗ್ಜ್ವಲ ಶ್ರಾಂತನಿವಿಷ್ಟ ಚೈತನ್ಯ ಚಿತ್ಸದಾ ಭಾಸಕ ಕಾಲಾದ್ಯತೀತ ನಿತ್ಯೋದಿತೋದಯಾಸ್ತಮಯಾ

ಶತಯುಜ್ಞಾತಲಂ ಜ್ಞೇಯಂ ತತಶ್ಚಾಮಲಯುಗ್ಮಕಂ ।
ಪಿಂಗಲೇಕ್ಷಣಸಟಾದಂಷ್ಟ್ರಾ ದಂಷ್ಟ್ರಾಯುಧ ನಖಾಯುಧ　　॥ ೧೭೦ ॥

ದಾನವೇಂದ್ರಾಂತಕವನ್ಹಿ ಶೋಣಿತಪದಂ ತತಃ ।
ಸಂಸಕ್ತವಿಗ್ರಹಾಂತೇ ತು ಭೂತಾಪಸ್ಮಾರಯಾತುಧಾನ್　　॥ ೧೭೧ ॥

ಸುರಾಸುರವಂದ್ಯಮಾನಪಾದಪಂಕಜಶಬ್ದತಃ ।
ಭಗವನ್ವ್ಯೋಮಚಕ್ರೇಶ್ವರಾಂತೇ ತು ಪ್ರಭವಾಪ್ಯಯ　　॥ ೧೭೨ ॥

ರೂಪೇಣೋತ್ತಿಷ್ಠ ಚೋತ್ತಿಷ್ಠ ಅವಿದ್ಯಾನಿಚಯಂ ದಹ ।
ದಹ ಜ್ಞಾನೈಶ್ವರ್ಯಮಂತೇ ಪ್ರಕಾಶಯುಗಂ ತತಃ　　॥ ೧೭೩ ॥

ಓಂ ಸರ್ವಜ್ಞ ಅರೋಷಾಂತೇ ಜಂಭಾ ಜ್ರಂಭ್ಯವತಾರಕಂ ।
ಸತ್ಯಪುರುಷಶಬ್ದಾಂತೇ ಸದಸನ್ಮಧ್ಯ ಈರಯೇತ್　　॥ ೧೭೪ ॥

ನಿವಿಷ್ಟಂ ಮಮ ದುಸ್ಸ್ವಪ್ನಭಯಂ ನಿಗಡಶಬ್ದತಃ ।
ಭಯಂ ಕಾಂತಾರಶಬ್ದಾಂತೇ ಭಯಂ ವಿಷಪದಾತ್ತತಃ　　॥ ೧೭೫ ॥

ಜ್ವರಾಂತೇ ಡಾಕಿನೀಕೃತ್ಯಾಧ್ವರೇವತೀಭಯಂ ತತಃ ।
ಅಶನ್ಯಂತೇ ಭಯಂ ದುರ್ಭಿಕ್ಷಭಯಂ ಮಾರೀಶಬ್ದತಃ　　॥ ೧೭೬ ॥

---

ಕ್ರಾಂತ ಮಹಾಕಾರುಣಿಕ ಹೃದಯಾಬ್ಜ ಚತುರ್ದಲನಿವಿಷ್ಟ ಚೈತನ್ಯಾತ್ಮನ್ ಚತುರಾತ್ಮನ್ ದ್ವಾದಶಾತ್ಮನ್ ಚತುರ್ವಿಂಶಾತ್ಮನ್ ಪಂಚವಿಂಶಾತ್ಮನ್ ಬಕ ಹರೇ ಸಹಸ್ರಮೂರ್ತೇ ಏಹ್ಯೇಹಿ ಭಗವನ್ನೃಸಿಂಹ ಪುರುಷ ಕ್ರೋಧೇಶ್ವರರಸ ಸಹಸ್ರವಂದಿತಪಾದ ಕಲ್ಪಾಂತಾಗ್ನಿ ಸಹಸ್ರಕೋಟ್ಯಾಭ ಮಹಾದೇವನಿಕಾಯ ದಶಶತಯಜ್ಞಾತಲಾಮಲಾಮಲ ಪಿಂಗಲೇಕ್ಷಣ ಸಟಾದಂಷ್ಟ್ರ ದಂಷ್ಟ್ರಾಯುಧ ನಖಾಯುಧದಾನವೇಂದ್ರಾಂತಕ ವನ್ಹಿ ಶೋಣಿತಸಂಸಕ್ತವಿಗ್ರಹ ಭೂತಾಪಸ್ಮಾರಯಾತುಧಾನ ಸುರಾಸುರವಂದ್ಯಮಾನ ಪಾದಪಂಕಜ ಭಗವನ್ವ್ಯೋಮ ಚಕ್ರೇಶ್ವರ

ಭಯಂ ಮಾರೀಚಶಬ್ದಾಂತೇ ಭಯಂ ಛಾಯಾಪದಂ ತತಃ ।
ಸ್ಕಂದಾಪಸ್ಮಾರಶಬ್ದಾಂತೇ ಭಯಂ ಚೋರಭಯಂ ತತಃ ॥ ೧೭೭ ॥

ಜಲಸ್ಥಪ್ಸಾಗ್ನಿಭಯಂ ಗಜಸಿಂಹಭುಜಂಗತಃ ।
ಭಯಂ ಜನ್ಮಜರಾಂತೇ ಮರಣಾದಿಶಬ್ದಮೀರಯೇತ್ ॥ ೧೭೮ ॥

ಭಯಂ ನಿರ್ಮೋಚಯಯುಗಂ ಪ್ರಶಮಯಯುಗಂ ತತಃ ।
ಜ್ಞೇಯರೂಪಧಾರಣಾಂತೇ ನೃಸಿಂಹ ಬೃಹತ್ಸಾಮತಃ ॥ ೧೭೯ ॥

ಪುರುಷಾಂತೇ ಸರ್ವಭಯನಿವಾರಣಪದಂ ತತಃ ।
ಅಷ್ಟಾಷ್ಟಕಂ ಚತುಷ್ಷಷ್ಟಿ ಚೇಟಿಕಾಭಯಮೀರಯೇತ್ ॥ ೧೮೦ ॥

ವಿದ್ಯಾವೃತಸ್ತ್ರಯಸ್ತ್ರಿಂಶದ್ದೇವತಾಕೋಟಿಶಬ್ದತಃ ।
ನಮಿತಾಂತೇ ಪದಪದಾತ್ಪಂಕಜಾನ್ವಿತ ಈರಯೇತ್ ॥ ೧೮೧ ॥

ಸಹಸ್ರವದನಾಂತೇ ತು ಸಹಸ್ರೋದರ ಸಂವದೇತ್ ।
ಸಹಸ್ರೇಕ್ಷಣಶಬ್ದಾಂತೇ ಸಹಸ್ರಪಾದಮೀರಯೇತ್ ॥ ೧೮೨ ॥

---

ಪ್ರಭವಾಪ್ಯಯ ರೂಪೇಣೋತ್ತಿಷ್ಠೋತ್ತಿಷ್ಠಾವಿದ್ಯಾಸಿಚಯಂ ದಹದಹ ಜ್ಞಾನೈಶ್ವರ್ಯಂ ಪ್ರಕಾಶಯ ಪ್ರಕಾಶಯ ಓಂ ಸರ್ವಜ್ಞಾದೋಷ ಜಂಭಾಜೃಂಭ್ಯವತಾರ ಸತ್ಯಪುರುಷ ಸದಸನ್ಮಧ್ಯನಿವಿಷ್ಟ ಮಮ ದುಸ್ಸ್ವಪ್ನಭಯಂ ನಿಗಡಭಯಂ ಕಾಂತಾರಭಯಂ ವಿಷಜ್ವರಡಾಕಿನೀಕೃತ್ಯಾಧ್ವರೇವತೀಭಯಂ ಅಶನಿಭಯಂ ದುರ್ಭಿಕ್ಷಭಯಂ ಮಾರೀಭಯಂ ಮಾರೀಚಭಯಂ ಛಾಯಾಸ್ಕಂದಾಪಸ್ಮಾರ ಭಯಂ ಚೋರಭಯಂ ಜಲಸ್ಥಪ್ಸಾಗ್ನಿಭಯಂ ಗಜ ಸಿಂಹ ಭುಜಂಗಭಯಂ ಜನ್ಮಜರಾಮರಣಾದಿಭಯಂ ನಿರ್ಮೋಚಯ ನಿರ್ಮೋಚಯ ಪ್ರಶಮಯ ಪ್ರಶಮಯ ಜ್ಞೇಯರೂಪಧಾರಣ ನೃಸಿಂಹ ಬೃಹತ್ಸಾಮ ಪುರುಷ ಸರ್ವಭಯ ನಿವಾರಣ ಅಷ್ಟಾಷ್ಟಕ ಚತುಷಷ್ಟಿ ಚೇಟಿಕಾಭಯ ವಿದ್ಯಾವೃತ ತ್ರಯಸ್ತ್ರಿಂಶದ್ದೇವತಾ ಕೋಟಿ ನಮಿತಪದ ಪಂಕಜಾನ್ವಿತ ಸಹಸ್ರವದನ ಸಹಸ್ರೋದರ

ಸಹಸ್ರಭುಜಸಂಪ್ರೋಚ್ಯ ಸಹಸ್ರಜಿಹ್ವ ಸಂವದೇತ್ ।
ಸಹಸ್ರಾಂತೇ ಲಲಾಟೇತಿ ಸಹಸ್ರಾಯುಧತೋ ಧರಾತ್ || ೧೮೩ ||

ತಮಃ ಪ್ರಕಾಶಕಪುರಮಥನಾಂತೇ ತು ಸರ್ವ ಚ ।
ಮಂತ್ರರಾಜೇಶ್ವರಪದಾದ್ವಿಹಾಯಸಗತಿಪ್ರದ || ೧೮೪ ||

ಪಾತಾಲಗತಿಪ್ರದಾಂತೇ ಯಂತ್ರಮರ್ದನ ಈರಯೇತ್ ।
ಘೋರಾಟ್ಟಹಾಸಹಸಿತ ವಿಶ್ವಾವಾಸಪದಂ ತತಃ || ೧೮೫ ||

ವಾಸುದೇವ ತತೋऽಕ್ರೂರ ತತೋ ಹಯಮುಖೇತಿ ಚ ।
ಪರಮಹಂಸ ವಿಶ್ವೇಶವಿಶ್ವಾಂತೇ ತು ವಿಡಂಬನ || ೧೮೬ ||

ನಿವಿಷ್ಟಾಂತೇ ತತಃ ಪ್ರಾದುರ್ಭಾವಕಾರಕ ಈರಯೇತ್ ।
ಹೃಷೀಕೇಶ ಚ ಸ್ವಚ್ಛಂದನಿಶ್ಶೇಷಜೀವನಿನ್ಯಸೇತ್ || ೧೮೭ ||

ಗ್ರಾಸಕಾಂತೇ ಮಹಾಪಶ್ಚಾತ್ಪಿಶಿತಾಸೃಗಿತೀರಯೇತ್ ।
ಲಂಪಟಾಂತೇ ಖೇಚರೀತಿ ಸಿದ್ಧ್ಯಂತೇ ತು ಪ್ರದಾಯಕ || ೧೮೮ ||

ಅಜಾಯಾವ್ಯಯ ಅವ್ಯಕ್ತಬ್ರಹ್ಮಾಂಡೋದರ ಇತ್ಯಪಿ ।
ತತೋ ಬ್ರಹ್ಮಸಹಸ್ರಾಂತೇ ಕೋಟಿಸ್ರಗ್ರುಂಡಶಬ್ದತಃ || ೧೮೯ ||

---

ಸಹಸ್ರೇಕ್ಷಣ ಸಹಸ್ರಪಾದ ಸಹಸ್ರಭುಜ ಸಹಸ್ರಜಿಹ್ವ ಸಹಸ್ರಲಲಾಟ ಸಹಸ್ರಾಯುಧಧರ ತಮಃಪ್ರಕಾಶಕ ಪುರಮಥನ ಸರ್ವಮಂತ್ರರಾಜೇಶ್ವರ ವಿಹಾಯಸಗತಿಪ್ರದ ಪಾತಾಲಗತಿಪ್ರದ ಯಂತ್ರಮರ್ದನ ಘೋರಾಟ್ಟಹಾಸಸಹಿತ ವಿಶ್ವಾವಾಸ ವಾಸುದೇವ ಅಕ್ರೂರ ಹಯಮುಖ ಪರಮಹಂಸ ವಿಶ್ವೇಶ ವಿಶ್ವವಿಡಂಬನ ನಿವಿಷ್ಟ ಪ್ರಾದುರ್ಭಾವಕಾರಕ ಹೃಷೀಕೇಶ ಸ್ವಚ್ಛಂದ ನಿಶ್ಶೇಷ ಜೀವಗ್ರಾಸಕ ಮಹಾಪಿಶಿತಾಸೃಗ್ಲಂಪಟ ಖೇಚರೀಸಿದ್ಧಿಪ್ರದಾಯಕ ಅಜೇಯಾವ್ಯಯಾವ್ಯಕ್ತ ಬ್ರಹ್ಮಾಂಡೋದರ ಬ್ರಹ್ಮಸಹಸ್ರಕೋಟಿಸ್ರಗ್ರುಂಡಮಾಲಪಂಡಿತಮುಂಡ ಮತ್ಸ್ಯ ಕೂರ್ಮ ವರಾಹ ನೃಸಿಂಹ ವಾಮನ ತ್ರೈಲೋಕ್ಯಾಕ್ರಮಣ ಪಾದಶಾಲಿರಾಮತ್ರಯ

ಮೂಲಸಂಡಿತ ಮುಂಡೇತಿ ಮತ್ಸ್ಯಕೂರ್ಮ ತತಃ ಪರಂ ।
ವರಾಹಾಂತೇ ನೃಸಿಂಹೇತಿ ವಾಮನಾಂತೇ ಸಮೀರಯೇತ್ ॥ ೧೯೦ ॥

ತ್ರೈಲೋಕ್ಯಾಕ್ರಮಣಾಂತೇ ತು ಪಾದಶಾಲಿಕ ಈರಯೇತ್ ।
ರಾಮತ್ರಯ ತತೋ ವಿಷ್ಣುರೂಪಾಂತೇ ಧರ ಏವ ಚ ॥ ೧೯೧ ॥

ತತ್ವತ್ರಯಾಂತೇ ಪ್ರಣವಾಧರತಸ್ತಚ್ಛಿಖಾಂ ಪದಂ ।
ನಿವಿಷ್ಟವನ್ಹಿಜಾಯಾಂತೇ ಸ್ವಧಾ ಚೈವ ತತೋ ವಷಟ್ ॥ ೧೯೨ ॥

ನೇತ್ರವರ್ಮಾಸ್ತ್ರಮುಚ್ಚಾರ್ಯ ಪ್ರಾಣಾಧಾರ ಇತೀರಯೇತ್ ।
ಆದಿದೇವಪದಾತ್ಪ್ರಾಣಾಪಾನಪಶ್ಚಾನ್ನಿವಿಷ್ಟತಃ ॥ ೧೯೩ ॥

ಪಾಂಚರಾತ್ರಿಕ ದಿತಿಜವಿನಿಧನಾಂತೇ ಕರೇತಿ ಚ ।
ಮಹಾಮಾಯಾ ಅಮೋಘಾಂತೇ ದರ್ಪಂ ದೈತ್ಯೇಂದ್ರಶಬ್ದತಃ ॥ ೧೯೪ ॥

ದರ್ಪಾಂತೇ ದಲನೇತ್ಯುಕ್ತ್ವಾ ತೇಜೋರಾಶಿನ್ ಧ್ರುವಂ ಸ್ಮರಃ ।
ತೇಜಸ್ವರಾಂತೇ ಪುರುಷಫಡಂತೇ ಸತ್ಯಪೂರುಷ ॥ ೧೯೫ ॥

ಅಸ್ತ್ರತಾರೋಽಚ್ಯುತಾಸ್ತ್ರಂ ಚ ತಾರೋ ವಾ ಚ ಸುದೇವಫಟ್ ।
ತಾರಮಾಯಾ ಮೂರ್ತೇ ಫಟ್ ಧ್ರುವಃ ಕಾಮಃ ಸ್ವರಾದಿಮಃ ॥ ೧೯೬ ॥

---

ವಿಷ್ಣುರೂಪಧರ ತತ್ವತ್ರಯ ಪ್ರಣವಾಧಾರ ತಚ್ಛಿಖಾನಿವಿಷ್ಟ ಸ್ವಾಹಾ ಸ್ವಧಾ ವಷಟ್ ಔ ಹುಂ ಫಟ್ ಪ್ರಾಣಾಧಾರಾದಿ ದೇವ ಪ್ರಾಣಾಪಾನನಿವಿಷ್ಟ ಪಾಂಚ ರಾತ್ರಿಕ ದಿತಿಜ ವಿನಿಧನಕರ ಮಹಾಮಾಯಾ ಅಮೋಘದರ್ಪದೈತ್ಯೇಂದ್ರದರ್ಪ ದಲನ ತೇಜೋರಾಶಿನ್ ಓಂ ಸ್ಮರ ತೇಜಸ್ವರ ಪುರುಷಫಟ್ ಸತ್ಯಪೂರುಷಫಟ್ ಓಂ ಅಚ್ಯುತ ಫಟ್ ಓಂ ವಾಸುದೇವ ಫಟ್ ಓಂ ಹ್ರೀಂ ಸ ಫಟ್ ಓಂ ಕ್ಲೀಂ ಕ್ಷಂ ಓಂ ಸ ಫಟ್ ಓಂ ಕ್ಷ್ರೌಂ ವಿಶ್ವಮೂರ್ತೇ ಫಟ್ ಓಂ ಹ್ರೀಂ ವಿಶ್ವಾತ್ಮನೇ ಫಟ್ ಓಂ ಸೌ ಚತುರಾತ್ಮನೇ ಫಟ್ ಓಂ ಹಂ ವಿಶ್ವರೂಪಿನ್ ಫಟ್ ಓಂ ಓಂ ಹ್ರೈಂ ಪರಮ ಹ್ರುಂ ಸ ಫಟ್ ಓಂ ಹ್ರಃ ಹಿರಣ್ಯಗರ್ಭರೂಪಧಾರಣ ಫಟ್ ಓಂ

ಮೂರ್ತೇಽಸ್ತ್ರಮವ್ಯಯೋ ಬೀಜಂ ವಿಶ್ವಮೂರ್ತೇಽಸ್ತ್ರಮವ್ಯಯಃ ।
ಮಾಯಾ ವಿಶ್ವಾತ್ಮನೇ ಫಟ್ ಚ ತಾರಃ ಸೌ ಚತುರಾತ್ಮನೇ || ೧೯೭ ||

ಫಟ್ ತಾರೋ ಹಂ ವಿಶ್ವರೂಪಿನ್ನಸ್ತ್ರಂ ಚ ತದನಂತರಂ ।
ತಾರೌ ಹ್ರೈಂ ಪರಮಾಂತೇ ತು ಹ್ರುಂ ಸಫಟ್ ಪ್ರಣವಸ್ತತಃ || ೧೯೮ ||

ಹ್ರಃ ಹಿರಣ್ಯಗರ್ಭರೂಪಧಾರಣಾಂತೇ ಚ ಫಟ್ ಧ್ರುವಃ ।
ಹ್ರೌಂ ಅನೌಪಮ್ಯ ರೂಪಧಾರಿಣೇಽಸ್ತ್ರಂ ಧ್ರುವಸ್ತತಃ || ೧೯೯ ||

ಕ್ಷೌಂ ನೃಸಿಂಹರೂಪಧಾರಿನ್ ಓಂ ಕ್ಷಂ ಕ್ಷಶ್ಚ ಸ್ವರಾದಿಕಃ ।
ಷ್ಟಾಂಗವಿನ್ಯಾಸವಿನ್ಯಸ್ತ ಮೂರ್ತಿಧಾರಿಂಸ್ತತಶ್ಚ ಫಟ್ || ೨೦೦ ||

ಹ್ರೌಂ ನಿಸರ್ಗಸಿದ್ಧ್ಯೈಕರೂಪಧಾರಿಂಸ್ತತಶ್ಚ ಫಟ್ ।
ತಾರೋ ವರ್ಮತ್ರಯಂ ಸಂಕರಂ ವಂ ಚಾಮುಕಮಸ್ತಕಂ || ೨೦೧ ||

ಖಂಡದ್ವಯಂ ಖಾದಯೇತಿ ದ್ವಯಂ ಕ್ಲೀಂ ಸಾಧ್ಯಮಾನಯ ।
ದ್ವಯಂ ತತೋ ಮಹಾತ್ಮನ್ ಸ್ವಾನ್ಸಮ್ಯಗ್ದರ್ಶಯ ಯುಗ್ಮಕಂ || ೨೦೨ ||

ಷಡ್ದೀರ್ಘಾಢ್ಯಂ ಸ್ವಬೀಜಂ ಚ ಕ್ಷಪಿತಾಂತೇ ತು ಕಲ್ಮಷ ।
ಉತ್ತರಾಯದ್ವಯಂ ಪಂಚಬಾಣಬೀಜಾನಿ ಪ್ರೋಚ್ಚರೇತ್ || ೨೦೩ ||

---

ಹ್ರೌಂ ಅನೌಪಮ್ಯ ರೂಪಧಾರಿಣೇ ಫಟ್ ಓಂ ಕ್ಷೌಂ ನೃಸಿಂಹ ರೂಪಧಾರಿನ್ ಓಂ ಕ್ಷಂ ಕ್ಷಃ ಅಷ್ಟಾಂಗವಿನ್ಯಾಸ ವಿನ್ಯಸ್ತ ಮೂರ್ತಿಧಾರಿನ್ ಫಟ್ ಹ್ರೌಂ ನಿಸರ್ಗಸಿದ್ಧೈಕರೂಪಧಾರಿನ್ ಫಟ್ ಓಂ ಹುಂ ಹುಂ ಹುಂ ಸಂ ಕರವಂ ಅಮುಕ ಮಸ್ತಕಂ ಖಂಡ ಖಂಡ ಖಾದಯ ಖಾದಯ ಕ್ಲೀಂ ಸಾಧ್ಯಮಾನಯಾನಯ ಮಹಾತ್ಮನ್ ಸ್ವಾನ್ ಸಮ್ಯಗ್ದರ್ಶಯ ದರ್ಶಯ ಕ್ಷಾಂ ಕ್ಷೀಂ ಕ್ಷೂಂ ಕ್ಷ್ಯಾಂ ಕ್ಷೈಂ ಕ್ಷೌಂ (ಅಥವಾ ಕ್ಲಾಂ ಕ್ಲೀಂ ಇತ್ಯಾದಿ ಕ್ರಮದಿಂದ ಷಡ್ದೀರ್ಘ ಯುಕ್ತವಾದ ಪಂಚಬಾಣ ಬೀಜಾಕ್ಷರಗಳಾರನ್ನಾದರೂ ಹೇಳಬಹುದು.) ಕ್ಷಪಿತ

ನೃಸಿಂಹಾಂತೇ ತತೋ ಜ್ವಾಲಾತ್ಮನೇ ಸ್ವಾಹಾ ಸಮೀರಯೇತ್ ।
ನೃಸಿಂಹಾಂತೇ ತತಃ ಕಾಲಾತ್ಮನೇ ಸ್ವಾಹಾ ಧ್ರುವಸ್ತತಃ ॥ ೨೦೪ ॥

ಸ್ವಬೀಜಂ ಕಾಮಬೀಜಂ ಚ ಲಕ್ಷ್ಮೀಬೀಜದ್ವಯಂ ತತಃ ।
ಮಾಯಾ ತಾರಾಂತಿಮೋ ಮಂತ್ರಃ ಸಹಸ್ರಾಕ್ಷರಸಂಮಿತಃ ॥ ೨೦೫ ॥

ಕಪಿಲೋಸ್ಯ ಮುನಿಶ್ಛಂದೋ ಜಗತೀ ದೇವತಾ ಪುನಃ ।
ಶ್ರೀ ಲಕ್ಷ್ಮೀರ್ನೃಹರಿರ್ಬೀಜಂ ಕ್ಷ್ರಾಂ ಶಕ್ತಿರ್ವಹ್ನಿವಲ್ಲಭಾ ॥ ೨೦೬ ॥

ಶ್ವೇತೋ ವರ್ಣ ಉದಾತ್ತಶ್ಚ ಸ್ವರಃ ಪ್ರೋಕ್ತೋ ಮನೀಷಿಭಿಃ ।
ಕ್ಷೇತ್ರಂ ಚ ಪರಮಾತ್ಮಾ ತು ವಿನಿಯೋಗೋಽಖಿಲಾಪ್ತಯೇ ॥ ೨೦೭ ॥

ಕ್ಷಃ ಸಹಸ್ರಬಾಹವೇಂತೇ ಸಹಸ್ರಾಯುಧಧರಾಯ ಚ ।
ನೃಸಿಂಹಾಂತಂ ವಹ್ನಿಜಾಯಾಸ್ತ್ರಾಯ ಫಟ್ ಮಂತ್ರ ಈರಿತಃ ॥ ೨೦೮ ॥

---

ಕಲ್ಮಷ ಉತ್ತರಾಯೋತ್ತರಾಯ ನೃಸಿಂಹ ಜ್ವಾಲಾತ್ಮನೇ ಸ್ವಾಹಾ ನೃಸಿಂಹ ಕಾಲಾತ್ಮನೇ ಸ್ವಾಹಾ ಓಂ ಕ್ಷ್ರಾಂ ಕ್ಲೀಂ ಶ್ರೀಂ ಶ್ರೀಂ ಹ್ರೀಂ ಓಂ " ಎಂಬುದು ಒಂದು ಸಾವಿರ ಅಕ್ಷರಗಳನ್ನೊಳಗೊಂಡಿರುವ ನೃಸಿಂಹ ಮಂತ್ರವು.

೨೦೬. ಈ ಮಂತ್ರಕ್ಕೆ ಕಪಿಲನು ಋಷಿಯು. ಛಂದಸ್ಸು ಜಗತೀ, ಶ್ರೀಲಕ್ಷ್ಮೀನೃಹರಿಯೇ ದೇವತೆ, 'ಕ್ಷ್ರಾಂ' ಎಂಬುದು ಬೀಜ, 'ಸ್ವಾಹಾ' ಎಂಬುದು ಶಕ್ತಿ.

೨೦೭. ಶ್ವೇತವರ್ಣ, ಉದಾತ್ತಸ್ವರ, ಪರಮಾತ್ಮನೇ ಕ್ಷೇತ್ರವು. ಈ ಮಂತ್ರವು ಸಕಲ ಇಷ್ಟಾರ್ಥ ಸಿದ್ಧಿಗಾಗಿ ವಿನಿಯೋಗವುಳ್ಳದು ಎಂಬದಾಗಿ ಜ್ಞಾನಿಗಳಿಂದ ಉಕ್ತವಾಗಿದೆ.

೨೦೮-೨೦೯. " ಕ್ಷಃ ಸಹಸ್ರಬಾಹವೇ ಸಹಸ್ರಾಯುಧಧರಾಯ ನೃಸಿಂಹ ಸ್ವಾಹಾ ಅಸ್ತ್ರಾಯ ಫಟ್ " ಎಂಬ ಮಂತ್ರದಿಂದ ಕರಶುದ್ಧಿಮಾಡಿಕೊಂಡು ಅಂಗ

ಅನೇನ ಕರಶುದ್ಧಿಂ ಚ ಕೃತ್ವಾಂಗಾನಿ ಸಮಾಚರೇತ್ ।
ತಾರಃ ಕ್ಷ್ರಾಂ ಚ ಸಹಸ್ರಾಂತೇಽಕ್ಷರಶಬ್ದಾದ್ವಿಜೃಂಭಿತಂ　　　　|| ೨೦೯ ||

ನೃಸಿಂಹಾಯಾಗ್ನಿಜಾಯಾಂತೋ ಹೃದಯೋ ಮನುರೀರಿತಃ ।
ತಾರಃ ಕ್ಷ್ರೀಂ ಚ ಮಹಾತನುಪ್ರಭಾಂತೇ ವಿಕರೇತಿ ಚ　　　　|| ೨೧೦ ||

ನೃಸಿಂಹಾಯಾಗ್ನಿಜಾಯಾಂತೇ ಶಿರೋಮಂತ್ರಃ ಪ್ರಕೀರ್ತಿತಃ ।
ತಾರಃ ಕ್ಷ್ರೂಂ ತಪ್ತಸಿಂಹಾಯ ಚ ದೃಕ್ಕೇಶಾಂತ ಈರಯೇತ್ || ೨೧೧ ||

ಜ್ವಲತ್ಪಾವಕಲೋ ಕೂರ್ಮೋ ದೀರ್ಘಾ ವಜ್ರಾಧಿಕೇತಿ ಚ ।
ನಖಸ್ಪರ್ಶಾದ್ದಿವ್ಯಸಿಂಹ ನಮೋಽಸ್ತು ಭಗವಾನ್ಹರಿಃ　　　　|| ೨೧೨ ||

ಮಹಾಧ್ವಸ್ತಜಗದ್ರೂಪಿ ನೃಸಿಂಹಾಯ ದ್ವಯಂ ದ್ವಯಂ ।
ಅನೇನ ಚ ಶಿಖಾ ಪ್ರೋಕ್ತಾ ಕವಚಂ ತದನಂತರಂ　　　　|| ೨೧೩ ||

---

ನ್ಯಾಸವನ್ನು ಆಚರಿಸಬೇಕು. " ಓಂ ಕ್ಷ್ರಾಂ ಸಹಸ್ರಾಕ್ಷರ ವಿಜೃಂಭಿತ ನೃಸಿಂಹಾಯ ಸ್ವಾಹಾ '' ಎಂಬುದು ಹೃದಯಮಂತ್ರವು. ಇದರಿಂದ ಹೃದಯದಲ್ಲಿ ನ್ಯಾಸ ಮಾಡಬೇಕು

೨೧೦-೨೧೧. " ಓಂ ಕ್ಷ್ರೀಂ ಮಹಾತನು ಪ್ರಭಾವಿಕರ ನೃಸಿಂಹಾಯ ಸ್ವಾಹಾ '' ಎಂಬುದು ಶಿರೋಮಂತ್ರವು. ಇದರಿಂದ ಶಿರಸ್ಸಿನಲ್ಲಿ ನ್ಯಾಸ ಮಾಡಬೇಕು.

೨೧೧-೨೧೩. " ಓಂ ಕ್ಷ್ರೂಂ ತಪ್ತಸಿಂಹಾಯ ದೃಕ್ಕೇಶಜ್ಜ್ವಲತ್ಪಾವಕಲ ಕೂರ್ಮದೀರ್ಘವಜ್ರಾಧಿಕನಖಸ್ಪರ್ಶದಿವ್ಯಸಿಂಹನಮೋಸ್ತು ಭಗವಾನ್ಹರಿಃ ಮಹಾ ಧ್ವಸ್ತಜಗದ್ರೂಪನೃಸಿಂಹಾಯ ನೃಸಿಂಹಾಯ '' ಎಂಬೀ ಮಂತ್ರದಿಂದ ಶಿಖೆ ಯನ್ನು ನ್ಯಾಸಮಾಡಬೇಕು.

ತಾರಃ ಕ್ಷ್ರೈಂ ಚ ಸುವರ್ಣಂ ತೇ ಮದಮತ್ತಪದಂ ತತಃ ।
ವಿಹ್ವಲಿತನೃಸಿಂಹಾಯ ಸ್ವಾಹಾಂತಂ ಕವಚಂ ಸ್ಮೃತಂ ॥ ೨೧೪ ॥

ತಾರಃ ಕ್ಷ್ರೌಂ ಚ ಸಹಸ್ರಾಕ್ಷ ವಿಶ್ವರೂಪಪದಂ ವದೇತ್ ।
ಧಾರಣೋಽಗ್ನಿಪ್ರಿಯಾಂತೋಽಯಂ ನೇತ್ರಮಂತ್ರಃ ಪ್ರಕೀರ್ತಿತಃ ॥ ೨೧೫ ॥

ತಾರೋ ಕ್ಷಶ್ಚ ಸಹಸ್ರಾಂತೇ ಬಾಹವೇ ಪದಮೀರಯೇತ್ ।
ಸಹಸ್ರಾಂತೇ ಯುಧಾಯಾಥ ನೃಸಿಂಹಾಯಾಗ್ನಿಸುಂದರೀ ॥ ೨೧೬ ॥

ಅಸ್ತ್ರಮಂತ್ರಃ ಸಮಾಖ್ಯಾತಸ್ತತೋ ಧ್ಯಾಯೇನ್ನೃಕೇಸರೀಂ ।
ಉದ್ಯಪರ್ಕಸಹಸ್ರಾಭಂ ತ್ರೀಕ್ಷಣಂ ಭೀಮಭೂಷಣಂ ॥ ೨೧೭ ॥

ಸುತೀಕ್ಷ್ಣಾಗ್ರಭುಜೋ ದಂಷ್ಟ್ರೈರ್ದೈತ್ಯದಾರಣಕಂ ಸ್ಮರೇತ್ ।
ಏವಂ ಧ್ಯಾತ್ವಾ ಜಪೇನ್ಮಂತ್ರೀ ಸಹಸ್ರಂ ಪಾಯಸೇನ ಚ ॥ ೨೧೮ ॥

೨೧೪. " ಓಂ ಕ್ಷ್ರೈಂ ಸುವರ್ಣಮದಮತ್ತವಿಹ್ವಲಿತನೃಸಿಂಹಾಯ ಸ್ವಾಹಾ " ಎಂಬ ಮಂತ್ರದಿಂದ ಕವಚವನ್ನು ನ್ಯಾಸಮಾಡಬೇಕು.

೨೧೫. " ಓಂ ಕ್ಷ್ರೌಂ ಸಹಸ್ರಾಕ್ಷ ವಿಶ್ವರೂಪಧಾರಣ ಸ್ವಾಹಾ " ಎಂಬುದು ನೇತ್ರಮಂತ್ರವು. ಅದರಿಂದ ನೇತ್ರವನ್ನು ನ್ಯಾಸಮಾಡಬೇಕು.

೨೧೬. " ಓಂ ಕ್ಷಃ ಸಹಸ್ರ ಬಾಹವೇ ಸಹಸ್ರಾಯುಧಾಯ ನೃಸಿಂಹಾಯ ಸ್ವಾಹಾ " ಎಂಬುದು ಅಸ್ತ್ರಮಂತ್ರವು ಎಂದು ಉಕ್ತವಾಗಿದೆ.

೨೧೭-೨೧೮. ಅನಂತರ ನರಸಿಂಹನನ್ನು ಧ್ಯಾನಮಾಡಬೇಕು. ಉದಯಿಸುತ್ತಿರುವ ಸಾವಿರ ಸೂರ್ಯರಂತೆ ಹೊಳೆಯುತ್ತಿರುವ, ಮೂರು ಕಣ್ಣುಗಳುಳ್ಳ, ಉಗ್ರಭೂಷಣಗಳುಳ್ಳ, ಅತ್ಯಂತ ತೀಕ್ಷ್ಣವಾದ ಭುಜಗಳೆಂಬ ದಂಡಗಳಿಂದ ದೈತ್ಯನನ್ನು ಸೀಳುತ್ತಿರುವ ನರಸಿಂಹಸ್ವಾಮಿಯನ್ನು ಧ್ಯಾನಿಸಬೇಕು.

ಆಜ್ಯಪ್ಲುತೇನ ಜುಹುಯಾತ್ಸಮ್ಯಕ್ಸಿದ್ಧೋ ಭವೇನ್ಮುನಿಃ ।
ಪ್ರಾಗುಕ್ತೇ ವೈಷ್ಣವೇ ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ॥ ೨೧೯ ॥

ಸಂಪೂಜ್ಯ ನೃಹರಿಂ ಪಶ್ಚಾದಾದಾವಂಗಾನಿ ಪೂಜಯೇತ್ ।
ಚಕ್ರಂ ಶಂಖಂ ಚ ಪಾಶಂ ವಾಂಕುಶಂ ಕುಲಿಶಮೇವ ಚ ॥ ೨೨೦ ॥

ಗದಾಕೃಪಾಣಿಕ್ಷ್ವೇಡಾನಿ ದಲೇಷು ಪರಿಪೂಜಯೇತ್ ।
ಲೋಕೇಶಾನಪಿ ವಜ್ರಾದ್ಯಾನ್ಪೂಜಯೇತ್ತದನಂತರಂ ॥ ೨೨೧ ॥

ಏವಂ ಸಿದ್ಧೇ ಮನೌ ಮಂತ್ರೀ ಪ್ರಯೋಗಾನ್ಕರ್ತುಮರ್ಹತಿ ।
ಭಸ್ಮಾಭಿಮಂತ್ರಿತಂ ಕೃತ್ವಾ ಗ್ರಹಗ್ರಸ್ತಂ ವಿಲೇಪಯೇತ್ ॥ ೨೨೨ ॥

೨೧೮-೨೧೯. ಈರೀತಿಯಾಗಿ ಧ್ಯಾನಿಸಿ ಮಂತ್ರವನ್ನು ಜಪಿಸಿ ತುಪ್ಪದಿಂದ ಅಭಿಘಾರಮಾಡಲ್ಪಟ್ಟ ಪಾಯಸದಿಂದ ಸಾವಿರ ಹೋಮಮಾಡಬೇಕು. ಹೀಗೆ ಮಾಡಿದರೆ ಮಂತ್ರವು ಚೆನ್ನಾಗಿ ಸಿದ್ಧವಾಗುವುದು.

೨೧೯-೨೨೧. ಪೂರ್ವೋಕ್ತವೈಷ್ಣವಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಕಲ್ಪಿಸಿ ಅದರಲ್ಲಿ ನರಸಿಂಹಸ್ವಾಮಿಯನ್ನು ಪೂಜಿಸಿದ ಮೇಲೆ ಮೊದಲು ಅಂಗಗಳನ್ನು ಪೂಜಿಸಬೇಕು. ಚಕ್ರ, ಶಂಖ, ಪಾಶ, ಅಂಕುಶ, ಕುಲಿಶ, ಗದೆ, ಕತ್ತರೀ, ಬಿದಿರುಕೋಲು ಇವುಗಳನ್ನು ದಿಗ್ಭಾಗಗಳಲ್ಲಿ ಪೂಜಿಸಬೇಕು. ಅನಂತರ ಇಂದ್ರಾದಿ ಲೋಕಪಾಲಕರು, ವಜ್ರ ಮುಂತಾದ ಅವರ ಆಯುಧ ಇವನ್ನು ಪೂಜಿಸಬೇಕು.

೨೨೨. ಈ ಪ್ರಕಾರ ಮಾಡಿ ಮಂತ್ರಸಿದ್ಧಿ ಪಡೆದವನು ಪ್ರಯೋಗ ಮಾಡಲು ಅರ್ಹನಾಗುವನು. ಈ ಮಂತ್ರದಿಂದ ಬೂದಿಯನ್ನು ಅಭಿಮಂತ್ರಿಸಿ ಅದನ್ನು ಗ್ರಹಗ್ರಸ್ತನಿಗೆ ಲೇಪಿಸಬೇಕು.

ಭಸ್ಮಸಂಲೇಪನಾದೇವ ಸರ್ವಗ್ರಹವಿನಾಶನಂ ।
ಅನೇನೈವ ವಿಧಾನೇನ ಯಕ್ಷರಾಕ್ಷಸಕಿನ್ನರಾಃ ॥ ೨೨೩ ॥

ಭೂತಪ್ರೇತಪಿಶಾಚಾಶ್ಚ ನಶ್ಯಂತ್ಯೇವ ನ ಸಂಶಯಃ ।
ಪರಾಭಿಚಾರಕೃತ್ಯಾನಿ ಮನುನಾನೇನ ಮಂತ್ರಿತಂ ॥ ೨೨೪ ॥

ಭಸ್ಮ ಸಂಲೇಪಯೇತ್ತಸ್ಯ ದುರಾಧರ್ಷೋ ಭವೇನ್ನರಃ ।
ಸುದಿನೇ ಸ್ಥಾಪಯೇತ್ಕುಂಭಂ ಸರ್ವತೋಭದ್ರಮಂಡಲೇ ॥ ೨೨೫ ॥

ತೀರ್ಥತೋಯೇನ ಸಂಪೂರ್ಯ ಜಪೇದಷ್ಟೋತ್ತರಂ ಶತಂ ।
ತೇನಾಭಿಷಿಕ್ತೋ ಮನುಜಃ ಸರ್ವಾಪತ್ತಿಂ ತರೇದ್ಧ್ರುವಂ ॥ ೨೨೬ ॥

ಕಿಂ ಬಹೂಕ್ತೇನ ಸರ್ವೇಷ್ಟದಾಯಕೋಯಂ ಮನೂತ್ತಮಃ ।
ವಜ್ರನಖಾಯ ವಿದ್ಮಹೇ ತೀಕ್ಷ್ಣದಂಷ್ಟ್ರಾಯ ಧೀಮಹಿ ।
ತನ್ನೋ ನೃಸಿಂಹಃ ಶಬ್ದಾಂತೇ ವದೇಚ್ಚೈವ ಪ್ರಚೋದಯಾತ್ ॥ ೨೨೭ ॥

೨೨೩-೨೨೫. ಆ ಭಸ್ಮವನ್ನು ಮೈಗೆ ಹಚ್ಚುವ ಮಾತ್ರದಿಂದ ಗ್ರಹಗಳ ಬಾಧೆಯೆಲ್ಲಾ ನಾಶವಾಗುವುದು. ಈ ವಿಧಾನದಿಂದಲೇ ಯಕ್ಷ, ರಾಕ್ಷಸ, ಕಿನ್ನರ, ಭೂತ, ಪ್ರೇತ ಮತ್ತು ಪಿಶಾಚ ಇವೂ ಸಹ ನಾಶವಾಗುತ್ತವೆ; ಸಂದೇಹವಿಲ್ಲ. ಪರರಿಂದ ಮಾಡಲ್ಪಟ್ಟ ಅಭಿಚಾರಿಕ ಕೃತ್ಯಗಳೂ ಸಹ ಈ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಭಸ್ಮಲೇಪನದಿಂದ ಫಲಿಸದಂತಾಗಿ ಮನುಷ್ಯನು ಯಾರಿಂದಲೂ ಹಿಂಸಿಸಲ್ಪಡಲಶಕ್ಯನಾಗುವನು.

೨೨೫-೨೨೬. ಶುಭದಿನದಲ್ಲಿ ಸರ್ವತೋಭದ್ರಮಂಡಲದಲ್ಲಿ ಕಲಶವನ್ನು ಸ್ಥಾಪಿಸಿ, ತೀರ್ಥೋದಕದಿಂದ ಪೂರ್ಣಮಾಡಿ, ಈ ಮಂತ್ರವನ್ನು ನೂರೆಂಟಾವರ್ತಿ ಜಪಿಸಿ ಆ ಉದಕದಿಂದ ಮನುಷ್ಯನು ಅಭಿಷೇಕಮಾಡಿಸಿಕೊಂಡರೆ ಖಂಡಿತವಾಗಿ ಸಕಲ ವಿಪತ್ತುಗಳಿಂದಲೂ ಪಾರಾಗುವನು.

೨೨೭-೨೨೮. ಹೆಚ್ಚು ಹೇಳುವುದೇನು! ಈ ಶ್ರೇಷ್ಠಮಂತ್ರವು ಸಕಲೇಷ್ಟದಾಯಕವು "ವಜ್ರನಖಾಯ ವಿದ್ಮಹೇ ತೀಕ್ಷ್ಣದಂಷ್ಟ್ರಾಯ ಧೀಮಹಿ ।

ಏಷಾ ನೃಸಿಂಹ ಗಾಯತ್ರೀ ಸರ್ವಾಭೀಷ್ಟಪ್ರದಾಯಿನೀ ।
ಏತಸ್ಯಾಃ ಸ್ಮರಣಾದೇವ ಸರ್ವಪಾಪಕ್ಷಯೋ ಭವೇತ್ ॥ ೨೨೮ ॥

ಇತಿ ಶ್ರೀ ನಾರದೀಯೆ ಪುರಾಣೇ ಪೂರ್ವಭಾಗೇ ಬೃಹದುಪಾ
ಖ್ಯಾನೇ ತೃತೀಯಪಾದೇ ನೃಸಿಂಹೋಪಾಸನಾಮಂತ್ರ
ಗಾಯತ್ರ್ಯಾದಿ ನಿರೂಪಣಂ ನಾಮೈಕಸಪ್ತತಿ
ತಮೋಽಧ್ಯಾಯಃ

ತನ್ನೋ ನೃಸಿಂಹಃ ಪ್ರಚೋದಯಾತ್ '' ಎಂಬುದೇ ನರಸಿಂಹ ಗಾಯತ್ರಿಯು. ಇದು ಸರ್ವಾಭೀಷ್ಟದಾಯಕವು. ಇದರ ಸ್ಮರಣೆಮಾಡುವ ಮಾತ್ರದಿಂದ ಸಕಲ ಪಾಪಗಳೂ ನಶಿಸಿಹೋಗುತ್ತವೆ.

ಇಂತು ಶ್ರೀ ನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ತೃತೀಯಪಾದದಲ್ಲಿ ನರಸಿಂಹೋಪಾಸನೆ, ಮಂತ್ರ, ಗಾಯತ್ರೀ
ಮುಂತಾದುವುಗಳ ಕಥನವೆಂಬ ಎಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು.

---

## ಕಥಾಸಂಗ್ರಹ

ಈ ಅಧ್ಯಾಯದಲ್ಲಿ ನರಸಿಂಹಮಂತ್ರವು ವಿಸ್ತಾರವಾಗಿ ನಿರೂಪಿತವಾಗಿದೆ. ಏಕಾಕ್ಷರ ನರಸಿಂಹಮಂತ್ರವನ್ನಾರಂಭಿಸಿ ಸಹಸ್ರಾಕ್ಷರ ನರಸಿಂಹಮಂತ್ರದ ಪರ್ಯಂತವಾಗಿ ಅನೇಕವಾದ ಮಂತ್ರಗಳು, ಅವುಗಳ ಜಪಮಾಡುವ ವಿಧಾನ, ಬೀಜ, ಶಕ್ತಿ, ಅಂಗ, ಗಾಯತ್ರೀ, ಧ್ಯಾನ, ಹೋಮ ಮುಂತಾದ ಪರಿಕರಗಳನ್ನು ನಿರೂಪಿಸಿ ಫಲವನ್ನು ನಿರೂಪಿಸಿದೆ.

# ದ್ವಿಸಪ್ತತಿತಮೋಽಧ್ಯಾಯಃ

ಸನತ್ಕುಮಾರ ಉವಾಚ

ಪ್ರಣವೋ ಹೃದಯಂ ವಿಷ್ಣುಃ ಜೇಂತಃ ಸುರಪತಿಸ್ತಥಾ ।
ಮಹಾಬಲಾಯ ಸ್ವಾಹಾಂತೋ ಮಂತ್ರೋ ವಸುಧರಾಕ್ಷರಃ ॥ ೧ ॥

ಮುನಿರಿಂದುರ್ವಿರಾಟ್ಛಂದೋ ದೇವತಾ ದಧಿವಾಮನಃ ।
ತಾರೋ ಬೀಜಂ ತಥಾ ಶಕ್ತಿರ್ವಹ್ನಿಜಾಯಾ ಪ್ರಕೀರ್ತಿತಾಃ ॥ ೨ ॥

ಚಂದ್ರಾಕ್ಷಿರಾಮಬಾಣೇಷು ನೇತ್ರಸಂಖ್ಯೈರ್ಮನೂದ್ಭವೈಃ ।
ವರ್ಣೈಃ ಷಡಂಗಂ ಕೃತ್ವಾ ಚ ಮೂರ್ಧ್ನಿ ಭಾಲೇ ಚ ನೇತ್ರಯೋಃ ॥ ೩ ॥

ಕರ್ಣಯೋಃ ಘ್ರಾಣಯೋರೋಷ್ಠತಾಲುಕಂಠಭುಜೇಷು ಚ ।
ಪೃಷ್ಠೇ ಹೃದ್ಯುದರೇ ನಾಭೌ ಗುಹ್ಯೇ ಚೋರುಃಸ್ಥಲೇ ಪುನಃ ॥ ೪ ॥

## ಎಪ್ಪತ್ತೆರಡನೆಯ ಅಧ್ಯಾಯವು.

೧. ಸನತ್ಕುಮಾರನು ಹೇಳುತ್ತಾನೆ.—(ಪ್ರಣವ=ಓಂ, ಹೃದಯ=ನಮಃ) 'ಓಂ ನಮೋ ವಿಷ್ಣವೇ ಸುರಪತಯೇ ಮಹಾಬಲಾಯ ಸ್ವಾಹಾ' ಎಂಬುದು ಹದಿನೆಂಟು ಅಕ್ಷರಗಳ ದಧಿವಾಮನ ಮಂತ್ರವು.

೨. ಈ ಮಂತ್ರಕ್ಕೆ ಇಂದು ಎಂದರೆ ಚಂದ್ರನು ಋಷಿ, ವಿರಾಟ್ ಛಂದಸ್ಸು, ದಧಿವಾಮನನೇ ದೇವತೆ, 'ಓಂ' ಎಂಬುದು ಬೀಜ, 'ಸ್ವಾಹಾ' ಎಂಬುದೇ ಶಕ್ತಿ ಎಂದು ಉಕ್ತವಾಗಿದೆ.

೩-೫. ಈ ಮಂತ್ರದ ಒಂದು, ಎರಡು, ಮೂರು, ಐದು, ಐದು, ಎರಡು ಅಕ್ಷರಗಳಿಂದ ಕ್ರಮವಾಗಿ ಹೃದಯಾದಿ ಷಡಂಗಗಳನ್ನು ನ್ಯಾಸಮಾಡಿ, ಇದರ ಹದಿನೆಂಟು ಅಕ್ಷರಗಳನ್ನೂ ಒಂದೊಂದಾಗಿ ಶಿರಸ್ಸು, ಹಣೆ, ಕಣ್ಣು, ಕಿವಿ,

ಜಾನುದ್ವಯಂ ಜಂಘಯೋಶ್ಚ ಪಾದಯೋರ್ವಿನ್ಯಸೇತ್ಕ್ರಮಾತ್ ।
ಅಷ್ಟಾದಶೈವ ಮಂತ್ರೋತ್ಥಾಸ್ತತೋ ದೇವಂ ವಿಚಿಂತಯೇತ್ ॥ ೫ ॥

ಮುಕ್ತಾಗೌರಂ ರತ್ನಭೂಷಂ ಚಂದ್ರಸ್ಥಂ ಭೃಂಗಸನ್ನಿಭೈಃ ।
ಅಲಕೈರ್ವಿಲಸದ್ವಕ್ತ್ರಂ ಕುಂಭಂ ಶುದ್ಧಾಂಬುಪೂರಿತಂ ॥ ೬ ॥

ದಧ್ಯನ್ನಪೂರ್ಣಚಷಕಂ ದೋರ್ಭ್ಯಾಂ ಸಂದಧತಂ ಭಜೇತ್ ।
ಲಕ್ಷತ್ರಯಂ ಜಪೇನ್ಮಂತ್ರಂ ತದ್ದಶಾಂಶಂ ಘೃತಾಪ್ಲುತೈಃ ॥ ೭ ॥

ಪಾಯಸಾನ್ನೈಃ ಪ್ರಜುಹುಯಾದ್ದಧ್ಯನ್ನೇನ ಯಥಾವಿಧಿ ।
ಚಂದ್ರಾಂತೇ ಕಲ್ಪಿತೇ ಪೀಠೇ ಪೂರ್ವೋಕ್ತೇ ಪೂಜಯೇಚ್ಚ ತಂ ॥ ೮ ॥

ಮೂಗು, ತುಟಿ, ದವಡೆ, ಕಂಠ, ಭುಜ, ಪೃಷ್ಠ, ಹೃದಯ, ಹೊಟ್ಟೆ, ಹೊಕ್ಕಳು ಗುಹ್ಯಸ್ಥಾನ, ವಕ್ಷಃಸ್ಥಲ, ಎರಡು ಮೊಣಕಾಲುಗಳು, ಮಂಡಿಗಳು, ಪಾದಗಳು ಈ ಹದಿನೆಂಟು ಅವಯವಗಳಲ್ಲಿ ನ್ಯಾಸಮಾಡಬೇಕು. ಅನಂತರ ದೇವತೆಯನ್ನು ಧ್ಯಾನಿಸಬೇಕು.

೬-೭. ಮುತ್ತಿನಂತೆ ಗೌರವರ್ಣವುಳ್ಳ, ರತ್ನಾಲಂಕಾರವನ್ನು ಧರಿಸಿರುವ ಚಂದ್ರಾಂತಃಸ್ಥಿತನಾದ, ಭ್ರಮರಗಳಿಗೆ ಸಮಾನವಾದ ಮುಂಗುರುಳುಗಳಿಂದ ಪ್ರಕಾಶಮಾನವಾದ ಮುಖವುಳ್ಳ, ನಿರ್ಮಲಜಲದಿಂದ ತುಂಬಲ್ಪಟ್ಟ ಕಲಶ, ದಧ್ಯೋದನಪೂರ್ಣವಾದ ಪಾತ್ರೆ ಇವೆರಡನ್ನೂ ಕೈಗಳಲ್ಲಿ ಧರಿಸಿರುವ ವಾಮನ ಭಗವಂತನನ್ನು ಭಜಿಸಬೇಕು.

೭-೮. ಈ ಮಂತ್ರವನ್ನು ಮೂರು ಲಕ್ಷ ಜಪಮಾಡಬೇಕು ಘೃತ ಮಿಶ್ರವಾದ ಪಾಯಸದ ಅನ್ನದಿಂದ ಅಥವಾ ದಧ್ಯೋದನದಿಂದ ಜಪದ ಹತ್ತನೆಯ ಒಂದು ಭಾಗದಷ್ಟು ವಿಧಾನೋಕ್ತಪ್ರಕಾರ ಹೋಮಮಾಡಬೇಕು. ಪೂರ್ವೋಕ್ತವಾದ ಸೂರ್ಯ ಅಗ್ನಿಮಂಡಲಗಳಲ್ಲಿ ಪೂಜಿಸಿ ಚಂದ್ರಮಂಡಲವನ್ನೂ ಪೀಠವನ್ನಾಗಿ ಕಲ್ಪಿಸಿ, ಅಲ್ಲಿಯೂ ಮಂತ್ರದೇವತೆಯನ್ನು ಪೂಜಿಸಬೇಕು.

ಸಂಕಲ್ಪ್ಯ ಮೂರ್ತಿಂ ಮೂಲೇನ ಸಂಪೂಜ್ಯ ಚ ವಿಧಾನತಃ ।
ಕೇಸರೇಷು ಷಡಂಗಾನಿ ಸಂಪೂಜ್ಯ ದಿಗ್ದಲೇಷು ಚ ॥ ೯ ॥

ವಾಸುದೇವಂ ಸಂಕರ್ಷಣಂ ಪ್ರದ್ಯುಮ್ನಮನಿರುದ್ಧಕಂ ।
ಕೋಣಪತ್ರೇಷು ಶಾಂತಿಂ ಚ ಶ್ರೀಯಂ ಸರಸ್ವತೀಂ ರತಿಂ ॥ ೧೦ ॥

ಧ್ವಜಂ ಚ ವೈನತೇಯಂ ಚ ಕೌಸ್ತುಭಂ ವನಮಾಲಿಕಂ ।
ಶಂಖಂ ಚಕ್ರಂ ಗದಾಂ ಶಾರ್ಙ್ಗಂ ದಲೇಷ್ವಷ್ಟಸು ಪೂಜಯೇತ್ ॥ ೧೧ ॥

ದಲಾಗ್ರೇಷು ಕೇಶವಾದೀನ್ದಿಕ್ಪಾಲಾಂಸ್ತದನಂತರಂ ।
ತದಸ್ತ್ರಾಣಿ ಚ ಸಂಪೂಜ್ಯ ಗಜಾನಷ್ಟೌ ಸಮರ್ಚಯೇತ್ ॥ ೧೨ ॥

ಐರಾವತಃ ಪುಂಡರೀಕೋ ವಾಮನಃ ಕುಮುದೋಂಜನಃ ।
ಪುಷ್ಪದಂತಃ ಸಾರ್ವಭೌಮಃ ಸುಪ್ರತೀಕಶ್ಚ ದಿಗ್ಗಜಾಃ ॥ ೧೩ ॥

೯-೧೧. ಅಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ ಎಂದರೆ ಅನುಸಂಧಾನವಮಾಡಿ, ವಿಧಾನೋಕ್ತರೀತಿಯಿಂದ ಪೂಜಿಸಿ ಕೇಸರಗಳಲ್ಲಿ ಷಡಂಗಗಳನ್ನು ಪೂಜಿಸಿ, ಪೂರ್ವಾದಿ ದಿಕ್ಕುಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಮೂರ್ತಿಗಳನ್ನು ಆಗ್ನೇಯ ಮುಂತಾದ ಕೋಣಗಳಲ್ಲಿ ಶಾಂತಿ ಶ್ರೀದೇವಿ, ಸರಸ್ವತೀ, ರತಿಯರನ್ನೂ ಎಂಟು ದಳಗಳಲ್ಲಿ ಧ್ವಜ, ಗರುಡ, ಕೌಸ್ತುಭ, ವನಮಾಲೆ, ಶಂಖ, ಚಕ್ರ, ಗದೆ, ಶಾರ್ಙ್ಗಗಳನ್ನೂ ಪೂಜಿಸಬೇಕು.

೧೨. ದಳಗಳ ಅಗ್ರಭಾಗದಲ್ಲಿ ಕೇಶವಾದಿ ಮೂರ್ತಿಗಳನ್ನೂ ಅನಂತರ ಇಂದ್ರಾದಿ ದಿಕ್ಪಾಲಕರನ್ನೂ ಅವರ ಆಯುಧಗಳನ್ನೂ ಪೂಜಿಸಿ, ಅಷ್ಟದಿಗ್ಗಜಗಳನ್ನು ಪೂಜಿಸಬೇಕು.

೧೩. ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ ಮತ್ತು ಸುಪ್ರತೀಕ ಇವು ಅಷ್ಟದಿಗ್ಗಜಗಳು.

ಕರಿಣ್ಯೋಽಭ್ರಮುಃ ಕಪಿಲಾಪಿಂಗಲಾನುಪಮಾಃ ಕ್ರಮಾತ್ ।
ತಾಮ್ರಕರ್ಣೀ ಶುಭ್ರದಂತೀ ಚಾಂಗನಾ ಹ್ಯಂಜನಾವತೀ ॥ ೧೪ ॥
ಏವಮಾರಾಧಿತೋ ಮಂತ್ರೋ ದದ್ಯಾದಿಷ್ಟಾನಿ ಮಂತ್ರಿಣೇ ।
ಶ್ರೀಕಾಮಃ ಪಾಯಸಾಜ್ಯೇನ ಸಹಸ್ರಂ ಜುಹುಯಾತ್ಸುಧೀಃ ॥ ೧೫ ॥
ಮಹತೀಂ ಶ್ರಿಯಮಾಪ್ನೋತಿ ಧಾನ್ಯಾಪ್ತಿರ್ಧಾನ್ಯಹೋಮತಃ ।
ಶತಪುಷ್ಪಾಸಮುತ್ಥೈಶ್ಚ ಬೀಜೈರ್ಹುತ್ವಾ ಸಹಸ್ರಶಃ ॥ ೧೬ ॥
ಮಹಾಭಯಂ ನಾಶಯೇದ್ಧಿ ನಾತ್ರ ಕಾರ್ಯಾ ವಿಚಾರಣಾ ।
ದಧ್ಯೋದನೇನ ಶುದ್ಧೇನ ಹುತ್ವಾ ಮುಚ್ಯೇತ ದುರ್ಗತೇಃ ॥ ೧೭ ॥
ಧ್ಯಾತ್ವಾ ತ್ರೈವಿಕ್ರಮಂ ರೂಪಂ ಜಪೇನ್ಮಂತ್ರಂ ಸಮಾಹಿತಃ ।
ಕಾರಾಗೃಹಾದ್ಭವೇನ್ಮುಕ್ತೋ ಬದ್ಧೋ ಮಂತ್ರಪ್ರಭಾವತಃ ॥ ೧೮ ॥

೧೪. ಅಭ್ರಮು, ಕಪಿಲಾ, ಪಿಂಗಲಾ, ಅನುಪಮಾ, ತಾಮ್ರಕರ್ಣೀ, ಶುಭ್ರದಂತೀ, ಅಂಗನಾ ಮತ್ತು ಅಂಜನಾವತೀ ಎಂಬ ಎಂಟು ಆನೆಗಳು ಕ್ರಮವಾಗಿ ಮೇಲೆ ಹೇಳಿದ ಅಷ್ಟದಿಗ್ಗಜಗಳ ಪತ್ನಿಯರಾದ ಹೆಣ್ಣಾನೆಗಳು.

೧೫-೧೭. ಈ ರೀತಿಯಾಗಿ ಆರಾಧಿಸಲ್ಪಟ್ಟ ಮಂತ್ರವು ಆರಾಧಕನಿಗೆ ಇಷ್ಟಾರ್ಥಗಳನ್ನು ಕೊಡುವುದು. ಐಶ್ವರ್ಯಕಾಮನಾದ ಜ್ಞಾನಿಯು ಪಾಯಸ ಸಹಿತವಾದ ತುಪ್ಪದಿಂದ ಸಾವಿರ ಹೋಮಮಾಡಿದರೆ ಮಹದೈಶ್ವರ್ಯವು ಲಭಿಸುವುದು. ಧಾನ್ಯಹೋಮದಿಂದ ಧಾನ್ಯಪ್ರಾಪ್ತಿಯಾಗುವುದು. ಕಾಡುಸಬ್ಬಸಿಗೆ ಬೀಜಗಳಿಂದ ಸಾವಿರಹೋಮಮಾಡಿದರೆ ಮಹಾಭೀತಿಯು ನಾಶವಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ. ಪರಿಶುದ್ಧವಾದ ಮೊಸರನ್ನದಿಂದ ಹೋಮ ಮಾಡಿದರೆ ದುರ್ಗತಿಯಿಂದ ಮುಕ್ತನಾಗುವನು. (ದಾರಿದ್ರ್ಯಪರಿಹಾರ ವಾಗುವುದು.)

೧೮. ಜೈಲಿನಲ್ಲಿಡಲ್ಪಟ್ಟವನು ಸಮಾಧಾನಚಿತ್ತನಾಗಿ ತ್ರಿವಿಕ್ರಮರೂಪವನ್ನು ಧ್ಯಾನಿಸುತ್ತಾ ಈ ಮಂತ್ರವನ್ನು ಜಪಿಸಿದರೆ ಜೈಲಿನಿಂದ ಬಿಡುಗಡೆಯನ್ನು ಹೊಂದುತ್ತಾನೆ.

ಭಿತ್ತೌ ಸಂಪಾದ್ಯ ದೇವೇಶಂ ಫಲಕೇ ವಾ ಪ್ರಪೂಜಯೇತ್ ।
ನಿತ್ಯಂ ಸುಗಂಧಕುಸುಮೈರ್ಮಹತೀಂ ಶ್ರೀಯಮಾಪ್ನುಯಾತ್ ॥ ೧೯ ॥

ಹುತ್ವಾ ರಕ್ತೋತ್ಪಲೈರ್ಮಂತ್ರೀ ವಶಯೇತ್ಸಕಲಂ ಜಗತ್ ।
ಅನ್ನಾಜ್ಯೈರ್ಜುಹುಯಾನ್ನಿತ್ಯಮಷ್ಟಾವಿಂಶತಿಸಂಖ್ಯಯಾ ॥ ೨೦ ॥

ಸಿತಾಜ್ಯಾನ್ನಂ ಚ ವಿಧಿವತ್ಪ್ರಾಪ್ನುಯಾದನ್ನಮಕ್ಷಯಂ ।
ಅಪೂಪೈಷ್ಷಡ್ರಸೋಪೇತೈರ್ಹುನೇದ್ವಸುಸಹಸ್ರಕಂ ॥ ೨೧ ॥

ಅಲಕ್ಷ್ಮೀಂ ಚ ಪರಾಭೂಯ ಮಹತೀಂ ಶ್ರೀಯಮಾಪ್ನುಯಾತ್ ।
ಜುಹುಯಾದಯುತಂ ಮಂತ್ರೀ ದಧ್ಯನ್ನಂ ಚ ಸಿತಾನ್ವಿತಂ ॥ ೨೨ ॥

ಯತ್ರ ಯತ್ರ ವಸೇತ್ಸೋಽಪಿ ತತ್ರಾನ್ನಗಿರಿಮಾಪ್ನುಯಾತ್ ।
ಪದ್ಮಾಕ್ಷತೈರ್ಯುತಂ ಬಿಲ್ವಾಂತಿಕಸ್ಥೋ ಜುಹುಯಾನ್ನರಃ ॥ ೨೩ ॥

ಮಹಾಲಕ್ಷ್ಮೀಂ ಸ ಲಭತೇ ತತ್ರ ತತ್ರ ನ ಸಂಶಯಃ ।
ಜುಹುಯಾತ್ಪಾಯಸೈರ್ಲಕ್ಷಂ ವಾಚಸ್ಪತಿಸಮೋ ಭವೇತ್ ॥ ೨೪ ॥

೧೯. ಗೋಡೆ ಅಥವಾ ಹಲಗೆಯಲ್ಲಿ ಈ ಮಂತ್ರದೇವತೆಯನ್ನು ರಚಿಸಿ ನಿತ್ಯವೂ ಸುವಾಸನೆಯುಳ್ಳ ಪುಷ್ಪಗಳಿಂದ ಪೂಜಿಸಿದರೆ ಮಹದೈಶ್ವರ್ಯವು ಲಭಿಸುವುದು.

೨೦-೨೪. ಮಂತ್ರಿಯು ರಕ್ತೋತ್ಪಲಪುಷ್ಪಗಳಿಂದ ಹೋಮಮಾಡಿದರೆ ಸಕಲಜಗತ್ತನ್ನೂ ಸ್ವಾಧೀನಮಾಡಿಕೊಳ್ಳುವನು. ಪ್ರತಿದಿನವೂ ಅನ್ನ ಮತ್ತು ತುಪ್ಪಗಳಿಂದ ವಿಧಾನೋಕ್ತಪ್ರಕಾರವಾಗಿ ಇಪ್ಪತ್ತೆಂಟು ಹೋಮಮಾಡಿದರೆ ನಿರ್ಮಲವಾದ ತುಪ್ಪಾನ್ನವು ಲಭಿಸುವುದು. ಮತ್ತು ಅನ್ನವು ಅಕ್ಷಯವಾಗುವುದು. ಷಡ್ರಸಯುಕ್ತವಾದ ಅಪೂಪಗಳಿಂದ ಎಂಟುಸಾವಿರ ಹೋಮಮಾಡಿದರೆ ದಾರಿದ್ರ್ಯ ಪರಿಹಾರವಾಗಿ ಐಶ್ವರ್ಯವು ಲಭಿಸುತ್ತದೆ. ಮಂತ್ರಿಯು ಸಿತಯುಕ್ತವಾದ ಮೊಸರನ್ನದಿಂದ ಹತ್ತುಸಾವಿರ ಹೋಮಮಾಡಿದರೆ ಅವನಿದ್ದೆಡೆಯಲ್ಲಿ ಪರ್ವತಾಕಾರವಾದ ಅನ್ನರಾಶಿಯನ್ನು ಹೊಂದುವನು. ಬಿಲ್ವವೃಕ್ಷದ ಸನ್ನಿಧಾನದಲ್ಲಿ ಅಕ್ಷತೆಸಹಿತವಾದ ಪದ್ಮವನ್ನು ಹೋಮಮಾಡುವ ಮನುಷ್ಯನು ಅಲ್ಲಿಯೇ ಮಹಾಲಕ್ಷ್ಮಿಯ ಅನುಗ್ರಹವನ್ನು ಪಡೆಯುವನು ; ಸಂದೇಹವಿಲ್ಲ. ಪಾಯಸಗಳಿಂದ ಒಂದು ಲಕ್ಷ ಹೋಮಮಾಡಿದರೆ ವಾಚಸ್ಪತಿಗೆ ಸಮನಾಗುವನು.

ಲಕ್ಷಂ ಜಪ್ತ್ವಾ ತದ್ದಶಾಂಶಂ ಪುತ್ರಜೀವಫಲೈರ್ಹುನೇತ್ ।
ತತ್ಕಾಷ್ಠೈರೇಧಿತೇ ವನ್ಹೌ ಶ್ರೇಷ್ಠಂ ಪುತ್ರಮವಾಪ್ನುಯಾತ್ ॥ ೨೫ ॥

ಸಸಾಧ್ಯತಾರವಿಲಸತ್ಕರ್ಣಿಕಂ ಚ ಸುವರ್ಣಕೈಃ ।
ವಿಲಸತ್ಕೇಸರಂ ಮಂತ್ರಾಕ್ಷರದ್ವಂದ್ವಾಷ್ಟಪತ್ರಕಂ ॥ ೨೬ ॥

ಶೇಷಯುಗ್ಮಾರ್ಣಾಂತ್ಯಪತ್ರಂ ದ್ವಾದಶಾಕ್ಷರವೇಷ್ಟಿತಂ ।
ತದ್ಬಹಿರ್ಮಾತೃಕಾವರ್ಣೈರ್ಯಂತ್ರಂ ಸಂಪತ್ಪ್ರದಂ ನೃಣಾಂ ॥ ೨೭ ॥

ರಕ್ತಂ ತ್ರಿವಿಕ್ರಮಂ ಧ್ಯಾತ್ವಾ ಪ್ರಸೂನೈ ರಕ್ತವರ್ಣಕೈಃ ।
ಜುಹುಯಾದಯುತಂ ಮಂತ್ರೀ ಸರ್ವತ್ರ ವಿಜಯೀ ಭವೇತ್ ॥ ೨೮ ॥

ಧ್ಯಾಯೇಚ್ಚಂದ್ರಾಸನಗತಂ ಪದ್ಮನಾಭಮಯುತಂ ಹುನೇತ್ ।
ಲಭೇದಕಂಟಕಂ ರಾಜ್ಯಂ ಸರ್ವಲಕ್ಷಣಸಂಯುತಂ ॥ ೨೯ ॥

೨೫. ಈ ಮಂತ್ರವನ್ನು ಒಂದು ಲಕ್ಷ ಜಪವಮಾಡಿ, ಅದರ ಹತ್ತನೆಯ ಒಂದು ಭಾಗವಷ್ಟು ಜೀವಫಲ (ಕಿರುಹಾಲೆ ಫಲ) ಗಳಿಂದ ಅದರ ಕಟ್ಟಿಗೆಯ ಅಗ್ನಿಯಲ್ಲಿ ಹೋಮಮಾಡಿದರೆ ಶ್ರೇಷ್ಠನಾದ ಮಗನನ್ನು ಪಡೆಯುವನು.

೨೬-೨೭. ಮಧ್ಯದಲ್ಲಿ ಸಾಧ್ಯನಾಮ ಮತ್ತು ಓಂಕಾರಗಳಿಂದ ಹೊಳೆಯುತ್ತಿರುವ ಕರ್ಣಿಕೆ, ಸವಿನಾಚೀನವಾದ ಅಷ್ಟಾಕ್ಷರಗಳಿಂದ ಪ್ರಕಾಶಿಸುವ ಕುಸುರು ಮತ್ತು ಉಳಿದ ಎರಡು ಅಕ್ಷರಗಳಿಂದ ಕೂಡಿದ ಕೊನೆಯ ಪತ್ರ ಇವುಗಳುಳ್ಳ ಗುಂಡಗಿರುವ ಯಂತ್ರವನ್ನು ಉಲ್ಲೇಖಿಸಿ, ಅದನ್ನು ದ್ವಾದಶಾಕ್ಷರಗಳಿಂದ ಸುತ್ತುಗಟ್ಟಿ, ಹೊರಭಾಗದಲ್ಲಿ ಮಾತೃಕಾವರ್ಣಗಳಿಂದ ವೇಷ್ಟನೆಯನ್ನು ಮಾಡಿದ ಯಂತ್ರವು ಆರಾಧಕಜನರಿಗೆ ಐಶ್ವರ್ಯಪ್ರದವು.

೨೮. ಕೆಂಪುಬಣ್ಣದ ತ್ರಿವಿಕ್ರಮರೂಪವನ್ನು ಧ್ಯಾನಿಸಿ, ಕೆಂಪುಹೂಗಳಿಂದ ಹತ್ತುಸಾವಿರ ಹೋಮಮಾಡುವ ಮಂತ್ರಿಯು ಎಲ್ಲಾ ಕಡೆಗಳಲ್ಲಿಯೂ ಜಯಶೀಲನಾಗುವನು.

೨೯. ಚಂದ್ರಮಂಡಲಗತನಾದ ಪದ್ಮನಾಭನನ್ನು ಧ್ಯಾನಿಸಿ ಹತ್ತು ಸಾವಿರ ಹೋಮಮಾಡಿದರೆ ಸಕಲ ಲಕ್ಷಣಯುಕ್ತವಾದ, ನಿಷ್ಕಂಟಕವಾದ ರಾಜ್ಯವನ್ನು ಪಡೆಯುವನು.

ಹುತ್ವಾ ಲವಂಗೈರ್ಮಧ್ವಾಕ್ತೈರಪಾಮಾರ್ಗದಲೈಸ್ತು ವಾ ।
ಅಯುತಂ ಸಾಧ್ಯಮಾನಾಢ್ಯಂ ಸ ವಶ್ಯೋ ಜಾಯತೇ ಧ್ರುವಂ ॥ ೩೦ ॥

ಅಷ್ಟೋತ್ತರಶತಂ ಹುತ್ವಾ ಹ್ಯಪಾಮಾರ್ಗದಲೈಃ ಶುಭೈಃ ।
ತಾವಜ್ಜಪ್ತ್ವಾ ಚ ಸಪ್ತಾಹಾನ್ಮಹಾರೋಗಾತ್ಪ್ರಮುಚ್ಯತೇ ॥ ೩೧ ॥

ಉದ್ಗಿರತ್ಪದಮಾಭಾಷ್ಯ ಪ್ರಣವೋದ್ಗೀಥಶಬ್ದತಃ ।
ಸರ್ವವಾಗೀಶ್ವರೇತ್ಯಂತೇ ಪ್ರವದೇದೀಶ್ವರೇತ್ಯಥ ॥ ೩೨ ॥

ಸರ್ವವೇದಮಯಾಚಿಂತ್ಯ ಪದಾಂತೇ ಸರ ವಿಾರಯೇತ್ ।
ಬೋಧಯದ್ವಿತಯಾಂತೋಽಯಂ ಮಂತ್ರಸ್ತಾರಾದಿರೀರಿತಃ ॥ ೩೩ ॥

ಋಷಿರ್ಬ್ರಹ್ಮಾಸ್ಯ ನಿರ್ದಿಷ್ಟಶ್ಛಂದೋಽನುಷ್ಟುಬುದಾಹೃತಃ ।
ದೇವತಾ ಸ್ಯಾದ್ಧಯಗ್ರೀವೋ ವಾಗೈಶ್ವರ್ಯಪ್ರದೋ ವಿಭುಃ ॥ ೩೪ ॥

ತಾರೇಣ ಪಾದೈರ್ಮಂತ್ರಸ್ಯ ಪಂಚಾಂಗಾನಿ ಪ್ರಕಲ್ಪಯೇತ್ ।
ತುಷಾರಾದ್ರಿಸಮಚ್ಛಾಯಂ ತುಲಸೀದಾಮಭೂಷಿತಂ ॥ ೩೫ ॥

೩೦. ಜೇನುತುಪ್ಪದಲ್ಲಿ ತೊಯಿಸಿದ ಲವಂಗಗಳಿಂದ ಅಥವಾ ಉತ್ತರಾಣಿ ದಳಗಳಿಂದ ಸಾಧ್ಯನಾಮಸಹಿತವಾಗಿ ಹತ್ತುಸಾವಿರ ಹೋಮಮಾಡಬೇಕು. ಅದರಿಂದ ಅವನು ಖಂಡಿತವಾಗಿಯೂ ಸ್ವಾಧೀನನಾಗುವನು.

೩೧. ಶುಭವಾದ ಉತ್ತರಾಣಿ ದಳಗಳಿಂದ ಪ್ರತಿದಿನವೂ ನೂರೆಂಟು ಹೋಮಮಾಡಿ ಮಂತ್ರಜಪಮಾಡಿದರೆ ಏಳುದಿನಗಳಲ್ಲಿ ಮಹಾರೋಗವು ಪರಿಹಾರವಾಗುವುದು.

೩೨-೩೩. “ಓಂ ಉದ್ಗಿರತ್ಪ್ರಣವೋದ್ಗೀಥಸರ್ವವಾಗೀಶ್ವರೇಶ್ವರ । ಸರ್ವವೇದಮಯಾಚಿಂತ್ಯ ಸರ್ವಂ ಬೋಧಯ ಬೋಧಯ” ಎಂಬ ಓಂಕಾರಾದಿಯಾದ ಶ್ಲೋಕವು ಹಯಗ್ರೀವಮಂತ್ರವೆಂದು ಉಕ್ತವಾಗಿದೆ.

೩೪-೩೫. ಈ ಮಂತ್ರಕ್ಕೆ ಬ್ರಹ್ಮನು ಋಷಿ, ಛಂದಸ್ಸು ಅನುಷ್ಟುಪ್, ವಾಕ್ಕು ಮತ್ತು ಐಶ್ವರ್ಯಗಳನ್ನು ಕೊಡುವ ಹಯಗ್ರೀವಸ್ವಾಮಿಯೇ ದೇವತೆಯು. ಓಂಕಾರ ಮತ್ತು ಮಂತ್ರದ ನಾಲ್ಕು ಪಾದಗಳು ಇವುಗಳಿಂದ ಪಂಚಾಂಗಗಳನ್ನು ನ್ಯಾಸಮಾಡಬೇಕು.

ತುರಂಗವದನಂ ವಂದೇ ತುಂಗಸಾರಸ್ವತಃ ಪದಂ ।
ಧ್ಯಾತ್ವೈವಂ ಪ್ರಜಪೇನ್ಮಂತ್ರಮಯುತಂ ತದ್ದಶಾಂಶತಃ ॥ ೩೬ ॥

ಮಧ್ವಾಕ್ತೈಃ ಪಾಯಸೈರ್ಹುತ್ವಾ ವಿಮಲಾದಿಸಮನ್ವಿತೇ ।
ಪೂಜಯೇದ್ವೈಷ್ಣವೇ ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ॥ ೩೭ ॥

ಕರ್ಣಿಕಾಯಾಂ ಚತುರ್ದಿಕ್ಷು ಯಜೇತ್ಪೂರ್ವಾದಿತಃ ಕ್ರಮಾತ್ ।
ಸನಂದನಂ ಚ ಸನಕಂ ಶ್ರಿಯಂ ಚ ಪೃಥಿವೀಂ ತಥಾ ॥ ೩೮ ॥

ತದ್ಬಹಿರ್ದಿಕ್ಷು ವೇದಾಂಶ್ಚ ಷಟ್ಕೋಣೇಷು ತತೋಽರ್ಚಯೇತ್ ।
ನಿರುಕ್ತಂ ಜ್ಯೋತಿಷಂ ಪಶ್ಚಾದ್ಯಜೇದ್ವ್ಯಾಕರಣಂ ತತಃ ॥ ೩೯ ॥

ಕಲ್ಪಂ ಶಿಕ್ಷಾಂ ಚ ಛಂದಾಂಸಿ ವೇದಾಂಗಾನಿ ತ್ವಿಮಾನಿ ವೈ ।
ತತೋಽಷ್ಟದಲಮೂಲೇ ತು ಮಾತರೋಽಷ್ಟೌ ಸಮರ್ಚಯೇತ್ ॥ ೪೦ ॥

೩೫-೩೬. ಹಿಮವತ್ಪರ್ವತಕ್ಕೆ ಸದೃಶವಾದ ಕಾಂತಿಯುಳ್ಳ, ತುಲಸೀ ಮಾಲೆಯಿಂದ ಅಲಂಕೃತನಾದ, ಉಚ್ಚಸಾರಸ್ವತನಾದ ಹಯಮುಖನನ್ನು ನಮಸ್ಕರಿಸುತ್ತೇನೆ ಎಂಬುದಾಗಿ ಧ್ಯಾನಿಸಿ ಈ ಮಂತ್ರವನ್ನು ಹತ್ತುಸಾವಿರ ಜಪಮಾಡಬೇಕು.

೩೬-೩೭. ಅದರ ಹತ್ತನೆಯ ಒಂದು ಭಾಗ ಜೇನುತುಪ್ಪ ಮಿಶ್ರವಾದ ಪಾಯಸಗಳಿಂದ ಹೋಮಮಾಡಿ, ವಿಮಲಾ ಮುಂತಾದವರಿಂದ ಯುಕ್ತವಾದ ವೈಷ್ಣವಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಕಲ್ಪಿಸಿ ಪೂಜಿಸಬೇಕು.

೩೮. ಪೂರ್ವ ಮುಂತಾದ ನಾಲ್ಕುದಿಕ್ಕುಗಳಲ್ಲಿಯೂ ಕರ್ಣಿಕೆಯಲ್ಲಿ ಕ್ರಮವಾಗಿ ಸನಂದನ, ಸನಕ, ಶ್ರೀದೇವಿ, ಪೃಥಿವೀದೇವಿ ಇವರನ್ನು ಪೂಜಿಸಬೇಕು.

೩೯-೪೦. ಅದರ ಹೊರಭಾಗದಲ್ಲಿ ಪೂರ್ವಾದಿ ದಿಕ್ಕುಗಳಲ್ಲಿ ನಾಲ್ಕು ವೇದಗಳನ್ನೂ, ಆಗ್ನೇಯ ಮುಂತಾದ ಆರು ಕೋಣಗಳಲ್ಲಿ ನಿರುಕ್ತ, ಜ್ಯೋತಿಷ, ವ್ಯಾಕರಣ, ಕಲ್ಪ, ಶಿಕ್ಷೆ ಮತ್ತು ಛಂದಸ್ಸು ಎಂಬ ಆರು ವೇದಾಂಗಗಳನ್ನೂ ಪೂಜಿಸಬೇಕು. ತರುವಾಯ ಅಷ್ಟದಳಗಳ ಮೂಲದಲ್ಲಿ ಅಷ್ಟಮಾತೃಗಳನ್ನು ಪೂಜಿಸಬೇಕು.

ವಕ್ರತುಂಡಾದಿಕಾನಷ್ಟೌ ದಲಮಧ್ಯೇ ಪ್ರಪೂಜಯೇತ್ ।
ದಲಾಗ್ರೇಷ್ವರ್ಚಯೇತ್ಪಶ್ಚಾತ್ಸಾಧಕಶ್ಚಾಷ್ಟಭೈರವಾನ್ ॥ ೪೧ ॥

ಅಸಿತಾಂಗಂ ರುರುಂ ಚೈವ ಭೀಷಣಂ ರಕ್ತನೇತ್ರಕಂ ।
ವಟುಕಂ ಕಾಲದಮನಂ ದಂತುರಂ ವಿಕಟಂ ತಥಾ ॥ ೪೨ ॥

ತದ್ಬಹಿಃ ಷೋಡಶದಲೇಷ್ವವತಾರಾನ್ಹರೇರ್ದಶ ।
ಶಂಖಂ ಚಕ್ರಂ ಗದಾಂ ಪದ್ಮಂ ನಂದಕಂ ಶಾರ್ಙ್ಗಮೇವ ಚ ॥ ೪೩ ॥

ತದ್ಬಹಿರ್ಭೂಗೃಹೇ ಶಕ್ರಮುಖಾನ್ಪಶ ದಿಗೀಶ್ವರಾನ್ ।
ವಜ್ರಾದ್ಯಾಂಸ್ತದ್ಬಹಿಶ್ಚಾಷ್ಟದ್ವಾರೇಷು ಚ ತತಃ ಕ್ರಮಾತ್ ॥ ೪೪ ॥

ಮಹಾಗಣಪತಿಂ ದುರ್ಗಾಂ ಕ್ಷೇತ್ರೇಶಂ ವಟುಕಂ ತಥಾ ।
ಸಮಸ್ತಪ್ರಕಟಾದ್ಯಾಶ್ಚ ಯೋಗಿನ್ಯಸ್ತದ್ಬಹಿರ್ಭವೇತ್ ॥ ೪೫ ॥

ತದ್ಬಹಿಃ ಸಪ್ತನದ್ಯಶ್ಚ ತದ್ಬಾಹ್ಯೇ ತು ಗ್ರಹಾನ್ನವ ।
ತದ್ಬಾಹ್ಯೇ ಪರ್ವತಾನಷ್ಟೌ ನಕ್ಷತ್ರಾಣಿ ಚ ತದ್ಬಹಿಃ ॥ ೪೬ ॥

---

೪೧-೪೨. ದಳಗಳ ಮಧ್ಯಭಾಗದಲ್ಲಿ ವಕ್ರತುಂಡ ಮುಂತಾದ ಎಂಟು ದೇವತೆಗಳನ್ನು ಪೂಜಿಸಬೇಕು. ಅನಂತರ ಸಾಧಕನು ದಳಾಗ್ರಭಾಗಗಳಲ್ಲಿ ಅಸಿತಾಂಗ, ರುರು, ಭೀಷಣ, ರಕ್ತನೇತ್ರ, ವಟುಕ, ಕಾಲದಮನ, ದಂತುರ, ವಿಕಟ ಎಂಬ ಅಷ್ಟಭೈರವರನ್ನು ಪೂಜಿಸಬೇಕು.

೪೩. ಅದರ ಹೊರಭಾಗದಲ್ಲಿನ ಹದಿನಾರು ದಳಗಳಲ್ಲಿ ಹರಿಯ ಮತ್ಸ್ಯಾದಿ ಹತ್ತು ಅವತಾರರೂಪಗಳು, ಶಂಖ, ಚಕ್ರ, ಗದೆ, ಪದ್ಮ, ನಂದಕ, ಮತ್ತು ಶಾರ್ಙ್ಗ ಇವುಗಳನ್ನೂ ಪೂಜಿಸಬೇಕು.

೪೪-೪೬. ಅದರ ಹೊರಭಾಗದ ಚತುರಸ್ರಮಂಡಲದಲ್ಲಿ ಇಂದ್ರ ಮುಂತಾದ ಹತ್ತು ದಿಕ್ಪಾಲಕರನ್ನೂ, ಅದರ ಹೊರಭಾಗದಲ್ಲಿ ವಜ್ರ ಮುಂತಾದ ಅವರ ಆಯುಧಗಳನ್ನೂ ಪೂಜಿಸಿ, ಅನಂತರ ಕ್ರಮವಾಗಿ ದ್ವಾರಗಳಲ್ಲಿ ಮಹಾ ಗಣಪತಿ, ದುರ್ಗಾ, ಕ್ಷೇತ್ರೇಶ ಮತ್ತು ವಟುಕ ಇವರನ್ನೂ ಅದರ ಹೊರಭಾಗ ದಲ್ಲಿ ಸಮಸ್ತ ಪ್ರಕಟ ಮುಂತಾದ ಯೋಗಿನಿಗಳನ್ನೂ ಪೂಜಿಸಬೇಕು. ಅದರ ಹೊರಗೆ ಸಪ್ತನದಿಗಳು, ಅದರ ಹೊರಗೆ ನವಗ್ರಹಗಳು, ಅದರ ಹೊರಗೆ ಎಂಟು ಪರ್ವತಗಳು, ಅದರ ಹೊರಗೆ ನಕ್ಷತ್ರಗಳು ಇವುಗಳನ್ನೂ ಪೂಜಿಸಬೇಕು.

ಏವಂ ಪಂಚದಶಾವೃತ್ಯಾ ಸಂಪೂಜ್ಯ ತುರಗಾನನಂ ।
ವಾಗೀಶ್ವರಸಮೋ ವಾಚಿ ಧನೈರ್ಧನಪತಿರ್ಭವೇತ್ ॥ ೪೭ ॥

ಏವಂ ಸಿದ್ಧೇ ಮನೌ ಮಂತ್ರೀ ಪ್ರಯೋಗಾನ್ಕರ್ತುಮರ್ಹತಿ ।
ಅಷ್ಟೋತ್ತರಸಹಸ್ರಂ ತು ಶುದ್ಧಂ ವಾರ್ಯಭಿಮಂತ್ರಿತಂ ॥ ೪೮ ॥

ಬೀಜೇನ ಮಾಸಮಾತ್ರಂ ಯಃ ಪಿಬೇದ್ಧೀಮಾನ್ ಜಿತೇಂದ್ರಿಯಃ ।
ಜನ್ಮಮೂಕೋಽಪಿ ಸ ನರೋ ವಾಕ್ಸಿದ್ಧಿಂ ಲಭತೇ ಧ್ರುವಂ ॥ ೪೯ ॥

ವಿಯದ್ಭೃಗುಸ್ಥಮರ್ಧೀಶ ಬಿಂದುಮದ್ಬೀಜಮೀರಿತಂ ।
ಚಂದ್ರಸೂರ್ಯೋಪರಾಗೇ ತು ಪಾತ್ರೇ ರುಕ್ಮಮಯೇ ಕ್ಷಿಪೇತ್ ॥ ೫೦ ॥

ದುಗ್ಧಂ ವಚಾಂ ತತೋ ಮಂತ್ರೀ ಕಂಠಮಾತ್ರೋದಕೇ ಸ್ಥಿತಃ ।
ಸ್ಪರ್ಶಾದ್ವಿಮೋಕ್ಷಪರ್ಯಂತಂ ಪ್ರಜಪೇನ್ಮಂತ್ರಮಾದರಾತ್ ॥ ೫೧ ॥

ಪಿಬೇತ್ತತ್ಸರ್ವಮಚಿರಾತ್ತಸ್ಯ ಸಾರಸ್ವತಂ ಭವೇತ್ ।
ಜ್ಯೋತಿಷ್ಮತೀಲತಾಬೀಜಂ ದಿನೇಷ್ವೇಕೈಕವರ್ಧಿತಂ ॥ ೫೨ ॥

---

೪೭. ಈ ರೀತಿಯಾಗಿ ಹದಿನೈದು ಆವರಣಗಳಿಂದ ಯುಕ್ತನಾದ ಹಯಮುಖನನ್ನು ಪೂಜಿಸಿದರೆ ವಾಕ್ಕಿನಲ್ಲಿ ವಾಗೀಶ್ವರನಿಗೆ ಸಮಾನನೂ, ಐಶ್ವರ್ಯ ದಲ್ಲಿ ಕುಬೇರನಿಗೆ ಸದೃಶನೂ ಆಗುವನು.

೪೮-೪೯. ಈರೀತಿ ಅನುಷ್ಠಾನವನ್ನು ಮಾಡಿ ಮಂತ್ರಸಿದ್ಧಿಯನ್ನು ಪಡೆದವನು ಪ್ರಯೋಗಗಳನ್ನು ಮಾಡಲು ಅರ್ಹನಾಗುವನು. ಇದರ ಬೀಜಾ ಕ್ಷರದಿಂದ ಸಾವಿರದೆಂಟಾವರ್ತಿ ಅಭಿಮಂತ್ರಿಸಲ್ಪಟ್ಟ ಪರಿಶುದ್ಧವಾದ ನೀರನ್ನು ಒಂದು ತಿಂಗಳು ಕುಡಿದ ಮನುಷ್ಯನು ಬುದ್ಧಿವಂತನೂ, ಜಿತೇಂದ್ರಿಯನೂ ಆಗುವನು. ಮತ್ತು ಹುಟ್ಟುಮೂಕನಾದಾಗ್ಯೂ ಅವನು ವಾಕ್ಸಿದ್ಧಿಯನ್ನು ಪಡೆಯುವನು. ನಿಶ್ಚಯ.

೫೦-೫೨. ವಿಯತ್= ಹ, ಭೃಗುಸ್ಥ= ಸಕಾರಸ್ಥ, ಅರ್ಧೀಶ= ಊ, ಬಿಂದು= ೦ ಇವುಗಳುಳ್ಳದು (ಸ್ಹೂಂ) ಬೀಜವೆಂದು ಉಕ್ತವಾಗಿದೆ. ಚಂದ್ರ ಸೂರ್ಯಗ್ರಹಣಗಳಕಾಲಗಳಲ್ಲಿ ಬಂಗಾರದ ಪಾತ್ರೆಯಲ್ಲಿ ಹಾಲು ಬಜೆಗಳನ್ನುತುಂಬಿ ಮಂತ್ರಿಯು ಕುತ್ತಿಗೆಯವರೆಗೆ ನೀರಿನಲ್ಲಿ ಮುಳುಗಿ ಗ್ರಹಣಬಿಡುವವರೆಗೂ

ಅಷ್ಟೋತ್ತರಶತಂ ಯಾವದ್ಭಕ್ಷಯೇದಭಿಮಂತ್ರಿತಂ |
ಸರಸ್ವತ್ಯವತಾರೋಽಸೌ ಸತ್ಯಂ ಸ್ಯಾದ್ಭುವಿ ಮಾನವಃ || ೫೩ ||

ಕಿಂ ಬಹೂಕ್ತೇನ ವಿಪ್ರೇಂದ್ರಂ ಮನೋರಸ್ಯ ಪ್ರಸಾದತಃ |
ಸರ್ವವೇದಾಗಮಾದೀನಾಂ ವ್ಯಾಖ್ಯಾತಾ ಜ್ಞಾನವಾನ್ಭವೇತ್ || ೫೪ ||

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ಸನತ್ಕುಮಾರವಿಭಾಗೇ ತೃತೀಯಪಾದೇ ಹಯಗ್ರೀವೋಪಾಸನಾ-
ನಿರೂಪಣಂ ನಾಮ ದ್ವಿಸಪ್ತತಿತಮೋಽಧ್ಯಾಯಃ

---

ಭಕ್ತಿಯಿಂದ ಮಂತ್ರವನ್ನು ಜಪಿಸಬೇಕು. ಬಳಿಕ ಗ್ರಹಣ ಬಿಟ್ಟ ಕೂಡಲೇ ಆ ಹಾಲನ್ನೆಲ್ಲಾ ಕುಡಿಯಬೇಕು. ಹಾಗೆ ಮಾಡಿದವನಿಗೆ ಸರಸ್ವತೀದೇವಿಯ ಅನುಗ್ರಹವುಂಟಾಗಿ ಪಾಂಡಿತ್ಯವು ಲಭಿಸುವುದು.

೫೨-೫೩. ಕಂಗೊಂದೀಬೀಜವನ್ನು ಮಂತ್ರದಿಂದ ಅಭಿಮಂತ್ರಿಸಿ ಒಂದು ಬೀಜದಿಂದ ನೂರೆಂಟರವರೆಗೆ ದಿನಕ್ಕೆ ಒಂದೊಂದರಂತೆ ಹೆಚ್ಚಿಸಿಕೊಂಡು ತಿನ್ನುವ ಮನುಷ್ಯನು ಭೂಮಿಯಲ್ಲಿ ಸಾಕ್ಷಾತ್ತಾಗಿ ಸರಸ್ವತೀದೇವಿಯ ಅವತಾರ ಪುರುಷನಂತೆ ಸಕಲ ವಿದ್ಯಾಭಿಜ್ಞನಾಗುವನು.

೫೪. ಬ್ರಾಹ್ಮಣವರ್ಯನೇ! ಹೆಚ್ಚು ಹೇಳುವುದೇನು! ಈ ಮಂತ್ರವನ್ನಾರಾಧಿಸಿ ಅನುಗ್ರಹವನ್ನು ಪಡೆದವನು ಸಕಲ ವೇದಾಗಮಾದಿಗಳ ವ್ಯಾಖ್ಯಾತೃವಾಗಿ ಮಹಾಜ್ಞಾನಿಯಾಗುವನು.

ಇಂತು ಶ್ರೀ ನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ
ಸನತ್ಕುಮಾರ ವಿಭಾಗವಾದ ತೃತೀಯ ಪಾದದಲ್ಲಿ ಹಯಗ್ರೀವೋಪಾಸನೋಕ್ತಿಯೆಂಬ ಎಪ್ಪತ್ತೆರಡನೆಯ
ಅಧ್ಯಾಯವು ಮುಗಿದುದು.

## ಕಥಾಸಾರಾಂಶ

ದಧಿವಾಮನಮಂತ್ರ ಮತ್ತು ಹಯಗ್ರೀವಮಂತ್ರ ಇವುಗಳನ್ನು ಹೇಳಿ ಅವುಗಳ ಅಂಗ, ಬೀಜ, ಶಕ್ತ್ಯಾದಿಗಳು, ನ್ಯಾಸ, ಧ್ಯಾನ, ಪ್ರಯೋಗಭೇದದಿಂದ ಫಲಭೇದ ಮುಂತಾದುವು ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ.

# ತ್ರಿಸಪ್ತತಿತಮೋಽಧ್ಯಾಯಃ

---

### ಸನತ್ಕುಮಾರ ಉವಾಚ

ಅಥ ರಾಮಸ್ಯ ಮನವೋ ವಕ್ಷ್ಯಂತೇ ಸಿದ್ಧಿದಾಯಕಾಃ ।
ಯೇಷಾಮಾರಾಧನಾನ್ಮರ್ತ್ಯಾಸ್ತರಂತಿ ಭವಸಾಗರಂ ॥ ೧ ॥

ಸರ್ವೇಷು ಮಂತ್ರವರ್ಗೇಷು ಶ್ರೇಷ್ಠಂ ವೈಷ್ಣವಮುಚ್ಯತೇ ।
ಗಾಣಪತ್ಯೇಷು ಸೌರೇಷು ಶಾಕ್ತಶೈವೇಷ್ವಭೀಷ್ಟದಂ ॥ ೨ ॥

ವೈಷ್ಣವೇಷ್ವಪಿ ಮಂತ್ರೇಷು ರಾಮಮಂತ್ರಾಃ ಫಲಾಧಿಕಾಃ ।
ಗಾಣಪತ್ಯಾದಿಮಂತ್ರೇಭ್ಯಃ ಕೋಟಿಕೋಟಿಗುಣಾಧಿಕಾಃ ॥ ೩ ॥

---

## ಎಪ್ಪತ್ತುಮೂರನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಈಗ ಆರಾಧಕ ಮನುಜರಿಗೆ ಸಂಸಾರಸಮುದ್ರವನ್ನು ದಾಟುವುದಕ್ಕೆ ಸಾಧಕವು, ಸಿದ್ಧಿಪ್ರದವೂ ಆದ ರಾಮ ಮಂತ್ರವನ್ನು ಹೇಳುವೆನು.

೨. ಗಣೇಶ, ಸೂರ್ಯ, ಶಕ್ತಿ, ಶಿವ ಈ ದೇವತೆಗಳ ಮಂತ್ರವೇ ಮುಂತಾಗಿ ಉತ್ತಮವಾದ ಸಕಲ ಮಂತ್ರಗಳಲ್ಲಿಯೂ ವೈಷ್ಣವಮಂತ್ರವೇ ಶ್ರೇಷ್ಠವು. ಅದು ಇಷ್ಟಾರ್ಥಪ್ರದವು ಎಂದು ಉಕ್ತವಾಗಿದೆ.

೩. ವಿಷ್ಣುದೇವತಾಕಮಂತ್ರಗಳಲ್ಲಿಯೂ ಸಹ ರಾಮಮಂತ್ರಗಳೇ ಅಧಿಕ ಫಲಪ್ರದಗಳು. ಅವು ಗಣಪತಿ ಮುಂತಾದ ಇತರ ದೇವತೆಗಳ ಮಂತ್ರಗಳಿಗಿಂತಲೂ ಕೋಟ್ಯಂತರದಷ್ಟು ಅಧಿಕಗುಣಗಳುಳ್ಳವು.

ವಿಷ್ಣುಶಯ್ಯಾಸ್ಥಿತೋ ವಹ್ನಿರಿಂದುಭೂಷಿತಮಸ್ತಕಃ ।
ರಾಮಾಯ ಹೃದಂತೋಽಯಂ ಮಹಾಘೌಘವಿನಾಶನಃ ॥ ೪ ॥

ಸರ್ವೇಷು ರಾಮಮಂತ್ರೇಷು ಹ್ಯತಿಶ್ರೇಷ್ಠಃ ಷಡಕ್ಷರಃ ।
ಬ್ರಹ್ಮಹತ್ಯಾಸಹಸ್ರಾಣಿ ಜ್ಞಾತಾಜ್ಞಾತಕೃತಾನಿ ಚ ॥ ೫ ॥

ಸ್ವರ್ಣಸ್ತೇಯಸುರಾಪಾನಗುರುತಲ್ಪಾಯುತಾನಿ ಚ ।
ಕೋಟಿಕೋಟಿಸಹಸ್ರಾಣಿ ಹ್ಯುಪಪಾಪಾನಿ ಯಾನಿ ವೈ ॥ ೬ ॥

ಮಂತ್ರಸ್ಯೋಚ್ಚಾರಣಾತ್ಸದ್ಯೋ ಲಯಂ ಯಾಂತಿ ನ ಸಂಶಯಃ ।
ಬ್ರಹ್ಮಾ ಮುನಿಸ್ಸ್ಯಾದ್ಗಾಯತ್ರೀ ಛಂದೋ ರಾಮಶ್ಚ ದೇವತಾ ॥ ೭ ॥

ಆದ್ಯಂ ಬೀಜಂ ಚ ಹೃಚ್ಛಕ್ತಿರ್ವಿನಿಯೋಗೋಽಖಿಲಾಪ್ತಯೇ ।
ಷಡ್ದೀರ್ಘಭಾಜಾ ಬೀಜೇನ ಷಡಂಗಾನಿ ಸಮಾಚರೇತ್ ॥ ೮ ॥

---

೪. (ವಿಷ್ಣುಶಯ್ಯಾ= ಆ, ವಹ್ನಿ= ರ, ಇಂದು= ಂ, ಹೃತ್= ನಮಃ) "ರಾಂ ರಾಮಾಯನಮಃ" ಎಂಬುದು ಮಹಾಪಾತಕಗಳನ್ನು ನಾಶಪಡಿಸುವ ರಾಮಷಡಕ್ಷರಮಂತ್ರವು.

೫-೭. ಸಕಲ ರಾಮಮಂತ್ರಗಳಿಗಿಂತಲೂ ಈ ಷಡಕ್ಷರಮಂತ್ರವು ಅತ್ಯಂತ ಶ್ರೇಷ್ಠವಾದುದು. ತಿಳಿದು ಅಥವಾ ತಿಳಿಯದೆಯೂ ಆಚರಿಸಲ್ಪಟ್ಟ ಸಾವಿರಾರು ಬ್ರಹ್ಮಹತ್ಯೆಗಳು, ಸ್ವರ್ಣಸ್ತೇಯ, ಮದ್ಯಪಾನ, ಗುರುಪತ್ನೀಗಮನ ಮತ್ತು ಕೋಟ್ಯಂತರ ಸಾವಿರಾರು ಉಪಪಾತಕಗಳೂ ಸಹ ಈ ರಾಮಮಂತ್ರೋಚ್ಚಾರಣೆಯನ್ನು ಮಾಡಿದ ಕೂಡಲೇ ನಾಶವಾಗುತ್ತವೆ. ಈ ವಿಷಯದಲ್ಲಿ ಸಂದೇಹವಿಲ್ಲ.

೭-೮. ಈ ಮಂತ್ರಕ್ಕೆ ಬ್ರಹ್ಮನು ಋಷಿಯು, ಗಾಯತ್ರಿಯು ಛಂದಸ್ಸು, ರಾಮನೇ ದೇವತೆಯು. ಮೊದಲನೆಯ ಅಕ್ಷರವಾದ 'ರಂ' ಎಂಬುದೇ ಶಕ್ತಿ. ಸಕಲೇಷ್ಟಾರ್ಥಪ್ರಾಪ್ತಿಗಾಗಿ ಈ ಮಂತ್ರವನ್ನು ಜಪಿಸಬೇಕು. 'ಆ, ಈ, ಊ' ಮುಂತಾದ ಆರು ದೀರ್ಘಸಹಿತವಾದ ಬೀಜಾಕ್ಷರದಿಂದ ಷಡಂಗನ್ಯಾಸವನ್ನಾಚರಿಸಬೇಕು.

ಬ್ರಹ್ಮರಂಧ್ರೇ ಭ್ರುವೋರ್ಮಧ್ಯೇ ಹೃನ್ನಾಭ್ಯೋರ್ಗುಹ್ಯಪಾದಯೋಃ ।
ಮಂತ್ರವರ್ಣಾನ್ಕ್ರಮಾನ್ನ್ಯಸ್ಯ ಕೇಶವಾದೀನ್ಕ್ರಮಾನ್ನ್ಯಸೇತ್ ॥ ೯ ॥

ಪೀಠನ್ಯಾಸಾದಿಕಂ ಕೃತ್ವಾ ಧ್ಯಾಯೇದ್ಧೃದಿ ರಘೂತ್ತಮಂ ।
ಕಾಲಾಂಭೋಧರಕಾಂತಂ ಚ ವೀರಾಸನಸಮಾಸ್ಥಿತಂ ॥ ೧೦ ॥

ಜ್ಞಾನಮುದ್ರಾಂ ದಕ್ಷಹಸ್ತೇ ದಧತಂ ಜಾನುನೀತರಂ ।
ಸರೋರುಹಕರಾಂ ಸೀತಾಂ ವಿದ್ಯುದಾಭಾಂ ಚ ಪಾರ್ಶ್ವಗಾಂ ॥ ೧೧ ॥

ಪಶ್ಯಂತೀಂ ರಾಮವಕ್ತ್ರಾಬ್ಜಂ ವಿವಿಧಾಕಲ್ಪಭೂಷಿತಾಂ ।
ಧ್ಯಾತ್ವೈವಂ ಪ್ರಜಪೇದ್ವರ್ಣಲಕ್ಷಂ ಮಂತ್ರೀ ದಶಾಂಶತಃ ॥ ೧೨ ॥

ಕಮಲೈರ್ಜುಹುಯಾದ್ವಹ್ನೌ ಬ್ರಾಹ್ಮಣಾನ್ಭೋಜಯೇತ್ತತಃ ।
ಪೂಜಯೇದ್ವೈಷ್ಣವೇ ಪೀಠೇ ವಿಮಲಾದಿಸಮನ್ವಿತೇ ॥ ೧೩ ॥

---

೯-೧೦. ಈ ಮಂತ್ರದ ಅಕ್ಷರಗಳನ್ನು ಕ್ರಮವಾಗಿ ಬ್ರಹ್ಮರಂಧ್ರ, ಹುಬ್ಬುಗಳ ಮಧ್ಯ, ಹೃದಯ, ನಾಭಿ, ಗುಹ್ಯ, ಪಾದಗಳಲ್ಲಿ ನ್ಯಾಸಮಾಡಿ, ಕೇಶವಾದಿಮೂರ್ತಿಗಳನ್ನು ಅಂಗಗಳಲ್ಲಿ ಕ್ರಮವಾಗಿ ನ್ಯಾಸಮಾಡಬೇಕು. ಪೀಠನ್ಯಾಸಾದಿಗಳನ್ನು ಮಾಡಿ ಮನಸ್ಸಿನಲ್ಲಿ ರಘುವರ್ಯನಾದ ಶ್ರೀರಾಮನನ್ನು ಧ್ಯಾನಿಸಬೇಕು.

೧೦-೧೨. ಕಾಲಮೇಘಕ್ಕೆ ಸಮವಾದ ಕಾಂತಿಯುಳ್ಳ, ವೀರಾಸನದಲ್ಲಿ ಕುಳಿತಿರುವ, ಬಲಗೈಯಲ್ಲಿ ಜ್ಞಾನಮುದ್ರೆಯನ್ನು ಧರಿಸಿರುವ, ಎಡಗೈಯನ್ನು ಮೊಣಕಾಲಿನ ಮೇಲಿಟ್ಟುಕೊಂಡಿರುವ ಶ್ರೀರಾಮನನ್ನು ಮತ್ತು ಕೈಯಲ್ಲಿ ಪದ್ಮವನ್ನು ಧರಿಸಿರುವ, ಮಿಂಚಿನಂತೆ ಹೊಳೆಯುತ್ತಿರುವ, ರಾಮನ ಮುಖಕಮಲವನ್ನು ನೋಡುತ್ತಿರುವ, ನಾನಾವಿಧವಾದ ಆಭರಣಗಳಿಂದ ಅಲಂಕೃತಳಾದ, ಪಕ್ಕದಲ್ಲಿರುವ ಸೀತಾದೇವಿಯನ್ನೂ ಸಹ ಧ್ಯಾನಿಸಬೇಕು.

೧೨-೧೪. ಈ ಪ್ರಕಾರವಾಗಿ ಧ್ಯಾನಿಸಿ, ಈ ಮಂತ್ರವನ್ನು ಆರು ಲಕ್ಷ ಜಪಮಾಡಿ, ಅದರ ಹತ್ತನೆಯ ಒಂದು ಭಾಗದಷ್ಟು ಕಮಲಪುಷ್ಪಗಳಿಂದ ಅಗ್ನಿಯಲ್ಲಿ ಹೋಮಮಾಡಬೇಕು ಬಳಿಕ ಬ್ರಾಹ್ಮಣರಿಗೆ ಭೋಜನವನ್ನು

ಮೂರ್ತಿಂ ಮೂಲೇನ ಸಂಕಲ್ಪ್ಯ ತಸ್ಯಾಮಾವಾಹ್ಯ ಸಾಧಕಃ ।
ಸಿತಾಂ ವಾಮೇ ಸಮಾಸೀನಂ ತನ್ಮಂತ್ರೇಣ ಪ್ರಪೂಜಯೇತ್ ॥ ೧೪ ॥

ರಮಾ ಸೀತಾಪದಂ ಜೇಂತಂ ದ್ವಿಠಾಂತೋ ಜಾನಕೀ ಮನುಃ ।
ಅಗ್ರೇ ಶಾರ್ಙ್ಗಂ ಚ ಸಂಪೂಜ್ಯ ಶರಾನ್ಪಾರ್ಶ್ವದ್ವಯೇಽರ್ಚಯೇತ್॥ ೧೫ ॥

ಕೇಸರೇಷು ಷಡಂಗಾನಿ ಪತ್ರೇಷ್ವೇತಾನ್ಸಮರ್ಚಯೇತ್ ।
ಹನುಮಂತಂ ಚ ಸುಗ್ರೀವಂ ಭರತಂ ಸವಿಭೀಷಣಂ ॥ ೧೬ ॥

ಲಕ್ಷ್ಮಣಾಂಗದಶತ್ರುಘ್ನಾನ್ಜಾಂಬವಂತಂ ಕ್ರಮಾತ್ಪುನಃ ।
ವಾಚಯಂತಂ ಹನೂಮಂತಮಗ್ರತೋ ಧೃತಪುಸ್ತಕಂ ॥ ೧೭ ॥

ಯಜೇದ್ಭರತಶತ್ರುಘ್ನೌ ಪಾರ್ಶ್ವಯೋರ್ಧೃತಚಾಮರೌ ।
ಧೃತಾತಪತ್ರಂ ಹಸ್ತಾಭ್ಯಾಂ ಲಕ್ಷ್ಮಣಂ ಪೃಷ್ಠತೋಽರ್ಚಯೇತ್ ॥ ೧೮ ॥

---

ಮಾಡಿಸಿ, ತರುವಾಯ ಸಾಧಕನು ವಿಮಲಾದಿಯುಕ್ತವಾದ ವೈಷ್ಣವಪೀಠದಲ್ಲಿ ಮೂಲಮಂತ್ರದಿಂದ ಮೂರ್ತಿಯನ್ನು ಸ್ಥಾಪಿಸಿ ಅದರಲ್ಲಿ ಎಡಪಾರ್ಶ್ವದಲ್ಲಿರುವ ಸೀತೆಯನ್ನು ಅವರ ಮಂತ್ರದಿಂದ ಆವಾಹನೆಮಾಡಿ ಪೂಜಿಸಬೇಕು.

೧೫ (ರಮಾ= ಶ್ರೀಂ, ದ್ವಿಠ= ಸ್ವಾಹಾ) "ಶ್ರೀಂ ಸೀತಾಯೈ ಸ್ವಾಹಾ" ಎಂಬುದು ಜಾನಕೀಮಂತ್ರವು. ಊರ್ಧ್ವಭಾಗದಲ್ಲಿ ಶಾರ್ಙ್ಗವನ್ನೂ, ಉಭಯ ಪಾರ್ಶ್ವಗಳಲ್ಲಿ ಬಾಣಗಳನ್ನೂ ಪೂಜಿಸಬೇಕು.

೧೬-೧೭. ಪದ್ಮದ ಕುಸುರುಗಳಲ್ಲಿ 'ಷಡಂಗಗಳನ್ನೂ, ಪತ್ರಗಳಲ್ಲಿ ಹನುಮಂತ, ಸುಗ್ರೀವ, ಭರತ, ವಿಭೀಷಣ, ಲಕ್ಷ್ಮಣ, ಅಂಗದ, ಶತ್ರುಘ್ನ ಮತ್ತು ಜಾಂಬುವಂತ ಇವರನ್ನೂ ಪೂಜಿಸಬೇಕು.

೧೭-೧೮. ಪುನಃ ಕ್ರಮವಾಗಿ ಮುಂಭಾಗದಲ್ಲಿ ಪುಸ್ತಕವನ್ನು ಹಿಡಿದುಕೊಂಡು ರಾಮಮಹಿಮೆಯನ್ನು ಕೀರ್ತನೆಮಾಡುತ್ತಿರುವ ಹನುಮಂತನನ್ನೂ, ಎರಡು ಪಕ್ಕಗಳಲ್ಲಿ ಚಾಮರವನ್ನು ಧರಿಸಿ ನಿಂತಿರುವ ಭರತ ಶತ್ರುಘ್ನರನ್ನೂ, ಹಿಂಭಾಗದಲ್ಲಿ ಎರಡು ಕೈಗಳಿಂದ ಶ್ವೇತಛತ್ರವನ್ನು ಹಿಡಿದುಕೊಂಡು ನಿಂತಿರುವ ಲಕ್ಷ್ಮಣನನ್ನೂ ಪೂಜಿಸಬೇಕು.

ತತೋಽಷ್ಟಪತ್ರೇ ಧೃಷ್ಟಿಂ ಚ ಜಯಂತಂ ವಿಜಯಂ ತಥಾ ।
ಸುರಾಷ್ಟ್ರಂ ರಾಷ್ಟ್ರಪಾಲಂ ಚ ಅಕೋಪಂ ಧರ್ಮಪಾಲಕಂ ॥ ೧೯ ॥

ಸುಮಂತ್ರಂ ಚೇತಿ ಸಂಪೂಜ್ಯ ಲೋಕೇಶಾನಾಯುಧೈರ್ಯುತಾನ್ ।
ಏವಂ ರಾಮಂ ಸಮಾರಾಧ್ಯ ಜೀವನ್ಮುಕ್ತಃ ಪ್ರಜಾಯತೇ ॥ ೨೦ ॥

ಚಂದನಾಕ್ತೈಃ ಪ್ರಜುಹುಯಾಜ್ಜಾತೀಪುಷ್ಪೈಃ ಸಮಾಹಿತಃ ।
ರಾಜವಶ್ಯಾಯ ಕಮಲೈರ್ಧನಧಾನ್ಯಾದಿಸಿದ್ಧಯೇ ॥ ೨೧ ॥

ಲಕ್ಷ್ಮೀಕಾಮಃ ಪ್ರಜುಹುಯಾತ್ಪ್ರಸೂನೈರ್ಬಿಲ್ವಸಂಭವೈಃ ।
ಆಜ್ಯಾಕ್ತೈರ್ನೀಲಕಮಲೈರ್ವಶಯೇದಖಿಲಂ ಜಗತ್ ॥ ೨೨ ॥

ಘೃತಾಕ್ತಶತಪರ್ವೀಭಿರ್ದೀರ್ಘಾಯುಶ್ಚ ನಿರಾಮಯಃ ।
ರಕ್ತೋತ್ಪಲಾನಾಂ ಹೋಮೇನ ಧನಂ ಪ್ರಾಪ್ನೋತಿ ವಾಂಛಿತಂ ॥ ೨೩ ॥

---

೧೯-೨೦. ತರುವಾಯ ಎಂಟು ದಳಗಳಲ್ಲಿ ಧೃಷ್ಟಿ, ಜಯಂತ, ವಿಜಯ, ಸುರಾಷ್ಟ್ರ, ರಾಷ್ಟ್ರಪಾಲ, ಅಕೋಪ, ಧರ್ಮಪಾಲ ಮತ್ತು ಸುಮಂತ್ರ ಇವರನ್ನು ಪೂಜಿಸಿ, ಅವರವರ ಆಯುಧಸಹಿತವಾಗಿ ಇಂದ್ರಾದಿದಿಕ್ಪಾಲಕರನ್ನೂ ಪೂಜಿಸಿ, ಶ್ರೀರಾಮನನ್ನು ಆರಾಧಿಸಿದರೆ ಜೀವನ್ಮುಕ್ತನಾಗುವನು.

೨೧-೨೨. ಈರೀತಿ ರಾಮಮಂತ್ರವನ್ನು ಸಪರಿಕರವಾಗಿ ಜಪಿಸಿ, ಸಮಾಧಾನಚಿತ್ತನಾಗಿ ರಾಜನನ್ನು ವಶಮಾಡಿಕೊಳ್ಳಬೇಕೆಂದು ಬಯಸುವವನು ಗಂಧದಿಂದ ಯುಕ್ತವಾದ ಜಾಜೀಹೂಗಳಿಂದಲೂ, ಧನಧಾನ್ಯಾದಿ ಲಾಭಕ್ಕಾಗಿ ಕಮಲಗಳಿಂದಲೂ, ಐಶ್ವರ್ಯವನ್ನು ಬಯಸುವವನು ಬಿಲ್ವಪುಷ್ಪಗಳಿಂದಲೂ, ಸಕಲ ಜಗದ್ವಶೀಕರಣಾಕಾಂಕ್ಷಿಯು ತುಪ್ಪದಲ್ಲಿ ನೆನೆಸಿದ ನೀಲಕಮಲಗಳಿಂದಲೂ ಹೋಮಮಾಡಬೇಕು.

೨೩. ತುಪ್ಪದಲ್ಲಿ ನೆನೆಸಿದ ಬಜೆಗಳಿಂದ ಹೋಮಮಾಡಿದರೆ ದೀರ್ಘಾಯುಸ್ಸು ಮತ್ತು ಆರೋಗ್ಯವೂ, ರಕ್ತೋತ್ಪಲಪುಷ್ಪಗಳ ಹೋಮದಿಂದ ಇಷ್ಟ ಧನವೂ ಲಭಿಸುತ್ತದೆ.

ಪಲಾಶಕುಸುಮೈರ್ಹುತ್ವಾ ಮೇಧಾವೀ ಜಾಯತೇ ನರಃ ।
ತಜ್ಜಪ್ತಾಂಭಃ ಪಿಬೇತ್ಪ್ರಾತರ್ವತ್ಸರಾತ್ಕವಿರಾಡ್ಭವೇತ್ ॥ ೨೪ ॥

ತನ್ಮಂತ್ರಿತಾನ್ನಂ ಭುಂಜೀತ ಮಹಾರೋಗಪ್ರಶಾಂತಯೇ ।
ರೋಗೋಕ್ತೌಷಧಹೋಮೇನ ತದ್ರೋಗಾನ್ಮುಚ್ಯತೇ ಕ್ಷಣಾತ್ ॥ ೨೫ ॥

ನದೀತೀರೇ ಚ ಗೋಷ್ಠೇ ವಾ ಜಪೇಲ್ಲಕ್ಷಂ ಪಯೋವ್ರತಃ ।
ಪಾಯಸೇನಾಜ್ಯಯುಕ್ತೇನ ಹುತ್ವಾ ವಿದ್ಯಾನಿಧಿರ್ಭವೇತ್ ॥ ೨೬ ॥

ಪರಿಕ್ಷೀಣಾಧಿಪತ್ಯೋ ಯಃ ಶಾಕಾಹಾರೋ ಜಲಾಂತರೇ ।
ಜಪೇಲ್ಲಕ್ಷಂ ಚ ಜುಹುಯಾದ್ಬಿಲ್ವಪುಷ್ಪೈರ್ದಶಾಂಶತಃ ॥ ೨೭ ॥

ತದೈವ ಪುನರಾಪ್ನೋತಿ ಸ್ವಾಧಿಪತ್ಯಂ ನ ಸಂಶಯಃ ।
ಉಪೋಷ್ಯ ಗಂಗಾತೀರಾಂತೇ ಸ್ಥಿತ್ವಾ ಲಕ್ಷಂ ಜಪೇನ್ನರಃ ॥ ೨೮ ॥

---

೨೪. ಮುತ್ತುಗದ ಹೂವಿನಿಂದ ಹೋಮಮಾಡುವ ಮನುಷ್ಯನು ಒಳ್ಳೆಯ ಬುದ್ಧಿವಂತನಾಗುವನು. ಈ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ನೀರನ್ನು ಪ್ರಾತಃಕಾಲದಲ್ಲಿ ಒಂದು ವರ್ಷ ಕುಡಿದರೆ ಉತ್ಕೃಷ್ಟಕವಿಯಾಗುವನು.

೨೫. ಮಹಾರೋಗವನ್ನು ವಾಸಿಮಾಡಿಕೊಳ್ಳುವುದಕ್ಕೆ ಆ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಅನ್ನವನ್ನು ತಿನ್ನಬೇಕು. ರೋಗಕ್ಕೆ ವಿಹಿತವಾದ ಔಷಧ ವನ್ನು ಹೋಮಮಾಡುವುದರಿಂದ ತಕ್ಷಣದಲ್ಲಿಯೇ ಆ ರೋಗವು ವಾಸಿ ಯಾಗುವುದು.

೨೬. ನದೀತೀರದಲ್ಲಿ ಅಥವಾ ಗೋಷ್ಠ ಎಂದರೆ ಗೋವಿನ ಆವಾಸ ಸ್ಥಳದಲ್ಲಿ ಪಯೋವ್ರತ ಎಂದರೆ ಹಾಲನ್ನು ಮಾತ್ರ ಆಹಾರವಾಗಿಟ್ಟುಕೊಂಡು, ಈ ಮಂತ್ರವನ್ನು ಒಂದು ಲಕ್ಷ ಜಪಮಾಡಿ, ಘೃತಸಹಿತವಾದ ಪಾಯಸದಿಂದ ಹೋಮಮಾಡಿದರೆ ವಿದ್ಯಾನಿಧಿಯಾಗುವನು.

೨೭-೨೮. ರಾಜ್ಯಭ್ರಷ್ಟನಾದವನು ಶಾಕಮಾತ್ರವನ್ನು ತಿನ್ನುತ್ತಾ, ನೀರಿನ ಮಧ್ಯದಲ್ಲಿ ನಿಂತು ಈ ಮಂತ್ರವನ್ನು ಒಂದು ಲಕ್ಷ ಜಪಮಾಡಿ, ಬಿಲ್ವ ಪುಷ್ಪಗಳಿಂದ ಹತ್ತುಸಾವಿರ ಹೋಮಮಾಡಿದರೆ ಆ ಕ್ಷಣದಲ್ಲಿಯೇ ತನ್ನ ರಾಜ್ಯ ವನ್ನು ಪಡೆಯುವನು; ಸಂದೇಹವಿಲ್ಲ.

ದಶಾಂಶಂ ಕಮಲೈರ್ಹುತ್ವಾ ಬಿಲ್ವೋತ್ಥೈರ್ವಾ ಪ್ರಸೂನಕೈಃ ।
ಮಧುರತ್ರಯಸಂಯುಕ್ತೈ ರಾಜ್ಯಶ್ರಿಯಮವಾಪ್ನುಯಾತ್ ॥ ೨೯ ॥

ಮಾಘಮಾಸೇ ಜಲೇ ಸ್ಥಿತ್ವಾ ಕಂದಮೂಲಫಲಾಶನಃ ।
ಲಕ್ಷಂ ಜಪ್ತ್ವಾ ದಶಾಂಶೇನ ಪಾಯಸೈರ್ಜುಹುಯಾದ್ವಸೌ ॥ ೩೦ ॥

ಶ್ರೀರಾಮಚಂದ್ರಸದೃಶಃ ಪುತ್ರಃ ಪೌತ್ರೋಽಪಿ ಜಾಯತೇ ।
ಅನ್ಯೇಽಪಿ ಬಹವಃ ಸಂತಿ ಪ್ರಯೋಗಾ ಮಂತ್ರರಾಜಕೇ ॥ ೩೧ ॥

ಕಿಂತು ಪ್ರಯೋಗಕರ್ತೄಣಾಂ ಪರಲೋಕೋ ನ ವಿದ್ಯತೇ ।
ಷಟ್ಕೋಣಂ ವಸುಪತ್ರಂ ಚ ತದ್ಬಾಹ್ಯೇಽರ್ಕದಲಂ ಲಿಖೇತ್ ॥ ೩೨ ॥

ಷಟ್ಕೋಣೇಷು ಷಡರ್ಣಾನಿ ಮಂತ್ರಸ್ಯ ವಿಲಿಖೇದ್ಬುಧಃ ।
ಅಷ್ಟಪತ್ರೇ ತಥಾಷ್ಟಾರ್ಣಾನ್ ಲಿಖೇತ್ತ್ರಣವಗರ್ಭಿತಾನ್ ॥ ೩೩ ॥

---

೨೮--೨೯. ಅಥವಾ ಗಂಗಾತೀರದಲ್ಲಿ ಇದ್ದು ಉಪವಾಸದಿಂದ ಈ ಮಂತ್ರವನ್ನು ಒಂದು ಲಕ್ಷ ಜಪಮಾಡಿ, ಕಮಲ ಅಥವಾ ಬಿಲ್ವಪುಷ್ಪಗಳಿಂದ ಮಧುರತ್ರಯಸಹಿತವಾಗಿ ಹತ್ತು ಸಾವಿರ ಹೋಮಮಾಡಿದರೆ ಅವನು ರಾಜ್ಯವನ್ನು ಪಡೆಯುವನು.

೩೦-೩೨. ಮಾಘಮಾಸದಲ್ಲಿ ಗೆಡ್ಡೆ, ಗೆಣಸು, ಹಣ್ಣುಗಳನ್ನು ಮಾತ್ರ ತಿನ್ನುತ್ತಾ, ನೀರಿನಲ್ಲಿ ನಿಂತು ಈ ಮಂತ್ರವನ್ನು ಒಂದು ಲಕ್ಷ ಜಪಮಾಡಿ, ಅದರ ಹತ್ತನೆಯ ಒಂದು ಭಾಗ ಅಗ್ನಿಯಲ್ಲಿ ಪಾಯಸಗಳಿಂದ ಹೋಮಮಾಡಿದರೆ ಶ್ರೀ ರಾಮಚಂದ್ರನಿಗೆ ಸಮಾನನಾದ ಎಂದರೆ ಗುಣಶಾಲಿಯೂ ಸುಂದರನೂ ಆದ ಮಗನೂ, ಮೊಮ್ಮಗನೂ ಸಹ ಹುಟ್ಟುವನು. ಈ ಶ್ರೇಷ್ಠವಾದ ಮಂತ್ರದಲ್ಲಿ ಇನ್ನೂ ಇತರ ಪ್ರಯೋಗಗಳು ಬಹಳವಾಗಿವೆ. ಆದರೆ ಅಂತಹ ಪ್ರಯೋಗಗಳನ್ನು ನಡೆಯಿಸಿ ಅದರಿಂದ ಐಹಿಕಫಲವನ್ನು ಹೊಂದುವವರಿಗೆ ಪರಲೋಕದಲ್ಲಿ ಉತ್ತಮವಾದ ಫಲವು ದೊರೆಯಲಾರದು.

೩೨-೩೫. ಆರು ಮೂಲೆಗಳು, ಎಂಟು ಪತ್ರಗಳು, ಅದರ ಹೊರಗೆ ಹನ್ನೆರಡು ದಳಗಳು ಇವುಗಳನ್ನು ಬರೆಯಬೇಕು. ಆ ಆರು ಮೂಲೆಗಳಲ್ಲಿ

ಕಾಮಬೀಜಂ ರವಿದಲೇ ಮಧ್ಯೇ ಮಂತ್ರಾವೃತಾಭಿಧಾಂ ।
ಸುದರ್ಶನಾವೃತಂ ಬಾಹ್ಯೇ ದಿಕ್ಷು ಯುಗ್ಮಾವೃತಂ ತಥಾ ॥ ೩೪ ॥

ವಜ್ರೋಲ್ಲಸದ್ಭೂಮಿಗೇಹಂ ಕಂದರ್ಪಾಂಕುಶಪಾಶಕೈಃ ।
ಭೂಮ್ಯಾ ಚ ವಿಲಸತ್ಕೋಣಂ ಯಂತ್ರರಾಜಮಿದಂ ಸ್ಮೃತಂ ॥ ೩೫ ॥

ಭೂರ್ಜೇಷ್ಟಗಂಧೈಃ ಸಂಲಿಖ್ಯ ಪೂಜಯೇದುಕ್ತವರ್ತ್ಮನಾ ।
ಷಟ್ಕೋಣಾಷ್ಟದಲಾರ್ಕಾಬ್ಜಾನ್ಯಾವೇಷ್ಟ್ಯ ವೃತ್ತಯುಗ್ಮತಃ ॥ ೩೬ ॥

ಕೇಸರೇಷ್ವಷ್ಟಪತ್ರಸ್ಯ ಸ್ವರದ್ವಂದ್ವಂ ಲಿಖೇದ್ಬುಧಃ ।
ಬಹಿಸ್ತು ಮಾತೃಕಾಂ ಚೈವ ಮಂತ್ರಂ ಪ್ರಾಣನಿಧಾಯನಂ ॥ ೩೭ ॥

---

ಮಂತ್ರದ ಆರು ವರ್ಣಗಳನ್ನು ಬರೆಯಬೇಕು. ಅದರ ಸುತ್ತಲೂ ಇರುವ ಎಂಟು ದಳಗಳಲ್ಲಿ ಓಂಕಾರಗರ್ಭಿತವಾದ ಅಷ್ಟಾಕ್ಷರಗಳನ್ನೂ, ಹನ್ನೆರಡು ದಳಗಳಲ್ಲಿ ಕಾಮಬೀಜ (ಕ್ಲೀಂ) ವನ್ನೂ, ಮಧ್ಯದಲ್ಲಿ ಮಂತ್ರದಿಂದ ಆವರಿಸಲ್ಪಟ್ಟ ಸಾಧ್ಯನಾಮವನ್ನೂ, ಬಾಹ್ಯದಲ್ಲಿ ಸುದರ್ಶನಾವರಣವನ್ನೂ, ದಿಕ್ಕುಗಳಲ್ಲಿ ಯುಗ್ಮಾವರಣವನ್ನೂ ಗುರ್ತಿಸಬೇಕು. ಅದರ ಸುತ್ತಲೂ 'ವಂ' ಎಂಬ ಅಕ್ಷರಯುಕ್ತವಾದ ಚತುರಸ್ರರೇಖೆಯಿಂದ ಆವರಣವನ್ನು ಕಲ್ಪಿಸಬೇಕು. ಅದರ ನಾಲ್ಕು ಕೋಣಗಳಲ್ಲಿ 'ಕ್ಲೀಂ', ಕ್ರೋಂ, ಆಂ, ಗ್ಲಾಂ' ಎಂಬ ಬೀಜಾಕ್ಷರಗಳನ್ನು ಬರೆಯಬೇಕು. ಈ ರೀತಿ ಲೇಖನಮಾಡಿದ ಯಂತ್ರವು ಶ್ರೇಷ್ಠವಾದುದೆಂದು ಉಕ್ತವಾಗಿದೆ.

೩೬-೩೭. ಈ ಯಂತ್ರವನ್ನು ಭೂರ್ಜಪತ್ರದಲ್ಲಿ ಅಷ್ಟಗಂಧಗಳಿಂದ ಬರೆದು ಮೇಲೆ ಹೇಳಿದ ರೀತಿಯಿಂದ ಪೂಜಿಸಬೇಕು. ಷಟ್ಕೋಣ, ಅಷ್ಟಪತ್ರ, ಅರ್ಕದಳಗಳನ್ನು ಎರಡು ವೃತ್ತ ಎಂದರೆ ಗುಂಡಗಿರುವ ರೇಖೆಗಳಿಂದ ಸುತ್ತುಗಟ್ಟಿ, ಅಷ್ಟಪತ್ರದ ಕುಸುರುಗಳಲ್ಲಿ ಎರಡೆರಡು ಸ್ವರಗಳಂತೆ ಬರೆಯಬೇಕು. ಹೊರಗೆ ಮಾತೃಕೆಗಳನ್ನು ಬರೆಯಬೇಕು. ಈ ರೀತಿ ಮಾಡಿದ ಯಂತ್ರವು ಪ್ರಾಣಧಾರಕವಾಗುವುದು.

ಯಂತ್ರಮೇತಚ್ಛುಭೇ ಘಸ್ರೇ ಕಂಠೇ ವಾ ದಕ್ಷಿಣೇ ಭುಜೇ ।
ಮೂರ್ಧ್ನಿ ವಾ ಧಾರಯೇನ್ಮಂತ್ರೀ ಸರ್ವಪಾಪೈಃ ಪ್ರಮುಚ್ಯತೇ ॥ ೩೮ ॥

ಸುದಿನೇ ಶುಭನಕ್ಷತ್ರೇ ಸುದೇಶೇ ಶಲ್ಯವರ್ಜಿತೇ ।
ವಶ್ಯಾಕರ್ಷಣವಿದ್ವೇಷದ್ರಾವಣೋಚ್ಚಾಟನಾದಿಕಂ ॥ ೩೯ ॥

ಪುಷ್ಯದ್ವಯಂ ತಥಾದಿತ್ಯಾದ್ರಾರ್ಮಘಾಸು ಯಥಾಕ್ರಮಂ ।
ದೂರ್ವೋತ್ಥಾ ಲೇಖಿನೀ ವಶ್ಯೇ ತಥಾಽಽಕೃಷ್ಟೌ ಕರಂಜಜಾ ॥ ೪೦ ॥

ನರಾಸ್ಥಿಜಾ ಮಾರಣೇ ತು ಸ್ತಂಭನೇ ರಾಜವೃಕ್ಷಜಾ ।
ಶಾಂತಿಪುಷ್ಟ್ಯಾಯುಷಾಂ ಸಿದ್ಧ್ಯೈ ಸರ್ವಾಪಚ್ಛಮನಾಯ ಚ ॥ ೪೧ ॥

ವಿಭ್ರಮೋತ್ಪಾದನೇ ಚೈವ ಶಿಲಾಯಾಂ ವಿಲಿಖೇದ್ಬುಧಃ ।
ಖರಚರ್ಮಣಿ ವಿದ್ವೇಷೇ ಧ್ವಜೇ ತೂಚ್ಚಾಟನಾಯ ಚ ॥ ೪೨ ॥

---

೩೮. ಈ ಯಂತ್ರವನ್ನು ಶುಭದಿವಸದಲ್ಲಿ ಕುತ್ತಿಗೆ ಅಥವಾ ಬಲಭುಜ ಅಥವಾ ಶಿರಸ್ಸು ಇವುಗಳಲ್ಲಿ ಮಂತ್ರಿಯು ಧರಿಸಿದರೆ ಸಕಲ ಪಾಪಗಳನ್ನೂ ನಾಶಪಡಿಸಿಕೊಳ್ಳುವನು.

೩೯-೪೦. ಶುಭನಕ್ಷತ್ರಯುಕ್ತವಾದ ಒಳ್ಳೆಯ ತಿಥಿಯಲ್ಲಿ ನಿಷ್ಕಂಟಕ ವಾದ ಪರಿಶುದ್ಧದೇಶದಲ್ಲಿ ಪುಷ್ಯದ್ವಯ, ಸೂರ್ಯದೇವತಾಕನಕ್ಷತ್ರ, ಆರಿದ್ರಾ, ಮಖ ಈ ನಕ್ಷತ್ರಗಳಲ್ಲಿ ಕ್ರಮವಾಗಿ ವಶ್ಯ, ಆಕರ್ಷಣ, ದ್ವೇಷ, ಸಂತಾಪಾದಿ, ಉಚ್ಚಾಟನೆ ಇವುಗಳಿಗಾಗಿ ಯಂತ್ರಗಳನ್ನು ರಚಿಸಬೇಕು.

೪೦-೪೧. ವಶ್ಯಯಂತ್ರವನ್ನು ಗರಿಕೇಹುಲ್ಲಿನ ಲೇಖನಿಯಿಂದಲೂ, ಆಕರ್ಷಣಯಂತ್ರವನ್ನು ಕರಂಜ (ಹುಲಿಗಿಲಿಮರ) ದ ಲೇಖನಿಯಿಂದಲೂ, ಮಾರಣಯಂತ್ರವನ್ನು ಮನುಷ್ಯನ ಮೂಳೆಯಿಂದ ನಿರ್ಮಿತಲೇಖನಿಯಿಂದಲೂ, ಸ್ತಂಭನಯಂತ್ರವನ್ನು ಕಕ್ಕೇಗಿಡದ ಕಡ್ಡಿಯಿಂದ ಮಾಡಿದ ಲೇಖನಿಯಿಂದಲೂ ಬರೆಯಬೇಕು.

೪೧-೪೩. ಶಾಂತಿ, ಪುಷ್ಟಿ, ಆಯುಸ್ಸುಗಳ ಸಿದ್ಧಿ, ಸಕಲವಿಧವಾದ ಕಷ್ಟಗಳ ಪರಿಹಾರ, ಹುಚ್ಚುಹಿಡಿಸುವುದು ಇವುಗಳಿಗಾಗಿ ನಿರ್ಮಿಸುವ ಯಂತ್ರ

ಶತ್ರೂಣಾಂ ಜ್ವರಸಂತಾಪಶೋಕಮಾರಣಕರ್ಮಣಿ ।
ಪೀತವಸ್ತ್ರೇ ಲಿಖಿತ್ವಾ ತು ಸಾಧಯೇತ್ಸಾಧಕೋತ್ತಮಃ ॥ ೪೩ ॥

ವಶ್ಯಾಕೃಷ್ಟೌ ಚಾಷ್ಟಗಂಧೈಃ ಸಂಪೂಜ್ಯ ಚ ಯಥಾವಿಧಿ ।
ಚಿತಾಂಗಾರಾದಿನಾ ಚೈವ ತಾಡನೋಚ್ಚಾಟನಾದಿಕಂ ॥ ೪೪ ॥

ವಿಷಾರ್ಕಕ್ಷೀರಯೋಗೇನ ಮಾರಣಂ ಭವತಿ ಧ್ರುವಂ ।
ಲಿಖಿತ್ವೈವಂ ಯಂತ್ರರಾಜಂ ಗಂಧಪುಷ್ಪಾದಿಭಿರ್ಯಜೇತ್ ॥ ೪೫ ॥

ತ್ರಿಲೋಹವೇಷ್ಟಿತಂ ಕೃತ್ವಾ ಧಾರಯೇತ್ಸಾಧಕೋತ್ತಮಃ ।
ಬೀಜಂ ರಾಮಾಯ ಠದ್ವಂದ್ವಂ ಮಂತ್ರೋಯಂ ರಸವರ್ಣಕಃ ॥ ೪೬ ॥

---

ವನ್ನು ಕಲ್ಲಿನಲ್ಲಿಯೂ, ವಿದ್ವೇಷೋತ್ಪಾದನೆಗಾಗಿ ಮಾಡುವ ಯಂತ್ರವನ್ನು ಕತ್ತೆಯ ಚರ್ಮದಲ್ಲಿಯೂ, ಉಚ್ಚಾಟನಯಂತ್ರವನ್ನು ಧ್ವಜದಲ್ಲಿಯೂ, ಶತ್ರುಗಳಿಗೆ ಜ್ವರಸಂತಾಪ, ದುಃಖ, ಮರಣ ಇವುಗಳಿಗಾಗಿ ಮಾಡುವ ಯಂತ್ರವನ್ನು ಹಳದಿಯ ಬಟ್ಟೆಯಲ್ಲಿಯೂ ಬರೆದು ಸಾಧಕಶ್ರೇಷ್ಠನು ಧರಿಸಿ ಆಯಾಯಾ ಇಷ್ಟಾರ್ಥಗಳನ್ನು ಸಾಧಿಸಿಕೊಳ್ಳಬೇಕು.

೪೪-೪೫. ವಶ್ಯ ಮತ್ತು ಆಕೃಷ್ಟಯಂತ್ರಗಳನ್ನು ಅಷ್ಟಗಂಧಗಳಿಂದಲೂ, ತಾಡನ, ಉಚ್ಚಾಟನ ಮುಂತಾದ ಯಂತ್ರಗಳನ್ನು ಚಿತಾಂಗಾರಾದಿಗಳಿಂದಲೂ ವಿಧಾನೋಕ್ತಪ್ರಕಾರ ಪೂಜಿಸಿ, ವಿಷಯುಕ್ತವಾದ ಎಕ್ಕೆಯ ಹಾಲಿನಲ್ಲಿ ನೆನೆಸಿ ಉಪಯೋಗಿಸಿದರೆ ಅದು ಮರಣಸಾಧಕವಾಗುವುದು. ನಿಶ್ಚಯ. ಈ ರೀತಿಯಾಗಿ ಈ ಶ್ರೇಷ್ಠಯಂತ್ರವನ್ನು ಬರೆದು ಗಂಧ, ಹೂವು ಮುಂತಾದುವುಗಳಿಂದ ಅದನ್ನು ಪೂಜಿಸಬೇಕು.

೪೬. ಹೀಗೆ ಪೂಜಿಸಿದ ಯಂತ್ರವನ್ನು ಮೂರು ಲೋಹಗಳಿಂದ ಸುತ್ತಿ ಸಾಧಕೋತ್ತಮನು ಧರಿಸಬೇಕು. "ಓಂ ರಂ ರಾಮಾಯ ಸ್ವಾಹಾ" ಎಂಬುದೂ ಷಡಕ್ಷರ ರಾಮಮಂತ್ರವು.

ಮಹಾಸುದರ್ಶನಮನುಃ ಕಥ್ಯತೇ ಸಿದ್ಧಿದಾಯಕಃ ।
ಸುದರ್ಶನಮಹಾಶಬ್ದಾತ್ ಚಕ್ರರಾಜೇಶ್ವರೇತಿ ಚ ॥ ೪೭ ॥

ದುಷ್ಟಾಂತಕ ದುಷ್ಟಭಯಾನಕ ದುಷ್ಟಭಯಂಕರ ।
ಛಿಂಧಿದ್ವಯಂ ಭಿಂಧಿಯುಗ್ಮಂ ವಿದಾರಯಯುಗಂ ತತಃ ॥ ೪೮ ॥

ಪರಮಂತ್ರಾನ್ಗ್ರಸದ್ವಂದ್ವಂ ಭಕ್ಷಯದ್ವಿತಯಂ ತತಃ ।
ತ್ರಾಸಯದ್ವಿತಯಂ ವರ್ಮಾಸ್ತ್ರಾಗ್ನಿಜಾಯಾಂತಿಮೋ ಮನುಃ ॥ ೪೯ ॥

ಅಷ್ಟಷಷ್ಟ್ಯಕ್ಷರಃ ಪ್ರೋಕ್ತೋ ಯಂತ್ರಸಂವೇಷ್ಟನೇ ತ್ವಯಂ ।
ತಾರೋ ಹೃದ್ಭಗವಾನ್ ಙೇಂತೋ ಙೇಂತೋ ಹಿ ರಘುನಂದನಃ ॥೫೦॥

ರಕ್ಷೋಘ್ನವಿಷದಾಯಾಂತೇ ಮಧುರಾದಿ ಪ್ರಸನ್ನ ಚ ।
ವದನಾಯಾ ಮಿತಾಂತೇ ತು ತೇಜಸೇ ಪದಮೀರಯೇತ್ ॥ ೫೧ ॥

ಬಾಲಾಯಾಂತೇ ತು ರಾಮಾಯ ವಿಷ್ಣವೇ ಹೃದಯಾಂತಿಮಃ ।
ಸಪ್ತಚತ್ವಾರಿಂಶದರ್ಣೋ ಮಾಲಾಮಂತ್ರೋಽಯಮೀರಿತಃ ॥ ೫೨ ॥

---

೪೭-೫೦. ಸಿದ್ಧಿಪ್ರದವಾದ ಮಹಾ ಸುದರ್ಶನ ಮಂತ್ರವು ಹೇಳಲ್ಪಡುತ್ತದೆ. ಯಾವುದೆಂದರೆ :—" ಸುದರ್ಶನಮಹಾಚಕ್ರ ರಾಜೇಶ್ವರ ದುಷ್ಟಾಂತಕ ದುಷ್ಟಭಯಾನಕ ದುಷ್ಟಭಯಂಕರ ಛಿಂಧಿ ಛಿಂಧಿ ಭಿಂಧಿ ಭಿಂಧಿ ವಿದಾರಯ ವಿದಾರಯ ಪರಮಂತ್ರಾನ್ಗ್ರಸಗ್ರಸ ಭಕ್ಷಯ ಭಕ್ಷಯ ತ್ರಾಸಯ ತ್ರಾಸಯ ಹುಂ ಫಟ್ ಸ್ವಾಹಾ " ಎಂಬ ಅರವತ್ತೆಂಟಕ್ಷರಗಳುಳ್ಳ ಈ ಮಂತ್ರವು ಯಂತ್ರವನ್ನು ವೇಷ್ಟನೆ ಮಾಡುವುದಕ್ಕಾಗಿ ಉಕ್ತವಾಗಿದೆ.

೫೦-೫೨. " ಓಂ ನಮೋ ಭಗವತೇ ರಘುನಂದನಾಯ ರಕ್ಷೋಘ್ನ ವಿಷದಾಯ ಮಧುರ ಪ್ರಸನ್ನ ವದನಾಯ ಅಮಿತ ತೇಜಸೇ ಬಾಲಾಯ ರಾಮಾಯ ವಿಷ್ಣವೇ ನಮಃ " ಎಂಬ ನಲವತ್ತೇಳು ಅಕ್ಷರಗಳುಳ್ಳ ಈ ಮಂತ್ರವು ಮಾಲಾಮಂತ್ರವೆಂದು ಉಕ್ತವಾಗಿದೆ.

ವಿಶ್ವಾಮಿತ್ರೋ ಮುನಿಶ್ಚಾಸ್ಯ ಗಾಯತ್ರೀ ಛಂದ ಈರಿತಂ ।
ಶ್ರೀರಾಮೋ ದೇವತಾ ಬೀಜಂ ಧ್ರುವಃ ಶಕ್ತಿಶ್ಚ ತದ್ವಯಂ ॥ ೫೩ ॥

ಷಡ್ದೀರ್ಘಸ್ವರಯುಙ್ಮಾಯಾಬೀಜೇನಾಂಗಾನಿ ಕಲ್ಪಯೇತ್ ।
ಧ್ಯಾನಪೂಜಾದಿಕಂ ಸರ್ವಮಸ್ಯ ಪೂರ್ವವದಾಚರೇತ್ ॥ ೫೪ ॥

ಅಯಮಾರಾಧಿತೋ ಮಂತ್ರಃ ಸರ್ವಾನ್ಕಾಮಾನ್ಪ್ರಯಚ್ಛತಿ ।
ಸ್ವಕಾಮಸತ್ಯವಾಗ್ಲಕ್ಷ್ಮೀ ತಾರಾದ್ಯಃ ಪಂಚವರ್ಣಕಃ ॥ ೫೫ ॥

ಷಡಕ್ಷರಃ ಷಡ್ವಿಧಃ ಸ್ಯಾಚ್ಚತುರ್ವರ್ಗಫಲಪ್ರದಃ ।
ಬ್ರಹ್ಮಾ ಸಂಮೋಹನಃ ಶಕ್ತಿರ್ದಕ್ಷಿಣಾಮೂರ್ತಿಸಂಜ್ಞಕಃ ॥ ೫೬ ॥

---

೫೩. ಈ ಮಂತ್ರಕ್ಕೆ ವಿಶ್ವಾಮಿತ್ರನು ಋಷಿ, ಗಾಯತ್ರೀ ಛಂದಸ್ಸು, ಶ್ರೀ ರಾಮನೇ ದೇವತೆ, 'ಓಂ' ಕಾರವು ಬೀಜ, 'ಸ್ವಾಹಾ' ಎಂಬುದು ಶಕ್ತಿಯು.

೫೪. ಆರು ದೀರ್ಘಗಳಿಂದ ಕೂಡಿದ ಮಾಯಾಬೀಜ, ಎಂದರೆ "ಹ್ರಾಂ, ಹ್ರೀಂ, ಹ್ರೂಂ, ಹ್ರೂಂ, ಹ್ರೈಂ, ಹ್ರೌಂ" ಎಂಬ ಆರಕ್ಷರಗಳಿಂದ ಷಡಂಗಗಳನ್ನು ನ್ಯಾಸಮಾಡಬೇಕು. ಈ ಮಂತ್ರಕ್ಕೆ ಅಂಗವಾದ ಧ್ಯಾನ, ಪೂಜೆ ಮುಂತಾದುವೆಲ್ಲವನ್ನೂ ಷಡಕ್ಷರರಾಮಂತ್ರದಂತೆ ಆಚರಿಸಬೇಕು.

೫೫-೫೬. ಹೀಗೆ ಆರಾಧಿಸಲ್ಪಟ್ಟ ಈ ಮಂತ್ರವು ಸಕಲೇಷ್ಟಾರ್ಥಗಳನ್ನೂ ಕೊಡುತ್ತದೆ. ಸ್ವಬೀಜ, ಕಾಮ, ಸತ್ಯ, ವಾಕ್, ಲಕ್ಷ್ಮೀ, ತಾರ= "ರಂ, ಕ್ಲೀಂ, ಓಂ, ಐಂ, ಶ್ರೀಂ, ಓಂ" ಎಂಬ ಒಂದೊಂದು ಬೀಜಾಕ್ಷರ ಸಹಿತವಾಗಿ "ರಾಮಾಯ ನಮಃ" ಎಂಬ ಐದು ಅಕ್ಷರಗಳೂ ಸೇರಿ ಆರಕ್ಷರಗಳುಳ್ಳದ್ದಾಗಿ ರಾಮಮಂತ್ರವು ಆರು ವಿಧವಾಗುವುದು. ಈ ಆರು ಮಂತ್ರಗಳೂ ಸಹ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಕೊಡುತ್ತವೆ.

ಆಗಸ್ತ್ಯಃ ಶ್ರೀಃ ಶಿವಃ ಪ್ರೋಕ್ತಾಸ್ತೇ ತೇಷಾಂ ಮುನಯಃ ಕ್ರಮಾತ್ ।
ಅಥವಾ ಕಾಮಬೀಜಾದೇರ್ವಿಶ್ವಾಮಿತ್ರೋ ಮುನಿಃ ಸ್ಮೃತಃ ॥ ೫೭ ॥

ಛಂದಃ ಪ್ರೋಕ್ತಂ ಚ ಗಾಯತ್ರೀ ಶ್ರೀರಾಮೋ ದೇವತಾ ಪುನಃ ।
ಬೀಜಶಕ್ತಿರಾದಿಮಾಂತ್ಯಂ ಮಂತ್ರಾರ್ಣೈಃ ಸ್ಯಾತ್ಷಡಂಗಕಂ ॥ ೫೮ ॥

ಬೀಜೈಃ ಷಡ್ದೀರ್ಘಯುಕ್ತೈರ್ವಾ ಮಂತ್ರಾರ್ಣಾನ್ಪೂರ್ವವನ್ನ್ಯಸೇತ್ ।
ಧ್ಯಾಯೇತ್ಕಲ್ಪತರೋರ್ಮೂಲೇ ಸುವರ್ಣಮಯಮಂಡಪೇ ॥ ೫೯ ॥

ಪುಷ್ಪಕಾಖ್ಯವಿಮಾನಾಂತಃ ಸಿಂಹಾಸನಪರಿಚ್ಛದೇ ।
ಪದ್ಮೇ ವಸುದಲೇ ದೇವಮಿಂದ್ರನೀಲಸಮಪ್ರಭಂ ॥ ೬೦ ॥

ವೀರಾಸನಸಮಾಸೀನಂ ಜ್ಞಾನಮುದ್ರೋಪಶೋಭಿತಂ ।
ವಾಮೋರುನ್ಯಸ್ತತದ್ಧಸ್ತಂ ಸೀತಾಲಕ್ಷ್ಮಣಸೇವಿತಂ ॥ ೬೧ ॥

---

೫೭-೫೮. ಈ ಆರಕ್ಕೂ ಕ್ರಮವಾಗಿ ಬ್ರಹ್ಮ, ಸಂಮೋಹನ ದಕ್ಷಿಣಾಮೂರ್ತಿಯೆಂಬ ಶಕ್ತಿ, ಅಗಸ್ತ್ಯ, ಶ್ರೀ, ಶಿವ ಇವರು ಋಷಿಗಳು. ಅಥವಾ ಕಾಮಬೀಜಾದಿಯಾದ ಮಂತ್ರಕ್ಕೆ ವಿಶ್ವಾಮಿತ್ರನು ಮುನಿಯು. ಗಾಯತ್ರೀ ಛಂದಸ್ಸು, ಶ್ರೀರಾಮನೇ ದೇವತೆ, ಆದ್ಯಾಕ್ಷರವೇ ಬೀಜ, ಕೊನೆಯ ವರ್ಣವೇ ಶಕ್ತಿ, ಮಂತ್ರಾಕ್ಷರಗಳಿಂದ ಷಡಂಗನ್ಯಾಸ ಎಂದು ತಿಳಿಯಬೇಕು. ಅಥವಾ "ಆಂ, ಈಂ...." ಮುಂತಾದ ಆರು ದೀರ್ಘಗಳಿಂದ ಸಹಿತ ಬೀಜಾಕ್ಷರಗಳಿಂದ ಪೂರ್ವದಂತೆ ಮಂತ್ರವರ್ಣಗಳನ್ನು ನ್ಯಾಸಮಾಡಬೇಕು.

೫೯-೬೩. ಕಲ್ಪವೃಕ್ಷದ ಕೆಳಗೆ ಸ್ವರ್ಣಮಂಟಪದಲ್ಲಿ ಪುಷ್ಪಕವೆಂಬ ವಿಮಾನದೊಳಗೆ ಸಿಂಹಾಸನಾವರಣದಂತಿರುವ ಅಷ್ಟದಳೋಪೇತವಾದ ಪದ್ಮದಲ್ಲಿ ಇಂದ್ರನೀಲಮಣಿಯಂತೆ ಹೊಳೆಯುತ್ತಿರುವ, ವೀರಾಸನದಲ್ಲಿ ಕುಳಿತಿರುವ, ಜ್ಞಾನಮುದ್ರೆಯಿಂದ ಅಲಂಕೃತನಾದ, ಎಡ ತೊಡೆಯ ಮೇಲೆ ಎಡಗೈಯನ್ನಿಟ್ಟಿರುವ ಸೀತಾಲಕ್ಷ್ಮಣರಿಂದ ಸೇವಿಸಲ್ಪಡುತ್ತಿರುವ, ರತ್ನದಂತೆ ಹೊಳೆಯು

ರತ್ನಾಕಲ್ಪಂ ವಿಭುಂ ಧ್ಯಾತ್ವಾ ವರ್ಣಲಕ್ಷಂ ಜಪೇನ್ಮನುಂ ।
ಯದ್ವಾ ಸ್ಮರಾದಿಮಂತ್ರಾಣಾಂ ಜಯಾಭಂ ಚ ಹರಿಂ ಸ್ಮರೇತ್ ॥ ೬೨ ॥

ಯಜನಂ ಕಾಮ್ಯಕರ್ಮಾಣಿ ಸರ್ವಂ ಕುರ್ಯಾತ್ ಷಡರ್ಣವತ್ ।
ರಾಮಶ್ಚ ಚಂದ್ರಭದ್ರಾಂತೌ ಙೇನಮೋಂತೌ ಧ್ರುವಾದಿಕೌ ॥ ೬೩ ॥

ಮಂತ್ರಾವಷ್ಟಾಕ್ಷರೌ ಹ್ಯೇತೌ ತಾರಾಂತ್ಯೌ ಚೇನ್ನವಾಕ್ಷರೌ ।
ಏತೇಷಾಂ ಯಜನಂ ಸರ್ವಂ ಕುರ್ಯಾನ್ಮಂತ್ರೀ ಷಡರ್ಣವತ್ ॥ ೬೪ ॥

ಜಾನಕೀವಲ್ಲಭೋ ಙೇಂತೋ ದ್ವಿಠಾಂತಃ ಕವಚಾದಿಕಃ ।
ದಶಾರ್ಣೋಽಯಂ ಮಹಾಮಂತ್ರೋ ವಸಿಷ್ಠೋಽಸ್ಯ ಮುನಿರ್ವಿರಾಟ್ ॥ ೬೫ ॥

ಛಂದಶ್ಚ ದೇವತಾ ಸೀತಾಪತಿರ್ಬೀಜಂ ತಥಾದಿಮಂ ।
ಸ್ವಾಹಾ ಶಕ್ತಿಶ್ಚ ಕಾಮೇನ ಕುರ್ಯಾದಂಗಾನಿ ಷಟ್ಕ್ರಮಾತ್ ॥ ೬೬ ॥

---

ತ್ತಿರುವ, ಕ್ರೀಡಾದಿ ಗುಣವಿಶಿಷ್ಟನಾದ ಸ್ವಾಮಿಯನ್ನು ಧ್ಯಾನಿಸಬೇಕು. ಅಥವಾ ಕಾಮಬೀಜಾದಿ ಮಂತ್ರಗಳಿಗೆ ಜಯಾಯುಕ್ತನಾದ ಹರಿಯನ್ನು ಧ್ಯಾನಿಸಬೇಕು.

೬೨-೬೩. ಧ್ಯಾನಿಸಿದ ಬಳಿಕ ಈ ಮಂತ್ರವನ್ನು ಆರು ಲಕ್ಷ ಜಪಿಸಬೇಕು. ಹೋಮ, ಪೂಜೆ, ಇಷ್ಟಸಿದ್ಧಿಗಾಗಿ ಮಾಡಬೇಕಾದ ಪ್ರಯೋಗಭೇದ ಇವುಗಳನ್ನು ಷಡಕ್ಷರಮಂತ್ರದಲ್ಲಿ ಹೇಳಿರುವಂತೆ ಆಚರಿಸಬೇಕು.

೬೩-೬೪. "ಓಂ ರಾಮಚಂದ್ರಾಯ ನಮಃ, ಓಂ ರಾಮಭದ್ರಾಯ ನಮಃ" ಎಂಬೀ ಎರಡೂ ಅಷ್ಟಾಕ್ಷರ ರಾಮಮಂತ್ರಗಳು. ಇವುಗಳಿಗೆ ಕೊನೆಯಲ್ಲಿ 'ಓಂ' ಕಾರವನ್ನು ಸೇರಿಸಿದರೆ ನವಾಕ್ಷರಮಂತ್ರಗಳಾಗುವುವು. ಈ ಮಂತ್ರಜಪಕರ್ತನು ಇವುಗಳ ಅಂಗವಾದ ಯಜನಾದಿಗಳೆಲ್ಲವನ್ನೂ ಷಡಕ್ಷರ ಮಂತ್ರದಂತೆ ಆಚರಿಸಬೇಕು.

೬೫-೬೬. "ಹುಂ ಜಾನಕೀವಲ್ಲಭಾಯ ಸ್ವಾಹಾ" ಇದು ದಶಾಕ್ಷರ ರಾಮಮಂತ್ರವು. ಇದಕ್ಕೆ ವಸಿಷ್ಠನು ಋಷಿ, ವಿರಾಟ್ ಛಂದಸ್ಸು, ಸೀತಾಪತಿಯೇ ದೇವತೆ, ಆದ್ಯಾಕ್ಷರವೇ ಬೀಜ, "ಸ್ವಾಹಾ" ಎಂಬುದು ಶಕ್ತಿ, ಷಡ್ದೀರ್ಘಯುಕ್ತವಾದ ಕಾಮಬೀಜಾಕ್ಷರದಿಂದ ಷಡಂಗನ್ಯಾಸಮಾಡಬೇಕು.

**ಶಿರೋಲಲಾಟಭ್ರೂಮಧ್ಯತಾಲುಕಂಠೇಷು ಹೃದ್ಯಪಿ ।**
**ನಾಭ್ಯಧೋಜಾನುಪಾದೇಷು ದಶಾರ್ಣಾನ್ವಿನ್ಯಸೇನ್ಮನೋಃ** || ೬೭ ||

**ಅಯೋಧ್ಯಾನಗರೇ ರತ್ನಚಿತ್ರಸೌವರ್ಣಮಂಡಪೇ ।**
**ಮಂದಾರಪುಷ್ಪೈರಾಬದ್ಧವಿತಾನೇ ತೋರಣಾನ್ವಿತೇ** || ೬೮ ||

**ಸಿಂಹಾಸನಸಮಾಸೀನಂ ಪುಷ್ಪಕೋಪರಿ ರಾಘವಂ ।**
**ರಕ್ಷೋಭಿರ್ಹರಿಭಿರ್ದೇವೈಸ್ಸವಿಮಾನಗತೈಃ ಶುಭೈಃ** || ೬೯ ||

**ಸಂಸ್ತೂಯಮಾನಂ ಮುನಿಭಿಃ ಪ್ರಹ್ವೈಶ್ಚ ಪರಿಸೇವಿತಂ ।**
**ಸೀತಾಲಂಕೃತವಾಮಾಂಗಂ ಲಕ್ಷ್ಮಣೇನೋಪಶೋಭಿತಂ** || ೭೦ ||

**ಶ್ಯಾಮಂ ಪ್ರಸನ್ನವದನಂ ಸರ್ವಾಭರಣಭೂಷಿತಂ ।**
**ಏವಂ ಧ್ಯಾತ್ವಾ ಜಪೇನ್ಮಂತ್ರೀ ವರ್ಣಲಕ್ಷಂ ಸಮಾಹಿತಃ** || ೭೧ ||

---

೬೭. ತಲೆ, ಹಣೆ, ಹುಬ್ಬುಗಳ ಮಧ್ಯ, ದವಡೆ, ಕುತ್ತಿಗೆ, ಹೃದಯ, ಹೊಕ್ಕಳು, ಗುಹ್ಯ, ಮೊಣಕಾಲು, ಪಾದ ಈ ಅಂಗಗಳಲ್ಲಿ ಮಂತ್ರದ ಹತ್ತು ವರ್ಣಗಳನ್ನು ನ್ಯಾಸಮಾಡಬೇಕು.

೬೮-೭೧. ಅಯೋಧ್ಯಾಪಟ್ಟಣದಲ್ಲಿ ರತ್ನಗಳಿಂದ ಚಿತ್ರಿಸಲ್ಪಟ್ಟಿರುವ ಸ್ವರ್ಣಮಂಟಪದಲ್ಲಿ ಮಂದಾರಪುಷ್ಪಗಳಿಂದ ಕಟ್ಟಲ್ಪಟ್ಟ ವಿತಾನ, ತೋರಣಗಳಿಂದ ಯುಕ್ತವಾದ ಪುಷ್ಪಕವಿಮಾನದಲ್ಲಿನ ಸಿಂಹಾಸನದಲ್ಲಿ ಕುಳಿತಿರುವ, ರಾಕ್ಷಸರು ಮತ್ತು ಕಪಿಗಳಿಂದಲೂ, ವಿಮಾನಸ್ಥರಾದ ದೇವತೆಗಳಿಂದಲೂ ಸಹ ಮಂಗಳ ಪಾಠಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುತ್ತಿರುವ, ನಮ್ರರಾದ ಮುನಿಗಳಿಂದ ಪರಿಸೇವಿತನಾದ, ಸೀತಾದೇವಿಯಿಂದ ಅಲಂಕೃತವಾದ ಎಡ ಭಾಗದ ಅವಯವಗಳುಳ್ಳ, ಲಕ್ಷ್ಮಣನಿಂದ ವಿರಾಜಮಾನನಾದ, ಶ್ಯಾಮ ವರ್ಣನು, ಪ್ರಸನ್ನಮುಖನು ಮತ್ತು ಸಮಸ್ತಾಭರಣಗಳಿಂದ ಅಲಂಕೃತನೂ ಆಗಿರುವ ಶ್ರೀರಾಮನನ್ನು ಧ್ಯಾನಿಸಬೇಕು.

ದಶಾಂಶಃ ಕಮಲೈರ್ಹೋಮೋ ಯಜನಂ ಚ ಷಡರ್ಣವತ್ ।
ರಾಮೋ ಙೇಂತೋ ಧನುಷ್ಪಾಣಿ ರ್ಙೇಂತೋಂತೇ ವಹ್ನಿಸುಂದರೀ ॥೭೨॥

ದಶಾಕ್ಷರೋಽಯಂ ಮಂತ್ರೋಽಸ್ಯ ಮುನಿರ್ಬ್ರಹ್ಮಾ ವಿರಾಟ್ಛನಃ ।
ಛಂದಸ್ತು ದೇವತಾ ಪ್ರೋಕ್ತೋ ರಾಮೋ ರಾಕ್ಷಸಮರ್ದನಃ ॥ ೭೩ ॥

ಆದ್ಯಂ ಬೀಜಂ ದ್ವಿಠಃ ಶಕ್ತಿರ್ಬೀಜೇನಾಂಗಾನಿ ಕಲ್ಪಯೇತ್ ।
ವರ್ಣನ್ಯಾಸಂ ತಥಾ ಧ್ಯಾನಂ ಪುರಶ್ಚರ್ಯಾರ್ಚನಾದಿಕಂ ॥ ೭೪ ॥

ದಶಾಕ್ಷರೋಕ್ತವತ್ಕುರ್ಯಾಚ್ಚಾಪಬಾಣಧರಂ ಸ್ಮರೇತ್ ।
ತಾರೋ ನಮೋ ಭಗವತೇ ರಾಮಾಂತೇ ಚಂದ್ರಭದ್ರಕೌ ॥ ೭೫ ॥

ಙೇಂತಾವರ್ಕಾಕ್ಷರೌ ಮಂತ್ರೌ ಋಷಿಧ್ಯಾನಾದಿಪೂರ್ವವತ್ ।
ಶ್ರೀಪೂರ್ವಂ ಜಯಪೂರ್ವಂ ಚ ತದ್ದ್ವಿಧಾ ರಾಮನಾಮ ಚ ॥ ೭೬ ॥

---

೭೧-೭೨. ಈ ಪ್ರಕಾರವಾಗಿ ಧ್ಯಾನಿಸಿ, ಮಂತ್ರಿಯು ಸಮಾಧಾನಚಿತ್ತದಿಂದ ಈ ಮಂತ್ರವನ್ನು ಆರು ಲಕ್ಷ ಜಪಮಾಡಬೇಕು. ಕಮಲಪುಷ್ಪಗಳಿಂದ ಜಪದ ಹತ್ತನೆಯ ಒಂದು ಭಾಗದಷ್ಟು ಹೋಮಮಾಡಬೇಕು. ಷಡಕ್ಷರಮಂತ್ರದಂತೆ ಪೂಜಾದಿಗಳನ್ನು ಆಚರಿಸಬೇಕು.

೭೨-೭೩. (ವಹ್ನಿಸುಂದರೀ = ಸ್ವಾಹಾ) "ರಾಮಾಯ ಧನುಷ್ಪಾಣಯೇ ಸ್ವಾಹಾ" ಇದು ದಶಾಕ್ಷರಮಂತ್ರವು. ಇದಕ್ಕೆ ಬ್ರಹ್ಮನು ಋಷಿ, ವಿರಾಟ್ ಛಂದಸ್ಸು, ರಾಕ್ಷಸಮರ್ದನರಾಮನೇ ದೇವತೆ.

೭೪-೭೫. ಮೊದಲನೆಯ ಅಕ್ಷರವೇ ಬೀಜ, 'ಸ್ವಾಹಾ' ಎಂಬುದೇ ಶಕ್ತಿ, ಬೀಜಾಕ್ಷರದಿಂದ ಅಂಗನ್ಯಾಸಮಾಡಬೇಕು. ವರ್ಣನ್ಯಾಸ, ಧ್ಯಾನ, ಪುರಶ್ಚರಣ, ಪೂಜೆ ಮುಂತಾದುವನ್ನು ಪೂರ್ವೋಕ್ತವಾದ ದಶಾಕ್ಷರಮಂತ್ರದಂತೆ ಆಚರಿಸಬೇಕು. ಈ ಮಂತ್ರದಲ್ಲಿ ಧನುರ್ಬಾಣಧಾರಿಯಾದ ರಾಮನನ್ನು ಧ್ಯಾನಿಸಬೇಕು.

೭೫-೭೬. "ಓಂ ನಮೋ ಭಗವತೇ ರಾಮಚಂದ್ರಾಯ, ಓಂ ನಮೋ ಭಗವತೇ ರಾಮಭದ್ರಾಯ" ಎಂಬಿವೆರಡೂ ಹನ್ನೆರಡು ಅಕ್ಷರಗಳುಳ್ಳ ಮಂತ್ರಗಳು. ಇವಕ್ಕೆ ಋಷಿ, ಧ್ಯಾನ ಮುಂತಾದುವನ್ನು ಹಿಂದಿನಂತೆಯೇ ಆಚರಿಸಬೇಕು.

ತ್ರಯೋದಶಾಕ್ಷರೋ ಮಂತ್ರೋ ಮುನಿರ್ಬ್ರಹ್ಮಾ ವಿರಾಟ್ ಸ್ಮೃತಂ ।
ಛಂದಸ್ತು ದೇವತಾ ಪ್ರೋಕ್ತೋ ರಾಮಃ ಪಾಪೌಘನಾಶನಃ ॥ ೭೭ ॥

ಷಡಂಗಾನಿ ಪ್ರಕುರ್ವೀತ ದ್ವಿರಾವೃತ್ಯಾ ಪದತ್ರಯೈಃ ।
ಧ್ಯಾನಾರ್ಚನಾದಿಕಂ ಸರ್ವಂ ಯಸ್ಯ ಕುರ್ಯಾದ್ದಶಾರ್ಣವತ್ ॥ ೭೮ ॥

ತಾರೋ ನಮೋ ಭಗವತೇ ರಾಮಾಯಾಂತೇ ಮಹಾಪದಂ ।
ಪುರುಷಾಯ ಹೃದಂತೋಽಯಂ ಮನುರಷ್ಟಾದಶಾಕ್ಷರಃ ॥ ೭೯ ॥

ವಿಶ್ವಾಮಿತ್ರೋ ಮುನಿಶ್ಛಂದೋ ಧೃತೀ ರಾಮೋಽಸ್ಯ ದೇವತಾ ।
ತಾರೋ ಬೀಜಂ ನಮಃ ಶಕ್ತಿಶ್ಚಂದ್ರಾಕ್ಷ್ಯಬ್ಧ್ಯಗ್ನಿಷಡ್ಭುಜೈಃ ॥ ೮೦ ॥

ವರ್ಣೈರ್ಮಂತ್ರೋತ್ಥಿತೈಃ ಕುರ್ಯಾತ್ ಷಡಗಾನಿ ಸಮಾಹಿತಃ ।
ನಿಕ್ವಾಣಭೇರೀಪಟಹಶಂಖತೂರ್ಯಾದಿನಿಸ್ಸ್ವನೈಃ ॥ ೮೧ ॥

---

೭೬-೭೭. ಈ ಮಂತ್ರಗಳಲ್ಲಿ ಸೇರಿರುವ 'ರಾಮ' ಎಂಬ ನಾಮವು ಶ್ರೀ ಪೂರ್ವಕ= ಶ್ರೀರಾಮ, ಜಯ ಪೂರ್ವಕ= ಜಯರಾಮ ಎಂಬುದಾಗಿ ಎರಡು ವಿಧವಾಗಿದೆ. ಈ ಮಂತ್ರದಲ್ಲಿ "ಶ್ರೀರಾಮ" ಎಂಬುದನ್ನು ಸೇರಿಸಿದರೆ ಈ ಮಂತ್ರವೇ ಹದಿಮೂರು ಅಕ್ಷರಗಳುಳ್ಳದಾಗುತ್ತದೆ. ಆ ಮಂತ್ರಕ್ಕೆ ಬ್ರಹ್ಮನು ಋಷಿ, ವಿರಾಟ್ ಛಂದಸ್ಸು, ಪಾಪಪುಂಜನಾಶಕನಾದ ರಾಮನೇ ದೇವತೆಯು.

೭೮. ಈ ಮಂತ್ರದಲ್ಲಿನ ಮೂರು ಪದಗಳನ್ನೂ ಎರಡಾವರ್ತಿ ಹೇಳಿಕೊಂಡು ಹೃದಯಾದಿ ಷಡಂಗಗಳನ್ನು ನ್ಯಾಸಮಾಡಬೇಕು. ಇದಕ್ಕೆ ಅಂಗವಾದ ಧ್ಯಾನ, ಪೂಜೆ ಮುಂತಾದುವೆಲ್ಲವನ್ನೂ ದಶಾಕ್ಷರಮಂತ್ರದಂತೆ ಆಚರಿಸಬೇಕು.

೭೯. "ಓಂ ನಮೋ ಭಗವತೇ ರಾಮಾಯ ಮಹಾಪುರುಷಾಯ ನಮಃ" ಇದು ಹದಿನೆಂಟು ಅಕ್ಷರಗಳುಳ್ಳ ರಾಮಮಂತ್ರವು.

೮೦-೮೧. ಈ ಮಂತ್ರಕ್ಕೆ ವಿಶ್ವಾಮಿತ್ರನು ಋಷಿ, ಧೃತಿ ಛಂದಸ್ಸು, ರಾಮನೇ ದೇವತೆ, 'ಓಂ'ಕಾರವೇ ಬೀಜ, 'ನಮಃ' ಎಂಬುದೇ ಶಕ್ತಿ.

ಪ್ರವೃತ್ತನೃತ್ಯೇ ಪರಿತೋ ಜಯಮಂಗಲಭಾಷಿತೇ |
ಚಂದನಾಗರುಕಸ್ತೂರೀಕರ್ಪೂರಾದಿಸುವಾಸಿತೇ || ೮೨ ||

ನಾನಾಕುಸುಮಸೌರಭ್ಯವಾಹಿಗಂಧವಹಾನ್ವಿತೇ |
ದೇವಗಂಧರ್ವನಾರೀಭಿರ್ಗಾಯಂತೀಭಿರಲಂಕೃತೇ || ೮೩ ||

ಸಿಂಹಾಸನೇ ಸಮಾಸೀನಂ ಪುಷ್ಪಕೋಪರಿ ರಾಘವಂ |
ಸೌಮಿತ್ರಿಸೀತಾಸಹಿತಂ ಜಟಾಮುಕುಟಶೋಭಿತಂ || ೮೪ ||

ಚಾಪಬಾಣಧರಂ ಶ್ಯಾಮಂ ಸಸುಗ್ರೀವವಿಭೀಷಣಂ |
ಹತ್ವಾ ರಾವಣಮಾಯಾಂತಂ ಕೃತತ್ರೈಲೋಕ್ಯರಕ್ಷಣಂ || ೮೫ ||

ಏವಂ ಧ್ಯಾತ್ವಾ ಜಪೇದ್ವರ್ಣಲಕ್ಷಂ ಮಂತ್ರೀ ದಶಾಂಶತಃ |
ಘೃತಾಕ್ತೈಃ ಪಾಯಸೈರ್ಹುತ್ವಾ ಯಜನಂ ಪೂರ್ವವಚ್ಚರೇತ್ || ೮೬ ||

---

ಕ್ರಮವಾಗಿ ಈ ಮಂತ್ರದ 1, 2, 4, 3, 6, 2 ವರ್ಣಗಳಿಂದ ಷಡಂಗಗಳನ್ನು ಸಮಾಧಾನಮನಸ್ಕನಾಗಿ ನ್ಯಾಸಮಾಡಬೇಕು.

೮೧-೮೫. ವೀಣೆ, ನಗಾರಿ, ಢಕ್ಕೆ, ಶಂಖ ಮತ್ತು ತುರ್ಯಗಳ ಧ್ವನಿಗಳ ಸಹಿತವಾಗಿ ಮಾಡುತ್ತಿರುವ ನರ್ತನವುಳ್ಳ, ಸುತ್ತಲೂ ಜಯ, ಮಂಗಳ ಎಂಬ ಘೋಷಯುಕ್ತವಾದ, ಗಂಧ, ಅಗರು, ಕಸ್ತೂರಿ, ಕರ್ಪೂರ ಮುಂತಾದುವುಗಳ ಸುವಾಸನೆಯಿಂದ ಕೂಡಿದ, ನಾನಾವಿಧ ಪುಷ್ಪಸೌಗಂಧ್ಯವನ್ನು ವಹಿಸಿರುವ ವಾಯುಯುಕ್ತವಾದ, ಗಾನಮಾಡುತ್ತಿರುವ ದೇವಗಂಧರ್ವಸ್ತ್ರೀಯರಿಂದ ಅಲಂಕರಿಸಲ್ಪಟ್ಟಿರುವ, ಪುಷ್ಪಕವಿಮಾನದಲ್ಲಿನ ಸಿಂಹಾಸನದಲ್ಲಿ ಕುಳಿತಿರುವ, ಲಕ್ಷ್ಮಣ ಸೀತಾದೇವಿಯರಿಂದ ಸಹಿತನಾದ, ಜಟೆ, ಕಿರೀಟಗಳಿಂದ ಹೊಳೆಯುತ್ತಿರುವ, ಧನುರ್ಬಾಣಧಾರಿಯಾದ, ಶ್ಯಾಮವರ್ಣವುಳ್ಳ ಸುಗ್ರೀವವಿಭೀಷಣರಿಂದ ಯುಕ್ತನಾದ, ತ್ರಿಲೋಕರಕ್ಷಣಕಾರಿಯಾದ, ರಾವಣನನ್ನು ಸಂಹರಿಸಿ ಬರುತ್ತಿರುವ ರಾಘವನನ್ನು ಉಕ್ತಗುಣೋಪೇತನನ್ನಾಗಿ ಧ್ಯಾನಿಸಬೇಕು.

೮೬. ಈ ಮಂತ್ರವನ್ನು ನಾಲ್ಕು ಲಕ್ಷ ಜಪಮಾಡಬೇಕು. ಅನಂತರ ಅದರ ಹತ್ತನೆಯ ಒಂದು ಭಾಗದಷ್ಟು ಘೃತಮಿಶ್ರಪಾಯಸಗಳಿಂದ ಹೋಮಮಾಡಿ, ಹಿಂದೆ ಹೇಳಿದ ಪ್ರಕಾರ ಪೂಜೆಮಾಡಬೇಕು.

ಪ್ರಣವೋ ಹೃದಯಂ ಸೀತಾಪತಯೇ ತದನಂತರಂ ।
ರಾಮಾಯ ಹನಯುಗ್ಮಾಂತೇ ವರ್ಮಾಸ್ತ್ರಾಗ್ನಿಪ್ರಿಯಾಂತಿಮಃ ॥ ೮೭ ॥

ಏಕೋನವಿಂಶದ್ವರ್ಣೋಽಯಂ ಮಂತ್ರಃ ಸರ್ವಾರ್ಥಸಾಧಕಃ ।
ವಿಶ್ವಾಮಿತ್ರೋ ಮುನಿಶ್ಚಾಸ್ಯಾನುಷ್ಟುಪ್ಛಂದ ಉದಾಹೃತಂ ॥ ೮೮ ॥

ದೇವತಾ ರಾಮಭದ್ರೋ ಜಂ ಬೀಜಂ ಶಕ್ತಿರ್ನಮ ಇತಿ ।
ಮಂತ್ರೋತ್ಥೈಃ ಕ್ರಮಾದ್ವರ್ಣೈಸ್ತತೋ ಧ್ಯಾಯಾಚ್ಚ ಪೂರ್ವವತ್ ॥ ೮೯ ॥

ಪೂಜನಂ ಕಾಮ್ಯಕರ್ಮಾದಿ ಸರ್ವಮಸ್ಯ ಷಡರ್ಣವತ್ ।
ತಾರಃ ಸ್ವಬೀಜಂ ಕಮಲಾ ರಾಮಭದ್ರೇತಿ ಸಂಪಠೇತ್ ॥ ೯೦ ॥

ಮಹೇಷ್ವಾಸಪದಾಂತೇ ತು ರಘುವೀರ ನೃಪೋತ್ತಮ ।
ದಶಾಸ್ಯಾಂತಕಶಬ್ದಾಂತೇ ಮಾಂ ರಕ್ಷ ದೇಹಿ ಸಂಪಠೇತ್ ॥ ೯೧ ॥

ಪರಮಾಂತೇ ಮೇ ಶ್ರಿಯಂ ಸ್ಯಾನ್ಮಂತ್ರೋ ಬಾಣಗುಣಾಕ್ಷರಃ ।
ಬೀಜೈರ್ವಿಯುಕ್ತೋ ದ್ವಾತ್ರಿಂಶದರ್ಣೋಽಯಂ ಫಲದಾಯಕಃ ॥ ೯೨ ॥

೮೭-೮೮. "ಓಂ ನಮಃ ಸೀತಾಪತಯೇ ರಾಮಾಯ ಹನ ಹನ ಹುಂ ಫಟ್ ಸ್ವಾಹಾ" ಎಂಬುದು ಹತ್ತೊಂಬತ್ತು ವರ್ಣಗಳಿಂದ ಯುಕ್ತವಾದ ಸಕಲೇಷ್ಟದಾಯಕ ಮಂತ್ರವು.

೮೮-೯೦. ಈ ಮಂತ್ರಕ್ಕೆ ವಿಶ್ವಾಮಿತ್ರನು ಋಷಿ, ಅನುಷ್ಟುಪ್ ಛಂದಸ್ಸು, ರಾಮಭದ್ರನೇ ದೇವತೆ, 'ಜಂ' ಎಂಬುದು ಬೀಜ, 'ನಮಃ' ಎಂಬುದು ಶಕ್ತಿಯು, ಮಂತ್ರದ ಅಕ್ಷರಗಳಿಂದ ನ್ಯಾಸಮಾಡಿ ಹಿಂದಿನ ಮಂತ್ರದಂತೆ ಧ್ಯಾನಮಾಡಬೇಕು. ಪೂಜೆ, ಇಷ್ಟಸಾಧಕಪ್ರಯೋಗ ಮುಂತಾದುವೆಲ್ಲವೂ ಷಡಕ್ಷರಮಂತ್ರದಂತೆ ಆಚರಿಸಲ್ಪಡಬೇಕು.

೯೦-೯೨. ತಾರಃ= ಓಂ, ಸ್ವಬೀಜ= ರಂ, ಕಮಲಾ= ಶ್ರೀಂ, "ಓಂ ರಂ ಶ್ರೀಂ ರಾಮಭದ್ರ ಮಹೇಷ್ವಾಸ ರಘುವೀರ ನೃಪೋತ್ತಮ ದಶಾಸ್ಯಾಂತಕ ಮಾಂ ರಕ್ಷ ದೇಹಿ ಮೇ ಪರಮಾಂ ಶ್ರಿಯಂ" ಎಂಬುದು ಮೂವತ್ತೈದು ವರ್ಣಗಳುಳ್ಳ ಮಂತ್ರವು. ಇದರಲ್ಲಿ ಮೂರು ಬೀಜಾಕ್ಷರಗಳನ್ನು ಬಿಟ್ಟರೆ ಈ ಮಂತ್ರವೇ ಮೂವತ್ತೆರಡು ಅಕ್ಷರಗಳುಳ್ಳುದಾಗಿ ಸಕಲ ಇಷ್ಟಾರ್ಥಗಳನ್ನೂ ಕೊಡುತ್ತದೆ.

ವಿಶ್ವಾಮಿತ್ರೋ ಮುನಿಶ್ಛಾಸ್ಯಾನುಷ್ಟುಪ್ಛಂದ ಉದಾಹೃತಂ ।
ದೇವತಾ ರಾಮಭದ್ರೋऽತ್ರ ಬೀಜಂ ಸ್ವಂ ಶಕ್ತಿರಿಂದಿರಾ ॥ ೯೩ ॥

ಬೀಜತ್ರಯಾದ್ಯೈಃ ಕುರ್ವೀತ ಪದೈಃ ಸರ್ವೇಣ ಮಂತ್ರವಿತ್ ।
ಪಂಚಾಂಗಾನಿ ಚ ವಿನ್ಯಸ್ಯ ಮಂತ್ರವರ್ಣಾನ್ಕ್ರಮಾನ್ನ್ಯಸೇತ್ ॥ ೯೪ ॥

ಮೂರ್ಧ್ನಿ ಭಾಲೇ ದೃಶೋಃ ಶ್ರೋತ್ರೇ ಗಂಡಯುಗ್ಮೇ ಸನಾಸಿಕೇ ।
ಆಸ್ಯೇ ದೋಃಸಂಧಿಯುಗಲೇ ಸ್ತನಹೃನ್ನಾಭಿಷು ಕ್ರಮಾತ್ ॥ ೯೫ ॥

ಕಟೌ ಮೇಢ್ರೇ ಪಾಯುಪಾದಸಂಧಿಷ್ವರ್ಣಾನ್ನ್ಯಸೇನ್ಮನೋಃ ।
ಧ್ಯಾನಾರ್ಚನಾದಿಕಂ ಚಾಸ್ಯ ಪೂರ್ವವತ್ಸಮುಪಾಚರೇತ್ ॥ ೯೬ ॥

ಲಕ್ಷತ್ರಯಂ ಪುರಶ್ಚರ್ಯಾ ಪಾಯಸೈರ್ಹವನಂ ಮತಂ ।
ಧ್ಯಾತ್ವಾ ರಾಮಂ ಪೀತವರ್ಣಂ ಜಪೇಲ್ಲಕ್ಷಂ ಸಮಾಹಿತಃ ॥ ೯೭ ॥

೯೩. ಈ ಮಂತ್ರಕ್ಕೆ ವಿಶ್ವಾಮಿತ್ರನು ಋಷಿ, ಅನುಷ್ಟುಪ್ ಛಂದಸ್ಸು, ರಾಮಭದ್ರನೇ ದೇವತೆ, 'ರಂ' ಎಂಬುದು ಬೀಜ, 'ಶ್ರೀ' ಎಂಬುದು ಶಕ್ತಿ ಎಂದು ಉಕ್ತವಾಗಿದೆ.

೯೪. ಮಂತ್ರಜ್ಞಾನಿಯು ಆದಿಯಲ್ಲಿ ಮೂರು ಬೀಜಾಕ್ಷರಗಳನ್ನು ಸಂಯೋಜನೆ ಮಾಡಿ ಈ ಮಂತ್ರದಲ್ಲಿನ ಪದಗಳಿಂದ ಪ್ರತ್ಯೇಕವಾಗಿಯೂ, ಒಟ್ಟಿಗೂ ಸಹ ನ್ಯಾಸಮಾಡಬೇಕು. ಅನಂತರ ಪಂಚಾಂಗಗಳನ್ನು ನ್ಯಾಸ ಮಾಡಿ ಕ್ರಮವಾಗಿ ಮಂತ್ರದ ಅಕ್ಷರಗಳನ್ನು ನ್ಯಾಸಮಾಡಬೇಕು.

೯೫-೯೬. ಶಿರಸ್ಸು, ಹಣೆ, ಎರಡು ಕಣ್ಣುಗಳು, ಕಿವಿಗಳೆರಡು, ಗಂಡ ಸ್ಥಲಗಳೆರಡು, ಮೂಗು, ಬಾಯಿ, ಬಾಹುಸಂಧಿಗಳೆರಡು, ಸ್ತನ, ಹೃದಯ, ನಾಭಿ, ಕಟಿ, (ನಡುವು) ಶಿಶ್ನ, ಪಾಯು, ಪಾದಗಳ ಸಂಧಿಪ್ರದೇಶ ಈ ಅಂಗ ಗಳಲ್ಲಿ ಮಂತ್ರವರ್ಣಗಳನ್ನು ಕ್ರಮವಾಗಿ ನ್ಯಾಸಮಾಡಬೇಕು. ಈ ಮಂತ್ರಾಂಗ ವಾದ ಧ್ಯಾನ, ಪೂಜೆ, ಮುಂತಾದುವನ್ನೂ ಹಿಂದಿನಂತೆಯೇ ಆಚರಿಸಬೇಕು.

೯೭-೯೮. ಮೂರು ಲಕ್ಷಪುರಶ್ಚರಣ ಮತ್ತು ಪಾಯಸಹೋಮವೂ ವಿಹಿತ ವಾಗಿದೆ. ಪೀತವರ್ಣವಿಶಿಷ್ಟನಾದ ರಾಮನನ್ನು ಧ್ಯಾನಿಸಿ, ಸಮಾಧಾನಚಿತ್ತ

ದಶಾಂಶಂ ಕಮಲೈರ್ಹುತ್ವಾ ಧನೈರ್ಧನಪತಿರ್ಭವೇತ್ ।
ತಾರೋ ಮಾಯಾರಮಾದ್ವಂದ್ವಂ ದಾಶರಥಾಯ ಹೃಚ್ಚ ನ್ವೈ ॥ ೯೮ ॥

ಏಕಾದಶಾಕ್ಷರೋ ಮಂತ್ರೋ ಮುನ್ಯಾದ್ಯರ್ಚಾಸ್ಯ ಪೂರ್ವವತ್ ।
ತ್ರೈಲೋಕ್ಯಾಂತೇ ತು ನಾಥಾಯ ಹೃದಂತೋ ವಸುವರ್ಣವಾನ್ ॥ ೯೯ ॥

ಅಸ್ಯಾಪಿ ಪೂರ್ವವತ್ಸರ್ವಂ ನ್ಯಾಸಧ್ಯಾನಾರ್ಚನಾದಿಕಂ ।
ಆಂಜನೇಯ ಪದಾಂತೇ ತು ಗುರವೇ ಹೃದಯಾಂತಿಮಃ ॥ ೧೦೦ ॥

ಮಂತ್ರೋ ನವಾಕ್ಷರೋಽಸ್ಯಾಪಿ ಯಜನಂ ಪೂರ್ವವನ್ಮತಂ ।
ಜೇಂತಂ ರಾಮಪದಂ ಪಶ್ಚಾದ್ಧೃದಯಂ ಪಂಚವರ್ಣವತ್ ॥ ೧೦೧ ॥

ಮುನಿಧ್ಯಾನಾರ್ಚನಂ ಚಾಸ್ಯ ಪ್ರೋಕ್ತಂ ಸರ್ವಂ ಷಡರ್ಣವತ್ ।
ರಾಮಾಂತೇ ಚಂದ್ರಭದ್ರೌ ಚ ಜೇಂತೌ ಪಾವಕವಲ್ಲಭಾ ॥ ೧೦೨ ॥

ದಿಂದ ಈ ಮಂತ್ರವನ್ನು ಒಂದು ಲಕ್ಷ ಜಪಮಾಡಬೇಕು. ಅದರ ಹತ್ತನೆಯ ಒಂದು ಭಾಗದಷ್ಟು ಕಮಲಪುಷ್ಪಗಳಿಂದ ಹೋಮಮಾಡಿದರೆ ಐಶ್ವರ್ಯದಲ್ಲಿ ಕುಬೇರನಿಗೆ ಸಮನಾಗುವನು.

೯೮-೯೯. ತಾರಃ= ಓಂ, ಮಾಯಾ= ಹ್ರೀಂ, ರಮಾ= ಶ್ರೀಂ, "ಓಂ ಹ್ರೀಂ ಶ್ರೀಂ ಶ್ರೀಂ ದಾಶರಥಯೇ ನಮಃ" ಇದು ಹನ್ನೊಂದು ಅಕ್ಷರಗಳ ಮಂತ್ರವು. ಇದಕ್ಕೆ ಋಷಿ ಮುಂತಾದುವನ್ನೂ ಪೂಜೆಯನ್ನೂ ಸಹ ಹಿಂದಿನ ಮಂತ್ರದಂತೆ ತಿಳಿಯಬೇಕು.

೯೯-೧೦೦. "ತ್ರೈಲೋಕ್ಯನಾಥಾಯ ನಮಃ" ಎಂಬುದೊಂದು ಅಷ್ಟಾಕ್ಷರ ಮಂತ್ರವು. ಇದಕ್ಕೂ ನ್ಯಾಸ, ಧ್ಯಾನ, ಪೂಜೆ ಮುಂತಾದುವೆಲ್ಲ ವನ್ನೂ ಪೂರ್ವದಂತೆ ಆಚರಿಸಬೇಕು.

೧೦೦-೧೦೧. "ಆಂಜನೇಯ ಗುರವೇ" ನಮಃ" ಇದು ನವಾಕ್ಷರ ಮಂತ್ರವು. ಇದಕ್ಕೂ ಪೂಜಾದಿಗಳು ಹಿಂದಿನಂತೆ ಕರ್ತವ್ಯ.

೧೦೧-೧೦೨. "ರಾಮಾಯ ನಮಃ" ಇದು ಪಂಚಾಕ್ಷರ ರಾಮ ಮಂತ್ರವು. ಇದಕ್ಕೆ ಋಷಿ, ಧ್ಯಾನ, ಪೂಜೆ ಇವುಗಳೆಲ್ಲವೂ ಷಡಕ್ಷರ ರಾಮ ಮಂತ್ರದಂತೆ ಉಕ್ತವಾಗಿದೆ.

ಮಂತ್ರೌ ದ್ವೌ ಚ ಸಮಾಖ್ಯಾತೌ ಮುನ್ಯಾದ್ಯರ್ಚಾದಿ ಪೂರ್ವವತ್ ।
ವಹ್ನಿಃ ಶೇಷಾನ್ವಿತಶ್ಚೈವ ಚಂದ್ರಭೂಷಿತಮಸ್ತಕಃ ॥ ೧೦೩ ॥

ಏಕಾಕ್ಷರೋ ರಘುಪತೇರ್ಮಂತ್ರಃ ಕಲ್ಪದ್ರುಮೋಽಪರಃ ।
ಬ್ರಹ್ಮಾ ಮುನಿಃ ಸ್ಯಾದ್ಗಾಯತ್ರೀಛಂದೋ ರಾಮೋಽಸ್ಯ ದೇವತಾ॥ ೧೦೪ ॥

ಷಡ್ದೀರ್ಘಾಢ್ಯೇನ ಮಂತ್ರೇಣ ಷಡಂಗಾನಿ ಸಮಾಚರೇತ್ ।
ಸರಯೂತೀರಮಂದಾರವೇದಿಕಾ ಪಂಕಜಾಸನೇ ॥ ೧೦೫ ॥

ಶ್ಯಾಮಂ ವೀರಾಸನಾಸೀನಂ ಜ್ಞಾನಮುದ್ರೋಪಶೋಭಿತಂ ।
ವಾಮೋರುನ್ಯಸ್ತತದ್ಧಸ್ತಂ ಸೀತಾಲಕ್ಷ್ಮಣಸಂಯುತಂ ॥ ೧೦೬ ॥

ಅವೇಕ್ಷಮಾಣಮಾತ್ಮಾನಂ ಮನ್ಮಥಾಮಿತತೇಜಸಂ ।
ಶುದ್ಧಸ್ಫಟಿಕಸಂಕಾಶಂ ಕೇವಲಂ ಮೋಕ್ಷಕಾಂಕ್ಷಯಾ ॥ ೧೦೭ ॥

---

೧೦೨-೧೦೩. (ಪಾವಕವಲ್ಲಭಾ = ಸ್ವಾಹಾ) "ರಾಮಚಂದ್ರಾಯ ಸ್ವಾಹಾ, ರಾಮಭದ್ರಾಯ ಸ್ವಾಹಾ' ಈ ರೀತಿ ಎರಡು ಮಂತ್ರಗಳು ಉಕ್ತವಾಗಿವೆ. ಇವುಗಳಿಗೂ ಹಿಂದಿನಂತೆಯೇ ಋಷ್ಯಾದಿ, ಪೂಜೆವಿಧಾನಗಳನ್ನು ಆಚರಿಸಬೇಕು.

೧೦೩-೧೦೫. (ವಹ್ನಿಃ= ರ, ಶೇಷ= ಆ, ಚಂದ್ರ= ಂ) "ರಾಂ" ಇದು ಏಕಾಕ್ಷರ ರಘುಪತಿಮಂತ್ರವು. ಇದು ಕಲ್ಪವೃಕ್ಷದಂತೆ ಇಷ್ಟಾರ್ಥಪ್ರದವು. ಇದಕ್ಕೆ ಬ್ರಹ್ಮನು ಋಷಿ, ಗಾಯತ್ರಿಯೇ ಛಂದಸ್ಸು, ರಾಮನೇ ದೇವತೆಯು. 'ರಾಂ ರೀಂ ರೂಂ' ಇತ್ಯಾದಿ ಷಡ್ದೀರ್ಘಯುಕ್ತ ಮಂತ್ರದಿಂದ ಷಡಂಗ ನ್ಯಾಸವನ್ನಾಚರಿಸಬೇಕು.

೧೦೫-೧೦೭. ಸರಯೂನದಿಯ ತೀರದಲ್ಲಿರುವ ಮಂದಾರವೇದಿಕೆಯಲ್ಲಿನ ಪದ್ಮಾಸನದಲ್ಲಿ ವೀರಾಸನದಿಂದ ಕುಳಿತಿರುವ, ಶಾಮವರ್ಣವುಳ್ಳ, ಜ್ಞಾನಮುದ್ರೆಯಿಂದ ಅಲಂಕೃತವಾದ ಹಸ್ತವುಳ್ಳ, ಎಡತೊಡೆಯ ಮೇಲೆ ಎಡಗೈಯನ್ನು ಇಟ್ಟುಕೊಂಡಿರುವ, ಸೀತಾದೇವಿ ಮತ್ತು ಲಕ್ಷ್ಮಣರಿಂದ ಸಹಿತನಾದ,

ಚಿಂತಯೇತ್ಪರಮಾತ್ಮಾನಂ ಋತುಲಕ್ಷಂ ಜಪೇನ್ಮನುಂ ।
ಸರ್ವಂ ಷಡರ್ಣವಚ್ಚಾಸ್ಯ ಹೋಮನಿತ್ಯಾರ್ಚನಾದಿಕಂ ॥ ೧೦೮ ॥

ವಹ್ನಿಃ ಶೇಷಾಸನೋ ಮಾಂತಃ ಕೇವಲೋದ್ವ್ಯಕ್ಷರೋ ಮನುಃ ।
ಏಕಾಕ್ಷರೋಕ್ತವತ್ಸರ್ವಂ ಮುನಿಧ್ಯಾನಾರ್ಚನಾದಿಕಂ ॥ ೧೦೯ ॥

ತಾರಮಾಯಾರಮಾನಂಗ ಅಸ್ತ್ರಬೀಜೈರ್ದ್ವಿವರ್ಣಕಃ ।
ತ್ರ್ಯಕ್ಷರೋ ಮಂತ್ರರಾಜಃ ಸ್ಯಾತ್ ಷಡ್ವಿಧಃ ಸಕಲೇಷ್ಟದಃ ॥ ೧೧೦ ॥

ದ್ವ್ಯಕ್ಷರಶ್ಚಂದ್ರಭದ್ರಾಂತೋ ದ್ವಿವಿಧಶ್ಚತುರಕ್ಷರಃ ।
ಏಕಾರ್ಣೋಕ್ತವದೇತೇಷಾಂ ಮುನಿಧ್ಯಾನಾರ್ಚನಾದಿಕಂ ॥ ೧೧೧ ॥

---

ಜಾನಕಿಯ ದೃಷ್ಟಿಪಾತಕ್ಕೀಡಾಗಿರುವ, ಮನ್ಮಥನಂತೆ ಅಪರಿಮಿತತೇಜಸ್ವಿಯಾದ, ನಿರ್ಮಲಸ್ಫಟಿಕದಂತೆ ಹೊಳೆಯುತ್ತಿರುವ, ಪರಮಾತ್ಮನನ್ನು ಕೇವಲ ಮೋಕ್ಷಾಭಿಲಾಷೆಯಿಂದ ಧ್ಯಾನಿಸಬೇಕು.

೧೦೮. ಅನಂತರ ಮಂತ್ರವನ್ನು ಆರು ಲಕ್ಷ ಜಪಿಸಬೇಕು. ಈ ಮಂತ್ರಕ್ಕೆ ಹೋಮ, ನಿತ್ಯಾರ್ಚನೆ ಮುಂತಾದ ಅಂಗವೆಲ್ಲವನ್ನೂ ಷಡಕ್ಷರ ಮಂತ್ರದಂತೆ ಆಚರಿಸಬೇಕು.

೧೦೯. "ರಾಮ" ಎಂಬುದು ಎರಡು ಅಕ್ಷರಗಳುಮಾತ್ರವಿರುವ ರಾಮಮಂತ್ರವು ಇದಕ್ಕೂ ಏಕಾಕ್ಷರಮಂತ್ರಕ್ಕೆ ಹೇಳಿರುವಂತೆ ಮುನಿ, ಧ್ಯಾನ, ಅರ್ಚನೆ ಮುಂತಾದುವುಗಳೆಲ್ಲವನ್ನೂ ಆಚರಿಸಬೇಕು.

೧೧೦. ಈ ದ್ವ್ಯಕ್ಷರಮಂತ್ರವು 'ಓಂ, ಹ್ರೀಂ, ಶ್ರೀಂ, ಕ್ಲೀಂ, ಫಟ್, ರಂ' ಎಂಬಿವುಗಳಲ್ಲಿ ಒಂದೊಂದರಿಂದ ಕೂಡಿ ಆರು ವಿಧವಾದ ತ್ರ್ಯಕ್ಷರಮಂತ್ರವಾಗುವುದು. ಇದು ಮಂತ್ರೋತ್ತಮ ಮತ್ತು ಸಕಲೇಷ್ಟಾರ್ಥಪ್ರದವು.

೧೧೧. ದ್ವ್ಯಕ್ಷರಮಂತ್ರವು 'ಚಂದ್ರ, ಭದ್ರ' ಎಂಬ ಪದಸಹಿತವಾಗಿ ಎರಡು ವಿಧವಾದ ಚತುರಕ್ಷರ ಮಂತ್ರವಾಗುವುದು. "ರಾಮಚಂದ್ರ, ರಾಮಭದ್ರ" ಇವೇ ಆ ಮಂತ್ರಗಳು. ಇವಕ್ಕೆ ಏಕಾಕ್ಷರಮಂತ್ರಕ್ಕೆ ವಿಹಿತವಾಗಿರುವಂತೆ ಮುನಿ, ಧ್ಯಾನ, ಪೂಜೆ ಮುಂತಾದುವು ಅನುಷ್ಠೇಯವು.

ತಾರೋ ರಾಮಶ್ಚತುರ್ಥ್ಯಂತೋ ವರ್ಮಾಸ್ತ್ರಂ ವಹ್ನಿವಲ್ಲಭಾ ।
ಅಷ್ಟಾರ್ಣೋಽಯಂ ಮಹಾಮಂತ್ರೋ ಮುನ್ಯಾದ್ಯರ್ಚಾ ಷಡಂಗವತ್
ತಾರೋ ಮಾಯಾ ಹೃದಂತೇ ಸ್ಯಾದ್ರಾಮಾಯ ಪ್ರಣವಾಂತಿಮಃ ।
ಶಿವೋಮಾರಾಮಮಂತ್ರೋಯಮಷ್ಟಾರ್ಣಃ ಸರ್ವಸಿದ್ಧಿದಃ ॥ ೧೧೩ ॥

ಋಷಿಃ ಸದಾಶಿವಃ ಪ್ರೋಕ್ತೋ ಗಾಯತ್ರೀಛಂದ ಈರಿತಂ ।
ಶಿವೋಮಾರಾಮಚಂದ್ರೋಽತ್ರ ದೇವತಾ ಪರಿಕೀರ್ತಿತಃ ॥ ೧೧೪ ॥

ಷಡ್ದೀರ್ಘಯಾ ಮಾಯಯಾ ತು ಧ್ರುವಂ ಪಂಚಾರ್ಣಯುಕ್ತಯಾ ।
ಷಡಂಗಾನಿ ವಿಧಾಯಾಥ ಧ್ಯಾಯೇದ್ಧೃದಿ ಸುರಾರ್ಚಿತಂ ೧೧೫ ॥

ರಾಮಂ ತ್ರಿನೇತ್ರಂ ಸೋಮಾರ್ಧಧಾರಿಣಂ ಶೂಲಿನಂ ವರಂ ।
ಭಸ್ಮೋದ್ಧೂಲಿತಸರ್ವಾಂಗಂ ಕಪರ್ದಿನಮುಪಾಸ್ಮಹೇ ॥ ೧೧೬ ॥

---

೧೧೨. "ಓಂ ರಾಮಾಯ ಹುಂ ಫಟ್ ಸ್ವಾಹಾ" ಇದು ಅಷ್ಟಾಕ್ಷರ ಮಹಾಮಂತ್ರ. ಇದಕ್ಕೆ ಋಷ್ಯಾದಿಗಳು ಪೂಜೆ ಮುಂತಾದುವೆಲ್ಲವನ್ನೂ ಷಡಕ್ಷರಮಂತ್ರವಿಧಾನದಂತೆ ತಿಳಿಯಬೇಕು.

೧೧೩. "ಓಂ ಹ್ರೀಂ ನಮಃ ರಾಮಾಯ ಓಂ" ಇದು ಸಕಲ ಸಿದ್ಧಿಪ್ರದವಾದ ಅಷ್ಟಾಕ್ಷರ ಶಿವೋಮಾರಾಮಮಂತ್ರವು.

೧೧೪. ಇದಕ್ಕೆ ಸದಾಶಿವನು ಋಷಿ, ಗಾಯತ್ರೀ ಛಂದಸ್ಸು, ಶಿವೋಮಾರಾಮಚಂದ್ರರೇ ದೇವತೆಗಳೆಂದು ಉಕ್ತವಾಗಿದೆ.

೧೧೫. 'ಓಂ' ಕಾರ ಮತ್ತು 'ನಮಃ ರಾಮಾಯ' ಎಂಬ ಐದು ವರ್ಣ ಒಟ್ಟು ಈ ಆರರಲ್ಲಿ ಒಂದೊಂದು ವರ್ಣದಿಂದ ಸಹಿತವಾದ ಆ, ಈ, ಊ, ಮುಂತಾದ ದೀರ್ಘಯುಕ್ತಮಾಯಾಬೀಜಾಕ್ಷರದಿಂದ ಷಡಂಗವಿಧಾನವನ್ನಾಚರಿಸಿ, ದೇವಪೂಜಿತನಾದ ಮಂತ್ರದೇವತೆಯನ್ನು ಮನಸ್ಸಿನಲ್ಲಿ ಧ್ಯಾನ ಮಾಡಬೇಕು.

೧೧೬. ರಾಮನನ್ನು ಮತ್ತು ಮೂರು ಕಣ್ಣುಗಳುಳ್ಳ, ಶಿರಸ್ಸಿನಲ್ಲಿ ಅರ್ಧಚಂದ್ರ, ಕರದಲ್ಲಿ ತ್ರಿಶೂಲ, ವರಮುದ್ರೆಗಳನ್ನು ಧರಿಸಿರುವ, ಸರ್ವಾವಯವಗಳಲ್ಲಿಯೂ ಭಸ್ಮವನ್ನು ಲೇಪಿಸಿಕೊಂಡಿರುವ, ಈಶ್ವರನನ್ನೂ ಧ್ಯಾನ ಮಾಡಬೇಕು.

ರಾಮಾಭಿರಾಮಾಂ ಸೌಂದರ್ಯಶೋಭಾಂ ಸೋಮಾವತಂಸಿನೀಂ ।
ಪಾಶಾಂಕುಶಧನುರ್ಬಾಣಧರಾಂ ಧ್ಯಾಯೇತ್ರಿಲೋಚನಾಂ ॥ ೧೧೭ ॥

ಏವಂ ಧ್ಯಾತ್ವಾ ಜಪೇದ್ವರ್ಣಲಕ್ಷಂ ತ್ರಿಮಧುರಾನ್ವಿತೈಃ ।
ಬಿಲ್ವಪತ್ರೈಃ ಫಲೈಃ ಪುಷ್ಪೈಸ್ತಿಲೈರ್ವಾಪಂಕಜೈರ್ಹುನೇತ್ ॥ ೧೧೮ ॥

ಸ್ವಯಮಾಯಾಂತಿ ನಿಧಯಃ ಸಿದ್ಧಯಶ್ಚ ಸುರೇಪ್ಸಿತಾಃ ।
ತಾರೋ ಮಾಯಾ ಚ ಭರತಾಗ್ರಜರಾಮ ಮನೋಭವಃ ॥ ೧೧೯ ॥

ವಹ್ನಿಜಾಯಾ ದ್ವಾದಶಾರ್ಣೋ ಮಂತ್ರಃ ಕಲ್ಪದ್ರುಮೋಽಪರಃ ।
ಅಂಗಿರಾಶ್ಚ ಮುನಿಶ್ಛಂದೋ ಗಾಯತ್ರೀದೇವತಾ ಪುನಃ ॥ ೧೨೦ ॥

ಶ್ರೀರಾಮೋ ಭುವನಾ ಬೀಜಂ ಸ್ವಾಹಾ ಶಕ್ತಿಃ ಸಮೀರಿತಾ ।
ಚಂದ್ರೈಕಮುನಿಭೂನೇತ್ರೈರ್ಮಂತ್ರಾರ್ಣೈರಂಗಕಲ್ಪನಂ ॥ ೧೨೧ ॥

---

೧೧೭. ರಾಮಮನೋಹಾರಿಣಿಯು, ಸೌಂದರ್ಯದಿಂದ ಹೊಳೆಯುತ್ತಿರುವವಳು, ಶಿರಸ್ಸಿನಲ್ಲಿ ಚಂದ್ರ, ಕೈಗಳಲ್ಲಿ ಪಾಶ, ಅಂಕುಶ, ಧನುಸ್ಸು, ಬಾಣಗಳನ್ನೂ ಧರಿಸಿರುವ, ನೇತ್ರತ್ರಯವುಳ್ಳ ದೇವಿಯನ್ನು ಧ್ಯಾನಿಸಬೇಕು.

೧೧೮. ಈ ರೀತಿಯಾಗಿ ಧ್ಯಾನಿಸಿ, ಎಂಟು ಲಕ್ಷ ಜಪಮಾಡಿ ಮಧುರತ್ರಯ (ತುಪ್ಪ, ಜೇನು, ಸಕ್ಕರೆ) ಯುಕ್ತವಾದ ಬಿಲ್ವಪತ್ರೆ, ಫಲ, ಪುಷ್ಪಗಳಿಂದ ಅಥವಾ ಎಳ್ಳಿನಿಂದಲೂ ಪದ್ಮಗಳಿಂದಲೂ ಹೋಮಮಾಡಬೇಕು.

೧೧೯. ನಿಧಿಗಳು ಮತ್ತು ದೇವತೆಗಳು ಅಪೇಕ್ಷಿಸುವಂತಹ ಸಿದ್ಧಿಗಳೂ ಸಹ ಈ ಮಂತ್ರ ಪ್ರಭಾವದಿಂದ ಸ್ವತಃ ಬರುತ್ತವೆ.

೧೧೯-೧೨೦. (ಮಾಯಾ= ಹ್ರೀಂ, ಮನೋಭವ= ಕ್ಲೀಂ) "ಓಂ ಹ್ರೀಂ ಭರತಾಗ್ರಜ ರಾಮ ಕ್ಲೀಂ ಸ್ವಾಹಾ" ಇದು ಎರಡನೆಯ ಕಲ್ಪವೃಕ್ಷದಂತಿರುವ ದ್ವಾದಶಾಕ್ಷರಮಂತ್ರವು.

೧೨೦-೧೨೨. ಇದಕ್ಕೆ ಅಂಗಿರಸರೇ ಋಷಿ, ಗಾಯತ್ರೀ ಛಂದಸ್ಸು, ಶ್ರೀರಾಮನೇ ದೇವತೆಯು. 'ಹ್ರೀಂ' ಎಂಬುದು ಬೀಜವು. 'ಸ್ವಾಹಾ'

ಧ್ಯಾನಪೂಜಾದಿಕಂ ಚಾಸ್ಯ ಸರ್ವಂ ಕುರ್ಯಾತ್ ಷಡರ್ಣವತ್ ।
ಪ್ರಣವೋ ಹೃದಯಂ ಸೀತಾಪತೇ ರಾಮಶ್ಚ ಜಹೀಂತಿಯುಃ ॥ ೧೨೨ ॥

ಹನದ್ವಯಾಂತೇ ವರ್ಮಾಸ್ತ್ರಂ ಮಂತ್ರಃ ಷೋಡಶವರ್ಣವಾನ್ ।
ಅಗಸ್ತ್ಯೋಽಸ್ಯ ಮುನಿಶ್ಛಂದೋ ಬೃಹತೀ ದೇವತಾ ಪುನಃ ॥ ೧೨೩ ॥

ಶ್ರೀರಾಮೋಽಹಂ ತಥಾ ಬೀಜಂ ರಾಂ ಶಕ್ತಿಃ ಸಮುದೀರಿತಾ ।
ರಾಮೋಽಬ್ಧಿವಹ್ನಿವೇದಾಕ್ಷಿವರ್ಣೈಃ ಪಂಚಾಂಗಕಲ್ಪನಾ ॥ ೧೨೪ ॥

ಧ್ಯಾನಪೂಜಾದಿಕಂ ಸರ್ವಮಸ್ಯ ಕುರ್ಯಾತ್ ಷಡರ್ಣವತ್ ।
ತಾರೋ ಹೃಚ್ಚೈವ ಬ್ರಹ್ಮಣ್ಯಸೇವಾಯ ಪದಮೀರಯೇತ್ ॥ ೧೨೫ ॥

ರಾಮಾಯಾಕುಂಠಶಬ್ದಾಂತೇ ತೇಜಸೇ ಚ ಸಮೀರಯೇತ್ ।
ಉತ್ತಮಶ್ಲೋಕಧುರ್ಯಾಯ ನ್ಯಭೃಗುಃ ಕಾಮಿಕಾನ್ವಿತಃ ॥ ೧೨೬ ॥

ದಂಡಾರ್ಚಿತಾಂಘ್ರಯೇ ಮಂತ್ರೋ ರಾಮ ರಾಮಾಕ್ಷರೋ ಮತಃ ।
ಋಷಿಃ ಶುಕ್ರಸ್ತಥಾನುಷ್ಟುಪ್ಛಂದೋ ರಾಮೋಽಸ್ಯ ದೇವತಾ ॥ ೧೨೭ ॥

---

ಎಂಬುದು ಶಕ್ತಿ. ಕ್ರಮವಾಗಿ ಈ ಮಂತ್ರದ 1, 1, 7, 1, 2 ವರ್ಣಗಳಿಂದ ಪಂಚಾಂಗಗಳನ್ನು ನ್ಯಾಸಮಾಡಬೇಕು. ಈ ಮಂತ್ರಾಂಗವಾದ ಧ್ಯಾನಪೂಜಾದಿಗಳೆಲ್ಲವನ್ನೂ ಷಡಕ್ಷರಮಂತ್ರವಿಧಾನದಂತೆ ತಿಳಿಯಬೇಕು.

೧೨೨-೧೨೫. "ಓಂ ನಮಃ ಸೀತಾಪತೇ ರಾಮಾಯ ಹನ ಹನ ಹುಂ ಫಟ್" ಇದು ಷೋಡಶಾಕ್ಷರ ರಾಮಮಂತ್ರವು. ಇದಕ್ಕೆ ಅಗಸ್ತ್ಯನು ಋಷಿ, ಬೃಹತೀ ಛಂದಸ್ಸು, ಶ್ರೀರಾಮನು ದೇವತೆ, 'ಹಂ' ಎಂಬುದು ಬೀಜ, 'ರಾಂ' ಎಂಬುದು ಶಕ್ತಿ, ಈ ಮಂತ್ರದ 3, 4, 3, 4, 2 ವರ್ಣಗಳಿಂದ ಪಂಚಾಂಗಗಳನ್ನು ನ್ಯಾಸಮಾಡಬೇಕು. ಈ ಮಂತ್ರಾಂಗವಾದ ಧ್ಯಾನಪೂಜಾದಿಗಳೆಲ್ಲವನ್ನೂ ಷಡಕ್ಷರಮಂತ್ರವಿಧಾನದಂತೆ ಆಚರಿಸಬೇಕು.

೧೨೫-೧೨೭. "ಓಂ ನಮೋ ಬ್ರಹ್ಮಣ್ಯದೇವಾಯ ರಾಮಾಯಾಕುಂಠತೇಜಸೇ । ಉತ್ತಮಶ್ಲೋಕಧುರ್ಯಾಯ ನ್ಯಸ್ತದಂಡಾರ್ಚಿತಾಂಘ್ರಯೇ ॥ ಎಂಬುದು ಮೂವತ್ತು ಮೂರು ಅಕ್ಷರಗಳ ರಾಮಮಂತ್ರವು

ಪಾದೈಃ ಸರ್ವೇಣ ಪಂಚಾಂಗಂ ಕುರ್ಯಾಚ್ಛೇಷಂ ಷಡರ್ಣವತ್ ।
ಲಕ್ಷಂ ಜಪ್ತೋ ದಶಾಂಶೇನ ಜುಹುಯಾತ್ಪಾಯಸೈಃ ಸುಧೀಃ ॥ ೧೨೮ ॥

ಸಿದ್ಧಮಂತ್ರಸ್ಯ ಭುಕ್ತಿಃ ಸ್ಯಾನ್ಮುಕ್ತಿಃ ಪಾತಕನಾಶನಂ ।
ವದೇದ್ದಾಶರಥಾಯಾಂತೇ ವಿದ್ಮಹೇ ಪದಮುಚ್ಚರೇತ್ ॥ ೧೨೯ ॥

ತತಃ ಸೀತಾವಲ್ಲಭಾಯ ಧೀಮಹೀತಿ ಸಮುಚ್ಚರೇತ್ ।
ತನ್ನೋ ರಾಮಃ ಪ್ರಚೋ ವರ್ಣೋದಯಾದಿತಿ ಚ ಸಂವದೇತ್ ॥ ೧೩೦ ॥

ರಾಮೋಕ್ತಾ ರಾಮ ಗಾಯತ್ರೀ ಸರ್ವಾಭೀಷ್ಟಫಲಪ್ರದಾ ।
ಪದ್ಮಾ ಸೀತಾಪದಂ ಙೇಂತಂ ಠದ್ವಯಾಂತಂ ಷಡಕ್ಷರಃ ॥ ೧೩೧ ॥

ವಾಲ್ಮೀಕಿಶ್ಚ ಮುನಿಶ್ಛಂದೋ ಗಾಯತ್ರೀ ದೇವತಾ ಪುನಃ ।
ಸೀತಾ ಭಗವತೀ ಪ್ರೋಕ್ತಾ ಶ್ರೀಂ ಬೀಜಂ ವಹ್ನಿಸುಂದರೀ ॥ ೧೩೨ ॥

---

೧೨೭-೧೨೯. ಈ ಮಂತ್ರಕ್ಕೆ ಶುಕ್ರನು ಋಷಿಯು. ಅನುಷ್ಟುಪ್ ಛಂದಸ್ಸು. ರಾಮನೇ ದೇವತೆಯು. ಈ ಮಂತ್ರದ ನಾಲ್ಕು ಪಾದಗಳು ಮತ್ತು ಸಂಪೂರ್ಣ ಮಂತ್ರಗಳಿಂದ ಪಂಚಾಂಗನ್ಯಾಸಮಾಡಬೇಕು. ಪೂಜೆ ಮುಂತಾದುವೆಲ್ಲವನ್ನೂ ಷಡಕ್ಷರರಾಮಮಂತ್ರದಂತೆ ಆಚರಿಸಬೇಕು. ಈ ಮಂತ್ರವನ್ನು ಒಂದುಲಕ್ಷ ಜಪಿಸಬೇಕು. ಹತ್ತುಸಾವಿರ ಹೋಮಗಳನ್ನು ಪಾಯಸದಿಂದ ಮಾಡಬೇಕು. ಈ ಮಂತ್ರಸಿದ್ಧಿಯನ್ನು ಪಡೆದವನಿಗೆ ಐಹಿಕ ಭೋಗ, ಪಾಪಪರಿಹಾರ, ಮೋಕ್ಷ ಇವುಗಳು ಲಭಿಸುತ್ತವೆ.

೧೨೯-೧೩೧. " ದಾಶರಥಾಯ ವಿದ್ಮಹೇ ಸೀತಾವಲ್ಲಭಾಯ ಧೀಮಹಿ ತನ್ನೋ ರಾಮಃ ಪ್ರಚೋದಯಾತ್ " ಎಂಬುದು ಸಕಲೇಷ್ಟದಾಯಕವಾದ ರಾಮ ಗಾಯತ್ರಿಯು. ಇದು ರಾಮನಿಂದ ಉಕ್ತವಾದುದು.

೧೩೧. ಪದ್ಮಾ= ಶ್ರೀಂ, ಠದ್ವಯ= ಸ್ವಾಹಾ. " ಶ್ರೀಂ ಸೀತಾಯೈ ಸ್ವಾಹಾ " ಇದು ಷಡಕ್ಷರಸೀತಾಮಂತ್ರವು.

ಶಕ್ತಿಃ ಷಡ್ದೀರ್ಘಯುಕ್ತೇನ ಬೀಜೇನಾಂಗಾನಿ ಕಲ್ಪಯೇತ್ ।
ತತೋ ಧ್ಯಾಯೇನ್ಮಹಾದೇವೀಂ ಸೀತಾಂ ತ್ರೈಲೋಕ್ಯಪೂಜಿತಾಂ ॥೧೩೩॥

ತಪ್ತಹಾಟಕವರ್ಣಾಭಾಂ ಪದ್ಮಯುಗ್ಮಂ ಕರದ್ವಯೇ ।
ಸದ್ರತ್ನಭೂಷಣಸ್ಫೂರ್ಜದ್ದಿವ್ಯದೇಹಾಂ ಶುಭಾತ್ಮಿಕಾಂ ॥ ೧೩೪ ॥

ನಾನಾವಸ್ತ್ರಾಂ ಶಶಿಮುಖೀಂ ಪದ್ಮಾಕ್ಷೀಂ ಮುದಿತಾಂತರಾಂ ।
ಪಶ್ಯಂತೀಂ ರಾಘವಂ ಪುಣ್ಯಂ ಶಯ್ಯಾಯಾಂ ಷಡ್ಗುಣೇಶ್ವರೀಂ॥ ೧೩೫ ॥

ಏವಂ ಧ್ಯಾತ್ವಾ ಜಪೇದ್ವರ್ಣಲಕ್ಷಂ ಮಂತ್ರೀ ದಶಾಂಶತಃ ।
ಜುಹುಯಾತ್ಕಮಲೈಃ ಫುಲ್ಲೈಃ ಪೀಠೇ ಪೂರ್ವೋದಿತೇ ಯಜೇತ್ ॥

---

೧೩೨-೧೩೩. ಈ ಮಂತ್ರಕ್ಕೆ ವಾಲ್ಮೀಕಿಯು ಋಷಿಯು, ಗಾಯತ್ರೀ ಛಂದಸ್ಸು, ಷಡ್ಗುಣೈಶ್ವರ್ಯಯುಕ್ತಳಾದ ಸೀತಾದೇವಿಯೇ ದೇವತೆ, 'ಶ್ರೀಂ' ಎಂಬುದೇ ಬೀಜ, 'ಸ್ವಾಹಾ' ಎಂಬುದು ಶಕ್ತಿ, 'ಆ, ಈ' ಮುಂತಾದ ಆರು ದೀರ್ಘಗಳಿಂದ ಯುಕ್ತವಾದ ಬೀಜಾಕ್ಷರದಿಂದ ಆರು ಅಂಗಗಳನ್ನು ನ್ಯಾಸಮಾಡಬೇಕು.

೧೩೩-೧೩೫. ಧ್ಯಾನ:—ಮೂರು ಲೋಕಗಳಲ್ಲಿಯೂ ಪೂಜಿತಳಾದ, ಕಾಯಿಸಿದ ಸುವರ್ಣದಂತೆ ಹೊಳೆಯುತ್ತಿರುವ, ಎರಡು ಕೈಗಳಲ್ಲಿಯೂ ಪದ್ಮದ್ವಯವನ್ನು ಧರಿಸಿರುವ, ಸಮೀಚೀನರತ್ನಖಚಿತವಾದ ಆಭರಣಗಳಿಂದ ವಿರಾಜಮಾನವಾದ ದಿವ್ಯಶರೀರವುಳ್ಳ, ಮಂಗಳಸ್ವರೂಪಳಾದ, ನಾನಾವಿಧ ವಸ್ತ್ರಗಳನ್ನು ಉಟ್ಟಿರುವ, ಚಂದ್ರನಂತೆ ಪ್ರಕಾಶಮಾನವಾದ ಮುಖವುಳ್ಳ, ಸಂತುಷ್ಟಚಿತ್ತಳಾದ, ಪುಣ್ಯಕರನಾದ ಶ್ರೀರಾಮನನ್ನು ನೋಡುತ್ತಿರುವ, ಷಡ್ಗುಣೈಶ್ವರ್ಯಸಂಪನ್ನಳಾದ, ಸೀತಾಮಹಾದೇವಿಯನ್ನು ಧ್ಯಾನಿಸಬೇಕು.

೧೩೬. ಈ ಮಂತ್ರವನ್ನು ಆರು ಲಕ್ಷ ಜಪಿಸಿ, ಅದರ ಹತ್ತನೆಯ ಒಂದು ಭಾಗದಷ್ಟು ವಿಕಸಿತವಾದ ಕಮಲಪುಷ್ಪಗಳಿಂದ ಹೋಮಮಾಡಿ, ಪೂರ್ವೋಕ್ತಪೀಠದಲ್ಲಿ ಪೂಜಿಸಬೇಕು.

**ಮೂರ್ತಿಂ ಸಂಕಲ್ಪ್ಯ ಮೂಲೇನ ತಸ್ಯಾಮಾವಾಹ್ಯ ಜಾನಕೀಂ ।**
**ಸಂಪೂಜ್ಯ ದಕ್ಷಿಣೇ ರಾಮಮಭ್ಯರ್ಚ್ಯಾಗ್ರೇಽನಿಲಾತ್ಮಜಂ ॥ ೧೩೭ ॥**

**ಪೃಷ್ಠೇ ಲಕ್ಷ್ಮಣಮಭ್ಯರ್ಚ್ಯ ಷಟ್ಕೋಣೇಷ್ವಂಗಪೂಜನಂ ।**
**ಪತ್ರೇಷು ಮಂತ್ರಿಮುಖ್ಯಾಂಶ್ಚ ಬಾಹ್ಯೇ ಲೋಕೇಶ್ವರಾನ್ಪುನಃ ॥ ೧೩೮ ॥**

**ವಜ್ರಾದ್ಯಾನಪಿ ಸಂಪೂಜ್ಯ ಸರ್ವಸಿದ್ಧೀಶ್ವರೋ ಭವೇತ್ ।**
**ಜಾತೀಪುಷ್ಪೈಶ್ಚಂದನಾಕ್ತೈ ರಾಜವಶ್ಯಾಯ ಹೋಮಯೇತ್ ॥ ೧೩೯ ॥**

**ಕಮಲೈರ್ಧನಧಾನ್ಯಾಪ್ತಿರ್ನೀಲಾಬ್ಜೈರ್ವಶಯೇತ್ ಜಗತ್ ।**
**ಬಿಲ್ವಪತ್ರೈಃ ಶ್ರಿಯಃ ಪ್ರಾಪ್ತ್ಯೈ ದೂರ್ವಾಭೀ ರೋಗಶಾಂತಯೇ ॥೧೪೦॥**

**ಕಿಂ ಬಹುನೋಕ್ತೇನ ಸೌಭಾಗ್ಯಂ ಪುತ್ರಾನ್ಪೌತ್ರಾನ್ಪರಂ ಸುಖಂ ।**
**ಧನಂ ಧಾನ್ಯಂ ಚ ಮೋಕ್ಷಂ ಚ ಸೀತಾರಾಧನತೋ ಲಭೇತ್ ॥ ೧೪೧ ॥**

೧೩೭-೧೩೯. ಮೂರ್ತಿಯನ್ನು ಸ್ಥಾಪಿಸಿ ಅದರಲ್ಲಿ ಮೂಲಮಂತ್ರದಿಂದ ಜಾನಕಿಯನ್ನು ಆವಾಹನೆಮಾಡಿ, ಬಲಭಾಗದಲ್ಲಿ ರಾಮನನ್ನೂ, ಮುಂಭಾಗದಲ್ಲಿ ವಾಯುಸುತನಾದ ಹನುಮಂತನನ್ನೂ, ಹಿಂಭಾಗದಲ್ಲಿ ಲಕ್ಷ್ಮಣನನ್ನೂ, ಪೂಜಿಸಿ, ಆರು ಮೂಲೆಗಳಲ್ಲಿ ಅಂಗಪೂಜೆಮಾಡಿ, ದಿಗ್ದಳಗಳಲ್ಲಿ ಮಂತ್ರಿಮುಖ್ಯರನ್ನೂ, ಬಾಹ್ಯದಲ್ಲಿ ಇಂದ್ರಾದಿ ದಿಕ್ಪಾಲಕರು ಮತ್ತು ಅವರ ಆಯುಧ ಇವುಗಳನ್ನೂ ಪೂಜಿಸಿದರೆ ಸಕಲ ಸಿದ್ಧಿಗಳಿಗೆ ಒಡೆಯನಾಗುವನು.

೧೩೯-೧೪೦. ರಾಜನನ್ನು ವಶಮಾಡಿಕೊಳ್ಳಬೇಕಾದರೆ ಗಂಧದಲ್ಲಿ ತೊಯಿಸಿದ ಜಾಜೀಪುಷ್ಪಗಳಿಂದ ಹೋಮಮಾಡಬೇಕು. ಕಮಲಪುಷ್ಪಹೋಮದಿಂದ ಧನಧಾನ್ಯಲಾಭವಾಗುವುದು. ನೀಲೋತ್ಪಲಹೋಮದಿಂದ ಜಗತ್ತನ್ನೇ ವಶಮಾಡಿಕೊಳ್ಳಬಹುದು. ಐಶ್ವರ್ಯವನ್ನು ಸಂಪಾದಿಸಲು ಬಿಲ್ವಪತ್ರೆಗಳಿಂದಲೂ, ರೋಗವನ್ನು ಪರಿಹರಿಸಿಕೊಳ್ಳಲು ಗರಿಕೆಹುಲ್ಲಿನಿಂದಲೂ ಹೋಮಮಾಡಬೇಕು.

೧೪೧. ಹೆಚ್ಚು ಹೇಳಿದ್ದರಿಂದೇನು! ಸೌಭಾಗ್ಯ, ಪುತ್ರ, ಪೌತ್ರ, ಉತ್ಕೃಷ್ಟ ಸುಖ, ಧನ, ಧಾನ್ಯ ಮತ್ತು ಮೋಕ್ಷ ಇವೆಲ್ಲವೂ ಸೀತಾರಾಧನೆಯಿಂದ ಲಭಿಸುವುವು.

ಶಕ್ರಃ ಸೇಂದುರ್ಲಕ್ಷ್ಮಣಾಯ ಹೃದಯಂ ಸಪ್ತವರ್ಣವಾನ್ ।
ಅಗಸ್ತ್ಯೋಽಸ್ಯ ಮುನಿಶ್ಛಂದೋ ಗಾಯತ್ರೀ ದೇವತಾ ಪುನಃ ॥ ೧೪೨ ॥
ಲಕ್ಷ್ಮಣಾಖ್ಯೋ ಮಹಾವೀರಶ್ಚಾದ್ಯಂ ಹೃದ್ಬೀಜಶಕ್ತಿಕೇ ।
ಷಡ್ದೀರ್ಘಾಢ್ಯೇನ ಬೀಜೇನ ಷಡಂಗಾನಿ ಸಮಾಚರೇತ್ ॥ ೧೪೩ ॥
ದ್ವಿಭುಜಂ ಸ್ವರ್ಣರುಚಿರತನುಂ ಪದ್ಮನಿಭೇಕ್ಷಣಂ ।
ಧನುರ್ಬಾಣಕರಂ ರಾಮಸೇವಾಸಂಸಕ್ತಮಾನಸಂ ॥ ೧೪೪ ॥
ಧ್ಯಾತ್ವೈವಂ ಪ್ರಜಪೇದ್ವರ್ಣಲಕ್ಷಂ ಮಂತ್ರೀ ದಶಾಂಶತಃ ।
ಮಧ್ವಾಕ್ತೈಃ ಪಾಯಸೈರ್ಹುತ್ವಾ ರಾಮಪೀಠೇ ಪ್ರಪೂಜಯೇತ್ ॥ ೧೪೫ ॥
ರಾಮವದ್ಯಜನಂ ಚಾಸ್ಯ ಸರ್ವಸಿದ್ಧಿಪ್ರದೋ ಹ್ಯಯಂ ।
ಸಾಕಲ್ಯಂ ರಾಮಪೂಜಾಯಾ ಯದೀಚ್ಛೇನ್ನಿಯತಂ ನರಃ ॥ ೧೪೬ ॥

---

೧೪೨-೧೪೩. ( ಶಕ್ರ = ಲ, ಇಂದು= ೦ ) "ಲಂ ಲಕ್ಷ್ಮಣಾಯ ನಮಃ" ಇದು ಸಪ್ತಾಕ್ಷರ ಲಕ್ಷ್ಮಣ ಮಂತ್ರವು. ಇದಕ್ಕೆ ಅಗಸ್ತ್ಯನು ಋಷಿ. ಗಾಯತ್ರೀ ಛಂದಸ್ಸು. ಲಕ್ಷ್ಮಣನೆಂಬ ಮಹಾವೀರನು ದೇವತೆ. 'ಲಂ' ಎಂಬುದು ಬೀಜ, 'ನಮಃ ಎಂಬುದು ಶಕ್ತಿ. ಆರು ದೀರ್ಘಗಳನ್ನು ಪ್ರತ್ಯೇಕವಾಗಿ ಸೇರಿಸಿ ಬೀಜಾಕ್ಷರದಿಂದ ಷಡಂಗಗಳನ್ನು ನ್ಯಾಸಮಾಡಬೇಕು.

೧೪೪. ಅನಂತರ ಎರಡು ಭುಜಗಳು, ಸುವರ್ಣದಂತೆ ಮನೋಹರ ಶರೀರ ಮತ್ತು ಕಮಲಸದೃಶ ನೇತ್ರ ಇವುಗಳುಳ್ಳ, ಕೈಯಲ್ಲಿ ಧನುಸ್ಸು, ಬಾಣಗಳನ್ನು ಧರಿಸಿರುವ, ರಾಮಸೇವೆಯಲ್ಲಿಯೇ ಆಸಕ್ತಮನಸ್ಸುಳ್ಳ ಲಕ್ಷ್ಮಣನನ್ನು ಧ್ಯಾನಿಸಬೇಕು.

೧೪೫. ಈ ರೀತಿ ಲಕ್ಷ್ಮಣಧ್ಯಾನಮಾಡಿ ಏಳುಲಕ್ಷ ಜಪಮಾಡಬೇಕು. ಅನಂತರ ಮಂತ್ರಿಯು ಅದರ ಹತ್ತನೆಯ ಒಂದುಭಾಗದಷ್ಟು ಜೇನುತುಪ್ಪ ಮಿಶ್ರಿತವಾದ ಪಾಯಸಗಳಿಂದ ಹೋಮಮಾಡಿ, ರಾಮಪೀಠದಲ್ಲಿ ಪೂಜೆಮಾಡಬೇಕು.

೧೪೬-೧೪೭. ರಾಮಪೂಜೆಯಂತೆಯೇ ಇವನಿಗೂ ಪೂಜೆಮಾಡಬೇಕು. ಇದು ಸಕಲ ಸಿದ್ಧಿಪ್ರದವು. ರಾಮಪೂಜೆಯನ್ನು ಸಾಂಗವಾಗಿ ಮುಗಿಸಬೇಕೆಂದು

ತೇನ ಯತ್ನೇನ ಕರ್ತವ್ಯಂ ಲಕ್ಷ್ಮಣಾರ್ಚನಮಾದರಾತ್ ।
ಶ್ರೀರಾಮಮಂತ್ರಭೇದಾಸ್ತು ಬಹವಃ ಸಂತಿ ಸಿದ್ಧಿದಾಃ || ೧೪೭ ||

ತಸ್ಮಾತ್ಸಾಧಕೈಃ ಸದಾ ಕಾರ್ಯಂ ಲಕ್ಷ್ಮಣಾರಾಧನಂ ಶುಭಂ ।
ಅಷ್ಟೋತ್ತರಸಹಸ್ರಂ ವಾ ಶತಂ ವಾ ಸುಸಮಾಹಿತೈಃ || ೧೪೮ ||

ಲಕ್ಷ್ಮಣಸ್ಯ ಮನುರ್ಜಪ್ಯೋ ಮುಮುಕ್ಷುಭಿರತಂದ್ರಿತೈಃ ।
ಅಜಪ್ತ್ವಾ ಲಕ್ಷ್ಮಣಮನುಂ ರಾಮಮಂತ್ರಾನ್ ಜಪಂತಿ ಯೇ || ೧೪೯ ||

ನ ತೇಷಾಂ ಜಾಯತೇ ಸಿದ್ಧಿರ್ಹಾನಿರೇವ ಪದೇ ಪದೇ ।
ಯೋ ಜಪೇಲ್ಲಕ್ಷ್ಮಣಮನುಂ ನಿತ್ಯಮೇಕಾಂತಮಾಸ್ಥಿತಃ || ೧೫೦ ||

ಮುಚ್ಯತೇ ಸರ್ವಪಾಪೇಭ್ಯಃ ಸರ್ವಾನ್ಕಾಮಾನವಾಪ್ನುಯಾತ್ ।
ಜಯಪ್ರಧಾನೋ ಮಂತ್ರೋಽಯಂ ರಾಜ್ಯಪ್ರಾಪ್ತ್ಯೈಕ ಸಾಧನಂ|| ೧೫೧ ||

---

ಅಪೇಕ್ಷಿಸುವವನು ಭಕ್ತಿಯಿಂದ ಆಗಲೇ ಲಕ್ಷ್ಮಣಾರಾಧನೆಯನ್ನು ಮಾಡಬೇಕು. ಸಿದ್ಧಿದಾಯಕಗಳಾದ ಶ್ರೀರಾಮಚಂದ್ರಮಂತ್ರದ ಪ್ರಭೇದಗಳು ಬಹಳವಾಗಿವೆ.

೧೪೮-೧೪೯. ರಾಮ ಮಂತ್ರಸಾಧಕರು ಯಾವಾಗಲೂ ಶುಭವಾದ ಲಕ್ಷ್ಮಣಾರಾಧನೆಯನ್ನು ಮಾಡಬೇಕು. ಮೋಕ್ಷವನ್ನು ಬಯಸುವವರು ಸಮಾಧಾನ ಚಿತ್ತದಿಂದ ಆಲಸ್ಯವಿಲ್ಲದೆ ಲಕ್ಷ್ಮಣಮಂತ್ರವನ್ನು ನೂರೆಂಟು ಅಥವಾ ನೂರಾವರ್ತಿ ಜಪಿಸಬೇಕು.

೧೪೯-೧೫೦. ಲಕ್ಷ್ಮಣಮಂತ್ರವನ್ನು ಜಪಿಸದೇ ರಾಮಮಂತ್ರವನ್ನು ಮಾತ್ರ ಜಪಿಸುವವರಿಗೆ ಸಿದ್ಧಿಯುಂಟಾಗುವುದಿಲ್ಲ. ಬಾರಿಬಾರಿಗೂ ಹಾನಿಯೇ ಆಗುತ್ತದೆ.

೧೫೦-೧೫೧. ಪ್ರತಿನಿತ್ಯವೂ ಏಕಾಂತವಾಗಿ ಕುಳಿತು ಲಕ್ಷ್ಮಣಮಂತ್ರವನ್ನು ಜಪಿಸುವವನು ಸಕಲ ಪಾಪಗಳ ದೆಸೆಯಿಂದ ಮುಕ್ತನಾಗುವನು. ಮತ್ತು ಇಷ್ಟಾರ್ಥಗಳೆಲ್ಲವನ್ನೂ ಪಡೆಯುವನು. ಈ ಮಂತ್ರಕ್ಕೆ ಜಯವೇ ಮುಖ್ಯ ಫಲವು. ಇದು ರಾಜ್ಯಪ್ರಾಪ್ತಿಗೆ ಮುಖ್ಯಸಾಧಕವು.

ನಷ್ಟರಾಜ್ಯಾಪ್ತಯೇ ಮಂತ್ರಂ ಜಪೇಲ್ಲಕ್ಷಂ ಸಮಾಹಿತಃ ।
ಸೋಽಚಿರಾನ್ನಷ್ಟರಾಜ್ಯಂ ಸ್ವಂ ಪ್ರಾಪ್ನೋತ್ಯೇವ ನ ಸಂಶಯಃ ॥ ೧೫೨ ॥

ಧ್ಯಾಯನ್ರಾಮಮಯೋಧ್ಯಾಯಾಮಭಿಷಿಕ್ತಮನನ್ಯಧೀಃ ।
ಪಂಚಾಯುತಂ ಮನುಂ ಜಪ್ತ್ವಾ ನಷ್ಟರಾಜ್ಯಮವಾಪ್ನುಯಾತ್ ॥ ೧೫೩ ॥

ನಾಗಪಾಶವಿನಿರ್ಮುಕ್ತಂ ಧ್ಯಾತ್ವಾ ಲಕ್ಷ್ಮಣಮಾದರಾತ್ ।
ಅಯುತಂ ಪ್ರಜಪೇನ್ಮಂತ್ರಂ ನಿಗಡಾನ್ಮುಚ್ಯತೇ ಧ್ರುವಂ ॥ ೧೫೪ ॥

ವಾತಾತ್ಮಜೇನಾನೀತಾಭಿರೋಷಧೀಭಿರ್ಗತವ್ಯಥಂ ।
ಧ್ಯಾತ್ವಾ ಲಕ್ಷಂ ಜಪನ್ಮಂತ್ರಮಪಮೃತ್ಯುಂ ಜಯೇದ್ಧ್ರುವಂ ॥ ೧೫೫ ॥

೧೫೨. ಈ ಮಂತ್ರವನ್ನು ಸಮಾಧಾನಮನಸ್ಕನಾಗಿ ಒಂದು ಲಕ್ಷ ಜಪ ಮಾಡುವವನು ನಷ್ಟವಾಗಿದ್ದ ತನ್ನ ರಾಜ್ಯವನ್ನು ಖಂಡಿತವಾಗಿಯೂ ಬೇಗ ಪಡೆಯುತ್ತಾನೆ. ಸಂದೇಹವಿಲ್ಲ.

೧೫೩. ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾದ ರಾಮನನ್ನು ಅನನ್ಯಮನಸ್ಕನಾಗಿ ಧ್ಯಾನಿಸುತ್ತಾ ಈ ಮಂತ್ರವನ್ನು ಐವತ್ತು ಸಾವಿರ ಜಪಿಸಿದರೆ ಕೈಬಿಟ್ಟು ಹೋದ ರಾಜ್ಯವು ಲಭಿಸುವುದು.

೧೫೪. ನಾಗಪಾಶದಿಂದ ಬಿಡಿಸಿಕೊಳ್ಳಲ್ಪಟ್ಟ ಲಕ್ಷ್ಮಣನನ್ನು ಭಕ್ತಿಯಿಂದ ಧ್ಯಾನಿಸಿ ಮಂತ್ರವನ್ನು ಹತ್ತುಸಾವಿರ ಜಪಮಾಡಿದರೆ ಖಂಡಿತವಾಗಿಯೂ ಸೆರೆಮನೆಯ ಬಂಧನದಿಂದ ಬಿಡುಗಡೆಯನ್ನು ಹೊಂದುವನು.

೧೫೫. ಹನುಮಂತನಿಂದ ತರಲ್ಪಟ್ಟ ಸಂಜೀವನೌಷಧಗಳಿಂದ ವ್ಯಥೆಯನ್ನು ಕಳೆದು ಕೊಂಡಿರುವ ಲಕ್ಷ್ಮಣನನ್ನು ಧ್ಯಾನಿಸುತ್ತಾ, ಮಂತ್ರವನ್ನು ಒಂದು ಲಕ್ಷ ಜಪಮಾಡುವವನು ಅಪಮೃತ್ಯುವನ್ನು ಜಯಿಸುವನು, ನಿಶ್ಚಯ.

ಘಾತಯಂತಂ ಮೇಘನಾದಂ ಧ್ಯಾತ್ವಾ ಲಕ್ಷಂ ಜಪೇನ್ಮನುಂ ।
ದುರ್ಜಯಂ ವಾಪಿ ವೇಗೇನ ಜಯೇದ್ರಿಪುಕುಲಂ ಮಹತ್ ॥ ೧೫೬ ॥

ಧ್ಯಾತ್ವಾ ಶೂರ್ಪಣಖಾನಾಸಾಭೇದನೋದ್ಯುಕ್ತಮಾನಸಂ ।
ಸಹಸ್ರಂ ಪ್ರಜಪೇನ್ಮಂತ್ರಂ ಪುರುಹೂತಾದಿಕಾನ್ಜಯೇತ್ ॥ ೧೫೭ ॥

ರಾಮಪಾದಬ್ಜಸೇವಾರ್ಥಂ ಕೃತೋದ್ಯೋಗಮಥೋ ಸ್ಮರನ್ ।
ಪ್ರಜಪನ್ ಲಕ್ಷಮೇಕಾಂತೇ ಮಹಾರೋಗಾತ್ಪ್ರಮುಚ್ಯತೇ ॥ ೧೫೮ ॥

ತ್ರಿಮಾಸಂ ವಿಜಿತಾಹರೋ ನಿತ್ಯಂ ಸಪ್ತಸಹಸ್ರಕಂ ।
ಅಷ್ಟೋತ್ತರಶತೈಃ ಪುಷ್ಪೈರ್ನಿಶ್ಛಿದ್ರೈಶ್ಶತಪತ್ರಕೈಃ ॥ ೧೫೯ ॥

ಪೂಜಯಿತ್ವಾ ವಿಧಾನೇನ ಪಾಯಸಂ ಚ ಸಶರ್ಕರಂ ।
ನಿವೇದ್ಯ ಪ್ರಜಪೇನ್ಮಂತ್ರಂ ಕುಷ್ಠರೋಗಾತ್ಪ್ರಮುಚ್ಯತೇ ॥ ೧೬೦ ॥

---

೧೫೬. ಇಂದ್ರಜಿತ್ತನ್ನು ಘಾತಪಡಿಸಿದ ಲಕ್ಷ್ಮಣನನ್ನು ಧ್ಯಾನಿಸಿ, ಲಕ್ಷ ಮಂತ್ರ ಜಪಮಾಡಿದರೆ ಜಯಿಸಲಶಕ್ಯವಾದ ಮಹಾ ಶತ್ರುಕುಲವನ್ನು ಶೀಘ್ರವಾಗಿ ಜಯಿಸುವನು.

೧೫೭. ಶೂರ್ಪಣಖಿಯ ಮೂಗುಕೊಯ್ಯಲು ಮನಸ್ಸುಮಾಡಿದ ಲಕ್ಷ್ಮಣನನ್ನು ಧ್ಯಾನಿಸಿ, ಒಂದು ಸಾವಿರ ಮಂತ್ರಜಪಮಾಡುವವನು ಇಂದ್ರಾದಿಗಳನ್ನು ಜಯಿಸುವನು.

೧೫೮. ಶ್ರೀರಾಮನ ಚರಣಕಮಲಸೇವೆಗಾಗಿ ಪ್ರಯತ್ನಮಾಡುತ್ತಿರುವ ಲಕ್ಷ್ಮಣನನ್ನು ಧ್ಯಾನಿಸುತ್ತಾ ಏಕಾಂತದಲ್ಲಿ ಒಂದು ಲಕ್ಷ ಜಪಮಾಡುವವನು ಮಹಾರೋಗವನ್ನು ನಾಶಪಡಿಸಿಕೊಳ್ಳುವನು.

೧೫೯–೧೬೦. ಮೂರುತಿಂಗಳಕಾಲ ಆಹಾರವಿಲ್ಲದೆ ಪ್ರತಿದಿನವೂ ನೂರೆಂಟು ನಿಶ್ಛಿದ್ರವಾದ ಕಮಲಪುಷ್ಪಗಳಿಂದ ವಿಧಿವತ್ತಾಗಿ ಪೂಜಿಸಿ, ಸಕ್ಕರೆ ಸಹಿತವಾಗಿ ಪಾಯಸವನ್ನು ನೈವೇದ್ಯಮಾಡಿ ಏಳು ಸಾವಿರ ಮಂತ್ರಜಪ ಮಾಡಿದರೆ ಕುಷ್ಠರೋಗ ಪರಿಹಾರವಾಗುವುದು.

ವಿಜನೇ ವಿಜಿತಾಹಾರಃ ಷಣ್ಮಾಸಂ ವಿಧಿನ್ಯಾಮುನಾ ।
ಕ್ಷಯರೋಗಾತ್ಪ್ರಮುಚ್ಯೇತ ಸತ್ಯಂ ಸತ್ಯಂ ನ ಸಂಶಯಃ ॥ ೧೬೧ ॥

ಅಭಿಮಂತ್ರ್ಯ ಜಲಂ ಪ್ರಾತಃ ಮಂತ್ರೇಣ ತ್ರಿಃ ಸಮಾಹಿತಃ ।
ತ್ರಿಸಂಧ್ಯಂ ವಾ ಪಿಬೇನ್ನಿತ್ಯಂ ಮುಚ್ಯತೇ ಸರ್ವರೋಗತಃ ॥ ೧೬೨ ॥

ದಾರಿದ್ರ್ಯಂ ಚ ಪರಾಭೂತಂ ಜಾಯತೇ ಧನದೋಪಮಃ ।
ವಿಷಾದಿದೋಷಸಂಸ್ಪರ್ಶೋ ನ ಭವೇತ್ತು ಕದಾಚನ ॥ ೧೬೩ ॥

ಮನುನಾ ಮಂತ್ರಿತಸ್ತೋಯೈಃ ಪ್ರತ್ಯಹಂ ಕ್ಷಾಲಯೇನ್ಮುಖಂ ।
ಮುಖನೇತ್ರಾದಿಸಂಭೂತಾನ್ ಜಯೇದ್ರೋಗಾಂಶ್ಚ ದಾರುಣಾನ್ ॥೧೬೪॥

ಪೀತ್ವಾಭಿಮಂತ್ರಿತಂ ತ್ವಂಭಃ ಕುಕ್ಷಿರೋಗಾನ್ ಜಯೇದ್ಧ್ರುವಂ ।
ಲಕ್ಷ್ಮಣಪ್ರತಿಮಾಂ ಕೃತ್ವಾ ದದ್ಯಾದ್ಭಕ್ತ್ಯಾ ವಿಧಾನತಃ ॥ ೧೬೫ ॥

---

೧೬೧. ನಿರ್ಜನಪ್ರದೇಶದಲ್ಲಿ ನಿಯತಾಹಾರನಾಗಿ ಈ ವಿಧಾನವನ್ನು ಆರು ತಿಂಗಳು ಆಚರಿಸಿದರೆ ಕ್ಷಯರೋಗವು ಪರಿಹಾರವಾಗುವುದು. ನಿಜ, ನಿಜ, ಸಂದೇಹವಿಲ್ಲ.

೧೬೨. ಚಿತ್ತೈಕಾಗ್ರ್ಯಯುತನಾಗಿ ಈ ಮಂತ್ರದಿಂದ ನೀರನ್ನು ಅಭಿಮಂತ್ರಿಸಿ ಪ್ರಾತಃಕಾಲದಲ್ಲಿ ಮೂರಾವರ್ತಿ ಅಥವಾ ಮೂರು ಸಂಧ್ಯಾಕಾಲಗಳಲ್ಲಿ ಕುಡಿದರೆ ಸಕಲ ರೋಗವೂ ಪರಿಹಾರವಾಗುವುದು.

೧೬೩. ಬಡತನವು ಮಾಯವಾಗುವುದು. ಅಂತಹವನು ಕುಬೇರನಿಗೆ ಸಮನಾಗುವನು. ಅವನಿಗೆ ಯಾವಾಗಲೂ ವಿಷಾದಿದೋಷಸಂಸರ್ಗವಾಗುವುದಿಲ್ಲ.

೧೬೪. ಈ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ನೀರುಗಳಿಂದ ಪ್ರತಿದಿನವೂ ಮುಖವನ್ನು ತೊಳೆದುಕೊಂಡರೆ ಮುಖ, ಕಣ್ಣು ಇವುಗಳಿಗೆ ಸಂಭವಿಸುವ ಕಠಿಣವಾದ ರೋಗಗಳನ್ನು ಅಂತಹವನು ಜಯಿಸುವನು.

೧೬೫-೧೬೬. ಮಂತ್ರದಿಂದ ಅಭಿಮಂತ್ರಿತವಾದ ನೀರನ್ನು ಕುಡಿದರೆ ಉದರರೋಗಗಳು ಖಂಡಿತವಾಗಿಯೂ ವಾಸಿಯಾಗುತ್ತವೆ. ಲಕ್ಷ್ಮಣಪ್ರತಿಮೆ

ಸ ಸರ್ವೇಭ್ಯೋಽಥ ರೋಗೇಭ್ಯೋ ಮುಚ್ಯತೇ ನಾತ್ರ ಸಂಶಯಃ ।
ಕನ್ಯಾರ್ಥೀ ವಿಮಲಾಪಾಣಿಗ್ರಹಣಾಸಕ್ತಮಾನಸಂ ॥ ೧೬೬ ॥

ಧ್ಯಾಯನ್ಲಕ್ಷಂ ಜಪೇನ್ಮಂತ್ರೀ ಅಬ್ಜೈರ್ಹುತ್ವಾ ದಶಾಂಶತಃ ।
ಈಪ್ಸಿತಾಂ ಲಭತೇ ಕನ್ಯಾಂ ಶ್ರೀಘ್ರಮೇವ ನ ಸಂಶಯಃ ॥ ೧೬೭ ॥

ದೀಕ್ಷಿತಂ ಜೃಂಭಣಾಸ್ತ್ರಾಣಾಂ ಮಂತ್ರೇಷು ನಿಯತವ್ರತಂ ।
ಧ್ಯಾತ್ವಾ ಚ ವಿಧಿವನ್ನಿತ್ಯಂ ಜಪೇನ್ಮಾಸತ್ರಯಂ ಮನುಂ ॥ ೧೬೮ ॥

ಪೂಜಾಪುರಸ್ಸರಂ ಸಪ್ತಸಹಸ್ರಂ ವಿಜಿತೇಂದ್ರಿಯಃ ।
ಸರ್ವಾಸಾಮಪಿ ವಿದ್ಯಾನಾಂ ತತ್ವಜ್ಞೋ ಜಾಯತೇ ನರಃ ॥ ೧೬೯ ॥

ವಿಶ್ವಾಮಿತ್ರಕ್ರತುವರೇ ಕೃತಾದ್ಭುತಪರಾಕ್ರಮಂ ।
ಧ್ಯಾಯಂಲ್ಲಕ್ಷಂ ಜಪೇನ್ಮಂತ್ರಂ ಮುಚ್ಯತೇ ಮಹತೋ ಭಯಾತ್ ॥ ೧೭೦ ॥

---

ಯನ್ನು ಮಾಡಿಸಿ ವಿಧಾನೋಕ್ತಪ್ರಕಾರ ಭಕ್ತಿಯಿಂದ ದಾನಮಾಡುವವನು ಸಕಲರೋಗನಿರ್ಮುಕ್ತನಾಗುವನು. ಸಂದೇಹವಿಲ್ಲ.

೧೬೬-೧೬೭. ಕನ್ಯಾರ್ಥಿಯಾದವನು ವಿಮಲಾದೇವಿಯ ಪಾಣಿಗ್ರಹಣಾಸಕ್ತ ಚಿತ್ತನಾದ ಲಕ್ಷ್ಮಣನನ್ನು ಧ್ಯಾನಿಸುತ್ತಾ ಒಂದು ಲಕ್ಷಜಪಮಾಡಿ, ಕಮಲ ಪುಷ್ಪಗಳಿಂದ ಹತ್ತುಸಾವಿರ ಹೋಮಮಾಡಿದರೆ ಶ್ರೀಘ್ರವಾಗಿಯೇ ಇಷ್ಟ ಕನ್ಯೆಯನ್ನು ಪಡೆಯುವನು. ಸಂಶಯವಿಲ್ಲ.

೧೬೮-೧೬೯. ದೀಕ್ಷಾಯುಕ್ತನು, ಜೃಂಭಣಾಸ್ತ್ರಗಳ ಮಂತ್ರಗಳಲ್ಲಿ ನಿಯಮಯುಕ್ತವಾದ ವ್ರತವುಳ್ಳವನೂ ಆದ ಲಕ್ಷ್ಮಣನನ್ನು ಧ್ಯಾನಿಸಿ, ಜಿತೇಂದ್ರಿಯನಾಗಿ ಈ ಮಂತ್ರವನ್ನು ಪೂಜೆಸಹಿತವಾಗಿ ಪ್ರತಿದಿನವೂ ಏಳು ಸಾವಿರ ಜಪಮಾಡಿದರೆ ಅಂತಹ ಮನುಷ್ಯನು ಸಕಲ ವಿದ್ಯೆಗಳಲ್ಲಿಯೂ ಪಾರಂಗತನಾಗಿ ತತ್ವಜ್ಞಾನಿಯಾಗುವನು.

೧೭೦. ಉತ್ತಮವಾದ ವಿಶ್ವಾಮಿತ್ರಯಜ್ಞದಲ್ಲಿ ಅದ್ಭುತವಾದ ಪರಾಕ್ರಮವನ್ನು ತೋರಿಸಿದ ಲಕ್ಷ್ಮಣಸ್ವಾಮಿಯನ್ನು ಧ್ಯಾನಿಸುತ್ತಾ ಮಂತ್ರವನ್ನು ಒಂದು ಲಕ್ಷ ಜಪಮಾಡಿದರೆ ಮಹಾಭಯವು ಪರಿಹಾರವಾಗುವುದು.

ಕೃತನಿತ್ಯಕ್ರಿಯಃ ಶುದ್ಧಸ್ತ್ರಿಕಾಲಂ ಪ್ರಜಪೇನ್ಮನುಂ ।
ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣೋಃ ಪರಂ ಪದಂ ॥ ೧೭೧ ॥

ದೀಕ್ಷಿತೋ ವಿಧಿವನ್ಮಂತ್ರೀ ಗುಣೈರ್ವಿಗತಕಲ್ಮಷಃ ।
ಸ್ವಾಚಾರನಿಯತೋ ದಾಂತೋ ಗೃಹಸ್ಥೋ ವಿಜಿತೇಂದ್ರಿಯಃ ॥ ೧೭೨ ॥

ಐಹಿಕಾನನಪೇಕ್ಷ್ಯೈವ ನಿಷ್ಕಾಮೋ ಯೋಽರ್ಚಯೇದ್ವಿಭುಂ ।
ಸರ್ವಾನ್ಪುಣ್ಯಪಾಪೌಘಾನ್ ದಗ್ಧ್ವಾ ನಿರ್ಮಲಮಾನಸಃ ॥ ೧೭೩ ॥

ಪುನರಾವೃತ್ತಿರಹಿತಃ ಶಾಶ್ವತಂ ಪದಮಶ್ನುತೇ ।
ಸಕಾಮೋ ವಾಂಛಿತಾನ್ಲಬ್ಧ್ವಾ ಭುಕ್ತ್ವಾ ಭೋಗಾನ್ ಮನೋಗತಾನ್ ॥

ಜಾತಿಸ್ಮರಶ್ಚಿರಂ ಭೂತ್ವಾ ಯಾತಿ ವಿಷ್ಣೋಃ ಪರಂ ಪದಂ ।
ನಿದ್ರಾ ಚಂದ್ರಾನ್ವಿತಾ ಪಶ್ಚಾದ್ಧರತಾಯ ಹೃದಂತಿಮಃ ॥ ೧೭೫ ॥

---

೧೭೧. ನಿತ್ಯಾಹ್ನಿಕವನ್ನು ಮಾಡಿಕೊಂಡು ಪರಿಶುದ್ಧನಾಗಿ ಈ ಮಂತ್ರವನ್ನು ಮೂರು ಕಾಲದಲ್ಲಿಯೂ ಜಪಿಸಿದರೆ ಸಕಲಪಾಪಗಳನ್ನೂ ಕಳೆದುಕೊಂಡು ವಿಷ್ಣುವಿನ ಪರಮಪದ ಎಂದರೆ ವೈಕುಂಠಕ್ಕೆ ಹೋಗುವನು.

೧೭೨-೧೭೪. ವಿಧಾನೋಕ್ತಪ್ರಕಾರ ದೀಕ್ಷೆಯನ್ನು ಪರಿಗ್ರಹಿಸಿರುವವನು ಗುಣಗಳಿಂದ ದೋಷಗಳನ್ನು ನಾಶಪಡಿಸಿಕೊಂಡಿರುವವನು ತನ್ನ ವರ್ಣಾಶ್ರಮ ಧರ್ಮವನ್ನು ಆಚರಿಸುವವನೂ, ನಿಗೃಹೀತೇಂದ್ರಿಯನೂ, ಗೃಹಸ್ಥನೂ ಆಗಿರುವ ಯಾವ ಮಂತ್ರಿಯು ಐಹಿಕಫಲಗಳನ್ನು ಅಪೇಕ್ಷಿಸದೆ ನಿಷ್ಕಾಮನಾಗಿ ಸ್ವಾಮಿಯನ್ನು ಪೂಜಿಸುವನೋ, ಅವನು ಸಮಸ್ತಪಾಪ, ಅನಿಷ್ಟ ಪುಣ್ಯಗಳ ರಾಶಿಗಳನ್ನು ದಹಿಸಿಕೊಂಡು ಪರಿಶುದ್ಧ ಚಿತ್ತನಾಗಿ, ಪುನರಾವೃತ್ತಿರಹಿತ ಎಂದರೆ ಪುನಃ ಹಿಂದಿರುಗದ ಶಾಶ್ವತ ಸ್ಥಾನ (ಮೋಕ್ಷ)ವನ್ನು ಹೊಂದುವನು.

೧೭೪-೧೭೫. ಸಕಾಮನಾಗಿ ಪೂಜಿಸುವವನು ತನ್ನ ಇಷ್ಟಾರ್ಥಗಳನ್ನು ಹೊಂದಿ ಮನೋಗತವಾದ ಭೋಗಗಳನ್ನು ಅನುಭವಿಸಿ ಜನ್ಮಾಂತರಸ್ಮರಣೆಯುಳ್ಳವನಾಗಿ ಬಹುಕಾಲವಿದ್ದು ಅನಂತರ ನಿಷ್ಕಾಮನಾಗಿ ವೈಕುಂಠಕ್ಕೆ ತೆರಳುವನು.

**ಸಪ್ತಾಕ್ಷರೋ ಮನುಶ್ಚಾಸ್ಯ ಮುನ್ಯಾದ್ಯರ್ಚಾದಿ ಪೂರ್ವವತ್ ।**
**ಬಕಃ ಸೇಂದುಶ್ಚ ಶತ್ರುಘ್ನಪದಂ ಙೇಂತಂ ಹೃದಂತಿಮಃ ॥ ೧೭೬ ॥**

**ಸಪ್ತಾಕ್ಷರೋಽಯಂ ಶತ್ರುಘ್ನಮಂತ್ರಃ ಸರ್ವೇಷ್ಟಸಿದ್ಧಿದಃ ॥ ೧೭೭ ॥**

**ಇತಿ ಶ್ರೀ ನಾರದೀಯ ಪುರಾಣೇ ಪೂರ್ವಭಾಗೇ ಬೃಹದು
ಪಾಖ್ಯಾನೇ ಸನತ್ಕುಮಾರವಿಭಾಗೇ ತೃತೀಯಪಾದೇ
ರಾಮಾದ್ಯುಪಾಸನಾವರ್ಣನಂ ನಾಮ
ತ್ರಿಸಪ್ತತಿತಮೋಽಧ್ಯಾಯಃ**

೧೭೫-೧೭೬. (ನಿದ್ರಾ= ಭ, ಚಂದ್ರ= ೦) "ಭಂ ಭರತಾಯ ನಮಃ" ಎಂಬುದು ಸಪ್ತಾಕ್ಷರ ಭರತಮಂತ್ರವು. ಇದಕ್ಕೆ ಋಷ್ಯಾದಿ, ಪೂಜೆ ಮುಂತಾದುವೆಲ್ಲವನ್ನೂ ಪೂರ್ವೋಕ್ತವಿಧಾನದಂತೆ ತಿಳಿಯಬೇಕು.

೧೭೬-೧೭೭. (ಬಕ= ಶ, ಇಂದು= ೦) "ಶಂ ಶತ್ರುಘ್ನಾಯ ನಮಃ" ಇದು ಸಕಲೇಷ್ಟದಾಯಕವಾದ ಸಪ್ತಾಕ್ಷರ ಶತ್ರುಘ್ನಮಂತ್ರವು.

ಇಂತು ಶ್ರೀ ನಾರದೀಯ ಪುರಾಣದೊಳು ಪೂರ್ವಭಾಗದ ಬೃಹದು
ಪಾಖ್ಯಾನವೆಂಬ ಸನತ್ಕುಮಾರ ವಿಭಾಗವಾದ ತೃತೀಯ ಪಾದದಲ್ಲಿ
ರಾಮಾದ್ಯುಪಾಸನಕಥನವೆಂಬ ಎಪ್ಪತ್ತ
ಮೂರನೆಯ ಅಧ್ಯಾಯವು ಮುಗಿದುದು.

## ॥ ಕಥಾ ಸಾರಾಂಶ ॥

ಎಲ್ಲಾ ಮಂತ್ರಗಳಿಗಿಂತಲೂ ವೈಷ್ಣವ ಮಂತ್ರವು ಶ್ರೇಷ್ಠವು. ಅದರಲ್ಲಿಯೂ ರಾಮಮಂತ್ರವು ಅಧಿಕಫಲಪ್ರದವೆಂದು ಹೇಳಿ ಷಡಕ್ಷರರಾಮಮಂತ್ರದಿಂದ ಪ್ರಾರಂಭಿಸಿ ಬಹುವಿಧವಾದ ರಾಮಮಂತ್ರಗಳು, ಅವುಗಳ ನ್ಯಾಸ, ಪೂಜೆ, ಹೋಮ, ಋಷ್ಯಾದಿಗಳು, ಫಲ, ಅನುಷ್ಠಾನಭೇದದಿಂದ ಭಿನ್ನ ಭಿನ್ನಫಲ ಇತ್ಯಾದಿಗಳನ್ನು ಸಪರಿಕರವಾಗಿ ನಿರೂಪಿಸಿ, ಸೀತಾಮಂತ್ರ, ಲಕ್ಷ್ಮಣಮಂತ್ರವನ್ನು ತಪ್ಪದೇ ಜಪಿಸಬೇಕೆಂದು ನಿರೂಪಿಸಿ ಬೇರೆ ಬೇರೆ ವಿಧವಾಗಿ ಅನುಷ್ಠಾನ ಮಾಡುವುದರಿಂದ ಲಕ್ಷ್ಮಣಮಂತ್ರವು ನಾನಾವಿಧಫಲಗಳನ್ನು ಕೊಡುತ್ತದೆ ಎಂಬುದನ್ನು ವಿವರಿಸಿ, ಭರತಶತ್ರುಘ್ನಮಂತ್ರಗಳನ್ನೂ ನಿರೂಪಿಸಿದೆ.

# ಚತುಸ್ಸಪ್ತತಿತಮೋಽಧ್ಯಾಯಃ

---

## ಸನತ್ಕುಮಾರ ಉವಾಚ

ಅಥೋಽಚ್ಯಂತೇ ಹನುಮತೋ ಮಂತ್ರಾಃ ಸರ್ವೇಽಷ್ಟದಾಯಕಾಃ ।
ಯಾನ್ಸಮಾರಾಧ್ಯ ವಿಪ್ರೇಂದ್ರ ತತ್ತುಲ್ಯಾಚರಣಾ ನರಾಃ ॥ ೧ ॥

ಇಂದ್ರಸ್ವರೇಂದುಸಂಯುಕ್ತಂ ಗಗನಂ ಚ ಭಗಾನ್ವಿತಾಃ ।
ಹಸಫಾಗ್ನಿ ಭಗೇಂದ್ವಾಢ್ಯಾ ದ್ವಿತೀಯಂ ಬೀಜಮೀರಿತಮ್ ॥ ೨ ॥

ಖಫಾಗ್ನಯೋ ಭಗೇಂದ್ವಾಢ್ಯಾಸ್ತೃತೀಯಂ ಬೀಜಮೀರಿತಮ್ ।
ವಿಯದ್ಭೃಗ್ವಗ್ನಿಮನ್ವಿಂದುಯುಕ್ತಂ ಸ್ಯಾಚ್ಚ ಚತುರ್ಥಕಂ ॥ ೩ ॥

ಪಂಚಮಂ ಭಗಚಂದ್ರಾಢ್ಯಾ ವಿಯದ್ಭೃಗುಖಫಾಗ್ನಯಃ ।
ಮನ್ವಿಂದ್ವಾಢ್ಯೌ ಹಸೌ ಷಷ್ಠಂ ಜೇಂತಃ ಸ್ಯಾದ್ಧನುಮಾಂಸ್ತತಃ ॥ ೪ ॥

---

## ಎಪ್ಪತ್ತುನಾಲ್ಕನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು:— ಬ್ರಾಹ್ಮಣಶ್ರೇಷ್ಠನೇ! ಈಗ ಸಕಲೇಷ್ಟಾರ್ಥಗಳನ್ನೂ ಕೊಡುವ ಹನುಮನ್ಮಂತ್ರಗಳನ್ನು ಹೇಳುತ್ತೇನೆ. ಅವುಗಳನ್ನು ಆರಾಧಿಸುವ ಮನುಷ್ಯರು ಅವನಂತೆಯೇ ಆಚರಣೆಯುಳ್ಳವರಾಗುವರು ಎಂದರೆ ರಾಮಭಕ್ತರಾಗುವರು.

೨-೫ (ಇಂದ್ರಸ್ವರ= ಔ, ಇಂದು, ಚಂದ್ರ= ಂ, ಗಗನ= ಹ, ಭಗ= ಏ, ಅಗ್ನಿ= ರ, ಭೃಗು= ಸ. ಈ ಶ್ಲೋಕದಲ್ಲಿನ 'ಹ' 'ಸ' 'ಫ' ಮುಂತಾದ ಕೆಲವು ಅಕ್ಷರಗಳನ್ನು ಹಾಗೆಯೇ ಮಂತ್ರದಲ್ಲಿ ಸೇರಿಸಬೇಕು.) "ಹೌಂ" ಎಂಬುದು ಮಂತ್ರದ ಮೊದಲನೆಯ ಅಕ್ಷರ. "ಹ್ಸ್ಫ್ರೇಂ" ಎಂಬುದು ಎರಡನೆಯದು. "ಖ್ಫ್ರೇಂ" ಎಂಬುದು ಮೂರನೆಯದು. "ಹ್ಸ್ರಾಂ" ಎಂಬುದು ನಾಲ್ಕನೆ

ಹೃದಯಾಂತೋ ಮಹಾಮಂತ್ರರಾಜೋಽಯಂ ದ್ವಾದಶಾಕ್ಷರಃ ।
ರಾಮಚಂದ್ರೋ ಮುನಿಶ್ಚಾಸ್ಯ ಜಗತೀಛಂದ ಈರಿತಂ ॥ ೫ ॥

ದೇವತಾ ಹನುಮಾನ್ಬೀಜಂ ಷಷ್ಠಂ ಶಕ್ತಿರ್ದ್ವಿತೀಯಕಂ ।
ಷಡ್ಬೀಜೈಶ್ಚ ಷಡಂಗಾನಿ ಮೂರ್ಧ್ನಿ ಭಾಲೇ ದೃಶೋರ್ಮುಖೇ ॥ ೬ ॥

ಗಲಬಾಹುದ್ವಯೇ ಚೈವ ಹೃದಿ ಕುಕ್ಷೌ ಚ ನಾಭಿತಃ ।
ಧ್ವಜೇ ಜಾನುದ್ವಯೇ ಪಾದದ್ವಯೇ ವರ್ಣಾನ್ಕ್ರಮಾನ್ನ್ಯಸೇತ್ ॥ ೭ ॥

ಷಡ್ಬೀಜಾನಿ ಪದದ್ವಂದ್ವಂ ಮೂರ್ಧ್ನಿ ಭಾಲೇ ಮುಖೇ ಹೃದಿ ।
ನಾಭಾವೂರ್ವೋರ್ಜಂಘಯೋಶ್ಚ ಪಾದಯೋರ್ವಿನ್ಯಸೇತ್ಕ್ರಮಾತ್ ॥ ೮ ॥

---

ಯದು. "ಹ್ಸ್ಫ್ರೇಂ" ಎಂಬುದು ಐದನೆಯದು. "ಹ್ಸ್ರೌಂ" ಎಂಬುದು ಆರನೆಯದು. ಅನಂತರ "ಹನುಮತೇ" ಎಂಬ ಚತುರ್ಥ್ಯಂತ ಪದ, ಕೊನೆಯಲ್ಲಿ ಹೃದಯ ಎಂದರೆ "ನಮಃ" ಎಂಬ ಪದ. ಒಟ್ಟಿನಲ್ಲಿ "ಹೌಂ ಹ್ಸ್ಫ್ರೇಂ ಖ್ಫ್ರೇಂ ಹ್ಸ್ರೌಂ ಹಸ್ಫ್ರೇಂ ಹ್ಸ್ರೌಂ ಹನುಮತೇ ನಮಃ" ಎಂಬ ದ್ವಾದಶಾಕ್ಷರಮಂತ್ರವು ನಿಷ್ಪನ್ನವಾಗುವುದು. ಇದು ಉತ್ತಮ ಮಂತ್ರ. ಇದಕ್ಕೆ ರಾಮಚಂದ್ರನು ಋಷಿ. ಜಗತೀ ಛಂದಸ್ಸು ಎಂದು ಉಕ್ತವಾಗಿದೆ.

೬. ಹನುಮಂತನೇ ದೇವತೆ. 'ಹ್ಸ್ರೌಂ' ಎಂಬ ಆರನೆಯ ವರ್ಣವೇ ಬೀಜ. "ಹ್ಸ್ಫ್ರೇಂ" ಎಂಬ ಎರಡನೆಯ ವರ್ಣವೇ ಶಕ್ತಿ. ಮಂತ್ರದ ಆರು ಬೀಜಾಕ್ಷರಗಳಿಂದ ಹೃದಯಾದಿ ಷಡಂಗನ್ಯಾಸವನ್ನು ಮಾಡಬೇಕು.

೬-೭. ತಲೆ, ಹಣೆ, ಕಣ್ಣು, ಮುಖ, ಕುತ್ತಿಗೆ, ಎರಡು ತೋಳುಗಳು ಹೃದಯ, ಹೊಟ್ಟೆ, ನಾಭಿ, ಲಿಂಗ, ಎರಡು ಮೊಣಕಾಲುಗಳು, ಎರಡು ಪಾದಗಳು ಈ ಅಂಗಗಳಲ್ಲಿ ಕ್ರಮವಾಗಿ ಮಂತ್ರಾಕ್ಷರಗಳನ್ನು ನ್ಯಾಸಮಾಡಬೇಕು.

೮. ಈ ಮಂತ್ರದ ಆರು ಬೀಜಾಕ್ಷರಗಳು ಮತ್ತು ಎರಡು ಪದಗಳನ್ನು ಕ್ರಮವಾಗಿ ಶಿರಸ್ಸು, ಹಣೆ, ಮುಖ, ಹೃದಯ, ಹೊಕ್ಕಳು, ತೊಡೆ, ಜಂಘೆ, ಪಾದ ಇವುಗಳಲ್ಲಿ ನ್ಯಾಸಮಾಡಬೇಕು.

**ಅಂಜನೀಗರ್ಭಸಂಭೂತಂ ತತೋ ಧ್ಯಾಯೇತ್ಕಪೀಶ್ವರಮ್ ।**
**ಉದ್ಯತ್ಕೋಟ್ಯರ್ಕಸಂಕಾಶಂ ಜಗತ್ಪ್ರಕ್ಷೋಭಕಾರಕಂ ॥ ೯ ॥**

**ಶ್ರೀರಾಮಾಂಘ್ರಿಧ್ಯಾನನಿಷ್ಠಂ ಸುಗ್ರೀವಪ್ರಮುಖಾರ್ಚಿತಮ್ ।**
**ವಿತ್ರಾಸಯಂತಂ ನಾದೇನ ರಾಕ್ಷಸಾನ್ಮಾರುತಿಂ ಭಜೇತ್ ॥ ೧೦ ॥**

**ಧ್ಯಾತ್ವೈವಂ ಪ್ರಜಪೇದ್ಭಾನುಸಹಸ್ರಂ ವಿಜಿತೇಂದ್ರಿಯಃ ।**
**ದಶಾಂಶಂ ಜುಹುಯಾದ್ವ್ರೀಹೀನ್ಪಯೋದಧ್ಯಾಜ್ಯಮಿಶ್ರಿತಾನ್ ॥ ೧೧ ॥**

**ಪೂರ್ವೋಕ್ತೇ ವೈಷ್ಣವೇ ಪೀಠೇ ಮೂರ್ತಿಂ ಸಂಕಲ್ಪ್ಯ ಮೂಲತಃ ।**
**ಆವಾಹ್ಯ ತತ್ರ ಸಂಪೂಜ್ಯ ಪಾದ್ಯಾದಿಭಿರುಪಾಯನೈಃ ॥ ೧೨ ॥**

---

೯-೧೦. ಅನಂತರ ಅಂಜನಾದೇವಿಯ ಗರ್ಭದಲ್ಲಿ ಹುಟ್ಟಿದ ಕಪೀಶ್ವರನನ್ನು ಧ್ಯಾನಿಸಬೇಕು. ಎಂತೆಂದರೆ :— ಉದಯಿಸುತ್ತಿರುವ ಕೋಟಿಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ, ಜಗತ್ತಿಗೆ ಕ್ಷೋಭೆಯನ್ನುಂಟುಮಾಡುವ, ಶ್ರೀರಾಮರ ಪಾದಧ್ಯಾನನಿರತನಾದ, ಸುಗ್ರೀವ ಮುಂತಾದವರಿಂದ ಪೂಜಿಸಲ್ಪಟ್ಟ, ತನ್ನ ಶಬ್ದದಿಂದಲೇ ರಾಕ್ಷಸರನ್ನು ಭಯಪಡಿಸುತ್ತಿರುವ ವಾಯುಪುತ್ರನಾದ ಆಂಜನೇಯನನ್ನು ಭಜಿಸಬೇಕು.

೧೧. ಈ ಪ್ರಕಾರ ಧ್ಯಾನಮಾಡಿ ಜಿತೇಂದ್ರಿಯನಾಗಿ ಈ ಮಂತ್ರವನ್ನು ಹನ್ನೆರಡುಸಾವಿರ ಸಾರಿ ಜಪಮಾಡಬೇಕು. ಅದರ ಹತ್ತನೆಯ ಒಂದು ಭಾಗದಷ್ಟು ಹೋಮಗಳನ್ನು ಹಾಲು, ಮೊಸರು, ತುಪ್ಪಗಳಿಂದ ಮಿಶ್ರಿತವಾದ ಬತ್ತಗಳಿಂದ ಮಾಡಬೇಕು.

೧೨. ಹಿಂದೆ ಹೇಳಿದ ವೈಷ್ಣವಪೀಠದಲ್ಲಿ ಮೂರ್ತಿಯನ್ನು ಸ್ಥಾಪಿಸಿ ಮೂಲಮಂತ್ರದಿಂದ ಆವಾಹನೆ ಮಾಡಿ ಪಾದ್ಯ ಅರ್ಘ್ಯ ಇತ್ಯಾದ್ಯುಪಾಯನಗಳಿಂದ ಪೂಜಿಸಬೇಕು.

ಕೇಸರೇಷ್ವಂಗಪೂಜಾ ಸ್ಯಾತ್ಪತ್ರೇಷು ಚ ತತೋರ್ಚಯೇತ್ ।
ರಾಮಭಕ್ತೋ ಮಹಾತೇಜಾ ಕಪಿರಾಜೋ ಮಹಾಬಲಃ　　　॥ ೧೩ ॥

ದ್ರೋಣಾದ್ರಿಹಾರಕೋ ಮೇರುಪೀಠಕಾರ್ಚನಕಾರಕಃ ।
ದಕ್ಷಿಣಾಶಾಭಾಸ್ಕರಶ್ಚ ಸರ್ವವಿಘ್ನವಿನಾಶಕಃ　　　॥ ೧೪ ॥

ಇತ್ಥಂ ಸಂಪೂಜ್ಯ ನಾಮಾನಿ ದಲಾಗ್ರೇಷು ತತೋಽರ್ಚಯೇತ್ ।
ಸುಗ್ರೀವಮಂಗದಂ ನೀಲಂ ಜಾಂಬವತಂ ನಲಂ ತಥಾ　　　॥ ೧೫ ॥

ಸುಷೇಣಂ ದ್ವಿವಿದಂ ಮೈಂದಂ ಲೋಕಪಾಲಾಂಸ್ತತೋರ್ಚಯೇತ್ ।
ವಜ್ರಾದ್ಯಾನಪಿ ಸಂಪೂಜ್ಯ ಸಿದ್ಧಶ್ಚೈವಂ ಮನುರ್ಭವೇತ್　　　॥ ೧೬ ॥

ಮಂತ್ರಂ ನವಶತಂ ರಾತ್ರೌ ಜಪೇದ್ದಶದಿನಾವಧಿ ।
ಯೋ ನರಸ್ತಸ್ಯ ನಶ್ಯಂತಿ ರಾಜಶತ್ರೂತ್ಥಭೀತಯಃ　　　॥ ೧೭ ॥

---

೧೩-೧೪. ಕುಸುರುಗಳಲ್ಲಿ ಅಂಗಪೂಜೆಯನ್ನು ಮಾಡಿ ಅದರ ದಳಗಳಲ್ಲಿ "ರಾಮಭಕ್ತಾಯ ನಮಃ, ಮಹಾತೇಜಸೇ ನಮಃ, ಕಪಿರಾಜಾಯ ನಮಃ, ಮಹಾಬಲಾಯ ನಮಃ, ದ್ರೋಣಾದ್ರಿಹಾರಕಾಯ ನಮಃ, ಮೇರುಪೀಠಕಾರ್ಚನಕಾರಕಾಯ ನಮಃ, ದಕ್ಷಿಣಾಶಾಭಾಸ್ಕರಾಯ ನಮಃ, ಸರ್ವವಿಘ್ನವಿನಾಶಕಾಯ ನಮಃ" ಎಂಬುದಾಗಿ ನಾಮಪೂಜೆಮಾಡಬೇಕು.

೧೫-೧೬. ಅನಂತರ ದಳಾಗ್ರಗಳಲ್ಲಿ ಸುಗ್ರೀವ, ಅಂಗದ, ನೀಲ, ಜಾಂಬುವಂತ, ನಲ, ಸುಷೇಣ, ದ್ವಿವಿದ ಮತ್ತು ಮೈಂದ ಇವರನ್ನು ಪೂಜಿಸಬೇಕು. ತರುವಾಯ ಇಂದ್ರಾದಿ ಲೋಕಪಾಲಕರನ್ನೂ ಅವರ ವಜ್ರಾದ್ಯಾಯುಧಗಳನ್ನೂ ಸಹ ಪೂಜಿಸಿದರೆ ಮಂತ್ರಸಿದ್ಧಿಯಾಗುವುದು.

೧೭. ಈ ಮಂತ್ರವನ್ನು ರಾತ್ರಿಯಕಾಲದಲ್ಲಿ ಒಂಬೈನೂರರಂತೆ ಹತ್ತು ದಿನಗಳ ವರೆಗೆ ಜಪಿಸುವ ಮನುಷ್ಯನಿಗೆ ರಾಜ ಮತ್ತು ಶತ್ರುಗಳಿಂದಾಗುವ ಭೀತಿಗಳು ಹೋಗುವುವು.

ಮಾತುಲಿಂಗಾಮ್ರಕದಲೀಫಲೈರ್ಹುತ್ವಾ ಸಹಸ್ರಕಂ ।
ದ್ವಾವಿಂಶತಿ ಬ್ರಹ್ಮಚಾರಿವಿಪ್ರಾನ್ ಸಂಭೋಜಯೇಚ್ಛುಚೀನ್ ॥ ೧೮ ॥
ಏವಂ ಕೃತೇ ಭೂತವಿಷಗ್ರಹರೋಗಾದ್ಯುಪದ್ರವಾಃ ।
ನಶ್ಯಂತಿ ತತ್ಕ್ಷಣಾದೇವ ವಿದ್ವೇಷಿಗ್ರಹದಾನವಾಃ ॥ ೧೯ ॥
ಅಷ್ಟೋತ್ತರಶತೇನಾಂಬು ಮಂತ್ರಿತಂ ವಿಷನಾಶನಮ್ ।
ಭೂತಾಭಿಚಾರಕೃತ್ಯೋತ್ಥಜ್ವರೇ ತನ್ಮಂತ್ರಮಂತ್ರಿತೈಃ ॥ ೨೦ ॥
ಭಸ್ಮಭಿಃ ಸಲಿಲೈರ್ವಾಪಿ ತಾಡಯೇಜ್ಜ್ವರಿಣಂ ಕ್ರುಧಾ ।
ತ್ರಿದಿನಾಜ್ಜ್ವರಮುಕ್ತೋಽಸೌ ಸುಖಂ ಚ ಲಭತೇ ನರಃ ॥ ೨೧ ॥
ಔಷಧಂ ವಾಂ ಜಲಂ ವಾಪಿ ಭುಕ್ತ್ವಾ ತನ್ಮಂತ್ರಮಂತ್ರಿತಮ್ ।
ಸರ್ವಾನ್ರೋಗಾನ್ಪರಾಭೂಯ ಸುಖೀ ಭವತಿ ತತ್ಕ್ಷಣಾತ್ ॥ ೨೨ ॥

---

೧೮. ಮಾದಳದಹಣ್ಣು, ಬಾಳೆಯಹಣ್ಣು, ಮಾವಿನಹಣ್ಣುಗಳಿಂದ ಒಂದು ಸಾವಿರ ಹೋಮಮಾಡಿ ಇಪ್ಪತ್ತೆರಡು ಮಂದಿ ಪರಿಶುದ್ಧರಾದ ಬ್ರಹ್ಮಚಾರಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

೧೯. ಹೀಗೆ ಮಾಡಿದರೆ ಭೂತ, ವಿಷ, ಗ್ರಹ, ರೋಗ ಮುಂತಾದುವುಗಳ ಬಾಧೆಯು ಕೂಡಲೇ ನಷ್ಟವಾಗುವುದು. ಮತ್ತು ಶತ್ರು, ಗ್ರಹ, ದಾನವರೂ ಸಹ ನಶಿಸಿಹೋಗುವರು.

೨೦-೨೧. ನೂರೆಂಟಾವರ್ತಿ ಈ ಮಂತ್ರವನ್ನುಚ್ಚರಿಸಿ ಅಭಿಮಂತ್ರಿಸಿದ ನೀರು ವಿಷವನ್ನು ಪರಿಹರಿಸುತ್ತದೆ. ಭೂತ ಅಥವಾ ಅಭಿಚಾರ(ಮಾಟ) ಕೃತ್ಯಗಳಿಂದ ಜ್ವರಬಂದಾಗ ಈ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ನೀರು ಅಥವಾ ಭಸ್ಮಗಳಿಂದ ಕ್ರೋಧಪೂರ್ವಕವಾಗಿ ಜ್ವರಗ್ರಸ್ತನನ್ನು ಪ್ರೋಕ್ಷಿಸಬೇಕು. ಹೀಗೆ ಮೂರು ದಿನಗಳು ಮಾಡುವುದರಿಂದ ಜ್ವರವು ವಾಸಿಯಾಗಿ ಆ ಮನುಷ್ಯನು ಸುಖಿಯಾಗುವನು.

೨೨. ಆ ಹನುಮನ್ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಔಷಧ ಅಥವಾ ನೀರನ್ನು ಪಾನಮಾಡಿದರೆ ಕೂಡಲೇ ಸಕಲರೋಗಗಳೂ ಹೋಗಿ ಸುಖವುಂಟಾಗುವುದು.

ತಜ್ಜಪ್ತಭಸ್ಮಲಿಪ್ತಾಂಗೋ ಭುಕ್ತ್ವಾ ತನ್ಮಂತ್ರಿತಂ ಪಯಃ ।
ಯೋದ್ಧುಂ ಗಚ್ಛೇಚ್ಚ ಯೋ ಮಂತ್ರೀ ಶಸ್ತ್ರಸಂಘೈರ್ನ ಬಾಧ್ಯತೇ ॥೨೩ ॥

ಶಸ್ತ್ರಕ್ಷತಂ ವ್ರಣಸ್ಫೋಟೋ ಲೂತಾಸ್ಫೋಟೋಽಪಿ ಭಸ್ಮನಾ ।
ತ್ರಿಜಪ್ತೇನ ಚ ಸಂಸ್ಪೃಷ್ಟಾಃ ಶುಷ್ಯಂತ್ಯೇವ ನ ಸಂಶಯಃ ॥ ೨೪ ॥

ಜಪೇದರ್ಕಾಸ್ತಮಾರಭ್ಯ ಯಾವದರ್ಕೋದಯೋ ಭವೇತ್ ।
ಮಂತ್ರಂ ಸಪ್ತದಿನಂ ಯಾವಚ್ಚಾದಾಯ ಭಸ್ಮಕೀಲಕೌ ॥ ೨೫ ॥

ನಿಖನೇದಭಿಮಂತ್ರ್ಯೈಶು ಶತ್ರೂಣಾಂ ದ್ವಾರ್ಯಲಕ್ಷಿತಃ ।
ವಿದ್ವೇಷಂ ಮಿಥ ಆಪನ್ನಾಃ ಪಲಾಯಂತೇಽರಯೋಽಚಿರಾತ್ ॥ ೨೬ ॥

ಭಸ್ಮಾಂಬುಚಂದನಂ ಮಂತ್ರೀ ಮಂತ್ರೇಣಾನೇನ ಮಂತ್ರಿತಂ ।
ಭಕ್ಷ್ಯಾದಿಯೋಜಿತಂ ಯಸ್ಮೈ ದದಾತಿ ಸ ತು ದಾಸವತ್ ॥ ೨೭ ॥

---

೨೩. ಆ ಮಂತ್ರಜಪದಿಂದ ಅಭಿಮಂತ್ರಿತವಾದ ಬೂದಿಯನ್ನು ಮೈಗೆಲ್ಲಾ ಹಚ್ಚಿಕೊಂಡು ಅದರಿಂದಭಿಮಂತ್ರಿತವಾದ ನೀರನ್ನು ಕುಡಿದು ಯುದ್ಧಕ್ಕಾಗಿ ಹೋಗುವ ಮಂತ್ರಿಯು ಶಸ್ತ್ರವ್ಯೂಹಗಳ ಬಾಧೆಗೆ ಒಳಗಾಗುವುದಿಲ್ಲ

೨೪. ಶಸ್ತ್ರಘಾತದಿಂದ ಉಂಟಾದ ಗಾಯ, ಹುಣ್ಣಿನ ಗಾಯ, ಜೇಡರ ಹುಳುಕಚ್ಚಿದಗಾಯ ಇವುಗಳು ಈ ಮಂತ್ರವನ್ನು ಮೂರಾವರ್ತಿ ಜಪಿಸಿ ಅಭಿಮಂತ್ರಿಸಿದ ಭಸ್ಮವನ್ನು ಹಚ್ಚುವುದರಿಂದ ಒಣಗಿಹೋಗುತ್ತವೆ. ಸಂದೇಹವಿಲ್ಲ

೨೫-೨೬. ಈ ಮಂತ್ರವನ್ನು ಏಳು ದಿನಗಳು ಸೂರ್ಯಾಸ್ತಮಯವಾಗಿ ಪುನಃ ಸೂರ್ಯೋದಯವಾಗುವವರೆಗೂ ಜಪಿಸಿ ಬೂದಿ ಮತ್ತು ಕಬ್ಬಿಣದ ಮೊಳೆಗಳನ್ನು ಅಭಿಮಂತ್ರಿಸಿ ಶತ್ರುಗಳು ಸಂಚರಿಸುವ ದ್ವಾರದಲ್ಲಿ ಅವರಿಗೆ ಕಾಣದಂತೆ ಭೂಮಿಯಲ್ಲಿ ಹೂಳಬೇಕು. ಕೂಡಲೇ ಅವರಿಗೆ ಪರಸ್ಪರ ದ್ವೇಷಬಂದು ಶತ್ರುಗಳು ಓಡಿಹೋಗುವರು.

೨೭-೨೮. ಈ ಮಂತ್ರಸಿದ್ಧಿಯನ್ನು ಪಡೆದಿರುವವನು ಈ ಮಂತ್ರದಿಂದ ಅಭಿಮಂತ್ರಿಸಿದ ಬೂದಿ, ನೀರು, ಗಂಧ ಇವುಗಳನ್ನು ಆಹಾರದೊಂದಿಗೆ

ಕ್ರೂರಾಶ್ಚ ಜಂತವೋಽಪ್ಯೇವಂ ಭವಂತಿ ವಶವರ್ತಿನಃ ।
ಗೃಹೀತ್ವೈಶಾನದಿಕ್ಸಂಸ್ಥಂ ಕರಂಜತರುಮೂಲಕಮ್ ॥ ೨೮ ॥

ಕೃತ್ವಾ ತೇನಾಂಗುಷ್ಠಮಾತ್ರಾಂ ಪ್ರತಿಮಾಂ ಚ ಹನೂಮತಃ ।
ಕೃತ್ವಾ ಪ್ರಾಣಪ್ರತಿಷ್ಠಾಂ ಚ ಸಿಂಧೂರಾದ್ಯೈಃ ಪ್ರಪೂಜ್ಯ ಚ ॥ ೨೯ ॥

ಗೃಹಸ್ಯಾಭಿಮುಖಂ ದ್ವಾರೇ ನಿಖನೇನ್ಮಂತ್ರಮುಚ್ಚರನ್ ।
ಗೃಹಾಭಿಚಾರರೋಗಾಗ್ನಿ ವಿಷಚೋರನೃಪೋದ್ಭವಾಃ ॥ ೩೦ ॥

ನ ಜಾಯಂತೇ ಗೃಹೇ ತಸ್ಮಿನ್ ಕದಾಚಿದಪ್ಯುಪದ್ರವಾಃ ।
ತದ್ಗೃಹಂ ಧನಪುತ್ರಾದ್ಯೈರೇಧತೇ ಪ್ರತ್ಯಹಂ ಚಿರಮ್ ॥ ೩೧ ॥

ನಿಶಿ ಸ್ಮಶಾನಭೂಮಿಸ್ಥೋ ಭಸ್ಮನಾ ಮೃತ್ಸ್ನಯಾಪಿ ವಾ ।
ಶತ್ರೋಃ ಪ್ರತಿಕೃತಿಂ ಕೃತ್ವಾ ಹೃದಿ ನಾಮ ಸಮಾಲಿಖೇತ್ ॥ ೩೨ ॥

---

ಸೇರಿಸಿ ಕೊಟ್ಟರೆ ಅದನ್ನು ತಿಂದವನು ವಶನಾಗುವನು. ಈ ರೀತಿಯಾಗಿ ಮಾಡಿದರೆ ಕ್ರೂರಜಂತುಗಳೂ ಸಹ ಸ್ವಾಧೀನಕ್ಕೆ ಬರುವುವು.

೨೮--೩೧. ಈಶಾನ್ಯದಿಕ್ಕಿನಲ್ಲಿರುವ ಕರಂಜವೃಕ್ಷದ (ಹುಲಗಿಲಿಗಿಡದ) ಬೇರನ್ನು ತೆಗೆದುಕೊಂಡು ಅದರಿಂದ ಹೆಬ್ಬೆಟ್ಟಿನ ಅಳತೆಯಷ್ಟು ಹನುಮಂತನ ಪ್ರತಿಮೆಯನ್ನು ಮಾಡಿ ಅದರಲ್ಲಿ ಪ್ರಾಣಪ್ರತಿಷ್ಠೆಮಾಡಿ ಸಿಂಧೂರ ಮುಂತಾದ ಪುಷ್ಪಗಳಿಂದ ಪೂಜಿಸಿ ಬಾಗಿಲಿನಲ್ಲಿ ಮನೆಗೆ ಇದಿರಾಗಿ ಮಂತ್ರವನ್ನು ಹೇಳುತ್ತಾ ಹೂಳಬೇಕು. ಅದರಿಂದ ಆ ಮನೆಯಲ್ಲಿ ಗ್ರಹ, ಮಾಟ, ಮುಂತಾದುವು, ರೋಗ, ಬೆಂಕಿ, ವಿಷ, ಕಳ್ಳರು ಮತ್ತು ರಾಜರು ಇವರಿಂದುಟಾಗುವ ಬಾಧೆಗಳು ಯಾವಾಗಲೂ ಸಂಭವಿಸುವುದಿಲ್ಲ. ಅಂತಹ ಮನೆಯು ದಿನದಿನಕ್ಕೆ ಮಕ್ಕಳು ಐಶ್ವರ್ಯ ಮುಂತಾದುವುಗಳಿಂದ ಬಹುಕಾಲ ಪರ್ಯಂತವಾಗಿ ಅಭಿವೃದ್ಧಿಯನ್ನು ಹೊಂದುತ್ತದೆ.

೩೨-೩೫. ರಾತ್ರಿಯ ಕಾಲದಲ್ಲಿ ಸ್ಮಶಾನಕ್ಕೆ ಹೋಗಿ ಅಲ್ಲಿರುವ ಬೂದಿ ಅಥವಾ ಮಣ್ಣಿನಿಂದ ಶತ್ರುವಿನ ವಿಗ್ರಹವನ್ನು ಮಾಡಿ ಹೃದಯಸ್ಥಾನದಲ್ಲಿ ಹೆಸ

ಕೃತ್ವಾ ಪ್ರಾಣಪ್ರತಿಷ್ಠಾಂ ತಾಂ ಭಿಂದ್ಯಾಚ್ಛಸ್ತ್ರೈರ್ಮನುಂ ಜಪನ್ ।
ಮಂತ್ರಾಂತೇ ಪ್ರೋಚ್ಚರೇಚ್ಛತ್ರೋರ್ನಾಮ ಭಿಂಧಿ ಚ ಭಿಂಧಿ ಚ ॥ ೩೩ ॥

ಮಾರಯೇತಿ ಚ ತಸ್ಯಾಂತೇ ದಂತೈರೋಷ್ಠಂ ನಿಪೀಡ್ಯ ಚ ।
ಪಾಣ್ಯೋಸ್ತಲೇ ಪ್ರಪೀಡ್ಯಾಥ ತ್ಯಕ್ತ್ವಾ ತಾಂ ಸ್ವಗೃಹಂ ವ್ರಜೇತ್ ॥ ೩೪ ॥

ಕುರ್ವನ್ಸಪ್ತದಿನಂ ಚೈವಂ ಹನ್ಯಾಚ್ಛತ್ರುಂ ನ ಸಂಶಯಃ ।
ರಾಜಿಕಾಲವಣೈರ್ಮುಕ್ತಚಿಕುರಃ ಪಿತೃಕಾನನೇ ॥ ೩೫ ॥

ಧತ್ತೂರಫಲಪುಷ್ಪೈಶ್ಚ ನಖರೋಮವಿಷೈರಪಿ ।
ದ್ವಿಕ (ಕಾಕ) ಕೌಶಿಕಗೃಧ್ರಾಣಾಂ ಪಕ್ಷೈಃ ಶ್ಲೇಷ್ಮಾಂತಕಾಕ್ಷಜೈಃ ॥ ೩೬ ॥

ಸಮಿದ್ಭಿಸ್ತ್ರಿಶತಂ ಯಾಮ್ಯದಿಙ್ ಮುಖೋ ಜುಹುಯಾನ್ನಿಶಿ ।
ಏವಂ ಸಪ್ತದಿನಂ ಕುರ್ವನ್ಮಾರಯೇದುದ್ಧತಂ ರಿಪುಂ ॥ ೩೭ ॥

---

ರನ್ನು ಬರೆಯಬೇಕು. ಅನಂತರ ಅದರಲ್ಲಿ ಪ್ರಾಣಪ್ರತಿಷ್ಠೆಯನ್ನು ಮಾಡಿ ಮಂತ್ರವನ್ನು ಜಪಿಸುತ್ತಾ ಶಸ್ತ್ರಗಳಿಂದ ಆ ವಿಗ್ರಹವನ್ನು ಸೀಳಬೇಕು. ಮಂತ್ರದ ಕೊನೆಯಲ್ಲಿ ಶತ್ರುವಿನ ಹೆಸರನ್ನು "ಭಿಂಧಿ ಭಿಂಧಿ ಮಾರಾಯ" (ಕತ್ತರಿಸು ಸೀಳು,ಕೊಲ್ಲು) ಎಂಬುದಾಗಿಯೂ ಹೇಳಬೇಕು. ಕೊನೆಯಲ್ಲಿ ಹಲ್ಲುಗಳಿಂದ ತುಟಿಯನ್ನು ಕಚ್ಚಿಕೊಂಡು ಅಂಗೈಗಳಲ್ಲಿ ತಿಕ್ಕಿ ಅದನ್ನೂ ಅಲ್ಲಿಯೇ ಬಿಟ್ಟು ತನ್ನ ಮನೆಗೆ ಬರಬೇಕು. ಈರೀತಿ ಏಳು ದಿನಗಳು ಮಾಡಿದರೆ ಶತ್ರುವು ಸಾಯುವನು. ಸಂದೇಹವಿಲ್ಲ. ಇದೊಂದು ಮಾರಣಪ್ರಯೋಗವು.

೩೫-೩೭. ಇನ್ನೊಂದು ಮಾರಣಪ್ರಯೋಗದ ವಿಧಾನವು:—ರಾತ್ರಿಯ ಕಾಲದಲ್ಲಿ ಕೂದಲ ಗಂಟನ್ನು ಬಿಚ್ಚಿಕೊಂಡು ಸ್ಮಶಾನದಲ್ಲಿ ದಕ್ಷಿಣದಿಕ್ಕಿಗೆ ಇದಿರಾಗಿ ನಿಂತು ಕರಿಸಾಸುವೆ, ಉಪ್ಪು, ದತ್ತೂರಿಫಲ, ಪುಷ್ಪ, ಉಗುರು, ಮೈಮೇಲಿನ ಕೂದಲು, ಮತ್ತು ವಿಷ ಇವುವಳಿಂದಲೂ. ಕಾಗೆ, ಗೂಬೆ, ಹದ್ದು ಇವುಗಳ ರೆಕ್ಕೆಗಳಿಂದಲೂ ಮತ್ತು ಚಳ್ಳೆಗಿಡ ತಾರೇಗಿಡ ಇವುಗಳ ಸಮಿತ್ತುಗಳಿಂದಲೂ ಮುನ್ನೂರು ಹೋಮಗಳನ್ನು ಆಚರಿಸಬೇಕು. ಈ ಪ್ರಕಾರ ಏಳು ದಿನಗಳು ಮಾಡಿದರೆ ಉದ್ಧತಶತ್ರುವು ನಾಶವಾಗುವನು.

ವಿವಾಸಸ್ತ್ರಿದಿನಂ ರಾತ್ರೌ ಶ್ಮಶಾನೇ ಷಟ್‌ಶತಂ ಜಪೇತ್ ।
ತತೋ ವೇತಾಲ ಉತ್ಥಾಯ ವದೇದ್ಭಾವಿ ಶುಭಾಶುಭಂ ॥ ೩೮ ॥

ಕಿಂಕರೀಭೂಯ ವರ್ತೇತ ಕುರುತೇ ಸಾಧಕೋದಿತಂ ।
ಭಸ್ಮಾಂಬುಮಂತ್ರಿತಂ ರಾತ್ರೌ ಸಹಸ್ರಾವೃತ್ತಿಕಂ ಪುನಃ ॥ ೩೯ ॥

ದಿನತ್ರಯಂ ಚ ತತ್ಪಶ್ಚಾತ್ಪ್ರಕ್ಷಿಪೇತ್ಪ್ರತಿಮಾಸು ಚ ।
ಯಾಸು ಕಾಸು ಚ ಸ್ಥೂಲಾಸು ಲಘುಷ್ವಪಿ ವಿಶೇಷತಃ ॥ ೪೦ ॥

ಮಂತ್ರಪ್ರಭಾವಾಚ್ಚಲನಂ ಭವತ್ಯೇವ ನ ಸಂಶಯಃ ।
ಅಷ್ಟಮ್ಯಾಂ ವಾ ಚತುರ್ದಶ್ಯಾಂ ಕುಜೇ ವಾ ರವಿವಾಸರೇ ॥ ೪೧ ॥

ಹನುಮತ್ಪ್ರತಿಮಾಂ ಪಟ್ವ ಮಾಷೈಃ ಸ್ನೇಹಪರಿಪ್ಲುತೈಃ ।
ಕುರ್ಯಾದ್ರಮ್ಯಾಂ ವಿಶುದ್ಧಾತ್ಮಾ ಸರ್ವಲಕ್ಷಣಲಕ್ಷಿತಾಂ ॥ ೪೨ ॥

---

೩೮-೩೯. ಸ್ಮಶಾನದಲ್ಲಿ ರಾತ್ರಿಯಕಾಲದಲ್ಲಿ ಬಟ್ಟೆಯನ್ನುಡದೆ ಮೂರು ದಿನಗಳು ಈ ಮಂತ್ರವನ್ನು ಆರುನೂರರಂತೆ ಜಪಿಸಬೇಕು. ಅನಂತರ ಬೇತಾಳನು ಎದ್ದು ಬಂದು ಮುಂದಾಗುವ ಶುಭಾಶುಭಗಳನ್ನು ಹೇಳುವನು ಮತ್ತು ಅವನು ಅಧೀನನಾಗಿ ಹೇಳಿದುದೆಲ್ಲವನ್ನೂ ಮಾಡುವನು.

೩೯-೪೧. ಮೂರು ದಿನಗಳು ರಾತ್ರಿಯಕಾಲದಲ್ಲಿ ಒಂದು ಸಾವಿರಾವರ್ತಿ ಈಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಬೂದಿ, ನೀರುಗಳನ್ನು ಯಾವುದಾದರೂ ದೊಡ್ಡದು ಅಥವಾ ಸಣ್ಣಪ್ರತಿಮೆಗಳ ಮೇಲೆ ಹಾಕಿದರೆ ಮಂತ್ರದ ಸಾಮರ್ಥ್ಯದಿಂದ ಆ ಪ್ರತಿಮೆಯು ಚಲಿಸುತ್ತದೆ. ಸಂದೇಹವಿಲ್ಲ.

೪೧-೪೨. ಮಂಗಳವಾರ ಅಥವಾ ಭಾನುವಾರ ಯುಕ್ತವಾದ ಅಷ್ಟಮೀ ಅಥವಾ ಚತುರ್ದಶೀ ದಿನ ನಾಲ್ಕು ದಾರಿಗಳು ಸೇರುವ ಸ್ಥಳದಲ್ಲಿ ನಿರ್ಮಲಚಿತ್ತನಾಗಿ ತುಪ್ಪ ಅಥವಾ ಎಣ್ಣೆಗಳಲ್ಲಿ ನೆನೆಸಿದ ಉದ್ದಿನ ಕಾಳುಗಳಿಂದ ಸಕಲ ಲಕ್ಷಣಸಂಪನ್ನವು, ಮನೋಹರವೂ ಆದ ಹನುಮಂತನ ವಿಗ್ರಹವನ್ನು ರಚಿಸಬೇಕು.

**ತೈಲದೀಪಂ ವಾಮಭಾಗೇ ಘೃತದೀಪಂ ತು ದಕ್ಷಿಣೇ ।**
**ಸಂಸ್ಥಾಪ್ಯಾವಾಹಯೇತ್ಪಶ್ಚಾನ್ಮೂಲಮಂತ್ರೇಣ ಮಂತ್ರವಿತ್ ॥ ೪೩ ॥**

**ಪ್ರಾಣಪ್ರತಿಷ್ಠಾಂ ಕೃತ್ವಾ ಚ ಪಾದ್ಯಾದೀನಿ ಸಮರ್ಪಯೇತ್ ।**
**ರಕ್ತಚಂದನಪುಷ್ಪೈಶ್ಚ ಸಿಂಧೂರಾದ್ಯೈಃ ಸಮರ್ಚಯೇತ್ ॥ ೪೪ ॥**

**ಧೂಪಂ ದೀಪಂ ಪ್ರದಾಯಾಥ ನೈವೇದ್ಯಂ ಚ ಸಮರ್ಪಯೇತ್ ।**
**ಅಪೂಪಮೋದನಂ ಶಾಕಮೋದಕಾನ್ವಟಕಾದಿಕಂ ॥ ೪೫ ॥**

**ಸಾಜ್ಯಂ ಚ ತತ್ಸಮರ್ಪ್ಯಾಥ ಮೂಲಮಂತ್ರೇಣ ಮಂತ್ರವಿತ್ ।**
**ಅಖಂಡಿತಾನ್ಯಹಿಲತಾದಳಾನಾಂ ಸಪ್ತವಿಂಶತಿಂ ॥ ೪೬ ॥**

**ತ್ರಿಧಾ ಕೃತ್ವಾ ಸಪೂಗಾನಿ ಮೂಲೇನೈವ ಸಮರ್ಪಯೇತ್ ।**
**ಏವಂ ಸಂಪೂಜ್ಯ ಮಂತ್ರಜ್ಞೋ ಜಪೇದ್ದಶಶತಂ ಮನುಂ ॥ ೪೭ ॥**

---

೪೩-೪೪. ಅದರ ಎಡಭಾಗದಲ್ಲಿ ಎಣ್ಣೆಯ ದೀಪವನ್ನೂ, ಬಲಭಾಗದಲ್ಲಿ ತುಪ್ಪದ ದೀಪವನ್ನೂ ಇಟ್ಟು, ತರುವಾಯ ಮಂತ್ರಜ್ಞನು ಆ ಪ್ರತಿಮೆಯಲ್ಲಿ ಮೂಲಮಂತ್ರದಿಂದ ಆವಾಹನೆಮಾಡಿ, ಪ್ರಾಣಪ್ರತಿಷ್ಠಾಪನೆಯನ್ನೂ ಮಾಡಿ ಪಾದ್ಯವುಮುಂತಾದುವನ್ನು ಸಮರ್ಪಿಸಿ, ಕೆಂಪುಗಂಧ ಪುಷ್ಪಗಳಿಂದಲೂ, ಸಿಂಧೂರಾದಿ ಪುಷ್ಪಗಳಿಂದಲೂ ಪೂಜಿಸಬೇಕು.

೪೫-೪೭. ಅನಂತರ ಧೂಪದೀಪಗಳನ್ನು ಸಮರ್ಪಿಸಿ, ಅಪೂಪ, ಅನ್ನ, ಶಾಕ, ಮೋದಕ, ವಟಕ ಮುಂತಾದುವುಗಳನ್ನು ಘೃತಸಹಿತವಾಗಿ ಮೂಲಮಂತ್ರದಿಂದ ನೈವೇದ್ಯಮಾಡಿ ಹರಿಯದಿರುವ ಇಪ್ಪತ್ತೇಳು ವೀಳೆಯದೆಲೆಗಳನ್ನು ಮೂರುಭಾಗಮಾಡಿ ಅಡಿಕೆಸಹಿತವಾಗಿ ಮೂಲಮಂತ್ರದಿಂದ ಸಮರ್ಪಿಸಬೇಕು. ಈ ರೀತಿ ಪೂಜೆಮಾಡಿ ಮಂತ್ರಜ್ಞನು ಮಂತ್ರವನ್ನು ಒಂದು ಸಾವಿರ ಜಪಮಾಡಬೇಕು.

ಕರ್ಪೂರಾರಾರ್ತಿಕಂ ಕೃತ್ವಾ ಸ್ತುತ್ವಾ ಚ ಬಹುಧಾ ಸುಧೀಃ ।
ನಿಜೇಪ್ಸಿತಂ ನಿವೇದ್ಯಾಥ ವಿಧಿವದ್ವಿಸೃಜೇತ್ತತಃ ॥ ೪೮ ॥

ನೈವೇದ್ಯಾನ್ನೇನ ಸಂಭೋಜ್ಯ ಬ್ರಾಹ್ಮಣಾನ್ಸಪ್ತಸಂಖ್ಯಯಾ ।
ನಿವೇದಿತಾನಿ ಪರ್ಣಾನಿ ತೇಭ್ಯೋ ದದ್ಯಾದ್ವಿಭಜ್ಯ ಚ ॥ ೪೯ ॥

ದಕ್ಷಿಣಾಂ ಚ ಯಥಾಶಕ್ತಿ ದತ್ವಾ ತಾನ್ ವಿಸೃಜೇತ್ಸುಧೀಃ ।
ತತ ಇಷ್ಟಗಣೈಃ ಸಾರ್ಧಂ ಸ್ವಯಂ ಭುಂಜೀತ ವಾಗ್ಯತಃ ॥ ೫೦ ॥

ತದ್ದಿನೇ ಭೂಮಿಶಯ್ಯಾಂ ಚ ಬ್ರಹ್ಮಚರ್ಯಂ ಸಮಾಚರೇತ್ ।
ಏವಂ ಯಃ ಕುರುತೇ ಮರ್ತ್ಯಃ ಸೋಚಿರಾದೇವ ನಿಶ್ಚಿತಂ ॥ ೫೧ ॥

ಪ್ರಾಪ್ನುಯಾತ್ಸಕಲಾನ್ಕಾಮಾನ್ಕಪೀಶಸ್ಯ ಪ್ರಸಾದತಃ ।
ಹನುಮತ್ಪ್ರತಿಮಾಂ ಭೂಮೌ ವಿಲಿಖೇತ್ತತ್ಪರೋ ಮನುಂ ॥ ೫೨ ॥

---

೪೮. ಬಳಿಕ ಕರ್ಪೂರಾರತಿಯನ್ನು ಮಾಡಿ, ಬಹು ಪ್ರಕಾರವಾಗಿ ಸ್ತುತಿಸಿ ತನ್ನ ಇಷ್ಟಾರ್ಥಗಳನ್ನು ಅರಿಕೆಮಾಡಿ ಅನಂತರ ವಿಧಾನೋಕ್ತಪ್ರಕಾರ ವಿಸರ್ಜನೆ ಮಾಡಬೇಕು.

೪೯-೫೦. ನೈವೇದ್ಯ ಮಾಡಿದ ಅನ್ನದಿಂದ ಏಳು ಜನ ಬ್ರಾಹ್ಮಣರಿಗೆ ಭೋಜನಮಾಡಿಸಿ, ನೀವೇದಿತವಾದ ವೀಳೆಯದೆಲೆಯನ್ನು ವಿಭಾಗಿಸಿ ಅವರಿಗೆ ಕೊಟ್ಟು ತನ್ನ ಶಕ್ತ್ಯನುಸಾರವಾಗಿ ದಕ್ಷಿಣೆಯನ್ನೂ ಕೊಟ್ಟು ಅವರನ್ನು ವಿಸರ್ಜನೆ ಮಾಡಬೇಕು. ತರುವಾಯ ಇಷ್ಟಮಿತ್ರರೊಡನೆ ತಾನು ಮೌನದಿಂದ ಭೋಜನ ಮಾಡಬೇಕು.

೫೧-೫೨. ಆದಿವಸ ನೆಲದಮೇಲೆ ಮಲಗಿ ಬ್ರಹ್ಮಚರ್ಯವನ್ನಾಚರಿಸಬೇಕು. ಈ ರೀತಿ ಮಾಡುವ ಮನುಜನು ಕಪೀಶ್ವರನ ಪ್ರೀತಿಗೆ ಪಾತ್ರನಾಗಿ ಅವನ ಅನುಗ್ರಹದಿಂದ ಶೀಘ್ರವಾಗಿಯೇ ಸಕಲೇಷ್ಟಾರ್ಥಗಳನ್ನೂ ಪಡೆಯುವನು. ಖಂಡಿತ.

ಸಾಧ್ಯನಾಮ ದ್ವಿತೀಯಾಂತಂ ವಿಮೋಚಯ ವಿಮೋಚಯ ।
ತತ್ಸರ್ವಂ ಮಾರ್ಜಯೇದ್ವಾಮಪಾಣಿನಾಥ ಪುನರ್ಲಿಖೇತ್ ।
ಏವಮಷ್ಟೋತ್ತರಶತಂ ಲಿಖಿತ್ವಾ ಮಾರ್ಜಯೇತ್ಪುನಃ ॥ ೫೩ ॥

ಏವಂ ಕೃತೇ ಮಹಾಕಾರಾಗೃಹಾಚ್ಛೀಘ್ರಂ ವಿಮುಚ್ಯತೇ ।
ಏವಮನ್ಯಾನಿ ಕರ್ಮಾಣಿ ಕುರ್ಯಾತ್ಪಲ್ಲವಮುಲ್ಲಿಖನ್ ॥ ೫೪ ॥

ಸರ್ಷಪೈರ್ವಶ್ಯಕೃದ್ಧೋಮೋ ವಿದ್ವಿಷೇ ಹಯಮಾರಜೈಃ ।
ಕುಸುಮೈರಿಧ್ಮಕಾಷ್ಠೈರ್ವಾ ಮರೀಚೈರ್ಜೀರಿಕೈರಪಿ ॥ ೫೫ ॥

ಜ್ವರೇ ದೂರ್ವಾಗುಡೂಚೀಭಿರ್ದಧ್ನಾ ಕ್ಷೀರೇಣ ವಾ ಘೃತೈಃ ।
ಶೂಲೇ ಕರಂಜವಾತಾರಿಸಮಿದ್ಭಿಸ್ತೈಲಲೋಲಿತೈಃ ॥ ೫೬ ॥

---

೫೨-೫೩. ನೆಲದಮೇಲೆ ಹನುಮಂತನ ಪ್ರತಿಮೆಯನ್ನು ಬರೆದು ಅದರ ಮುಂದೆ ಮಂತ್ರವನ್ನೂ, ದ್ವಿತೀಯಾವಿಭಕ್ತ್ಯಂತವಾಗಿ ಸಾಧ್ಯನಾಮಧೇಯವನ್ನೂ, "ವಿಮೋಚಯ ವಿಮೋಚಯ" ಎಂದರೆ ಬಿಡುಗಡೆ ಮಾಡು, ಬಿಡುಗಡೆ ಮಾಡು ಎಂಬುದಾಗಿಯೂ ಬರೆಯಬೇಕು. ಅದನ್ನೆಲ್ಲಾ ಎಡಗೈಯಿಂದ ಅಳಿಸಿ ಪುನಃ ಹಾಗೆಯೇ ಬರೆಯಬೇಕು. ಈ ರೀತಿ ನೂರೆಂಟಾವರ್ತಿ ಬರೆದು ಅಳಿಸಬೇಕು.

೫೪. ಈ ರೀತಿಯಾಗಿ ಮಾಡಿದರೆ ಮಹಾಕಾರಾಗೃಹದಿಂದ ಬೇಗ ಬಿಡುಗಡೆಯಾಗುತ್ತದೆ. ಇದೇ ರೀತಿಯಾಗಿ ದ್ವೇಷ್ಯನಲ್ಲಿ "ಅಮುಕಂ ದ್ವೇಷಯ ದ್ವೇಷಯ" "ಇವನನ್ನು ದ್ವೇಷಿಸು ದ್ವೇಷಿಸು" ಎಂಬುದಾಗಿಯೂ, ಸಾಯಿಸುವುದಕ್ಕಾಗಿ "ಅಮುಕಂ ಮಾರಯ ಮಾರಯ" "ಇವನನ್ನು ಕೊಲ್ಲು ಕೊಲ್ಲು" ಎಂಬುದಾಗಿಯೂ ಪಲ್ಲವಗಳನ್ನು ಬರೆಯುವವನಾಗಿ ಕರ್ಮಗಳನ್ನು ಮಾಡಬೇಕು.

೫೫-೫೭. ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ಸಾಸವೆಯ ಹೋಮವೂ, ದ್ವೇಷವನ್ನು ಉಂಟುಮಾಡಲು ಕರವೀರಪುಷ್ಪ (ಗನ್ನೇರಳೇಹೂವು) ಅಥವಾ ಇಧ್ಮಕಾಷ್ಠ (ಅರಳೀ ಗಿಡದ ಸಮಿತ್ತು) ಇಲ್ಲವೇ ಮೆಣಸು ಅಥವಾ ಜೀರಿಗೆ

ತೈಲಾಕ್ತಾಭಿಶ್ಚ ನಿರ್ಗುಂಡೀಸಮಿದ್ಭಿರ್ವಾ ಪ್ರಯತ್ನತಃ ।
ಸೌಭಾಗ್ಯೇ ಚಂದನೈಶ್ಚಂದ್ರರೋಚನೈರ್ವಾ ಲವಂಗಕೈಃ ॥ ೫೭ ॥

ಸುಗಂಧಪುಷ್ಪೈರ್ವಸ್ತ್ರಾಪ್ತ್ಯೈ ತತ್ತದ್ಧಾನ್ಯೈಸ್ತದಾಪ್ತಯೇ ।
ರಿಪುಪಾದರಜೋಭಿಶ್ಚ ರಾಜೀಲವಣಮಿಶ್ರಿತೈಃ ॥ ೫೮ ॥

ಹೋಮಯೇತ್ಸಪ್ತರಾತ್ರಂ ಚ ರಿಪುರ್ಯಾತಿ ಯಮಾಲಯಂ ।
ಧಾನ್ಯೈಃ ಸಂಪ್ರಾಪ್ಯತೇ ಧಾನ್ಯಂ ಅನ್ನೈರನ್ನಸಮುಚ್ಛ್ರಯಃ ॥ ೫೯ ॥

ತಿಲಾಜ್ಯಕ್ಷೀರಮಧುಭಿರ್ಮಹಿಷೀಗೋಸಮೃದ್ಧಯೇ ।
ಕಿಂ ಬಹೂಕ್ತ್ಯೈರ್ವಿಷೇ ವ್ಯಾಧೌ ಶಾಂತೌ ಮೋಹೇ ಚ ಮಾರಣೇ ॥ ೬೦ ॥

ವಿವಾದೇ ಸ್ತಂಭನೇ ದ್ಯೂತೇ ಭೂತಭೀತೌ ಚ ಸಂಕಟೇ ।
ವಶ್ಯೇ ಯುದ್ಧೇ ಕ್ಷತೇ ದಿವ್ಯಂ ಬಂಧಮೋಕ್ಷೇ ಮಹಾವನೇ ॥ ೬೧ ॥

---

ಗಳಿಂದ ಹೋಮವೂ, ಜ್ವರಕ್ಕಾಗಿ ಗರಿಕೆ, ಅಮೃತಬಳ್ಳಿ, ಮೊಸರು, ಹಾಲು, ಅಥವಾ ತುಪ್ಪಗಳಿಂದ ಹೋಮವೂ, ಶೂಲಕ್ಕಾಗಿ ಎಣ್ಣೆಯಲ್ಲಿ ಮುಳುಗಿಸಿದ ಹುಲಿಗಿಲಿಮರ, ವಾತಾರಿಗಿಡಗಳ ಸಮಿತ್ತುಗಳು ಅಥವಾ ಎಣ್ಣೆಯಲ್ಲಿ ನೆನೆಸಿದ ವಾವಿಲೀ ಸಮಿತ್ತುಗಳಿಂದ ಹೋಮವೂ ಆಚರಿಸಲ್ಪಡಬೇಕು. ಸೌಭಾಗ್ಯವನ್ನು ಪಡೆಯಲು ಗಂಧ, ಕರ್ಪೂರ, ಗೋರೋಚನ ಅಥವಾ ಲವಂಗಗಳಿಂದ ಹೋಮ ಮಾಡಬೇಕು.

೫೮-೫೯. ವಸ್ತ್ರವನ್ನು ಸಂಪಾದಿಸುವುದಕ್ಕಾಗಿ ಸುಗಂಧಪುಷ್ಪಗಳಿಂದಲೂ ಆಯಾಯಾ ಧ್ಯಾನವನ್ನು ಪಡೆಯಲು ಆಯಾಯಾ ಧಾನ್ಯಗಳಿಂದಲೂ ಹೋಮ ಮಾಡಬೇಕು. ಕರೀಸಾಸುವೆ ಉಪ್ಪುಗಳನ್ನು ಬೆರೆಸಿದ ಶತ್ರುವಿನ ಪಾದಧೂಳಿಗಳಿಂದ ಏಳು ದಿನ ಹೋಮಮಾಡಿದರೆ ಶತ್ರುವು ಸಾಯುವನು.

೫೯-೬೦. ಧಾನ್ಯಗಳಿಂದ ಧಾನ್ಯವೂ, ಅನ್ನಗಳಿಂದ ಅನ್ನರಾಶಿಯೂ ಲಭಿಸುತ್ತದೆ. ಎಮ್ಮೆ ಹಸುಗಳ ಸಮೃದ್ಧಿಯನ್ನು ಹೊಂದಲು ಎಳ್ಳು, ತುಪ್ಪ, ಹಾಲು, ಜೇನುತುಪ್ಪಗಳಿಂದ ಹೋಮಮಾಡಬೇಕು.

೬೦-೬೨. ಹೆಚ್ಚು ಹೇಳಿದ್ದರಿಂದೇನು? ವಿಷ, ರೋಗ, ಶಾಂತಿ, ಮೂರ್ಛೆ, ಸಾಯಿಸುವುದು, ವಿವಾದ, ತಡೆಗಟ್ಟುವುದು, ಜೂಜು, ಭೂತಭಯ,

ಸಾಧಿತೋಽಯಂ ನೃಣಾಂ ದದ್ಯಾನ್ಮಂತ್ರಶ್ರೇಷ್ಠಂ ಸುನಿಶ್ಚಿತಂ ।
ವಕ್ಷ್ಯೇಽಥ ಹನುಮದ್ಯಂತ್ರಂ ಸರ್ವಸಿದ್ಧಿಪ್ರದಾಯಕಂ ॥ ೬೨ ॥

ಲಾಂಗುಲಾಕಾರಸಂಯುಕ್ತಂ ವಲಯತ್ರಿತಯಂ ಲಿಖೇತ್ ।
ಸಾಧ್ಯನಾಮ ಲಿಖೇನ್ಮಧ್ಯೇ ಪಾಶಬೀಜಪ್ರವೇಷ್ಟಿತಂ ॥ ೬೩ ॥

ಉಪರ್ಯಷ್ಟಛದಂ ಕೃತ್ವಾ ಪತ್ರೇಷು ಕವಚಂ ಲಿಖೇತ್ ।
ತದ್ಬಹಿರ್ವೃತ್ತಮಾಲಿಖ್ಯ ತದ್ಬಹಿಶ್ಚತುರಸ್ರಕಂ ॥ ೬೪ ॥

ಚತುರಸ್ರಸ್ಯ ರೇಖಾಗ್ರೇ ತ್ರಿಶೂಲಾನಿ ಸಮಾಲಿಖೇತ್ ।
ಹಸೌ ಬೀಜಂ ಭೂಪುರಸ್ಯಾಷ್ಟವಜ್ರೇಷು ವಿಲಿಖೇತ್ತತಃ ॥ ೬೫ ॥

ಕೋಣೇಷ್ವಂಕುಶಮಾಲಿಖ್ಯ ಮಾಲಾಮಂತ್ರೇಣ ವೇಷ್ಟಯೇತ್ ।
ತತ್ಸರ್ವಂ ವೇಷ್ಟಯೇದ್ಯಂತ್ರವಲಯತ್ರಿತಯೇನ ಚ ॥ ೬೬ ॥

---

ಸಂಕಟ, ವಶೀಕರಣ, ಯುದ್ಧ, ವ್ರಣ, ಜೈಲಿನಿಂದ ಬಿಡುಗಡೆ ಇವುಗಳಿಗಾಗಿ ಈ ಮಂತ್ರವನ್ನು ಹೆಗ್ಗಾಡಿನಲ್ಲಿ ಅನುಷ್ಠಾನ ಮಾಡಿದರೆ ಇಷ್ಟಾರ್ಥವು ತಪ್ಪದೇ ಲಭಿಸುತ್ತದೆ.

೬೨-೬೩. ಈಗ ಸಕಲಸಿದ್ಧಿಪ್ರದವಾದ ಹನುಮದ್ಯಂತ್ರವನ್ನು ಹೇಳುವೆನು :—ಬಾಲದ ಆಕಾರವಾಗಿ ಮೂರುವಲಯಗಳನ್ನು ಬರೆದು ಅದರ ಮಧ್ಯದಲ್ಲಿ ಸುತ್ತಲೂ "ಆಂ" ಎಂಬ ಪಾಶಬೀಜವನ್ನು ಬರೆದು ಅದರ ಮಧ್ಯದಲ್ಲಿ ಸಾಧ್ಯನಾಮಧೇಯವನ್ನು ಬರೆಯಬೇಕು.

೬೪-೬೫. ಆ ವಲಯಗಳ ಮೇಲ್ಭಾಗದಲ್ಲಿ ಎಂಟುದಳಗಳನ್ನು ಗುರ್ತಿಸಿ ಅವುಗಳಲ್ಲಿ "ಹುಂ" ಎಂಬುದನ್ನು ಬರೆಯಬೇಕು. ಅಷ್ಟದಳಗಳ ಸುತ್ತಲೂ ವೃತ್ತಾಕಾರವಾದ ರೇಖೆಯನ್ನು ಅದರ ಹೊರಗೆ ಚದುರವಾಗಿ ರೇಖೆಯನ್ನು ಹಾಕಿ, ಅದರ ಕೊನೆಯ ಭಾಗವನ್ನು ಸ್ವಲ್ಪ ಮುಂದಕ್ಕೆ ಚಾಚಿ ಆ ಅಗ್ರಭಾಗಗಳಲ್ಲಿ ತ್ರಿಶೂಲಗಳನ್ನು ಬರೆಯಬೇಕು.

೬೫-೬೬. ಚದುರ ರೇಖೆಯ ಒಳಭಾಗದ ಅಷ್ಟವಜ್ರಗಳಲ್ಲಿ "ಹ್ಸೌಂ" ಎಂಬ ಬೀಜಾಕ್ಷರವನ್ನು ಬರೆಯಬೇಕು. ಕೋಣಗಳಲ್ಲಿ ಅಂಕುಶವನ್ನು

**ಶಿಲಾಯಾಂ ಫಲಕೇ ವಸ್ತ್ರೇ ತಾಮ್ರಪತ್ರೇಥ ಕುಡ್ಯಕೇ ।**
**ತಾಡಪತ್ರೇಥ ಭೂರ್ಜೇ ವಾ ರೋಚನಾನಾಭಿಕುಂಕುಮೈಃ ॥ ೬೭ ॥**

**ಯಂತ್ರಮೇತತ್ಸಮಾಲಿಖ್ಯ ನಿರಾಹಾರೋ ಜಿತೇಂದ್ರಿಯಃ ।**
**ಕಪೇಃ ಪ್ರಾಣಾನ್ಪ್ರತಿಷ್ಠಾಪ್ಯ ಪೂಜಯೇತ್ತದ್ಯಥಾವಿಧಿ ॥ ೬೮ ॥**

**ಅಶೇಷದುಃಖಶಾಂತ್ಯರ್ಥಂ ಯಂತ್ರಂ ಸಂಧಾರಯೇದ್ಬುಧಃ ।**
**ಮಾರೀಜ್ವರಾಭಿಚಾರಾದಿಸರ್ವೋಪದ್ರವನಾಶನಂ ॥ ೬೯ ॥**

**ಯೋಷಿತಾಮಪಿ ಬಾಲಾನಾಂ ಧೃತಂ ಜನಮನೋಹರಂ ।**
**ಭೂತಕೃತ್ಯಪಿಶಾಚಾನಾಂ ದರ್ಶನಾದೇವ ನಾಶನಂ ॥ ೭೦ ॥**

---

ಗುರ್ತಿಸಿ ಅದರ ಸುತ್ತಲೂ ಮಾಲಾಮಂತ್ರವನ್ನು ಬರೆದು ಅದೆಲ್ಲವನ್ನೂ ಗುಂಡಾದ ಮೂರು ರೇಖೆಗಳಿಂದ ಸುತ್ತುಗಟ್ಟಬೇಕು. ಎಂದರೆ ಅದರ ಸುತ್ತಲೂ ಗುಂಡಾದ ಮೂರು ರೇಖೆಗಳನ್ನು ಬರೆಯಬೇಕು.

೬೭-೬೮. ಈ ಯಂತ್ರವನ್ನು ಕಲ್ಲು, ಹಲಗೆ, ಬಟ್ಟೆ, ತಾಮ್ರದ ತಗಡು, ಗೋಡೆ, ತಾಳೆಯಗರಿ, ಭುಜಪತ್ರ ಇವುಗಳ ಪೈಕಿ ಯಾವುದಾದರೂ ಒಂದರಲ್ಲಿ ಗೋರೋಜನ, ಕಸ್ತೂರಿ, ಕುಂಕುಮಗಳಿಂದ ಬರೆದು ಜಿತೇಂದ್ರಿಯನಾಗಿ ಉಪವಾಸದಿಂದ ಆಂಜನೇಯನ ಪ್ರಾಣಪ್ರತಿಷ್ಠಾಪನೆಮಾಡಿಸಿ ವಿಧಿವತ್ತಾಗಿ ಪೂಜಿಸಬೇಕು.

೬೯. ಸಮಸ್ತದುಃಖಪರಿಹಾರಕ್ಕಾಗಿ ಮಾರಿ, ಜ್ವರ, ಅಭಿಚಾರ ಮುಂತಾದ ಸಕಲೋಪದ್ರವನಾಶಕವಾದ ಈ ಯಂತ್ರವನ್ನು ಜ್ಞಾನಿಯು ಧರಿಸಿಕೊಳ್ಳಬೇಕು.

೭೦. ಸ್ತ್ರೀಯರು ಬಾಲಕರುಗಳಿಂದ ಧರಿಸಲ್ಪಟ್ಟ ಈ ಯಂತ್ರವು ಜನಮನೋರಂಜಕವಾಗಿ ದರ್ಶನಮಾತ್ರದಿಂದ ಭೂತಪ್ರೇತಪಿಶಾಚಾದಿಗಳನ್ನು ನಾಶಪಡಿಸುತ್ತದೆ.

ಮಾಲಾಮಂತ್ರಮಥೋ ವಕ್ಷ್ಯೇ ತಾರೋವಾಗ್ವಿಷ್ಣುಗೇಹಿನೀ ।
ದೀರ್ಘತ್ರಯಾನ್ವಿತಾ ಮಾಯಾ ಪ್ರಾಗುಕ್ತಂ ಕೂಟಪಂಚಕಂ ॥ ೭೧ ॥

ಧ್ರುವೋ ಹೃದ್ಧನುಮರ್ಣ ಜೇಂತೋಥ ಪ್ರಕಟಪರಾಕ್ರಮ ।
ಆಕ್ರಾಂತದಿಙ್ಮಂಡಲಾಂತೇ ಯಶೋವಿತಾನ ಸಂವದೇತ್ ॥ ೭೨ ॥

ಧವಲೀಕೃತವರ್ಣಾಂತೇ ಜಗತ್ತ್ರಿತಯವಜ್ರ ಚ ।
ದೇಹಜ್ವಲದಗ್ನಿ ಸೂರ್ಯಕೋಟ್ಯಂತೇ ಚ ಸಮುಪ್ರಭ ॥ ೭೩ ॥

ತನೂರುಹಪದಾಂತೇ ತು ರುದ್ರಾವತಾರ ಸಂವದೇತ್ ।
ಲಂಕಾಪುರೀ ತತಃ ಪಶ್ಚಾದ್ದಹನೋದಧಿಲಂಘನ ॥ ೭೪ ॥

ದಶಗ್ರೀವಶಿರಃ ಪಶ್ಚಾತ್ಕೃತಾಂತಕಪದಂ ವದೇತ್ ।
ಸೀತಾಂತೇ ಶ್ವಾಸನಪದಂ ವಾಯ್ವಂತೇ ಸುತಮೀರಯೇತ್ ॥ ೭೫ ॥

ಅಂಜನಾಗರ್ಭಸಂಭೂತ ಶ್ರೀರಾಮಲಕ್ಷ್ಮಣಾನ್ವಿತಃ ।
ನಂದಕರಾಂತೇ ಕಪಿ ಚ ಸೈನ್ಯಪ್ರಾಕಾರ ಈರಯೇತ್ ॥ ೭೬ ॥

---

೭೧-೯೮. ಈಗ ಮಾಲಾಮಂತ್ರವನ್ನು ಹೇಳುವೆನು :—೭೧ ನೆಯ ಶ್ಲೋಕದಿಂದ ೯೮ ನೆಯ ಶ್ಲೋಕ ಪೂರ್ತಿ ಇಪ್ಪತ್ತೆಂಟು ಶ್ಲೋಕಗಳಿಂದ ಹನುಮನ್ಮಾಲಾಮಂತ್ರವು ಉಕ್ತವಾಗಿದೆ. ಈ ಮಂತ್ರವು ಸಕಲೇಷ್ಟಾರ್ಥಸಾಧಕವು. ೫೮೮ ವರ್ಣಗಳನ್ನೊಳಗೊಂಡಿದೆ.

ಈ ಮಾಲಾಮಂತ್ರದಲ್ಲಿರುವ ಸಂಕೇತಗಳ ವಿವರಣೆ:— ತಾರ= ಓಂ, ವಾಕ್= ಐಂ, ವಿಷ್ಣುಗೇಹಿನೀ=ಶ್ರೀಂ, ದೀರ್ಘತ್ರಯಾನ್ವಿತಾ ಮಾಯಾ= ಹ್ರಾಂ, ಹ್ರೀಂ, ಹ್ರೂಂ. ಪ್ರಾಗುಕ್ತಂ ಕೂಟಪಂಚಕಂ=ಹಸ್ಫ್ರೇಂ, ಖ್ಫ್ರೇಂ, ಹ್ಸ್ರೌಂ, ಹ್ಸ್ಖ್ಫ್ರೇಂ, ಹ್ಸೌಂ. ಶ್ಲೋಕದಲ್ಲಿ ಹೇಳಿದ ಉಳಿದ ಪದಗಳನ್ನು ಹಾಗೆಯೇ ಮಂತ್ರದಲ್ಲಿ ಸೇರಿಸಬೇಕು. ಒಟ್ಟಿನಲ್ಲಿ ಮಾಲಾಮಂತ್ರವು ಈ ರೀತಿಯಾಗುವುದು :—“ಓಂ ಐಂ ಶ್ರೀಂ ಹ್ರಾಂ ಹ್ರೀಂ ಹ್ರೂಂ ಹ್ರೌಂ ಹ್ಸ್ಫ್ರೇಂ ಖ್ಫ್ರೇಂ ಹ್ಸ್ರೌಂ ಹ್ಸ್ಖ್ಫ್ರೇಂ ಹ್ಸೌಂ ಓಂ ನಮೋ ಹನುಮತೇ ಪ್ರಕಟಪರಾಕ್ರಮ ಆಕ್ರಾಂತದಿಙ್ಮಂಡಲ ಯಶೋವಿತಾನಧವಳೀಕೃತಜಗತ್ತ್ರಿತಯ

ಸುಗ್ರೀವಸಖ್ಯಕಾದ್ಯರ್ಣಾದ್ರಣವಾಲಿನಿಬರ್ಹಣ ।
ಕಾರಣದ್ರೋಣಶಬ್ದಾಂತೇ ಪರ್ವತೋತ್ಪಾಟನೇತಿ ಚ ॥ ೭೭ ॥

ಅಶೋಕವನವೀಥ್ಯಂತೇ ದಾರಣಾಕ್ಷಕುಮಾರಕ ।
ಛೇದನಾಂತೇ ವನರಕ್ಷಾಕರಾಂತೇ ತು ಸಮೂಹ ಚ ॥ ೭೮ ॥

ವಿಭಂಜನಾಂತೇ ಬ್ರಹ್ಮಾಸ್ತ್ರಬ್ರಹ್ಮಶಕ್ತಿಗ್ರಸೇತಿ ನ ।
ಲಕ್ಷ್ಮಣಾಂತೇ ಶಕ್ತಿಭೇದನಿವಾರಣಪದಂ ವದೇತ್ ॥ ೭೯ ॥

ವಿಶಲ್ಯೌಷಧಶಬ್ದಾಂತೇ ಸಮಾನಯನ ಸಂಪಠೇತ್ ।
ಬಾಲೋದಿತಾಂತೇ ಭಾನ್ವಂತೇ ಮಂಡಲಗ್ರಸನೇತಿ ಚ ॥ ೮೦ ॥

ಮೇಘನಾದಹೋಮಪದಾದ್ವಿಧ್ವಂಸನಪದಂ ವದೇತ್ ।
ಇಂದ್ರಜಿದ್ವಧಕಾರಾಂತೇ ಣ ಸೀತಾರಕ್ಷಕೇತಿ ಚ ॥ ೮೧ ॥

ರಾಕ್ಷಸೀಸಂಘಶಬ್ದಾಂತೇ ವಿದಾರಣಪದಂ ವದೇತ್ ।
ಕುಂಭಕರ್ಣಾದಿ ಸಂಕೀರ್ತ್ಯ ವಧಾಂತೇ ಚ ಪರಾಯಣ ॥ ೮೨ ॥

---

ವಜ್ರದೇಹ ಜ್ವಲದಗ್ನಿ ಸೂರ್ಯಕೋಟಿಸಮಪ್ರಭತನೂರುಹ ರುದ್ರಾವತಾರ ಲಂಕಾಪುರೀದಹನೋದಧಿಲಂಘನ ದಶಗ್ರೀವಶಿರಃಕೃತಾಂತಕ ಸೀತಾಶ್ವಾಸನ ವಾಯುಸುತ ಅಂಜನಾಗರ್ಭಸಂಭೂತ ಶ್ರೀರಾಮಲಕ್ಷ್ಮಣಾನಂದಕರ ಕಪಿಸೈನ್ಯಪ್ರಾಕಾರ ಸುಗ್ರೀವಸಖ್ಯಕಾರಣ ವಾಲಿನಿಬರ್ಹಣಕಾರಣ ದ್ರೋಣಪರ್ವತೋತ್ಪಾಟನ ಅಶೋಕವನವಿದಾರಣಾಕ್ಷಕುಮಾರಕಛೇದನ ವನರಕ್ಷಾಕರಸಮೂಹವಿಭಂಜನ ಬ್ರಹ್ಮಾಸ್ತ್ರಬ್ರಹ್ಮಶಕ್ತಿಗ್ರಸನ ಲಕ್ಷ್ಮಣಶಕ್ತಿಭೇದನಿವಾರಣ ವಿಶಲ್ಯೌಷಧಿಸಮಾನಯನ ಬಾಲೋದಿತಭಾನುಮಂಡಲಗ್ರಸನ ಮೇಘನಾದಹೋಮವಿಧ್ವಂಸನ ಇಂದ್ರಜಿದ್ವಧಕಾರಣ ಸೀತಾರಕ್ಷಕ ರಾಕ್ಷಸೀಸಂಘವಿದಾರಣ ಕುಂಭಕರ್ಣಾದಿವಧ ಪರಾಯಣ ಶ್ರೀರಾಮಭಕ್ತಿತತ್ಪರ ಸಮುದ್ರವ್ಯೋಮದ್ರುಮಲಂಘನ ಮಹಾಸಾಮರ್ಥ್ಯ ಮಹಾತೇಜಃಪುಂಜವಿರಾಜಮಾನ ಸ್ವಾಮಿವಚನಸಂಪಾದಿತಾರ್ಜುನ ಸಂಯುಗಸಹಾಯಕುಮಾರ ಬ್ರಹ್ಮಚಾರಿನ್ ಗಂಭೀರಶಬ್ದೋದಯ ದಕ್ಷಿಣಾಶಾಮಾರ್ತಂಡ ಮೇರುಪರ್ವತಪೀಠಕಾರ್ಚನ ಸಕಲಮಂತ್ರಾಗಮಾಚಾರ್ಯ ಮಮ

ಶ್ರೀರಾಮಭಕ್ತಿವರ್ಣಾಂತೇ ತತ್ಪರೇತಿ ಸಮುದ್ರ ಚ ।
ವ್ಯೋಮದ್ರುಮಲಂಘನೇತಿ ಮಹಾಸಾಮರ್ಥ್ಯ ಸಂವದೇತ್ ॥ ೮೩ ॥

ಮಹಾತೇಜಃಪುಂಜಶಬ್ದಾದ್ವಿರಾಜಮಾನ ಚೋಚ್ಚರೇತ್ ।
ಸ್ವಾಮಿವಚನಸಂಪಾದಿತಾರ್ಜುನಾಂತೇ ಚ ಸಂಯುಗ ॥ ೮೪ ॥

ಸಹಾಯಾಂತೇ ಕುಮಾರೇತಿ ಬ್ರಹ್ಮಚಾರಿನ್ಪದಂ ವದೇತ್ ।
ಗಂಭೀರಶಬ್ದೋದಯಾಂತೇ ದಕ್ಷಿಣಾಶಾಪದಂ ವದೇತ್ ।
ಮಾರ್ತಂಡಮೇರುಶಬ್ದಾಂತೇ ವದೇತ್ಪರ್ವತಪೀಠಕಾ ॥ ೮೫ ॥

ಅರ್ಚನಾಂತೇ ತು ಸಕಲಮಂತ್ರಾಗಮಪದಂ ವದೇತ್ ।
ಆಚಾರ್ಯಮಮಶಬ್ದಾಂತೇ ಸರ್ವಗ್ರಹವಿನಾಶನ ॥ ೮೬ ॥

ಸರ್ವಜ್ವರೋಚ್ಚಾಟನಾಂತೇ ಸರ್ವವಿಷವಿನಾಶನ ।
ಸರ್ವಾಪತ್ತಿನಿವಾರಣ ಸರ್ವದುಷ್ಟನಿಬರ್ಹಣ ॥ ೮೭ ॥

ಸರ್ಪವ್ಯಾಘ್ರಾದಿ ಸಂಪ್ರೋಚ್ಯ ಭಯಾಂತೇ ಚ ನಿವಾರಣ ॥ ೮೮ ॥

ಸರ್ವಶತ್ರುಚ್ಛೇದನೇತಿ ತತೋ ಮಮ ಪರಸ್ಯ ಚ ॥ ೮೯ ॥

ತತಸ್ತ್ರಿಭುವನಾಂತೇ ತು ಪುಂಸ್ತ್ರೀನಪುಂಸಕಾತ್ಮಕಂ ।
ಸರ್ವಜೀವಪದಾಂತೇ ತು ಜಾತಂ ವಶಯಯುಗ್ಮಕಂ ॥ ೯೦ ॥

---

ಸರ್ವಗ್ರಹವಿನಾಶನ ಸರ್ವಜ್ವರೋಚ್ಚಾಟನ ಸರ್ವವಿಷವಿನಾಶನ ಸರ್ವಾಪತ್ತಿನಿವಾರಣ ಸರ್ವದುಷ್ಟನಿಬರ್ಹಣ ಸರ್ವವ್ಯಾಘ್ರಾದಿಭಯನಿವಾರಣ ಸರ್ವಶತ್ರುಚ್ಛೇದನ ಮಮ ಪರಸ್ಯ ಚ ತ್ರಿಭುವನಪುಂಸ್ತ್ರೀನಪುಂಸಕಾತ್ಮಕಸರ್ವಜೀವಜಾತಂ ವಶಯ ವಶಯ ಮಮಾಜ್ಞಾಕಾರಕಂ ಸಂಪಾದಯ ಸಂಪಾದಯ ನಾನಾನಾಮಧೇಯಾನ್ ಸರ್ವಾನ್ರಾಜ್ಞಃ ಸಪರಿವಾರಾನ್ ಮಮ ಸೇವಕಾನ್ ಕುರು ಕುರು ಸರ್ವಶಸ್ತ್ರಾಸ್ತ್ರವಿಷಾಣಿ ವಿಧ್ವಂಸಯ ವಿಧ್ವಂಸಯ ಹ್ರಾಂ ಹ್ರೀಂ ಹ್ರೂಂ ಹ್ರಾಂ ಹ್ರಾಂ ಹ್ರಾಂ ಏಹ್ಯೇಹಿ ಹ್ಸೌಂ ಹ್ಸ್ಖ್ಫ್ರೇಂ ಹ್ಸ್ರೌಂ ಖ್ಫ್ರೇಂ ಹ್ಸ್ಫ್ರೇಂ ಹೌಂ ಸರ್ವ ಶತ್ರೂನ್ ಹನ ಹನ ಪರದಳಾನಿ ಪರಸೈನ್ಯಾನಿ

ಮಮಾಜ್ಞಾಕಾರಕಂ ಪಶ್ಚಾತ್ತ್ವಂಪಾದಯಯುಗಂ ಪುನಃ ।
ತತೋ ನಾನಾನಾಮಧೇಯಾನ್ಸರ್ವಾನ್ ರಾಜ್ಞಃ ಸ ಸಂಪಠೇತ್ ॥ ೯೧ ॥

ಪರಿವಾರಾನ್ಮಮೇತ್ಯಂತೇ ಸೇವಕಾನ್ ಕುರುಯುಗ್ಮಕಂ ।
ಸರ್ವಶಸ್ತ್ರಾಸ್ತ್ರವೀತ್ಯಂತೇ ಷಾಣಿ ವಿಧ್ವಂಸಯದ್ವಯಂ ॥ ೯೨ ॥

ಲಜ್ಜಾದೀರ್ಘತ್ರಯೋಪೇತಾ ಹಾತ್ರಯಂ ಚೌಹಿ ಯುಗ್ಮಕಂ ।
ವಿಲೋಮಂ ಪಂಚಕೂಟಾನಿ ಸರ್ವಶತ್ರೂನ್ ಹನದ್ವಯಂ ॥ ೯೩ ॥
ಪರಬಲಾನಿ ಪರಾಂತೇ ಸೈನ್ಯಾನಿ ಕ್ಷೋಭಯದ್ವಯಂ ॥ ೯೪ ॥
ಮಮಸರ್ವಂ ಕಾರ್ಯಜಾತಂ ಸಾಧಯೇತಿ ದ್ವಯಂ ತತಃ ॥ ೯೫ ॥

ಸರ್ವದುಷ್ಟದುರ್ಜನಾಂತೇ ಮುಖಾನಿ ಕೀಲಯದ್ವಯಂ ।
ಘೇತ್ರಯಂ ವರ್ಮತ್ರಿತಯಂ ಫಟ್ತ್ರಯಂ ಹಾತ್ರಯಂ ತತಃ ॥ ೯೬ ॥
ವಹ್ನಿಪ್ರಿಯಾಂತೋ ಮಂತ್ರೋಯಂ ಮಾಲಾಸಂಜ್ಞೋಖಿಲೇಷ್ಟದಃ ॥೯೭॥
ಪಸ್ವಷ್ಟಬಾಣವರ್ಣೋಯಂ ಮಂತ್ರಃ ಸರ್ವೇಷ್ಟಸಾಧಕಃ ॥ ೯೮ ॥

ಮಹಾಭಯೇ ಮಹೋತ್ಪಾತೇ ಸ್ಮೃತೋಯಂ ದುಃಖನಾಶನಃ ।
ದ್ವಾದಶಾರ್ಣಂ ಷಷ್ಠಕೂಟಂ ತ್ಯಕ್ತ್ವಾ ಬೀಜಂ ತಥಾದಿಮಂ ॥ ೯೯ ॥

---

ಕ್ಷೋಭಯ ಕ್ಷೋಭಯ ಮಮ ಸರ್ವಂ ಕಾರ್ಯಜಾತಂ ಸಾಧಯ ಸಾಧಯ ಸರ್ವದುಷ್ಟದುರ್ಜನಮುಖಾನಿ ಕೀಲಯ ಕೀಲಯ ಘೇಘೇಘೇ ಹಾಹಾಹಾ ಹುಂ ಹುಂ ಹುಂ ಫಟ್ ಫಟ್ ಸ್ವಾಹಾ" ಇದೇ ೫೮೮ ಅಕ್ಷರಗಳ ಮಾಲಾ ಮಂತ್ರವು. ಮಹಾಭಯ ಮತ್ತು ಮಹೋಪದ್ರವಗಳು ಸಂಭವಿಸಿದಾಗ ಈ ಮಂತ್ರವು ದುಃಖವನ್ನು ನಾಶಮಾಡುತ್ತದೆ.

೯೯-೧೦೦. ಹಿಂದೆ ಹೇಳಿದ ದ್ವಾದಶಾಕ್ಷರಮಂತ್ರದ ಕೊನೆಯ ಆರನೆಯ ಕೂಟ ಎಂದರೆ "ಹನುಮತೇ ನಮಃ" ಎಂಬ ಆರು ಅಕ್ಷರಗಳನ್ನು ಮತ್ತು

**ಪಂಚಕೂಟಾತ್ಮಕೋ ಮಂತ್ರಃ ಸರ್ವಕಾಮಪ್ರದಾಯಕಃ ।**
**ರಾಮಚಂದ್ರೋ ಮುನಿಶ್ಚಾಸ್ಯ ಗಾಯತ್ರೀ ಛಂದ ಈರಿತಂ ॥ ೧೦೦ ॥**

**ಹನುಮಾನ್ದೇವತಾ ಪ್ರೋಕ್ತೋ ವಿನಿಯೋಗೋಽಖಿಲಾಪ್ತಯೇ ।**
**ಪಂಚಬೀಜೈಃ ಸಮಸ್ತೇನ ಷಡಂಗಾನಿ ಸಮಾಚರೇತ್ ॥ ೧೦೧ ॥**

**ರಾಮದೂತೋ ಲಕ್ಷ್ಮಣಾಂತೇ ಪ್ರಾಣದಾತಾಂಜನಾಸುತಃ ।**
**ಸೀತಾಶೋಕವಿನಾಶೋಽಯಂ ಲಂಕಾಪ್ರಾಸಾದಭಂಜನಃ ॥ ೧೦೨ ॥**

**ಹನುಮದಾದ್ಯಾಃ ಪಂಚೈತೇ ಬೀಜಾದ್ಯಾ ಙೇಯುತಾ ಪುನಃ ।**
**ಷಡಂಗಮನವೋ ಹ್ಯೇತೇ ಧ್ಯಾನಪೂಜಾದಿ ಪೂರ್ವವತ್ ॥ ೧೦೩ ॥**

---

ಮೊದಲನೆಯ "ಹೌಂ" ಎಂಬ ಬೀಜಾಕ್ಷರವನ್ನೂ ಸಹ ಬಿಟ್ಟು ಉಳಿದ "ಹ್ಸ್ಫ್ರೇಂ ಖ್ಫ್ರೇಂ ಹ್ಸ್ರೌಂ ಹ್ಸ್ಖ್ಫ್ರೇಂ ಹ್ಸೌಂ" ಎಂಬುದು ಪಂಚ ಕೂಟಾತ್ಮಕ ಹನುಮನ್ಮಂತ್ರವು. ಇದು ಸಕಲೇಷ್ಟಾರ್ಥದಾಯಕವು.

೧೦೦-೧೦೧. ಇದಕ್ಕೆ ರಾಮಚಂದ್ರನೇ ಋಷಿ. ಗಾಯತ್ರಿಯೇ ಛಂದಸ್ಸು. ಹನುಮಂತನೇ ದೇವತೆ. ಸಕಲ ಇಷ್ಟಾರ್ಥಸಿದ್ಧಿಗಾಗಿ ಜಪಾದಿಗಳನ್ನು ಮಾಡಬೇಕು. ಈ ಮಂತ್ರದ ಐದು ಬೀಜಾಕ್ಷರಗಳನ್ನು ಪ್ರತ್ಯೇಕವಾಗಿಯೂ, ಒಟ್ಟಿಗೂ ಸಹ ಹೇಳಿ ಹೃದಯಾದಿ ಆರು ಅಂಗಗಳನ್ನು ನ್ಯಾಸ ಮಾಡಬೇಕು.

೧೦೨-೧೦೩. ಈ ಶ್ಲೋಕಗಳಲ್ಲಿ ಷಡಂಗನ್ಯಾಸಮಂತ್ರ, ಧ್ಯಾನಾದಿಗಳನ್ನು ಹೇಳಿರುತ್ತಾರೆ. ಹೇಗೆಂದರೆ :—ಹ್ಸ್ಫ್ರೇಂ ಹನುಮತೇ ಹೃದಯಂ" ಎಂದು ಹೃದಯವನ್ನೂ, "ಖ್ಫ್ರೇಂ ರಾಮಭಕ್ತಾಯ ಶಿರಃ" ಎಂದು ತಲೆಯನ್ನೂ, "ಹ್ಸ್ರೌಂ ಲಕ್ಷ್ಮಣಪ್ರಾಣದಾತ್ರೇ ಶಿಖಾ" ಎಂದು ಶಿಖೆಯನ್ನೂ, "ಹ್ಸ್ಖ್ಫ್ರೇಂ ಅಂಜನಾ ಸುತಾಯ" ಎಂದು ನೇತ್ರಗಳನ್ನೂ, "ಹ್ಸೌಂ ಸೀತಾಶೋಕವಿನಾಶಾಯ" ಎಂದು ಕವಚವನ್ನೂ ಈ ಐದು ಬೀಜಾಕ್ಷರಗಳನ್ನು ಒಟ್ಟಾಗಿ ಸೇರಿಸಿ ಹೇಳಿ ಆದರ ಮುಂದೆ "ಲಂಕಾಪ್ರಾಸಾದಭಂಜನಾಯ" ಎಂದು ಹೇಳಿ ಅಸ್ತ್ರವನ್ನೂ ನ್ಯಾಸಮಾಡಬೇಕು. ಇವೇ ಷಡಂಗಮಂತ್ರಗಳು. ಧ್ಯಾನ, ಪೂಜೆ ಮುಂತಾದುವನ್ನು ಹಿಂದಿನ ಮಂತ್ರಕ್ಕೆ ಹೇಳಿದಂತೆ ಆಚರಿಸಬೇಕು.

ಪ್ರಣವೋ ವಾಗ್ಭವಂ ಪದ್ಮಾ ಮಾಯಾ ದೀರ್ಘತ್ರಯಾನ್ವಿತಾ ।
ಪಂಚಕೂಟಾನಿ ಮಂತ್ರೋಽಯಂ ರುದ್ರಾರ್ಣಃ ಸರ್ವಸಿದ್ಧಿದಃ ॥ ೧೦೪ ॥

ಧ್ಯಾನಪೂಜಾದಿಕಂ ಸರ್ವಮಸ್ಯಾಪಿ ಪೂರ್ವವನ್ಮತಂ ।
ಅಯಮಾರಾಧಿತೋ ಮಂತ್ರಃ ಸರ್ವಾಭೀಷ್ಟಪ್ರದಾಯಕಃ ॥ ೧೦೫ ॥

ನಮೋ ಭಗವತೇ ಪಶ್ಚಾದನಂತಶ್ಚಂದ್ರಶೇಖರಃ ।
ಜನೇಯಾಯಮಹಾಂತೇ ತು ಬಲಾಯಾಂತೇಽಗ್ನಿವಲ್ಲಭಾ ॥ ೧೦೬ ॥

ಅಷ್ಟಾದಶಾರ್ಣೋಽ ಮಂತ್ರೋಽಯಂ ಮುನಿರೀಶ್ವರಸಂಜ್ಞಕಃ ।
ಛಂದೋಽನುಷ್ಟುಪ್‌ದೇವತಾ ತು ಹನುಮಾನ್ಪವನಾತ್ಮಜಃ ॥ ೧೦೭ ॥

---

೧೦೪-೧೦೫. (ಪ್ರಣವ= ಓಂ, ವಾಗ್ಭವ= ಐಂ, ಪದ್ಮಾ= ಶ್ರೀಂ, ಮಾಯಾ ದೀರ್ಘತ್ರಯಾನ್ವಿತಾ= ಹ್ರಾಂ, ಹ್ರೀಂ, ಹ್ರೂಂ, ಪಂಚಕೂಟಾನಿ= ಹ್‌ಸ್ಫ್ರೇಂ, ಖ್ಫ್ರೇಂ, ಹ್ಸ್ರೌಂ, ಹ್‌ಸ್ಖ್ಫ್ರೇಂ, ಹ್ಸೌಂ) ಒಟ್ಟಿನಲ್ಲಿ "ಓಂ ಐಂ ಶ್ರೀಂ ಹ್ರಾಂ ಹ್ರೀಂ ಹ್ರೂಂ ಹ್‌ಸ್ಫ್ರೇಂ ಖ್ಫ್ರೇಂ ಹ್ಸ್ರೌಂ ಹ್‌ಸ್ಖ್ಫ್ರೇಂ ಹ್ಸೌಂ" ಎಂಬುದಾಗಿ ಹನ್ನೊಂದು ಅಕ್ಷರಗಳನ್ನೊಳಗೊಂಡ ಮಂತ್ರವು ನಿಷ್ಪನ್ನವಾಗುತ್ತದೆ. ಇದು ಸಕಲಸಿದ್ಧಿಪ್ರದವು. ಧ್ಯಾನ, ಪೂಜೆ ಮುಂತಾದುವೆಲ್ಲವನ್ನೂ ಹಿಂದಿನ ಮಂತ್ರಕ್ಕೆ ಹೇಳಿರುವಂತೆಯೇ ಈ ಮಂತ್ರಕ್ಕೂ ಆಚರಿಸಬೇಕು. ಈ ರೀತಿ ಆರಾಧಿಸಲ್ಪಟ್ಟ ಈ ಮಂತ್ರವು ಸಕಲೇಷ್ಟಾರ್ಥಗಳನ್ನೂ ಕೊಡುತ್ತದೆ.

೧೦೬. ಇನ್ನೊಂದು ಹನುಮನ್ಮಂತ್ರವನ್ನು ಹೇಳುತ್ತಾರೆ:— (ಅನಂತ= ಆ, ಚಂದ್ರ= ಂ,) "ನಮೋ ಭಗವತೇ ಆಂಜನೇಯಾಯ ಮಹಾಬಲಾಯ ಸ್ವಾಹಾ"

೧೦೭. ಈ ಮಂತ್ರವು ಹದಿನೆಂಟು ಅಕ್ಷರಗಳ ಹನುಮನ್ಮಂತ್ರವು. ಇದಕ್ಕೆ ಈಶ್ವರನಾಮಕನು ಋಷಿ. ಅನುಷ್ಟುಪ್ ಛಂದಸ್ಸು. ವಾಯುಕುಮಾರನಾದ ಹನುಮಂತನೇ ದೇವತೆ.

ಹಂ ಬೀಜಂ ವಹ್ನಿವನಿತಾ ಶಕ್ತಿಃ ಪ್ರೋಕ್ತಾ ಮನೀಷಿಭಿಃ ।
ಆಂಜನೇಯಾಯ ಹೃದಯಂ ಶಿರಶ್ಚ ರುದ್ರಮೂರ್ತಯೇ ॥ ೧೦೮ ॥

ಶಿಖಾಯಾಂ ವಾಯುಪುತ್ರಾಯಾಗ್ನಿಗರ್ಭಾಯ ವರ್ಮಣಿ ।
ರಾಮದೂತಾಯ ನೇತ್ರಂ ಸ್ಯಾದ್ಬ್ರಹ್ಮಾಸ್ತ್ರಾಯಾಸ್ತ್ರಮೀರಿತಂ ॥ ೧೦೯ ॥

ತಪ್ತಚಾಮೀಕರನಿಭಂ ಭೀಘ್ನಂ ಸಂವಿಹಿತಾಂಜಲಿಂ ।
ಚಲತ್ಕುಂಡಲದೀಪ್ತಾಸ್ಯಂ ಪದ್ಮಾಕ್ಷಂ ಮಾರುತಿಂ ಸ್ಮರೇತ್ ॥ ೧೧೦ ॥

ಧ್ಯಾತ್ವೈವಮಯುತಂ ಜಪ್ತ್ವಾ ದಶಾಂಶಂ ಜುಹುಯಾತ್ತಿಲೈಃ ।
ವೈಷ್ಣವೇ ಪೂಜಯೇತ್ಪೀಠೇ ಪ್ರಾಗುದ್ದಿಷ್ಟೇನ ವರ್ತ್ಮನಾ ॥ ೧೧೧ ॥

---

೧೦೮-೧೦೯. “ಹಂ” ಎಂಬುದು ಬೀಜ, “ಸ್ವಾಹಾ” ಎಂಬುದು ಶಕ್ತಿ ಎಂಬುದಾಗಿ ಜ್ಞಾನಿಗಳಿಂದ ಉಕ್ತವಾಗಿದೆ. “ಆಂಜನೇಯಾಯ ಹೃದಯಂ” ಎಂದು ಹೃದಯವನ್ನು, “ರುದ್ರಮೂರ್ತಯೇ ಶಿರಃ” ಎಂದು ತಲೆಯನ್ನು, “ವಾಯುಪುತ್ರಾಯ ಶಿಖಾ” ಎಂದು ಶಿಖೆಯನ್ನು, “ಅಗ್ನಿಗರ್ಭಾಯ ಹುಂ” ಎಂದು ಕವಚವನ್ನೂ, “ರಾಮದೂತಾಯ ನೇತ್ರಂ” ಎಂದು ಕಣ್ಣನ್ನು, “ಬ್ರಹ್ಮಾಸ್ತ್ರಾಯ ಫಟ್” ಎಂದು ಅಸ್ತ್ರವನ್ನೂ ನ್ಯಾಸ ಮಾಡಬೇಕು.

೧೧೦. ಕಾಯಿಸಿದ ಬಂಗಾರದಂತೆ ಹೊಳೆಯುತ್ತಿರುವ, ಭಯ ಪರಿಹಾರಕನಾದ, ಕೈಮುಗಿದುಕೊಂಡಿರುವ, ಅಲ್ಲಾಡುತ್ತಿರುವ ಕಡಕುಗಳಿಂದ ವಿರಾಜಿಸುತ್ತಿರುವ ಮುಖವುಳ್ಳ, ಕಮಲನೇತ್ರನಾದ ಮಾರುತಿಯನ್ನು ಧ್ಯಾನಿಸಬೇಕು.

೧೧೧. ಈ ಪ್ರಕಾರವಾಗಿ ಧ್ಯಾನಿಸಿ ಹತ್ತು ಸಾವಿರಜಪಮಾಡಿ ಒಂದು ಸಾವಿರತಿಲಹೋಮವನ್ನು ಮಾಡಬೇಕು. ವೈಷ್ಣವಪೀಠದಲ್ಲಿ ಹಿಂದೆ ಹೇಳಿದ ಪ್ರಕಾರ ಪೂಜಿಸಬೇಕು.

ಅಷ್ಟೋತ್ತರಶತಂ ನಿತ್ಯಂ ನಕ್ತಭೋಜೀ ಜಿತೇಂದ್ರಿಯಃ ।
ಜಪಿತ್ವಾ ಕ್ಷುದ್ರರೋಗೇಭ್ಯೋ ಮುಚ್ಯತೇ ದಿವಸತ್ರಯಾತ್ ॥ ೧೧೨ ॥

ಮಹಾರೋಗನಿವೃತ್ತ್ಯೈ ತು ಸಹಸ್ರಂ ಪ್ರತ್ಯಹಂ ಜಪೇತ್ ।
ರಾಕ್ಷಸೌಘಂ ವಿನಿಘ್ನಂತಂ ಕಪಿಂ ಧ್ಯಾತ್ವಾಘನಾಶನಂ ॥ ೧೧೩ ॥

ಅಯುತಂ ಪ್ರಜಪೇನ್ನಿತ್ಯಮಚಿರಾಜ್ಜಯತಿ ದ್ವಿಷಂ ।
ಸುಗ್ರೀವೇಣ ಸಮಂ ರಾಮಂ ಸಂದಧಾನಂ ಕಪಿಂ ಸ್ಮರನ್ ॥ ೧೧೪ ॥

ಪ್ರಜಪೇದಯುತಂ ಯಸ್ತು ಸಂಧಿಂ ಕುರ್ಯಾದ್ವಿರುದ್ಧಯೋಃ ।
ಧ್ಯಾತ್ವಾ ಲಂಕಾಂ ದಹಂತಂ ತಮಯುತಂ ಪ್ರಜಪೇನ್ಮನುಂ ॥ ೧೧೫ ॥

ಅಚಿರಾದೇವ ಶತ್ರೂಣಾಂ ಗ್ರಾಮಾನ್ಸಂಪ್ರದಹೇತ್ಸುಧೀಃ ।
ಧ್ಯಾತ್ವಾ ಪ್ರಯಾಣಸಮಯೇ ಹನುಮಂತಂ ಜಪೇನ್ಮನುಂ ॥ ೧೧೬ ॥

---

೧೧೨. ಜಿತೇಂದ್ರಿಯನಾಗಿ ಪ್ರತಿದಿನವೂ ರಾತ್ರಿ ಭೋಜನವಮಾಡುತ್ತಾ, ನೂರೆಂಟುಜಪಗಳನ್ನು ಮೂರುದಿವಸಗಳು ಬಿಡದೆ ಮಾಡಿದರೆ ಕ್ಷುದ್ರರೋಗಗಳು ವಾಸಿಯಾಗುತ್ತವೆ.

೧೧೩-೧೧೪. ಮಹಾರೋಗಪರಿಹಾರಮಾಡಿಕೊಳ್ಳಲು ಪ್ರತಿದಿನವೂ ಒಂದುಸಾವಿರಜಪಗಳನ್ನು ಮಾಡಬೇಕು. ರಾಕ್ಷಸಸಮೂಹವನ್ನು ಸಂಹರಿಸುತ್ತಿರುವ, ಪಾಪನಾಶಕನಾದ ಕಪಿಯನ್ನು ಧ್ಯಾನಿಸುತ್ತಾ ಈ ಮಂತ್ರವನ್ನು ಪ್ರತಿದಿನವೂ ಹತ್ತುಸಾವಿರಜಪಮಾಡಿದರೆ ಬೇಗ ಶತ್ರುವನ್ನು ಜಯಿಸುವನು.

೧೧೪-೧೧೫. ಸುಗ್ರೀವನೊಡನೆ ರಾಮನಿಗೆ ಸಂಧಿಯನ್ನು ಮಾಡಿಸುತ್ತಿರುವ ಆಂಜನೇಯನನ್ನು ಸ್ಮರಿಸುತ್ತಾ, ಈ ಮಂತ್ರವನ್ನು ಹತ್ತುಸಾವಿರಜಪ ಮಾಡುವವನು ದ್ವೇಷಿಗಳಿಗಿಬ್ಬರಿಗೂ ಸಂಧಿಯನ್ನು ಮಾಡಿಸುವನು.

೧೧೫-೧೧೬. ಲಂಕಾಪಟ್ಟಣವನ್ನು ಸುಡುತ್ತಿರುವ ಹನುಮಂತನನ್ನು ಧ್ಯಾನಿಸುತ್ತಾ ಈ ಮಂತ್ರವನ್ನು ಹತ್ತುಸಾವಿರಜಪಮಾಡುವ ಜ್ಞಾನಿಯು ಶೀಘ್ರವಾಗಿ ಶತ್ರುಗ್ರಾಮಗಳನ್ನು ಸುಡುವನು.

ಯೋ ಯಾತಿ ಸೋಽಚಿರಾತ್ಸ್ವೇಷ್ಟಂ ಸಾಧಯಿತ್ವಾ ಗೃಹೇ ವ್ರಜೇತ್ ।
ಹನೂಮಂತಂ ಸದಾ ಗೇಹೇ ಯೋಽರ್ಚಯೇಜ್ಜಪತತ್ಪರಃ ॥ ೧೧೭ ॥

ಆರೋಗ್ಯಂ ಚ ಶ್ರಿಯಂ ಕಾಂತಿಂ ಲಭತೇ ನಿರುಪದ್ರವಂ ।
ಕಾನನೇ ವ್ಯಾಘ್ರಚೋರೇಭ್ಯೋ ರಕ್ಷೇನ್ಮನುರಯಂ ಸ್ಮೃತಃ ॥ ೧೧೮ ॥

ಪ್ರಸ್ವಾಪಕಾಲೇ ಶಯ್ಯಾಯಾಂ ಸ್ಮರೇನ್ಮಂತ್ರಮನನ್ಯಧೀಃ ।
ತಸ್ಯ ದುಃಸ್ವಪ್ನಚೋರಾದಿಭಯಂ ನೈವ ಭವೇತ್ಕ್ವಚಿತ್ ॥ ೧೧೯ ॥

ವಿಯತ್ಸೇಂದುರ್ಹನುಮತೇ ತತೋ ರುದ್ರಾತ್ಮಕಾಯ ಚ ।
ವರ್ಮಾಸ್ತ್ರಾಂತೋ ಮಹಾಮಂತ್ರೋ ದ್ವಾದಶಾರ್ಣೋಽಷ್ಟಸಿದ್ಧಿಕೃತ್ ॥

---

೧೧೬-೧೧೭. ಪ್ರಯಾಣಕಾಲದಲ್ಲಿ ಹನುಮಂತನನ್ನು ಧ್ಯಾನಿಸಿ ಮಂತ್ರವನ್ನು ಜಪಿಸಿ ಹೊರಟವನು ಬಹು ಬೇಗ ಇಷ್ಟಾರ್ಥವನ್ನು ಸಾಧಿಸಿಕೊಂಡು ಮನೆಗೆ ಹಿಂತಿರುಗಿ ಬರುವನು.

೧೧೭-೧೧೮. ಯಾವಾಗಲೂ ಮನೆಯಲ್ಲಿ ಈ ಜಪತತ್ಪರನಾಗಿ ಹನುಮಂತನನ್ನು ಪೂಜಿಸುವವನು ಆರೋಗ್ಯ, ಸಂಪತ್ತು ಮತ್ತು ಕಾಂತಿ ಇವುಗಳನ್ನು ತಡೆಯಿಲ್ಲದೆ ಹೊಂದುವನು. ಈ ಮಂತ್ರವು ಕಾಡಿನಲ್ಲಿ ಹುಲಿ ಮತ್ತು ಕಳ್ಳಕಾಕರರದೆಸೆಯಿಂದ ಕಾಪಾಡುತ್ತದೆ.

೧೧೯. ನಿದ್ರೆ ಮಾಡುವುದಕ್ಕೆ ಮೊದಲು ಹಾಸಿಗೆಯಲ್ಲಿಯೇ ಕುಳಿತು ಅನನ್ಯಮನಸ್ಕನಾಗಿ ಈ ಮಂತ್ರವನ್ನು ಅನುಸಂಧಾನ ಮಾಡಿದರೆ ಅವನಿಗೆ ದುಃಸ್ವಪ್ನ, ಕಳ್ಳಕಾಕರರ ಭಯ ಇವು ಯಾವಾಗಲೂ ಆಗುವುದಿಲ್ಲ.

೧೨೦. (ಮಂತ್ರಾಂತರವನ್ನು ಹೇಳುವರು :— ವಿಯತ್ = ಹ, ಇಂದು= ೦, ವರ್ಮ= ಹುಂ, ಅಸ್ತ್ರ= ಫಟ್) "ಹಂ ಹನುಮತೇ ರುದ್ರಾತ್ಮಕಾಯ ಹುಂಫಟ್" ಇದು ಅಷ್ಟಸಿದ್ಧಿಗಳನ್ನುಂಟುಮಾಡುವ ದ್ವಾದಶಾಕ್ಷರ ಮಹಾಮಂತ್ರವು.

ರಾಮಚಂದ್ರೋ ಮುನಿಶ್ಚಾಸ್ಯ ಜಗತೀ ಛಂಧ ಈರಿತಂ ।
ಹನುಮಾನ್ದೇವತಾ ಬೀಜಂ ಆದ್ಯಂ ಶಕ್ತಿರ್ಹುರ್ಮಿರಿತಾ ॥ ೧೨೧ ॥

ಷಡ್ದೀರ್ಘಭಾಜಾ ಬೀಜೇನ ಷಡಂಗಾನಿ ಸಮಾಚರೇತ್ ।
ಮಹಾಶೈಲಂ ಸಮುತ್ಪಾಟ್ಯ ಧಾವಂತಂ ರಾವಣಂ ಪ್ರತಿ ॥ ೧೨೨ ॥

ಲಾಕ್ಷಾರಕ್ತಾರುಣಂ ರೌದ್ರಂ ಕಾಲಾಂತಕಯಮೋಪಮಂ ।
ಜ್ವಲದಗ್ನಿಸಮಂ ಜೈತ್ರಂ ಸೂರ್ಯಕೋಟಿಸಮುಪ್ರಭಂ ॥ ೧೨೩ ॥

ಅಂಗದಾದ್ಯೈರ್ಮಹಾವೀರೈರ್ವೇಷ್ಟಿತಂ ರುದ್ರರೂಪಿಣಂ ।
ತಿಷ್ಠ ತಿಷ್ಠ ರಣೇ ದುಷ್ಟ ಸೃಜಂತಂ ಘೋರನಿಃಸ್ವನಂ ॥ ೧೨೪ ॥

---

೧೨೧-೧೨೨. ಈ ಮಂತ್ರಕ್ಕೆ ರಾಮಚಂದ್ರನೇ ಋಷಿ, ಜಗತೀ ಛಂದಸ್ಸು, ಹನುಮಂತನು ದೇವತೆ, ಮೊದಲನೆಯ ಅಕ್ಷರವಾದ "ಹಂ" ಎಂಬುದೇ ಬೀಜ "ಹುಂ" ಎಂಬುದು ಶಕ್ತಿ ಎಂದು ಹೇಳಲ್ಪಟ್ಟಿದೆ. "ಹಾಂ" "ಹೀಂ" ಮುಂತಾದ ಆರು ದೀರ್ಘಸಹಿತವಾದ ಬೀಜಾಕ್ಷರಗಳಿಂದ ಷಡಂಗ ನ್ಯಾಸಾದಿಗಳನ್ನಾಚರಿಸಬೇಕು.

೧೨೨-೧೨೪. ಮಹಾಪರ್ವತವನ್ನು ಬುಡದೊಡನೆ ಎತ್ತಿಕೊಂಡು ರಾವಣನನ್ನು ಕುರಿತು ಓಡುತ್ತಿರುವ, ಅರಗಿನಂತೆ ಕೆಂಪಗಿರುವ, ಭಯಂಕರ ನಾದ, ಕಾಲಾಂತಕನಾದ ಯಮನಿಗೆ ಸಮಾನನಾದ, ಉರಿಯುವ ಬೆಂಕಿಯಂತಿರುವ, ಜಯಶೀಲನಾದ, ಕೋಟಿಸೂರ್ಯರಂತೆ ಹೊಳೆಯುತ್ತಿರುವ, ಅಂಗದ ಮುಂತಾದ ಮಹಾವೀರರಿಂದ ಪರಿವೃತನಾದ, "ದುಷ್ಟನೇ! ನಿಲ್ಲು ನಿಲ್ಲು ಯುದ್ಧಕ್ಕೆ ಬಾ" ಎಂದು ಭಯಂಕರ ಧ್ವನಿಯಿಂದ ಕೂಗುತ್ತಿರುವ, ರೌದ್ರಾಕಾರವನ್ನು ತಾಳಿದ ಹನುಮಂತನನ್ನು ಧ್ಯಾನಿಸಬೇಕು.

ಶೈವರೂಪಿಣಮಭ್ಯರ್ಚ್ಯ ಧ್ಯಾತ್ವಾ ಲಕ್ಷಂ ಜಪೇನ್ಮನುಂ ।
ದಶಾಂಶಂ ಜುಹುಯಾದ್ವ್ರೀಹೀನ್ ಪಯೋದಧ್ಯಾಜ್ಯಮಿಶ್ರಿತಾನ್ ॥ ೧೨೫ ॥

ಪೂರ್ವೋಕ್ತೇ ವೈಷ್ಣವೇ ಪೀಠೇ ವಿಮಲಾದಿಸಮನ್ವಿತೇ ।
ಮೂರ್ತಿಂ ಸಂಕಲ್ಪ್ಯ ಮೂಲೇನ ಪೂಜಾ ಕಾರ್ಯಾ ಹನೂಮತಃ॥೧೨೬॥

ಧ್ಯಾನೈಕಮಾತ್ರೇಽಪಿ ನೃಣಾಂ ಸಿದ್ಧಿರೇವ ನ ಸಂಶಯಃ ।
ಅಥಾಸ್ಯ ಸಾಧನಂ ವಕ್ಷ್ಯೇ ಲೋಕಾನಾಂ ಹಿತಕಾಮ್ಯಯಾ ॥ ೧೨೭ ॥

ಹನುಮತ್ಸಾಧನಂ ಪುಣ್ಯಂ ಮಹಾಪಾತಕನಾಶನಂ ।
ಏತದ್ಗುಹ್ಯತಮಂ ಲೋಕೇ ಶೀಘ್ರಸಿದ್ಧಿಕರಂ ಪರಂ ॥ ೧೨೮ ॥

ಮಂತ್ರೀ ಯಸ್ಯ ಪ್ರಸಾದೇನ ತ್ರೈಲೋಕ್ಯವಿಜಯೀ ಭವೇತ್ ।
ಪ್ರಾತಃ ಸ್ನಾತ್ವಾ ನದೀತೀರೇ ಉಪವಿಶ್ಯ ಕುಶಾಸನೇ ॥ ೧೨೯ ॥

---

೧೨೫. ಬಳಿಕ ಪೂಜಿಸಿ, ಈ ಮಂತ್ರವನ್ನು ಒಂದು ಲಕ್ಷ ಸಾರಿ ಜಪ ಮಾಡಬೇಕು. ಹಾಲು, ಮೊಸರು, ತುಪ್ಪಗಳಿಂದ ಮಿಶ್ರಮಾಡಲ್ಪಟ್ಟ ಬತ್ತಗಳಿಂದ ಹತ್ತುಸಾವಿರ ಹೋಮಮಾಡಬೇಕು.

೧೨೬-೧೨೭. ಹಿಂದೆ ಹೇಳಿರುವ ವಿಮಲಾದಿಗಳಿಂದ ಕೂಡಿದ ವೈಷ್ಣವ ಪೀಠದಲ್ಲಿ ವಿಗ್ರಹವನ್ನು ಸ್ಥಾಪಿಸಿ ಮೂಲಮಂತ್ರದಿಂದ ಹನುಮಂತನ ಪೂಜೆ ಯನ್ನು ಮಾಡಬೇಕು. ಧ್ಯಾನಮಾಡಿದಾಗ್ಯೂ ಅಂತಹವರಿಗೂ ಸಹ ಸಿದ್ಧಿ ಯುಂಟಾಗುತ್ತದೆ. ಸಂದೇಹವಿಲ್ಲ.

೧೨೭-೧೨೮. ಅನಂತರ ಲೋಕಕ್ಕೆ ಹಿತವಾಗಲೆಂಬ ಅಭಿಲಾಷೆಯಿಂದ ಇದರ ಸಾಧನವನ್ನು ಹೇಳುವೆನು. ಹನುಮನ್ಮಂತ್ರಾದಿ ಸಾಧನೆಯು ಪುಣ್ಯ ಕರವು, ಅದು ಮಹಾ ಪಾಪಗಳನ್ನು ಪರಿಹರಿಸುತ್ತದೆ, ಇದು ಲೋಕದಲ್ಲಿ ರಹಸ್ಯತಮವಾದುದು, ಶ್ರೇಷ್ಠವಾದುದು ಮತ್ತು ಬಹುಬೇಗ ಸಿದ್ಧಿಯನ್ನುಂಟು ಮಾಡುತ್ತದೆ.

೧೨೯-೧೩೧. ಈ ಹನುಮನ್ಮಂತ್ರವನ್ನಾರಾಧಿಸುವವನು ಹನುಮಂತನ ಅನು ಗ್ರಹದಿಂದ ಮೂರು ಲೋಕಗಳಲ್ಲಿಯೂ ಜಯಶಾಲಿಯಾಗುವನು. ಪ್ರಾತಃಕಾಲ

ಪ್ರಾಣಾಯಾಮಷಡಂಗೇ ಚ ಮೂಲೇನ ಸಕಲಂ ಚರೇತ್ ।
ಪುಷ್ಪಾಂಜಲ್ಯಷ್ಟಕಂ ದತ್ವಾ ಧ್ಯಾತ್ವಾ ರಾಮಂ ಸಸೀತಕಂ ॥ ೧೩೦ ॥

ತಾಮ್ರಪಾತ್ರೇ ತತಃ ಪದ್ಮಂ ಅಷ್ಟಪತ್ರಂ ಸಕೇಸರಂ ।
ಕುಚಂದನೇನ ಘೃಷ್ಟೇನ ಸಂಲಿಖೇತ್ತ್ರಚ್ಛಲಾಕಯಾ ॥ ೧೩೧ ॥

ಕರ್ಣಿಕಾಯಾಂ ಲಿಖೇನ್ಮಂತ್ರಂ ತತ್ರಾವಾಹ್ಯಕಪೀಶ್ವರಂ ।
ಮೂರ್ತಿಂ ಮೂಲೇನ ಸಂಕಲ್ಪ್ಯ ಧ್ಯಾತ್ವಾ ಪಾದ್ಯಾದಿಕಂ ಚರೇತ್ ॥

ಗಂಧಪುಷ್ಪಾದಿಕಂ ಸರ್ವಂ ನಿವೇದ್ಯ ಮೂಲಮಂತ್ರತಃ ।
ಕೇಸರೇಷು ಷಡಂಗಾನಿ ದಲೇಷು ಚ ತತೋರ್ಚಯೇತ್ ॥ ೧೩೩ ॥

ಸುಗ್ರೀವಂ ಲಕ್ಷ್ಮಣಂ ಚೈವ ಅಂಗದಂ ನಲನೀಲಕೌ ।
ಜಾಂಬವಂತಂ ಚ ಕುಮುದಂ ಕೇಸರೀಶಂ ದಲೇರ್ಚಯೇತ್ ॥ ೧೩೪ ॥

---

ದಲ್ಲಿ ಸ್ನಾನಮಾಡಿ ನದಿಯ ತೀರದಲ್ಲಿ ದರ್ಭಾಸನದಮೇಲೆ ಕುಳಿತು, ಪ್ರಾಣಾಯಾಮ ಮತ್ತು ಷಡಂಗನ್ಯಾಸ ಮುಂತಾದುವುಗಳನ್ನೆಲ್ಲಾ ಆಚರಿಸಿ ಮೂಲ ಮಂತ್ರದಿಂದ ಎಂಟು ಪುಷ್ಪಾಂಜಲಿಗಳನ್ನು ಸಮರ್ಪಿಸಿ ಸೀತಾದೇವಿಯಿಂದ ಸಹಿತನಾದ ರಾಮನನ್ನು ಧ್ಯಾನಿಸಿ, ನಮಸ್ಕರಿಸಿ, ತಾಮ್ರದ ತಗಡಿನಲ್ಲಿ ಕೇಸರ ಯುಕ್ತವಾದ ಅಷ್ಟದಳಗಳುಳ್ಳ ಪದ್ಮವನ್ನು ಅರೆದ ಕೆಂಪು ಗಂಧದಿಂದ ತಾಮ್ರದ ಶಲಾಕೆಯಿಂದ ಬರೆಯಬೇಕು.

೧೩೨. ಅದರ ಕೋಶದಲ್ಲಿ ಈ ಮಂತ್ರವನ್ನು ಬರೆದು ಅಲ್ಲಿ ಕಪೀಶ್ವರನಾದ ಹನುಮಂತನನ್ನು ಆವಾಹನೆ ಮಾಡಿ ಮೂಲಮಂತ್ರದಿಂದ ಮೂರ್ತಿಯನ್ನು ರಚಿಸಿ ಧ್ಯಾನಿಸಿ ಪಾದ್ಯಾದಿಗಳನ್ನಾಚರಿಸಬೇಕು.

೧೩೩. ಗಂಧಪುಷ್ಪಾದಿಗಳೆಲ್ಲವನ್ನೂ ಸಮರ್ಪಿಸಿ, ಆ ಪದ್ಮದ ಕುಸುರುಗಳಲ್ಲಿ ಮೂಲಮಂತ್ರದಿಂದಲೇ ಷಡಂಗಗಳನ್ನು ರಚಿಸಿ, ದಳಗಳಲ್ಲಿ ಪೂಜಿಸಬೇಕು.

೧೩೪. ಸುಗ್ರೀವ, ಲಕ್ಷ್ಮಣ, ಅಂಗದ, ನಳ, ನೀಲ, ಜಾಂಬುವಂತ, ಕುಮುದ ಮತ್ತು ಕೇಸರೀಶ ಇವರನ್ನು ದಳಗಳಲ್ಲಿ ಪೂಜಿಸಬೇಕು.

ದಿಕ್ಪಾಲಾಂಶ್ಚಾಪಿ ವಜ್ರಾದೀನ್ಪೂಜಯೇತ್ತದನಂತರಂ ।
ಏವಂ ಸಿದ್ಧೇ ಮನೌ ಮಂತ್ರೀ ಸಾಧಯೇತ್ ಸ್ವೇಷ್ಟಮಾತ್ಮನಿ ॥ ೧೩೫ ॥

ನದೀತೀರೆ ಕಾನನೇ ವಾ ಪರ್ವತೇ ವಿಜನೇऽಥವಾ ।
ಸಾಧಯೇತ್ಸಾಧಕಶ್ರೇಷ್ಠೋ ಭೂಮಿಗ್ರಹಣಪೂರ್ವಕಂ ॥ ೧೩೬ ॥

ಜಿತಾಹಾರೋ ಜಿತಶ್ವಾಸೋ ಜಿತವಾಕ್ಚ ಜಿತೇಂದ್ರಿಯಃ ।
ದಿಗ್ಬಂಧನಾದಿಕಂ ಕೃತ್ವಾ ನ್ಯಾಸಧ್ಯಾನಾದಿಪೂರ್ವಕಮ್ ॥ ೧೩೭ ॥

ಲಕ್ಷಂ ಜಪೇನ್ಮಂತ್ರರಾಜಂ ಪೂಜಯಿತ್ವಾ ತು ಪೂರ್ವವತ್ ।
ಲಕ್ಷಾಂತೇ ದಿವಸಂ ಪ್ರಾಪ್ಯ ಕುರ್ಯಾಚ್ಚ ಪೂಜನಂ ಮಹತ್ ॥ ೧೩೮ ॥

ಏಕಾಗ್ರಮನಸಾ ಸಮ್ಯಗ್ಧ್ಯಾತ್ವಾ ಪವನನಂದನಮ್ ।
ದಿವಾರಾತ್ರೌ ಜಪಂ ಕುರ್ಯಾದ್ಯಾವತ್ಸಂದರ್ಶನಂ ಭವೇತ್ ॥ ೧೩೯ ॥

---

೧೩೫. ತರುವಾಯ ಇಂದ್ರಾದಿ ದಿಕ್ಪಾಲಕರನ್ನೂ ಅವರ ವಜ್ರಾದ್ಯಾಯುಧಗಳನ್ನೂ ಪೂಜಿಸಬೇಕು. ಈ ರೀತಿ ಆರಾಧಿಸಿ ಮಂತ್ರಸಿದ್ಧಿಯನ್ನು ಪಡೆದವನು ತನ್ನ ಮನೋಭೀಷ್ಟವನ್ನು ಸಾಧಿಸುವನು.

೧೩೬. ಸಾಧಕೋತ್ತಮನು ನದೀತೀರ ಅಥವಾ ಕಾಡು ಇಲ್ಲವೇ ಪರ್ವತ ಯಾ ಏಕಾಂತಸ್ಥಳ ಇವುಗಳಲ್ಲಿ ಭೂಮಿಗ್ರಹಣಪೂರ್ವಕವಾಗಿ ಸಾಧಿಸಬೇಕು.

೧೩೭-೧೩೮. ಆಹಾರ, ಶ್ವಾಸೋಚ್ಛ್ವಾಸ, ವಾಕ್ಕು, ಇಂದ್ರಿಯ, ಇವುಗಳೆಲ್ಲವನ್ನೂ ಜಯಿಸಿದವನಾಗಿ, ದಿಗ್ಬಂಧನಾದಿಗಳನ್ನು ಮಾಡಿಕೊಂಡು ನ್ಯಾಸಧ್ಯಾನಾದಿಪೂರ್ವಕವಾಗಿ ಈ ಉಕ್ತ ಮಂತ್ರವನ್ನು ಒಂದುಲಕ್ಷ ಜಪಿಸಬೇಕು. ಅನಂತರ ಹಿಂದೆ ಹೇಳಿರುವಂತೆ ಪೂಜೆ ಮಾಡಿ ಲಕ್ಷಜಪವಾದ ಮೇಲೆ ಒಂದು ದಿನ ಮಹಾ ಪೂಜೆಯನ್ನು ಮಾಡಬೇಕು.

೧೩೯. ಬಳಿಕ ಏಕಾಗ್ರಚಿತ್ತದಿಂದ ವಾಯುಕುಮಾರನನ್ನು ಚೆನ್ನಾಗಿ ಧ್ಯಾನಿಸಿ ಸಾಕ್ಷಾತ್ಕಾರವಾಗುವವರೆಗೂ ಹಗಲು ರಾತ್ರಿ ಜಪಮಾಡಬೇಕು.

ಸುದೃಢಂ ಸಾಧಕಂ ಮತ್ವಾ ನಿಶೀಥೇ ಪವನಾತ್ಮಜಃ ।
ಸುಪ್ರಸನ್ನಸ್ತತೋ ಭೂತ್ವಾ ಪ್ರಯಾತಿ ಸಾಧಕಾಗ್ರತಃ ॥ ೧೪೦ ॥

ಯಥೇಪ್ಸಿತಂ ವರಂ ದತ್ವಾ ಸಾಧಕಾಯ ಕಪೀಶ್ವರಃ ।
ವರಂ ಲಬ್ಧ್ವಾ ಸಾಧಕೇಂದ್ರೋ ವಿಹರೇದಾತ್ಮನಃ ಸುಖೈಃ ॥ ೧೪೧ ॥

ಏತದ್ಧಿ ಸಾಧನಂ ಪುಣ್ಯಂ ಲೋಕಾನಾಂ ಹಿತಕಾಮ್ಯಯಾ ।
ಪ್ರಕಾಶಿತಂ ರಹಸ್ಯಂ ವೈ ದೇವಾನಾಮಪಿ ದುರ್ಲಭಮ್ ॥ ೧೪೨ ॥

ಅನ್ಯಾನಪಿ ಪ್ರಯೋಗಾಂಶ್ಚ ಸಾಧಯೇದಾತ್ಮನೋ ಹಿತಾನ್ ।
ವಿಯದಿಂದುಯುತಂ ಪಶ್ಚಾತ್ ಙೇಂತಂ ಪವನನಂದನಮ್ ॥ ೧೪೩ ॥

ವಹ್ನಿಪ್ರಿಯಾಂತೋ ಮಂತ್ರೋಽಯಂ ದಶಾರ್ಣಃ ಸರ್ವಕಾಮದಃ ।
ಮುನ್ಯಾದಿಕಂ ಚ ಪೂರ್ವೋಕ್ತಂ ಷಡಂಗಾನ್ಯಪಿ ಪೂರ್ವವತ್ ॥ ೧೪೪ ॥

---

೧೪೦-೧೪೧. ಸಾಧಕನು ಅತ್ಯಂತ ಸ್ಥಿರಚಿತ್ತನಾಗಿರುವುದನ್ನು ತಿಳಿದು ಅರ್ಧರಾತ್ರಿಯಲ್ಲಿ ವಾಯುಕುಮಾರನು ಅತ್ಯಂತ ಪ್ರಸನ್ನನಾಗಿ ಅವನ ಎದುರಿಗೆ ಬಂದು ನಿಂತು ಅವನಿಗೆ ಇಷ್ಟವಾದ ವರವನ್ನು ಕೊಟ್ಟು ಅದೃಶ್ಯನಾಗುವನು.

೧೪೧-೧೪೩. ಈ ರೀತಿ ವರವನ್ನು ಪಡೆದ ಸಾಧಕವರ್ಯನು ಸುಖವಾಗಿ ವಿಹರಿಸುವನು. ಈ ಪುಣ್ಯತಮವಾದ ಸಾಧನವು ರಹಸ್ಯವಾದಾಗ್ಯೂ ಲೋಕೋಪಕಾರಕ್ಕಾಗಿ ಪ್ರಕಾಶಮಾಡಲ್ಪಟ್ಟಿದೆ. ಇದು ದೇವತೆಗಳಿಗೂ ಸಹ ದುರ್ಲಭವು. ಸಾಧಕನು ತನಗೆ ಹಿತವಾದ ಇತರ ಪ್ರಯೋಗಗಳನ್ನು ಸಾಧಿಸಬೇಕು.

೧೪೩-೧೪೪. ಇನ್ನೊಂದು ಹನುಮನ್ಮಂತ್ರವನ್ನು ಹೇಳುತ್ತಾರೆ. (ವಿಯತ್= ಹ, ಇಂದು= ಂ, ವಹ್ನಿಪ್ರಿಯಾ= ಸ್ವಾಹಾ) "ಹಂ ಪವನನಂದನಾಯ ಸ್ವಾಹಾ" ಎಂಬುದು ಸಕಲೇಷ್ಟಪ್ರದವಾದ ದಶಾಕ್ಷರ ಮಂತ್ರವು. ಋಷಿ ಮುಂತಾದುವುಗಳು, ಷಡಂಗನ್ಯಾಸ ಇವುಗಳನ್ನೆಲ್ಲಾ ಹಿಂದಿನ ಮಂತ್ರ ವಿಧಾನದಲ್ಲಿ ಹೇಳಿರುವಂತೆಯೇ ತಿಳಿಯಬೇಕು.

ಧ್ಯಾಯೇದ್ರಣೇ ಹನೂಮಂತಂ ಸೂರ್ಯಕೋಟಿಸಮಪ್ರಭಮ್ ।
ಧಾವಂತಂ ರಾವಣಂ ಜೇತುಂ ದೃಷ್ಟ್ವಾ ಸತ್ವರಮುತ್ಥಿತಮ್ ॥ ೧೪೫ ॥

ಲಕ್ಷ್ಮಣಂ ಚ ಮಹಾವೀರಂ ಪತಿತಂ ರಣಭೂತಲೇ ।
ಗಿರಿಂ ಚ ಕ್ರೋಧಮುತ್ಪಾಟ್ಯ ಗೃಹೀತುಂ ಗುರುಪರ್ವತಂ ॥ ೧೪೬ ॥

ಹಾಹಾಕಾರೈಃ ಸದಂಭೈಶ್ಚ ಕಂಪಯಂತಂ ಜಗತ್ರಯಂ ।
ಆಬ್ರಹ್ಮಾಂಡಂ ಸಮಾವಾಪ್ಯ ಕೃತ್ವಾ ಭೀಮಂ ಕಲೇಬರಂ ॥ ೧೪೭ ॥

ಲಕ್ಷಂ ಜಪೇದ್ದಶಾಂಶೇನ ಜುಹುಯಾತ್ಪೂರ್ವವತ್ಸುಧೀಃ ।
ಪೂರ್ವವತ್ಪೂಜನಂ ಪ್ರೋಕ್ತಂ ಮಂತ್ರಸ್ಯಾಸ್ಯ ವಿಧಾನತಃ ॥ ೧೪೮ ॥

ಏವಂ ಸಿದ್ಧೇ ಮನೌ ಮಂತ್ರೀ ಸಾಧಯೇದಾತ್ಮನೋ ಹಿತಂ ।
ಅಸ್ಯಾಪಿ ಮಂತ್ರವರ್ಯಸ್ಯ ರಹಸ್ಯಂ ಸಾಧನಂ ತು ವೈ ॥ ೧೪೯ ॥

---

೧೪೫-೧೪೭. ಧ್ಯಾನ:—ಯುದ್ಧದಲ್ಲಿ ಓಡುತ್ತಿರುವ ರಾವಣನನ್ನು ಜಯಿಸಲು ಶೀಘ್ರವಾಗಿ ಎದ್ದುಬಂದ, ಮಹಾಪರಾಕ್ರಮಶಾಲಿಯಾದ, ಲಕ್ಷ್ಮಣನು ಯುದ್ಧ ರಂಗದಲ್ಲಿ ಬಿದ್ದುದನ್ನು ನೋಡಿ ಹಾರಿಹೋಗಿ ದೊಡ್ಡದಾದ ಸಂಜೀವನಪರ್ವತ ವನ್ನು ತೆಗೆದುಕೊಳ್ಳುವುದಕ್ಕೋಸ್ಕರ ಅದನ್ನು ಆಗ್ರಹದಿಂದ ಕಿತ್ತು, ಅಟ್ಟಹಾಸ, ಹಾಹಾಕಾರಗಳಿಂದ ಮೂರುಲೋಕಗಳನ್ನು ನಡುಗಿಸುತ್ತಿರುವ, ಬ್ರಹ್ಮಾಂಡದ ವರೆಗೂ ವ್ಯಾಪಿಸಿ ಶರೀರವನ್ನು ಭಯಂಕರವಾಗಿ ಮಾಡಿ ಕೋಟಿಸೂರ್ಯರಂತೆ ಹೊಳೆಯುತ್ತಿರುವ ಹನುಮಂತನನ್ನು ಧ್ಯಾನಮಾಡಬೇಕು.

೧೪೮. ಈ ಮಂತ್ರವನ್ನು ಒಂದು ಲಕ್ಷಸಲ ಜಪಿಸಿ, ಹಿಂದೆ ಹೇಳಿದ ಪ್ರಕಾರ ಹತ್ತುಸಾವಿರ ಹೋಮಗಳನ್ನು ಮಾಡಬೇಕು. ಈ ಮಂತ್ರಕ್ಕೂ ಸಹ ಪೂರ್ವೋಕ್ತವಿಧಾನದಂತೆಯೇ ಪೂಜಾದಿಗಳು ವಿಹಿತವಾಗಿವೆ.

೧೪೯-೧೫೦. ಈ ರೀತಿಯಾಗಿ ಅನುಷ್ಠಾನಮಾಡಿ ಸಿದ್ಧಿಯನ್ನು ಪಡೆದ ಮಂತ್ರಿಯು ತನ್ನ ಇಷ್ಟವನ್ನು ಸಾಧಿಸಿಕೊಳ್ಳುವನು. ಶ್ರೇಷ್ಠವಾದ ಈ ಮಂತ್ರ ಸಾಧನೆಯೂ ಸಹ ಅತ್ಯಂತ ರಹಸ್ಯವಾದುದು. ಇದು ತಂತ್ರಗಳಲ್ಲೆಲ್ಲಾ

ಸುಗೋಪ್ಯಂ ಸರ್ವತಂತ್ರೇಷು ನ ದೇಯಂ ಯಸ್ಯ ಕಸ್ಯಚಿತ್ ।
ಬ್ರಾಹ್ಮೇ ಮುಹೂರ್ತೇಚೋತ್ಥಾಯ ಕೃತನಿತ್ಯಕ್ರಿಯಃ ಶುಚಿಃ ॥ ೧೫೦ ॥

ಗತ್ವಾ ನದೀಂ ತತಃ ಸ್ನಾತ್ವಾ ತೀರ್ಥಮಾವಾಹ್ಯ ಚಾಷ್ಟಧಾ ।
ಮೂಲಮಂತ್ರಂ ತತೋ ಜಪ್ತ್ವಾ ಸಿಂಚೇದಾದಿತ್ಯಸಂಖ್ಯಯಾ ॥ ೧೫೧ ॥

ಏವಂ ಸ್ನಾನಾದಿಕಂ ಕೃತ್ವಾ ಗಂಗಾತೀರೇಽಥ ವಾ ಪುನಃ ।
ಪರ್ವತೇ ವಾ ವನೇ ವಾಽಪಿ ಭೂಮಿಗ್ರಹಣಪೂರ್ವಕಂ ॥ ೧೫೨ ॥

ಆದ್ಯವರ್ಣೈಃ ಪೂರಕಂ ಸ್ಯಾತ್ಪಂಚವರ್ಗೈಶ್ಚ ಕುಂಭಕಂ ।
ರೇಚಕಂ ಚ ಪುನರ್ಯಾದ್ಯೈರೇವಂ ಪ್ರಾಣಾನ್ನಿಯಮ್ಯ ಚ ॥ ೧೫೩ ॥

ವಿಧಾಯ ಭೂತಶುದ್ಧ್ಯಾದಿಪೀಠನ್ಯಾಸಾವಧಿಃ ಪುನಃ ।
ಧ್ಯಾತ್ವಾ ಪೂರ್ವೋಕ್ತವಿಧಿನಾ ಸಂಪೂಜ್ಯ ಚ ಕಪೀಶ್ವರಂ ॥ ೧೫೪ ॥

---

ಅತ್ಯಂತ ಗೋಪ್ಯವಾದುದು. ಅಪರಿಚಿತಶೀಲಸ್ವಭಾವನಾದವನಿಗೆ ಈ ಮಂತ್ರವನ್ನು ಉಪದೇಶಿಸಬಾರದು.

೧೫೦-೧೫೧. ಬ್ರಾಹ್ಮಮೂಹೂರ್ತದಲ್ಲಿ ಎದ್ದು ನಿತ್ಯವಾದ ಶೌಚಾದಿಗಳನ್ನು ಮಾಡಿಕೊಂಡು ಶುದ್ಧನಾಗಿ ನದಿಗೆ ಹೋಗಿ, ಅಲ್ಲಿ ಸ್ನಾನಮಾಡಿ, ಅಲ್ಲಿ ತೀರ್ಥಾಭಿಮಾನಿ ದೇವತೆಯನ್ನು ಆವಾಹನೆ ಮಾಡಿ, ಎಂಟಾವರ್ತಿ ಮೂಲಮಂತ್ರವನ್ನು ಜಪಿಸಿ, ಬಳಿಕ ಹನ್ನೆರಡಾವರ್ತಿ ಪ್ರೋಕ್ಷಿಸಕೊಳ್ಳಬೇಕು.

೧೫೨-೧೫೫. ಈ ಪ್ರಕಾರ ಸ್ನಾನಾದಿಗಳನ್ನು ಮಾಡಿ ಗಂಗಾತೀರ ಅಥವಾ ಪರ್ವತ ಅಥವಾ ವನದಲ್ಲಿಯಾದರೂ ಭೂಮಿಗ್ರಹಣಪೂರ್ವಕವಾಗಿ ಅಕಾರಾದಿ ಸ್ವರಾಕ್ಷರಗಳಿಂದ ಪೂರಕವನ್ನೂ, ಕಕಾರಾದಿ ಪಂಚ ವರ್ಗಾಕ್ಷರಗಳಿಂದ ಕುಂಭಕವನ್ನೂ, ಯಕಾರಾದಿ ವರ್ಣಗಳಿಂದ ರೇಚಕವನ್ನೂ ಮಾಡುತ್ತಾ ಪ್ರಾಣಾಯಾಮ ಮಾಡಿ, ಭೂತಶುದ್ಧ್ಯಾದಿಗಳನ್ನು ಪೀಠನ್ಯಾಸದವರೆವಿಗೂ ಮಾಡಿ, ಪೂರ್ವೋಕ್ತ ವಿಧಾನದಿಂದ ಧ್ಯಾನಮಾಡಿ, ಹನುಮಂತನನ್ನು ಪೂಜಿಸಿ,

ತದಗ್ರೇ ಪ್ರಜಪೇನ್ನಿತ್ಯಂ ಸಾಧಕೋಽಯುತಮಾದರಾತ್ ।
ಸಪ್ತಮೇ ದಿವಸೇ ಪ್ರಾಪ್ತೇ ಕುರ್ಯಾಚ್ಚ ಪೂಜನಂ ಮಹತ್ ॥ ೧೫೩ ॥

ಏಕಾಗ್ರಮನಸಾ ಮಂತ್ರೀ ದಿವಾರಾತ್ರಂ ಜಪೇನ್ಮನುಂ ।
ಮಹಾಭಯಂ ಪ್ರದತ್ವಾ ತ್ರಿಭಾಗಶೇಷಾಸುನಿಶ್ಚಿತಂ ॥ ೧೫೬ ॥

ಯಾಮಿನೀಷು ಸಮಾಯಾತಿ ನಿಯತಂ ಪವನಾತ್ಮಜಃ ।
ಯಥೇಪ್ಸಿತಂ ವರಂ ದತ್ವಾ ತ್ಸಾಧಕಾಯ ಕಪೀಶ್ವರಃ ॥ ೧೫೭ ॥

ವಿದ್ಯಾಂ ವಾಽಪಿ ಧನಂ ವಾಽಪಿ ರಾಜ್ಯಂ ವಾ ಶತ್ರುನಿಗ್ರಹಂ ।
ತತ್ಕ್ಷಣಾದೇವ ಚಾಪ್ನೋತಿ ಸತ್ಯಂ ಸತ್ಯಂ ನ ಸಂಶಯಃ ॥ ೧೫೮ ॥

ಇಹ ಲೋಕೇಽಖಿಲಾನ್ಕಾಮಾನ್ಭುಂಕ್ತ್ವಾಂತೇ ಮುಕ್ತಿಮಾಪ್ನುಯಾತ್ ।
ಸದ್ಯೋಜಾತಂ ವಾಯುಯುಗ್ಮಂ ಹನುಮಂತೇತಿ ಚೋದ್ಧರೇತ್ ॥ ೧೫೯ ॥

---

ಅವನ ಮುಂದೆ ಸಾಧಕನು ನಿತ್ಯವೂ ಭಕ್ತಿಯಿಂದ ಹತ್ತುಸಾವಿರಜಪಮಾಡಬೇಕು. ಹೀಗೆಯೇ ಮಾಡುತ್ತಾ ಏಳನೆಯ ದಿನದಲ್ಲಿ ಮಹಾಪೂಜೆಯನ್ನು ಮಾಡಬೇಕು.

೧೫೬-೧೫೭. ಆ ದಿನದಲ್ಲಿ ಮಂತ್ರಿಯು ಚಿತ್ತೈಕಾಗ್ರತೆಯಿಂದ ಹಗಲೂ ರಾತ್ರಿಯೂ ಈ ಮಂತ್ರವನ್ನು ಜಪಿಸಬೇಕು. ಹಾಗೆ ಜಪಿಸುತ್ತಾ ರಾತ್ರಿಯಲ್ಲಿ ಮೂರುಭಾಗ ಕಳೆದಮೇಲೆ ನಾಲ್ಕನೆಯ ಯಾಮದಲ್ಲಿ ವಾಯುಸುತನಾದ ಕಪೀಶ್ವರನು ಸಾಕ್ಷಾತ್ತಾಗಿ ಬಂದು ಸಾಧಕನಿಗೆ ಮಹಾಭಯವನ್ನು ಹುಟ್ಟಿಸುವನು. ಆಗಲೂ ಅವನು ಭಯಪಡದೆ ಸ್ಥಿರಮನಸ್ಸಿನಿಂದ ಜಪಿಸುತ್ತಿದ್ದರೆ ಅಂತಹ ಸಾಧಕನಿಗೆ ಆ ಹನುಮಂತನು ಬಯಸಿದ ವರನ್ನೆಲ್ಲಾ ಕೊಡುವನು.

೧೫೮-೧೫೯. ಈ ರೀತಿ ಸಿದ್ಧಿಹೊಂದಿದವನು ವಿದ್ಯೆ, ಐಶ್ವರ್ಯ, ರಾಜ್ಯ ಮತ್ತು ಶತ್ರುವಿಜಯ ಇವುಗಳನ್ನು ತಕ್ಷಣದಲ್ಲಿಯೇ ಪಡೆಯುವನು. ನಿಜ. ನಿಜ. ಸಂದೇಹವಿಲ್ಲ. ಇಷ್ಟೇ ಅಲ್ಲ ಈ ಲೋಕದಲ್ಲಿ ಸಕಲೇಷ್ಟಾರ್ಥಗಳನ್ನೂ ಅನುಭವಿಸಿ ಕೊನೆಯಲ್ಲಿ ಮುಕ್ತಿಯನ್ನೂ ಪಡೆಯುವನು.

ಫಲಾಂತೇ ಫಕ್ರಿಯಾ ನೇತ್ರಯುಕ್ತಾ ಚ ಕಾಮಿಕಾ ತತಃ ।
ಥಗಾಂತೇ ಥಗಿತೇತ್ಯುಕ್ತ್ವಾ ಆಯುರಾಷಪದಂ ತತಃ ॥ ೧೬೦ ॥
ಲೋಹಿತೋ ಪರುಡಾಹೇತಿ ಬಾಣನೇತ್ರಾಕ್ಷರೋ ಮನುಃ ।
ಮುನ್ಯಾದಿಕಂ ತು ಪೂರ್ವೋಕ್ತಂ ಪ್ಲೀಹರೋಗಹರೋ ಹರಿಃ ॥ ೧೬೧ ॥
ದೇವತಾ ಚ ಸಮುದ್ದಿಷ್ಟಾ ಪ್ಲೀಹಯುಕ್ತೋದರೇ ಪುನಃ ।
ನಾಗವಲ್ಲೀದಲಂ ಸ್ಥಾಪ್ಯಮುಪರ್ಯಾಚ್ಛಾದಯೇತ್ತತಃ ॥ ೧೬೨ ॥
ವಸ್ತ್ರಂ ಚೈವಾಷ್ಟಗುಣಿತಂ ತತಃ ಸಾಧಕಸತ್ತಮಃ ।
ಶಕಲಂ ವಂಶಜಂ ತಸ್ಯೋಪರಿ ಮುಂಚೇತ್ಕಪಿಂ ಸ್ಮರೇತ್ ॥ ೧೬೩ ॥
ಅರಣ್ಯಸಾಣಕೋತ್ಪನ್ನೇ ವಹ್ನೌ ಯಷ್ಟಿಂ ಪ್ರತಾಪಯೇತ್ ।
ಬದರೀಭೂರುಹೋತ್ಥಾಂ ತಾಂ ಮಂತ್ರೇಣಾನೇನ ಸಪ್ತಧಾ ॥ ೧೬೪ ॥

---

೧೫೯-೧೬೧. (ಉದರ ರೋಗ ನಾಶಕಮಂತ್ರವನ್ನು ಹೇಳುತ್ತಾರೆ :— ಸದ್ಯೋಜಾತ= ಓಂ, ವಾಯುಯುಗ್ಮ= ಯೋಯೋ, ಕ್ರಿಯಾ ನೇತ್ರ ಯುಕ್ತಾ= ಲಿ, ಕಾಮಿತಾ= ತ, ಲೋಹಿತ= ಪ, ಉಳಿದ ಶ್ಲೋಕದಲ್ಲಿನ ಶಬ್ದಗಳನ್ನು ಹಾಗೆಯೇ ಯೋಜನೆ ಮಾಡಬೇಕು.) ಇದರಿಂದ ನಿಷ್ಪನ್ನ ವಾಗುವ ಮಂತ್ರ :—“ ಓಂ ಯೋ ಯೋ ಹನುಮಂತ ಫಲಫಲಿತ ಧಗಧಗಿತ ಆಯುರಾಷಪರುಡಾಹ. ” ಇದು ಇಪ್ಪತ್ತೈದಕ್ಷರದ ಮಂತ್ರವು.

೧೬೧–೧೬೨. ಹಿಂದಿನ ಮಂತ್ರದ ಋಷ್ಯಾದಿಗಳೇ ಈ ಮಂತ್ರಕ್ಕೂ ಋಷ್ಯಾದಿಗಳೆಂದು ತಿಳಿಯಬೇಕು. ಉದರ ರೋಗಪರಿಹಾರಕ ಹರಿಯೇ ದೇವ ತೆಯೆಂದು ಉಕ್ತವಾಗಿದೆ.

೧೬೨–೧೬೪. ಉದರರೋಗನಾಶಕಪ್ರಯೋಗವು :— ಸಾಧಕವ ರ್ಯನು ರೋಗಿಯ ಹೊಟ್ಟೆಯಮೇಲೆ ವೀಳೆಯದೆಲೆಯನ್ನು ಇಟ್ಟು ಅದರ ಮೇಲೆ ಎಂಟುಪದರ ಮಡಿಸಿದವಸ್ತ್ರವನ್ನು ಹೊದಿಸಬೇಕು. ಅದರ ಮೇಲೆ ಹನುಮಂತನನ್ನು ಧ್ಯಾನಿಸುತ್ತಾ ಬಿದಿರು ತುಂಡನ್ನು ಇಡಬೇಕು. ವನಪಾಷಾ ಣದಿಂದ ಉತ್ಪನ್ನವಾದ ಬೆಂಕಿಯಲ್ಲಿ ಬೋರೆಗಿಡದ ಕೋಲನ್ನು ಏಳಾವರ್ತಿ ಈ ಮಂತ್ರವನ್ನು ಜಪಿಸುತ್ತಾ ಕಾಸಬೇಕು.

ತಯಾ ಸಂತಾಡಯೇದ್ವಂಶಶಕಲಂ ಜಠರಸ್ಥಿತಂ ।
ಸಪ್ತಕೃತ್ವಃ ಪ್ಲೀಹರೋಗೋ ನಾಶಮಾಯಾತಿ ನಿಶ್ಚಿತಂ　　॥ ೧೬೫ ॥
ತಾರೋ ನಮೋ ಭಗವತೇ ಆಂಜನೇಯಾಯ ಚೋಚ್ಚರೇತ್ ।
ಅಮುಕಸ್ಯ ಶೃಂಖಲಾಂ ತ್ರೋಟಯದ್ವಿತಯಮೀರಯೇತ್　　॥ ೧೬೬ ॥
ಬಂಧಮೋಕ್ಷಂ ಕುರುಯುಗಂ ಸ್ವಾಹಾಂತೋಯಂ ಮನುರ್ಮತಃ ।
ಈಶ್ವರೋಸ್ಯ ಮುನಿಶ್ಛಂದೋಽನುಷ್ಟುಪ್ ಚ ದೇವತಾ ಪುನಃ　॥ ೧೬೭ ॥
ಶೃಂಖಲಾಮೋಚಕಃ ಶ್ರೀಮಾನ್ಹನೂಮಾನ್ಪವನಾತ್ಮಜಃ ।
ಹಂ ಬೀಜಂ ಠದ್ವಯಂ ಶಕ್ತಿರ್ಬಂಧಮೋಕ್ಷೇ ನಿಯೋಗತಾ　　॥ ೧೬೮ ॥
ಷಡ್ದೀರ್ಘವಹ್ನಿಯುಕ್ತೇನ ಬೀಜೇನಾಂಗಾನಿ ಕಲ್ಪಯೇತ್ ।
ಪಾಮೋ ಶೈಲಂ ವೈರಿಭಿದಂ ವಿಶುದ್ಧಂ ಠಂಕಮನ್ಯತಃ　　॥ ೧೬೯ ॥

---

೧೬೫. ಹೀಗೆ ಕಾಯಿಸಿದ ಕೋಲಿನಿಂದ ಹೊಟ್ಟೆಯ ಮೇಲಿಟ್ಟಿದ್ದ ಬಿದಿರುತುಂಡನ್ನು ಹೊಡೆಯಬೇಕು. ಹೀಗೆ ಏಳಾವರ್ತಿ ಮಾಡಿದರೆ ಉದರ ರೋಗವು ಖಂಡಿತವಾಗಿ ವಾಸಿಯಾಗುತ್ತದೆ.

೧೬೬-೧೬೭. ಶೃಂಖಲಾ ಮೋಚಕ ಹನುಮನ್ಮಂತ್ರ:— "ಓಂ ನಮೋ ಭಗವತೇ ಆಂಜನೇಯಾಯ ಅಮುಕಸ್ಯ ಶೃಂಖಲಾಂ ತ್ರೋಟಯ ತ್ರೋಟಯ ಬಂಧಮೋಕ್ಷಂ ಕುರು ಕುರು ಸ್ವಾಹಾ'' ಇದೇ ಶೃಖಂಲಾಮೋಚಕ ಹನುಮನ್ಮಂತ್ರವು,

೧೬೭-೧೬೮. ಇದಕ್ಕೆ ಈಶ್ವರನು ಋಷಿ, ಛಂದಸ್ಸು ಅನುಷ್ಟುಪ್, ವಾಯುಸುತನಾದ ಶೃಂಖಲಾಮೋಚಕನಾದ ಶ್ರೀಮದ್ಧನುಮಂತನೇ ದೇವತೆ, "ಹಂ" ಎಂಬುದು ಬೀಜ, ''ಸ್ವಾಹಾ" ಎಂಬುದು ಶಕ್ತಿ, ಬಂಧಮೋಕ್ಷಾರ್ಥವಾಗಿ ಈ ಮಂತ್ರದ ಜಪಾದಿಗಳನ್ನು ಮಾಡಬೇಕು.

೧೬೯. ಆ, ಈ, ಊ ಮುಂತಾದ ಆರು ದೀರ್ಘಸಹಿತವಾದ ''ರ'' ವರ್ಣದಿಂದ ಸಹಿತವಾದ ಬೀಜಾಕ್ಷರದಿಂದ ಹೃದಯಾದಿ ಷಡಂಗಗಳನ್ನು ನ್ಯಾಸ ಮಾಡಬೇಕು.

ದಧಾನಂ ಸ್ವರ್ಣವರ್ಣಂ ಚ ಧ್ಯಾಯೇತ್ಕುಂಡಲಿನಂ ಹರಿಂ ।
ಏವಂ ಧ್ಯಾತ್ವಾ ಜಪೇಲ್ಲಕ್ಷಂ ದಶಾಂಶಂ ಚೂತಪಲ್ಲವೈಃ ॥ ೧೭೦ ॥

ಜುಹುಯಾತ್ಪೂರ್ವವತ್ಪ್ರೋಕ್ತಂ ಯಜನಂ ವಾಸ್ಯ ಸೂರಿಭಿಃ ।
ಮಹಾಕಾರಾಗೃಹೇ ಪ್ರಾಪ್ತೇ ಹ್ಯಯುತಂ ಪ್ರಜಪೇನ್ನರಃ ॥ ೧೭೧ ॥

ಶೀಘ್ರಂ ಕಾರಾಗೃಹಾನ್ಮುಕ್ತಃ ಸುಖೀ ಭವತಿ ನಿಶ್ಚಿತಂ ।
ಯಂತ್ರಂ ಚಾಸ್ಯ ಪ್ರವಕ್ಷ್ಯಾಮಿ ಬಂಧಮೋಕ್ಷಕರಂ ಶುಭಂ ॥ ೧೭೨ ॥

ಅಷ್ಟಚ್ಛದಾಂತಃ ಷಟ್ಕೋಣಂ ಸಾಧ್ಯನಾಮಸಮನ್ವಿತಂ ।
ಷಟ್ಕೋಣೇಷು ಧ್ರುವಂ ಚೇಂತಮಾಂಜನೇಯಪದಂ ಲಿಖೇತ್ ॥ ೧೭೩ ॥

ಅಷ್ಟಚ್ಛದೇಷು ವಿಲಿಖೇತ್ಪ್ರಣವೋ ವಾತುವಾತ್ವಿತಿ ।
ಗೋರೋಚನಾಕುಂಕುಮೇನ ಲಿಖಿತ್ವಾ ಯಂತ್ರಮುತ್ತಮಂ ॥ ೧೭೪ ॥

---

೧೬೯-೧೭೦. ಎಡಗೈಯಲ್ಲಿ ಪರ್ವತ, ಬಲಗೈಯಲ್ಲಿ ಪರಿಶುದ್ಧವಾದ ಠಂಕ ಇವುಗಳನ್ನು ಧರಿಸಿರುವ, ಕುಂಡಲಯುಕ್ತನಾದ, ಬಂಗಾರದಂತೆ ಹೊಳೆಯುತ್ತಿರುವ ಕಪಿಯನ್ನು ಧ್ಯಾನಿಸಬೇಕು.

೧೭೦-೧೭೧. ಈ ರೀತಿ ಧ್ಯಾನಿಸಿ ಒಂದುಲಕ್ಷಜಪಮಾಡಿ ಮಾವಿನ ಚಿಗುರುಗಳಿಂದ ಹತ್ತು ಸಾವಿರ ಹೋಮಮಾಡಬೇಕು. ಹಿಂದಿನ ಮಂತ್ರದ ವಿಧಾನದಲ್ಲಿ ಹೇಳಿರುವಂತೆಯೇ ಈ ಮಂತ್ರಾಂಗಪೂಜೆಯನ್ನು ಮಾಡಬೇಕೆಂದು ಜ್ಞಾನಿಗಳಿಂದ ಉಕ್ತವಾಗಿದೆ.

೧೭೧-೧೭೨. ದೊಡ್ಡಜೈಲಿನಲ್ಲಿ ಸೆರೆಯಾಗಿರುವ ಮನುಷ್ಯನು ಹತ್ತು ಸಾವಿರ ಜಪಮಾಡಿದರೆ ಬೇಗ ಕಾರಾಗೃಹದಿಂದ ಬಿಡುಗಡೆಯಾಗಿ ಖಂಡಿತವಾಗಿ ಸುಖಿಯಾಗುವನು. ಬಂಧನದಿಂದ ಬಿಡುಗಡೆಮಾಡಿಸುವ ಈ ಶುಭಮಂತ್ರದ ಯಂತ್ರವನ್ನು ಹೇಳುತ್ತೇನೆ.

೧೭೩-೧೭೪. ಎಂಟುದಳ, ಅದರೊಳಗೆ ಸಾಧ್ಯನಾಮಸಹಿತವಾದ ಆರು ಕೋಣಗಳುಳ್ಳ ಮಂಡಲವನ್ನು ಬರೆದು ಆರು ಕೋಣಗಳಲ್ಲಿ "ಓಂ ಆಂಜನೇ

ಧೃತ್ವಾ ಮೂರ್ಧ್ನಿ ಜಪೇನ್ಮಂತ್ರಮಯುತಂ ಬಂಧಮುಕ್ತಯೇ ।
ಯಂತ್ರಮೇತಲ್ಲಿಖಿತ್ವಾ ತು ಮೃತ್ತಿಕೋಪರಿ ಮಾರ್ಜಯೇತ್ ॥ ೧೭೫ ॥

ದಕ್ಷಹಸ್ತೇನ ಮಂತ್ರಜ್ಞಃ ಪ್ರತ್ಯಹಂ ಮಂಡಲಾವಧಿ ।
ಏವಂ ಕೃತೇ ಮಹಾಕಾರಾಗೃಹಾನ್ಮಂತ್ರೀ ವಿಮುಚ್ಯತೇ ॥ ೧೭೬ ॥

ಗಗನಂ ಜ್ವಲನಃ ಸಾಕ್ಷೀ ಮರ್ಕಟೇತಿ ದ್ವಯಂ ತತಃ ।
ತೋಯಂ ಸಶೇಷಂ ಮಕರೇ ಪರಿಮುಂಚತಿ ಮುಂಚತಿ ॥ ೧೭೭ ॥

ತತಃ ಶೃಂಖಲಿಕಾಂ ಚೇತಿ ವೇದನೇತ್ರಾಕ್ಷರೋ ಮನುಃ ।
ಇಮಂ ಮಂತ್ರಂ ದಕ್ಷಕರೇ ಲಿಖಿತ್ವಾ ವಾಮಹಸ್ತತಃ ॥ ೧೭೮ ॥

ದೂರೀಕೃತ್ಯ ಜಪೇನ್ಮಂತ್ರಮಷ್ಟೋತ್ತರಶತಂ ಬುಧಃ ।
ತ್ರಿಸಪ್ತಾಹಾತ್ಪ್ರಬದ್ಧೋಽಸೌ ಮುಚ್ಯತೇ ನಾತ್ರ ಸಂಶಯಃ ॥ ೧೭೯ ॥

---

ಯಾಯ'' ಎಂಬ ಆರು ಅಕ್ಷರಗಳನ್ನು ಬರೆಯಬೇಕು. ಎಂಟುದಳಗಳಲ್ಲಿ "ಓಂ ವಾತು ವಾತು'' ಎಂಬುದಾಗಿ ಬರೆಯಬೇಕು. ಈ ರೀತಿಯಾದ ಶ್ರೇಷ್ಠ ಯಂತ್ರವನ್ನು ಗೋರೋಜನ, ಕುಂಕುಮಗಳಿಂದ ಬರೆದು ಶಿರಸ್ಸಿನಲ್ಲಿ ಧರಿಸಿ, ಬಂಧನದಿಂದ ಬಿಡುಗಡೆಯಾಗುವುದಕ್ಕಾಗಿ ಹತ್ತುಸಾವಿರ ಜಪಮಾಡಬೇಕು.

೧೭೫-೧೭೬. ಮಂತ್ರಜ್ಞನು ಈಯಂತ್ರವನ್ನು ಪ್ರತಿದಿನವೂ ಮಣ್ಣಿನ ಮೇಲೆ ಬರೆದು ಬಲಗೈಯಿಂದ ಅಳಿಸಬೇಕು. ಹೀಗೆ ಒಂದು ಮಂಡಲಎಂದರೆ ನಲವತ್ತುದಿನಗಳವರೆಗೂ ಮಾಡಿದರೆ ಮಂತ್ರಿಯು ಮಹಾಕಾರಾಗಾರದಿಂದ ಬಿಡುಗಡೆಯನ್ನು ಹೊಂದುವನು.

೧೭೭-೧೭೮. (ಗಗನ= ಹ, ಜ್ವಲನಸಾಕ್ಷೀ= ರಿ, ತೋಯಂಸಶೇಷಂ= ವಾ,) ''ಹರಿ ಮರ್ಕಟ ಮರ್ಕಟ ವಾಮಕರೇ ಪರಿಮುಂಚತಿಮುಂಚತಿ ಶೃಂಖಲಿಕಾಂ'' ಎಂಬುದು ಇಪ್ಪತ್ತುನಾಲ್ಕು ಅಕ್ಷರಗಳ ಹನುಮನ್ಮಂತ್ರವು.

೧೭೮-೧೭೯. ಈ ಮಂತ್ರವನ್ನು ಬಲಗೈಯಲ್ಲಿ ಎಡಗೈಯಿಂದ ಬರೆದು ಆ ಕೈಯನ್ನು ದೂರವಾಗಿಟ್ಟುಕೊಂಡು ನೂರೆಂಟುಬಾರಿ ಮಂತ್ರ ಜಪಮಾಡಬೇಕು. ಹಾಗೆ ಮಾಡಿದರೆ ಇಪ್ಪತ್ತೊಂದುದಿನಗಳಲ್ಲಿ ಬಂಧಿತನಾದವನು ಬಿಡುಗಡೆಯನ್ನು ಹೊಂದುವನು.

**ಮುನ್ಯಾದ್ಯಾರ್ಚಾದಿಕಂ ಸರ್ವಮಸ್ಯ ಪೂರ್ವವದಾಚರೇತ್ ।**
**ಲಕ್ಷಂ ಜಪೋ ದಶಾಂಶೇನ ಶುಭೈರ್ದ್ರವ್ಯೈಶ್ಚ ಹೋಮಯೇತ್ ॥ ೧೮೦ ॥**

**ಪುಚ್ಛಾಕಾರೇ ಸುವಸ್ತ್ರೇ ಚ ಲೇಖನ್ಯಾ ಕ್ಷುರಕೊತ್ಥಯಾ ।**
**ಗಂಧಾಷ್ಟಕೈರ್ಲಿಖೇದ್ರೂಪಂ ಕಪಿರಾಜಸ್ಯ ಸುಂದರಂ ॥ ೧೮೧ ॥**

**ತನ್ಮಧ್ಯೇಽಷ್ಟಾದಶಾರ್ಣಂ ತು ಶತ್ರುನಾಮಾನ್ವಿತಂ ಲಿಖೇತ್ ।**
**ತೇನ ಮಂತ್ರಾಭಿಜಪ್ತೇನ ಶಿರೋಬದ್ಧೇನ ಭೂಮಿಪಃ ॥ ೧೮೨ ॥**

**ಜಯತ್ಯರಿಗಣಂ ಸರ್ವಂ ದರ್ಶನಾದೇವ ನಿಶ್ಚಿತಂ ।**
**ಚಂದ್ರಸೂರ್ಯೋಪರಾಗಾದೌ ಪೂರ್ವೋಕ್ತಂ ಲೇಖಯೇದ್ಧ್ವಜೇ ॥ ೧೮೩ ॥**

**ಧ್ವಜಮಾದಾಯ ಮಂತ್ರಜ್ಞಃ ಸಂಸ್ಪರ್ಶಾನ್ಮೋಕ್ಷಣಾವಧಿ ।**
**ಮಾತೃಕಾಂ ಜಾಪಯೇತ್ಪಶ್ಚಾದ್ದಶಾಂಶೇನ ಚ ಹೋಮಯೇತ್ ॥ ೧೮೪ ॥**

---

೧೮೦. ಋಷ್ಯಾದಿಗಳು ಪೂಜೆ ಮುಂತಾದುವೆಲ್ಲವನ್ನೂ ಈ ಮಂತ್ರಕ್ಕೂ ಹಿಂದೆ ಹೇಳಿರುವಂತೆಯೇ ಆಚರಿಸಬೇಕು. ಒಂದು ಲಕ್ಷಜಪ, ಶುಭದ್ರವ್ಯಗಳಿಂದ ಹತ್ತುಸಾವಿರ ಹೋಮ ಇವುಗಳನ್ನು ಮಾಡಬೇಕು.

೧೮೧- ಬಾಲದಂತಿರುವ ಸಮೀಚೀನವಸ್ತ್ರದಲ್ಲಿ ತಿಲಕದ ಕಡ್ಡಿಯಿಂದ ಮಾಡಿದ ಲೇಖನಿಯಿಂದ ಸುಂದರವಾದ ಕಪಿರಾಜನ ಆಕೃತಿಯನ್ನು ಅಷ್ಟಗಂಧಗಳಿಂದ ಬರೆಯಬೇಕು.

೧೮೨-೧೮೩. ಅದರ ಮಧ್ಯದಲ್ಲಿ ಶತ್ರುವಿನ ಹೆಸರು ಸಹಿತವಾಗಿ ಹದಿನೆಂಟು ಅಕ್ಷರಗಳ ಮಂತ್ರವನ್ನು ಬರೆದು ಆ ಮೂರ್ತಿಯನ್ನು ಮಂತ್ರಜಪದಿಂದಭಿಮಂತ್ರಿಸಿ ಅದನ್ನು ತಲೆಯಮೇಲೆ ಕಟ್ಟಿಕೊಂಡಮಾತ್ರದಿಂದಲೇ ರಾಜನು ಸಕಲಶತ್ರುಸಮೂಹವನ್ನೂ ಖಂಡಿತವಾಗಿ ಜಯಿಸುವನು.

೧೮೩-೧೮೪. ಚಂದ್ರಸೂರ್ಯಗ್ರಹಣಕಾಲದಲ್ಲಿ ಮೇಲೆ ಹೇಳಿದ ಆಂಜನೇಯವಿಗ್ರಹವನ್ನು ಧ್ವಜದಲ್ಲಿ ಬರೆದು, ಮಂತ್ರಜ್ಞನು ಆ ಧ್ವಜವನ್ನು ತೆಗೆದುಕೊಂಡು ಗ್ರಹಣಹಿಡಿದು ಬಿಡುವವರಿಗೂ ಮಾತೃಕಾಮಂತ್ರವನ್ನು ಜಪಿಸಬೇಕು.

ತಿಲೈಃ ಸರ್ಷಪಸಂಮಿಶ್ರೈಃ ಸಂಸ್ಕೃತೇ ಹವ್ಯವಾಹನೇ ।
ಗಜೇ ಧ್ವಜಂ ಸಮಾರೋಪ್ಯ ಗಚ್ಛೇದ್ಯುದ್ಧಾಯ ಭೂಪತಿಃ　　॥ ೧೮೫ ॥

ಗಜಸ್ಥಂ ತಂ ಧ್ವಜಂ ದೃಷ್ಟ್ವಾ ಪಾಲಯಂತ್ಯರಯೋ ಧ್ರುವಂ ।
ಮಹಾರಕ್ಷಾಕರಂ ಯಂತ್ರಂ ವಕ್ಷ್ಯೇ ಸಮ್ಯಗ್ಹನೂಮತಃ　　॥ ೧೮೬ ॥

ಲಿಖೇದ್ವಸುದಲಂ ಪದ್ಮಂ ಸಾಧ್ಯಾಖ್ಯಾಯುತಕರ್ಣಿಕಾಂ ।
ದಲೇಷ್ವಷ್ಟಕೋಣಮಾಲಿಖ್ಯ ಮಾಲಾಮಂತ್ರೇಣ ವೇಷ್ಟಯೇತ್॥　೧೮೭ ॥

ತದ್ಬಹಿರ್ಮಾಯಯಾವೇಷ್ಟ್ಯ ಪ್ರಾಣಸ್ಥಾಪನಮಾಚರೇತ್ ।
ಲಿಖಿತಂ ಸ್ವರ್ಣಲೇಖಿನ್ಯಾ ಭೂರ್ಜಪತ್ರೇ ಸುಶೋಭನೇ　　॥ ೧೮೮ ॥

ಕಾಶ್ಮೀರರೋಚನಾಭ್ಯಾಂ ತು ತ್ರಿಲೋಹೇನ ಚ ವೇಷ್ಟಿತಂ ।
ಸಂಯಾತಸಾಧಿತಂ ಯಂತ್ರಂ ಭುಜೇ ವಾ ಮೂರ್ಧ್ನಿ ಧಾರಯೇತ್ ॥

---

ಅನಂತರ ಜಪದ ಹತ್ತನೆಯ ಒಂದುಭಾಗ ಸಾಸುವೆಯನ್ನು ಬೆರೆಸಿದ ಎಳ್ಳಿನಿಂದ ಸಂಸ್ಕೃತವಾದ ಅಗ್ನಿಯಲ್ಲಿ ಹೋಮಮಾಡಬೇಕು. ಬಳಿಕ ಆನೆಯ ಮೇಲೆ ಆ ಬಾವುಟವನ್ನು ಏರಿಸಿ ರಾಜನು ಯುದ್ಧಕ್ಕೆ ಹೊರಡಬೇಕು.

೧೮೬. ಆನೆಯ ಮೇಲಿರುವ ಆ ಬಾವುಟವನ್ನು ನೋಡಿದಮಾತ್ರದಿಂದಲೇ ಶತ್ರುಗಳು ಓಡಿಹೋಗುತ್ತಾರೆ. ಖಂಡಿತ. ಮುಂದೆ ಹನುಮಂತನ ಮಹಾರಕ್ಷಾಕರಯಂತ್ರವನ್ನು ಹೇಳುವೆನು.

೧೮೭–೧೮೯. ಕೋಣದಲ್ಲಿ ಸಾಧ್ಯನಾಮವನ್ನೊಳಗೊಂಡ ಎಂಟು ದಳಗಳಿಂದ ಕೂಡಿದ ಪದ್ಮವನ್ನು ಬರೆಯಬೇಕು. ದಳಗಳಲ್ಲಿ ಎಂಟು ಕೋಣಗಳನ್ನು ರಚಿಸಿ ಮಾಲಾಮಂತ್ರದಿಂದ ಸುತ್ತುಗಟ್ಟಬೇಕು ಅದರ ಹೊರಭಾಗದಲ್ಲಿ ಸುತ್ತಲೂ ''ಹ್ರೀಂ'' ಎಂಬ ಮಾಯಾಬೀಜವನ್ನು ಬರೆದು ಪ್ರಾಣಪ್ರತಿಷ್ಠೆಯನ್ನು ಮಾಡಬೇಕು. ಸುವರ್ಣಲೇಖನಿಯಿಂದ ಮಂಗಳಕರ ಭುಜಪತ್ರದಲ್ಲಿ ಕಾಶ್ಮೀರ ಗೋರೋಚನಗಳಿಂದ ಬರೆಯಲ್ಪಟ್ಟ ಮೂರು ಲೋಹಗಳಿಂದ ಸುತ್ತಲ್ಪಟ್ಟ, ಜಪಪೂಜಾದಿಗಳಿಂದ ಸಿದ್ಧಗೊಳಿಸಲ್ಪಟ್ಟ ಆ ಯಂತ್ರವನ್ನು ಭುಜ ಅಥವಾ ಶಿರಸ್ಸಿನಲ್ಲಿ ಧರಿಸಬೇಕು.

ರಣೇ ದುರುದ್ಧರೇ ವಾದೇ ವ್ಯವಹಾರೇ ಜಯಂ ಲಭೇತ್ ।
ಗ್ರಹೈರ್ವಿಘ್ನೈರ್ವಿಷೈಶ್ಶಸ್ತ್ರೈಶ್ಚೋರೈರ್ನೈವಾಭಿಭೂಯತೇ ॥ ೯೦ ॥

ಸರ್ವಾನ್ರೋಗಾನಪಾಕೃತ್ಯ ಚಿರಂ ಜೀವೇಚ್ಛತಂ ಸಮಾಃ ।
ಷಡ್ದೀರ್ಘಯುಕ್ತಂ ಗಗನಂ ವಹ್ನ್ಯಾಢ್ಯಂ ತಾರಸಂಪುಟಂ ॥ ೯೧ ॥

ಅಷ್ಟಾರ್ಣೋಯಂ ಮಹಾಮಂತ್ರೋ ಮಾಲಾಮಂತ್ರೋಥ ಕಥ್ಯತೇ ।
ಪ್ರಣವೋ ವಜ್ರಕಾಯೇತಿ ವಜ್ರತುಂಡೇತಿ ಸಂಪಠೇತ್ ॥ ೯೨ ॥

ಕಪಿಲಾಂತೇ ಪಿಂಗಲೇತಿ ಊರ್ಧ್ವಕೇಶಮಹಾಪದಂ ।
ಬಲರಕ್ತಮುಖಾಂತೇ ತು ತಟಿಜ್ಜಿಹ್ವ ಮಹಾ ತತಃ ॥ ೯೩ ॥

ರೌದ್ರದಂಷ್ಟ್ರೋತ್ಕಟಂ ಪಶ್ಚಾತ್ಕಹದ್ವಂದ್ವಂ ಕರಾಲಿನೇ ।
ಮಹಾದೃಢಪ್ರಹಾರೇಣ ಲಂಕೇಶ್ವರವಧಾತ್ತತಃ ॥ ೯೪ ॥

ವಾಯುರ್ಮಹಾಸೇತುಪದಂ ಬಂಧಾಂತೇ ಚ ಮಹಾ ಪುನಃ ।
ಶೈಲಪ್ರವಾಹ ಗಗನೇಚರ ಏಹ್ಯೇಹಿ ಸಂವದೇತ್ ॥ ೯೫ ॥

---

೯೦-೯೧. ಈ ಯಂತ್ರವನ್ನು ಧರಿಸಿದವನು ಯುದ್ಧ, ದುರುದ್ಧರವಾದ ವ್ಯವಹಾರ ಇವುಗಳಲ್ಲಿ ಜಯಶಾಲಿಯಾಗುವನು. ಅವನು ಗ್ರಹ, ವಿಘ್ನ, ವಿಷ, ಶಸ್ತ್ರ, ಮತ್ತು ಕಳ್ಳಕಾಕರರು ಇವುಗಳಿಂದ ಬಾಧಿಸಲ್ಪಡುವುದಿಲ್ಲ. ಮತ್ತು ಸಕಲರೋಗಗಳನ್ನೂ ಪರಿಹರಿಸಿಕೊಂಡು ಬಹುಕಾಲ ನೂರಾರು ವರ್ಷಗಳು ಸುಖವಾಗಿ ಜೀವಿಸುವನು.

೯೧-೯೨. "ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ ಓಂ" ಇದು ಅಷ್ಟಾಕ್ಷರ ಮಂಹಾಮಂತ್ರವು. ಮಾಲಾಮಂತ್ರವನ್ನು ಹೇಳುವೆನು.

೯೨-೯೭. "ಓಂ ವಜ್ರಕಾಯ ವಜ್ರತುಂಡ ಕಪಿಲಪಿಂಗಳ ಊರ್ಧ್ವಕೇಶ ಮಹಾಬಲ ರಕ್ತಮುಖ ತಡಿಜ್ಜಿಹ್ವಾ ಮಹಾರೌದ್ರ ದಂಷ್ಟ್ರೋತ್ಕಟ ಕಹ

ಭಗವನ್ಮಹಾಬಲಾಂತೇ ಪರಾಕ್ರಮಪದಂ ವದೇತ್ ।
ಭೈರವಾಜ್ಞಾಪಯೈಹ್ಯೇಹಿ ಮಹಾರೌದ್ರಪದಂ ತತಃ ॥ ೧೯೬ ॥

ದೀರ್ಘಪುಚ್ಛೇನ ವರ್ಣಾಂತೇ ವದೇದ್ವೇಷ್ಟಯ ವೈರಿಣಂ ।
ಭಂಜಯದ್ವಯಮಾಭಾಷ್ಯ ವರ್ಮಾಸ್ತ್ರಾಂತೋ ಮನುರ್ಮತಃ ॥ ೧೯೭ ॥

ಮಾಲಾಹ್ವಯೋ ದ್ವಿಜಶ್ರೇಷ್ಠ ಶರನೇತ್ರಧರಾಕ್ಷರಃ ।
ಮಾಲಾಮಂತ್ರಾಷ್ಟಾರ್ಣಯೋಶ್ಚ ಮುನ್ಯಾದ್ಯರ್ಚಾ ತು ಪೂರ್ವವತ್ ॥

ಜಪ್ತೋ ಯುದ್ಧೇ ಜಯಂ ದದ್ಯಾದ್ವ್ಯಾಧೌ ವ್ಯಾಧಿವಿನಾಶನಃ ।
ಏವಂ ಯೋ ಭಜತೇ ಮಂತ್ರೀ ವಾಯುಪುತ್ರಂ ಕಪೀಶ್ವರಂ ॥ ೧೯೯ ॥

ಸರ್ವಾನ್ಸ ಲಭತೇ ಕಾಮಾನ್ದೇವೈರಪಿ ಸುದುರ್ಲಭಾನ್ ।
ಧನಂ ಧಾನ್ಯಂ ಸುತಾನ್ಪೌತ್ರಾನ್ಸೌಭಾಗ್ಯಮತುಲಂ ಯಶಃ ॥ ೨೦೦ ॥

---

ಕಹ ಕರಾಳಿನೇ ಮಹಾವೃಕ್ಷಪ್ರಹಾರಿನ್ ಲಂಕೇಶ್ವರವಧಾಯ ಮಹಾಸೇತು ಬಂಧಮಹಾಶೈಲಪ್ರವಾಹಗಗನೇಚರ ಏಹ್ಯೇಹಿ ಭಗವನ್ಮಹಾಬಲಪರಾಕ್ರಮ ಭೈರವಾಜ್ಞಾಪಯ ಏಹ್ಯೇಹಿ ಮಹಾರೌದ್ರ ದೀರ್ಘಪುಚ್ಛೇನ ವೇಷ್ಟಯ ವೈರಿಣಂ ಭಂಜಯ ಭಂಜಯ ಹುಂ ಫಟ್ '' ಇದೇ ಮಾಲಾಮಂತ್ರವು.

೧೯೮. ದ್ವಿಜವರ್ಯನೇ! ಇದಕ್ಕೆ ಮಾಲಾಮಂತ್ರವೆಂದು ಹೆಸರು. ಇದು (೧೨೫) ಒಂದು ನೂರು ಇಪ್ಪತ್ತೈದು ಅಕ್ಷರಗಳನ್ನೊಳಗೊಂಡಿದೆ. ಈ ಮಾಲಾಮಂತ್ರ ಮತ್ತು ಅಷ್ಟಾಕ್ಷರ ಮಂತ್ರಗಳಿಗೆ ಋಷ್ಯಾದಿಗಳು, ಪೂಜೆ ಮುಂತಾದುವೆಲ್ಲವನ್ನೂ ಹಿಂದೆ ಹೇಳಿದ ವಿಧಾನದಂತೆಯೇ ಆಚರಿಸಬೇಕು.

೧೯೯-೨೦೨. ಈ ಮಂತ್ರವನ್ನು ಜಪಿಸಿದರೆ ಯುದ್ಧದಲ್ಲಿ ಜಯವು ಲಭಿಸುವುದು. ರೋಗವಿದ್ದರೆ ಅದು ವಾಸಿಯಾಗುವುದು. ಈ ಪ್ರಕಾರ ವಾಯುಸುತನಾದ ಕಪೀಶ್ವರನನ್ನು ಭಜಿಸುವ ಮಂತ್ರಿಯು ದೇವತೆಗಳಿಗೂ ದುರ್ಲಭವಾದ ಸಕಲೇಷ್ಟಾರ್ಥಗಳನ್ನೂ ಪಡೆಯುವನು. ಈ ವಿಧಾನದಿಂದ ಅಂಜನಾದೇವಿಯ

**ಮೇಧಾಂ ವಿದ್ಯಾಂ ಪ್ರಭಾಂ ರಾಜ್ಯಂ ವಿವಾದೇ ವಿಜಯಂ ತಥಾ ।**
**ವಶ್ಯಾದ್ಯಾನಿ ಚ ಕರ್ಮಾಣಿ ಸಂಗರೇ ವಿಜಯಂ ತಥಾ ॥ ೨೦೧ ॥**

**ಉಪಾಸಿತೋಂಜನಾಗರ್ಭಸಂಭೂತಃ ಪ್ರದದಾತ್ಯಲಂ ॥ ೨೦೨ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ಸನತ್ಕುಮಾರವಿಭಾಗೇ ತೃತೀಯಪಾದೇ ಹನುಮನ್ಮಂತ್ರಕಥನಂ ನಾಮ ಚತುಃಸಪ್ತತಿತಮೋಽಧ್ಯಾಯಃ**

---

ಗರ್ಭಸಂಭೂತನಾದ ಹನುಮಂತನನ್ನು ಉಪಾಸನೆ ಮಾಡಿದರೆ ಆ ಹನುಮಂತನು ಉಪಾಸಕನಿಗೆ ಹಣ, ಧಾನ್ಯ, ಮಕ್ಕಳು, ಮೊಮ್ಮಕ್ಕಳು, ಅಸದೃಶವಾದ ಐಶ್ವರ್ಯ ಕೀರ್ತಿ, ಮೇಧಾಶಕ್ತಿ, ವಿದ್ಯೆ, ಪ್ರಭೆ, ರಾಜ್ಯ, ವಾದದಲ್ಲಿ ಜಯ, ವಶ್ಯಾದಿ ಕರ್ಮಗಳು, ಯುದ್ಧದಲ್ಲಿ ಜಯ ಇವುಗಳನ್ನು ವಿಶೇಷವಾಗಿ ಅನುಗ್ರಹಿಸುತ್ತಾನೆ.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ಸನತ್ಕುಮಾರ ವಿಭಾಗವಾದ ತೃತೀಯ ಪಾದದಲ್ಲಿ ಎಪ್ಪತ್ತು ನಾಲ್ಕನೆಯ ಅಧ್ಯಾಯವು ಮುಗಿದುದು.

## ಕಥಾ ಸಂಗ್ರಹ.

ದ್ವಾದಶಾಕ್ಷರ ಹನುಮನ್ಮಂತ್ರದಿಂದ ಪ್ರಾರಂಭಿಸಿ ಎಲ್ಲಾ ಹನುಮನ್ಮಂತ್ರಗಳೂ ಅವುಗಳ ನ್ಯಾಸಾದಿಸಹಿತವಾಗಿ ನಿರೂಪಿಸಲ್ಪಟ್ಟಿದೆ. ಮತ್ತು ಆ ಮಂತ್ರಗಳನ್ನು ನಾನಾವಿಧವಾದ ಉದ್ದೇಶ್ಯಫಲಕ್ಕನುಸಾರವಾಗಿ ಭಿನ್ನ ಭಿನ್ನ ವಿಧಾನಗಳಿಂದ ಆಚರಿಸುವ ಕ್ರಮವನ್ನೂ, ಯಂತ್ರಗಳನ್ನು ಬರೆಯುವ ವಿಧಾನ ಫಲಾದಿಗಳನ್ನೂ ಮಾಲಾಮಂತ್ರ ಮುಂತಾದುವನ್ನೂ ಸಹ ವಿಸ್ತಾರವಾಗಿ ಹೇಳಿದೆ.

# ಪಂಚಸಪ್ತತಿತಮೋಽಧ್ಯಾಯಃ

ಸನತ್ಕುಮಾರ ಉವಾಚ

ಅಥ ದೀಪವಿಧಿಂ ವಕ್ಷ್ಯೇ ಸರಹಸ್ಯಂ ಹನೂಮತಃ ।
ಯಸ್ಯ ವಿಜ್ಞಾನಮಾತ್ರೇಣ ಸಿದ್ಧೋ ಭವತಿ ಸಾಧಕಃ ॥ ೧ ॥

ದೀಪಪಾತ್ರಪ್ರಮಾಣಂ ಚ ತೈಲಮಾನಂ ಕ್ರಮೇಣ ತು ।
ದ್ರವ್ಯಸ್ಯ ಚ ಪ್ರಮಾಣಂ ವೈ ತತ್ತು ಮಾನಮನುಕ್ರಮಾತ್ ॥ ೨ ॥

ಸ್ಥಾನಭೇದಂ ಚ ಮಂತ್ರಂ ಚ ದೀಪದಾನಮನುಂ ಪೃಥಕ್ ।
ಪುಷ್ಪವಾಸಿತತೈಲೇನ ಸರ್ವಕಾಮಪ್ರದಂ ಮತಂ ॥ ೩ ॥

ತಿಲತೈಲಂ ಶ್ರಿಯಃ ಪ್ರಾಪ್ತ್ಯೈ ಪಥಿಕಾಗಮನಂ ಪ್ರತಿ ।
ಅತಸೀತೈಲಮುದ್ದಿಷ್ಟಂ ವಶ್ಯಕರ್ಮಣಿ ನಿಶ್ಚಿತಂ ॥ ೪ ॥

---

## ಎಪ್ಪತ್ತೈದನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಈಗ ಹನುಮಂತನ ದೀಪ ವಿಧಾನವನ್ನು ರಹಸ್ಯಸಹಿತವಾಗಿ ಹೇಳುವೆನು. ಅದನ್ನು ತಿಳಿಯುವ ಮಾತ್ರದಿಂದ ಸಾಧಕನು ಸಿದ್ಧಿಯನ್ನು ಹೊಂದುವನು.

೨-೩. ದೀಪಹಚ್ಚುವ ಪಾತ್ರೆಯ ಪರಿಮಾಣ, ಎಣ್ಣೆಯು ಎಷ್ಟಿರಬೇಕೆಂಬುದು, ಅದರ ಪರಿಮಾಣಾನುಸಾರವಾಗಿ ಭಿನ್ನ ಭಿನ್ನವಾದ ಸ್ಥಾನ, ಮಂತ್ರ, ಆಯಾಯಾ ದೀಪಗಳನ್ನು ದಾನಕೊಡಬೇಕಾದಾಗ ಹೇಳಬೇಕಾದ ಮಂತ್ರ ಇವುಗಳೆಲ್ಲವನ್ನೂ ಕ್ರಮವಾಗಿ ಹೇಳುವೆನು. ಹೂವಿನ ವಾಸನೆಯಿಂದ ಕೂಡಿದ ಎಣ್ಣೆಯಿಂದ ದೀಪವನ್ನು ಹಚ್ಚುವುದು ಸಕಲೇಷ್ಟಾರ್ಥಪ್ರದವು.

೪. ದೂರದೇಶಕ್ಕೆ ಹೋಗಿರುವವರು ಸುಖವಾಗಿ ಹಿಂದಿರುಗಿಬರುವುದಕ್ಕೂ, ಸಂಪತ್ತು ಲಭಿಸುವುದಕ್ಕಾಗಿಯೂ ಎಳ್ಳೆಣ್ಣೆಯ ದೀಪವನ್ನೂ, ವಶೀಕರಣೋದ್ದೇಶದಿಂದ ಮಾಡುವ ಕರ್ಮಗಳಲ್ಲಿ ಅಗಸೇ ಎಣ್ಣೆಯ ದೀಪವನ್ನೂ ಹಚ್ಚಬೇಕು.

ಸಾರ್ಷಪಂ ರೋಗನಾಶಾಯ ಕಥಿತಂ ಕರ್ಮಕೋವಿದೈಃ ।
ಮಾರಣೇ ರಾಜಿಕೋತ್ಥಂ ವಾ ವಿಭೀತಕಸಮುದ್ಭವಂ ॥ ೫ ॥

ಉಚ್ಚಾಟನೇ ಕರಂಜೋತ್ಥಂ ವಿದ್ವೇಷೇ ಮಧುವೃಕ್ಷಜಂ ।
ಅಲಾಭೇ ಸರ್ವತೈಲಾನಾಂ ತಿಲಜಂ ತೈಲಮುತ್ತಮಂ ॥ ೬ ॥

ಗೋಧೂಮಾಶ್ಚ ತಿಲಾ ಮಾಷಾ ಮುದ್ಗಾ ವೈ ತಂಡಲಾಃ ಕ್ರಮಾತ್ ।
ಪಂಚಧಾನ್ಯಮಿದಂ ಪ್ರೋಕ್ತಂ ನಿತ್ಯದೀಪಂ ತು ಮಾರುತೇಃ ॥ ೭ ॥

ಪಂಚಧಾನ್ಯಸಮುದ್ಭೂತಂ ಪಿಷ್ಟಮಾತ್ರಂ ಸುಶೋಭನಂ ।
ಸರ್ವಕಾಮಪ್ರದಂ ಪ್ರೋಕ್ತಂ ಸರ್ವದಾ ದೀಪದಾನಕೇ ॥ ೮ ॥

ವಶ್ಯೇ ತಂಡುಲಪಿಷ್ಟೋತ್ಥಂ ಮಾರಣೇ ಮಾಷಪಿಷ್ಟಜಂ ।
ಉಚ್ಚಾಟನೇ ಕೃಷ್ಣತಿಲಪಿಷ್ಟಜಂ ಚ ಪ್ರಕೀರ್ತಿತಂ ॥ ೯ ॥

---

೫. ಕರ್ಮಕುಶಲರು ರೋಗನಾಶಿಯಾಗಬೇಕೆಂಬ ಉದ್ದೇಶದಿಂದ ಮಾಡುವ ಕರ್ಮಗಳಲ್ಲಿ ಸಾಸುವೆಯ ಎಣ್ಣೆಯನ್ನು ಉಪಯೋಗಿಸಬೇಕೆಂದು ಹೇಳಿರುವರು. ಮಾರಣವ್ಯಾಪಾರದಲ್ಲಿ ಕರೀಸಾಸುವೆ ಅಥವಾ ನೆಲ್ಲೀಕಾಯಿಗಳ ಎಣ್ಣೆಯನ್ನು ಉಪಯೋಗಿಸಬೇಕೆಂದು ಹೇಳಿರುವರು.

೬. ಉಚ್ಚಾಟನ ಕರ್ಮದಲ್ಲಿ ಹೊಂಗೇ ಎಣ್ಣೆಯನ್ನೂ, ದ್ವೇಷ ಕರ್ಮಗಳಲ್ಲಿ ಇಪ್ಪೇ ಎಣ್ಣೆಯನ್ನೂ ಉಪಯೋಗಿಸಬೇಕು. ಇಂತಹ ತೈಲಗಳು ಸಿಕ್ಕದಿದ್ದರೆ ಎಳ್ಳಣ್ಣೆಯನ್ನು ಉಪಯೋಗಿಸುವುದೇ ಉತ್ತಮ.

೭. ಗೋಧಿ, ಎಳ್ಳು, ಉದ್ದು, ಹೆಸರು, ಅಕ್ಕಿ ಇವು ಪಂಚಧಾನ್ಯವೆಂದು ಉಕ್ತವಾಗಿದೆ. ಇವುಗಳ ಹಿಟ್ಟಿನಿಂದ ಹನುಮಂತನಿಗೆ ನಿತ್ಯ ದೀಪವನ್ನು ಹಚ್ಚಬೇಕು.

೮. ದೀಪದಾನ ಮಾಡುವುದಕ್ಕೆ ಯಾವಾಗಲೂ ಪಂಚಧಾನ್ಯಗಳ ಹಿಟ್ಟು ಶುಭಪ್ರದವು. ಅದರಲ್ಲಿ ಹಚ್ಚಿದ ದೀಪವು ಸಕಲೇಷ್ಟಾರ್ಥದಾಯಕವಾಗುವುದು.

೯. ವಶ್ಯಕರ್ಮದಲ್ಲಿ ಅಕ್ಕಿಹಿಟ್ಟಿನದೀಪವೂ, ಮಾರಣಕರ್ಮದಲ್ಲಿ ಉದ್ದಿನಹಿಟ್ಟಿನ ದೀಪವೂ, ಉಚ್ಚಾಟನಕರ್ಮದಲ್ಲಿ ಕರೀಎಳ್ಳಿನ ಚಿಗುಳಿಯ ದೀಪವೂ ವಿಹಿತವಾಗಿವೆ.

ಪಥಿಕಾಗಮನೇ ಪ್ರೋಕ್ತಂ ಗೋಧೂಮಯೋತ್ಥಂ ಸತಂಡುಲಂ ।
ಮೋಹನೇ ತ್ವಾಢಕೀಜಾತಂ ವಿದ್ವೇಷೇ ಚ ಕುಲಿತ್ಥಜಂ ॥ ೧೦ ॥

ಸಂಗ್ರಾಮೇ ಕೇವಲಾ ಮಾಷಾಃ ಪ್ರೋಕ್ತಾ ದೀಪಸ್ಯ ಪಾತ್ರಕೇ ।
ಸಂಧೌ ತ್ರಿಪಿಷ್ಟಜಂ ಲಕ್ಷ್ಮೀಹೇತೋಃ ಕಸ್ತೂರಿಕಾಭವಂ ॥ ೧೧ ॥

ಏಲಾಲವಂಗಕರ್ಪೂರಮೃಗನಾಭಿಸಮುದ್ಭವಂ ।
ಕನ್ಯಾಪ್ರಾಪ್ತ್ಯೈ ತಥಾ ರಾಜವಶ್ಯೇ ಸಖ್ಯೇ ತಥೈವ ಚ ॥ ೧೨ ॥

ಅಲಾಭೇ ಸರ್ವವಸ್ತೂನಾಂ ಪಂಚಧಾನ್ಯಂ ವರಂ ಸ್ಮೃತಂ ।
ಅಷ್ಟಮುಷ್ಟಿರ್ಭವೇತ್ಕುಂಚಯೋಷ್ಟೌ ಚ ಪುಷ್ಕಲಂ ॥ ೧೩ ॥

ಪುಷ್ಕಲಾನಾಂ ಚತುರ್ಣಾಂ ಚ ಹ್ಯಾಢಕಃ ಪರಿಕೀರ್ತಿತಃ ।
ಚತುರಾಢಕೋ ಭವೇದ್ದ್ರೋಣಃ ಖಾರೀ ದ್ರೋಣಚತುಷ್ಟಯಂ ॥ ೧೪ ॥

---

೧೦-೧೧. ಪರಸ್ಥಳಕ್ಕೆ ಹೋಗಿರುವವರ ಸುಖಾಗಮನಕ್ಕಾಗಿ ಗೋಧಿ, ಅಕ್ಕಿಹಿಟ್ಟುಗಳ ಪಾತ್ರೆಯೂ, ಮೋಹನಕರ್ಮದಲ್ಲಿ ಅವರೇ ಹಿಟ್ಟಿನ ಪಾತ್ರೆ, ದ್ವೇಷಕರ್ಮದಲ್ಲಿ ಹುರಳೀ ಹಿಟ್ಟಿನ ಪಾತ್ರೆಯೂ, ಯುದ್ಧಕರ್ಮದಲ್ಲಿ ಉದ್ದಿನ ಹಿಟ್ಟಿನ ಪಾತ್ರೆಯೂ, ದೀಪ ಹಚ್ಚುವ ಪಾತ್ರೆಗಳೆಂದು ಉಕ್ತವಾಗಿವೆ. ಸಂಧಿ ಕರ್ಮಗಳಲ್ಲಿ ಮೂರುಹಿಟ್ಟುಗಳ ಪಾತ್ರೆಯೂ, ಐಶ್ವರ್ಯಕ್ಕಾಗಿ ಮಾಡುವ ಕರ್ಮದಲ್ಲಿ ಕಸ್ತೂರಿಯಿಂದ ನಿರ್ಮಿತವಾದ ಪಾತ್ರೆಯೂ ವಿಹಿತವಾಗಿವೆ.

೧೨-೧೩. ಕನ್ಯೆಯ ಲಾಭ, ರಾಜನ ವಶೀಕರಣ ಮತ್ತು ಸ್ನೇಹ ಇವುಗಳಿಗಾಗಿ ಮಾಡುವ ಕರ್ಮಗಳಲ್ಲಿ ಏಲಕ್ಕಿ, ಲವಂಗ, ಕರ್ಪೂರ, ಕಸ್ತೂರಿ ಇವುಗಳಿಂದ ನಿರ್ಮಿತವಾದ ಪಾತ್ರೆಯಲ್ಲಿ ದೀಪ ಹಚ್ಚಬೇಕು. ಆಯಾಯಾ ಕರ್ಮಗಳಿಗೆ ವಿಹಿತವಾದ ವಸ್ತುಗಳು ಸಿಕ್ಕದಿದ್ದರೆ ಎಲ್ಲಕ್ಕೂ ಪಂಚಧಾನ್ಯವನ್ನೇ ಉಪಯೋಗಿಸುವುದು ಉತ್ತಮ.

೧೩-೧೫. ದೀಪಪಾತ್ರೆಯ ಪರಿಮಾಣವನ್ನು ತಿಳಿಸುವುದಕ್ಕೆ ಪೀಠಿಕೆ ಯಾಗಿ ಪರಿಮಾಣಪ್ರಮಾಣವನ್ನು ನಾಲ್ಕು ಶ್ಲೋಕಗಳಿಂದ ವಿವರಿಸುತ್ತಾರೆ. "ಪಲ" ವೆಂದರೆ ಒಂದು ಅಥವಾ ಎರಡು ಅಥವಾ ಮೂರು ರೂಪಾಯಿಗಳ

ಖಾರೀ ಚತುಷ್ಟಯಂ ಪ್ರಸ್ಥಃ ಸಂಜ್ಞಾ ಚ ಪರಿಕೀರ್ತಿತಾ ।
ಅಥವಾನ್ಯಪ್ರಕಾರೇಣ ಮಾನಮಂತ್ರ ನಿಗದ್ಯತೇ ॥ ೧೫ ॥

ಪಲದ್ವಯಂ ತು ಪ್ರಸೃತಂ ದ್ವಿಗುಣಂ ಕುಡವಂ ಮತಂ ।
ಚತುರ್ಭಿಃ ಕುಡವೈಃ ಪ್ರಸ್ಥಸ್ತೈಶ್ಚತುರ್ಭಿಸ್ತಥಾಢಕಃ ॥ ೧೬ ॥

ಚತುರಾಢಕೋ ಭವೇದ್ದ್ರೋಣಃ ಖಾರೀ ದ್ರೋಣಚತುಷ್ಟಯಂ ।
ಕ್ರಮೇಣೈತೇನ ತೇ ಜ್ಞೇಯಾಃ ಪಾತ್ರೇ ಷಟ್ಕರ್ಮಸಂಭವೇ ॥ ೧೭ ॥

ಪಂಚ ಸಪ್ತ ನವ ತಥಾಪ್ರಮಾಣಾಸ್ತೇ ಯಥಾಕ್ರಮಂ ।
ಸೌಗಂಧೇ ನೈವ ಮಾನಂ ಸ್ಯಾತ್ತದ್ಯಥಾರುಚಿ ಸಂಮತಂ ॥ ೧೮ ॥

---

ತೂಕ. ಒಂದೊಂದು ದೇಶದಲ್ಲಿ ಒಂದೊಂದು ರೀತಿಯಾಗಿ ವ್ಯವಹಾರದಲ್ಲಿದೆ. ಪಲಕ್ಕೆ ಮುಷ್ಟಿ ಎಂದು ಹೆಸರು. ಎಂಟು ಮುಷ್ಟಿಗಳು ಒಂದು "ಕುಂಚಿ" ಯಾಗುವುದು. ಎಂಟು ಕುಂಚಿಗಳು ಸೇರಿದರೆ ಪುಷ್ಕಲವೆನಿಸುವುದು. ನಾಲ್ಕು ಪುಷ್ಕಲಗಳು ಒಂದು "ಆಢಕ" ವೆಂದು ಉಕ್ತವಾಗಿದೆ. ನಾಲ್ಕು ಆಢಕಗಳು ಒಂದು "ದ್ರೋಣ". ನಾಲ್ಕು ದ್ರೋಣಗಳು ಒಂದು "ಖಾರಿ". ನಾಲ್ಕು ಖಾರಿಗಳು ಒಂದು "ಪ್ರಸ್ಥ". ಈ ರೀತಿ ಪರಿಮಾಣದ ಸಂಜ್ಞೆಗಳು ಉಕ್ತವಾಗಿವೆ. ಇದು ಒಂದು ದೇಶ ಕಾಲದಲ್ಲಿ ವ್ಯವಹಾರದಲ್ಲಿರುವ ಪರಿಮಾಣಕ್ರಮ. ದೇಶಾಂತರದಲ್ಲಿ ಕಾಲಾಂತರದಲ್ಲಿ ಪರಿಮಾಣವನ್ನು ಬೇರೆ ರೀತಿಯಾಗಿ ವ್ಯವಹರಿಸಿರುವರು. ಅದನ್ನೂ ಸಹ ಹೇಳುತ್ತೇನೆ.

೧೬-೧೭. ಮೇಲೆ ಹೇಳಿದ ಪಲಗಳೆರಡಕ್ಕೆ ಒಂದು "ಪ್ರಸೃತ" ವೆಂದು ಹೆಸರು. ಎರಡು ಪ್ರಸೃತಗಳು ಒಂದು "ಕುಡುವ" (ಪಾವು) ವಾಗುವುದು. ನಾಲ್ಕು ಕುಡವಗಳು ಒಂದು "ಪ್ರಸ್ಥ" (ಸೇರು). ನಾಲ್ಕು ಪ್ರಸ್ಥಗಳು ಒಂದು "ಆಢಕ". ನಾಲ್ಕು ಆಢಕಗಳು ಒಂದು "ದ್ರೋಣ". ನಾಲ್ಕು ದ್ರೋಣಗಳು ಒಂದು "ಖಾರಿ" ಎಂಬೀರೀತಿಯಾಗಿ ಆರು ಪರಿಮಾಣವಿಶೇಷಗಳನ್ನು ದೀಪದ ಪಾತ್ರೆಯನ್ನು ರಚಿಸುವ ಸಂದರ್ಭದಲ್ಲಿ ತಿಳಿಯಬೇಕು.

೧೮. ವಿಹಿತ ಪರಿಮಾಣವುಳ್ಳ ದೀಪಗಳನ್ನು ಕ್ರಮವಾಗಿ ಐದು, ಏಳು, ಅಥವಾ ಒಂಬತ್ತನ್ನು ರಚಿಸಬೇಕು. ಸುಗಂಧವಸ್ತುವಿನಿಂದ ದೀಪದ ಪಾತ್ರೆ

ನಿತ್ಯಂ ದೀಪಃ ಪ್ರಕರ್ತವ್ಯಸ್ತಾಮ್ರಪಾತ್ರೇ ಹನೂಮತಃ ।
ಸೋಮವಾರೇ ಗೃಹೀತ್ವಾ ತದ್ಧಾನ್ಯಂ ತೋಯಪ್ಲುತಂ ಚರೇತ್ ॥ ೧೯ ॥

ಪಶ್ಚಾತ್ಪ್ರಮಾಣತೋ ಗ್ರಾಹ್ಯಂ ಕುಮಾರೀಹಸ್ತಪೇಷಣಂ ।
ತತ್ಪಿಷ್ಟಂ ಶುದ್ಧಪಾತ್ರೇ ತು ನದೀತೋಯೇನ ಪಿಂಡಿತಂ ॥ ೨೦ ॥

ದೀಪಪಾತ್ರಂ ತತಃ ಕುರ್ಯಾಚ್ಛುದ್ಧಃ ಪ್ರಯತಮಾನಸಃ ।
ದೀಪಪಾತ್ರೇ ಯೋಜ್ಯಮಾನೇ ಮಾರುತೇಃ ಕವಚಂ ಪಠೇತ್ ॥ ೨೧ ॥

ಶುದ್ಧಭೂಮೌ ಸಮಾಸ್ಥಾಪ್ಯ ಭೌಮೇ ದೀಪಂ ಪ್ರದಾಪಯೇತ್ ।
ಮಾಲಾಮನೂನಾಂ ಯೇ ವರ್ಣಾಃ ಸಾಧ್ಯನಾಮಸಮನ್ವಿತಾಃ ॥ ೨೨ ॥

ವರ್ತಿಕಾಯಾಂ ಪ್ರಕರ್ತವ್ಯಾಸ್ತಂತವಸ್ತತ್ಪ್ರಮಾಣಕಾಃ ।
ತತ್ತ್ರಿಂಶಾಂಶೇನ ವಾ ಗ್ರಾಹ್ಯಾ ಗುರುಕಾರ್ಯೇಽಖಿಲಾಢ್ಯಕಾಃ ॥ ೨೩ ॥

---

ಯನ್ನು ಮಾಡುವ ಸಂದರ್ಭದಲ್ಲಿ ಈ ಪರಿಮಾಣ ನಿಯಮವಿಲ್ಲ. ಕರ್ತೃವಿನ ಇಷ್ಟಬಂದಹಾಗೆ ಮಾಡಬಹುದು.

೧೯. ಪ್ರತಿದಿನವೂ ತಾಮ್ರ ಪಾತ್ರೆಯಲ್ಲಿ ಹನುಮಂತನಿಗೆ ದೀಪವನ್ನು ಹಚ್ಚಬೇಕು. ಸೋಮವಾರದ ದಿನ ವಿಹಿತವಾದ ಧಾನ್ಯವನ್ನು ತೆಗೆದುಕೊಂಡು ನೀರಿನಲ್ಲಿ ತೊಳೆಯಬೇಕು.

೨೦-೨೧. ಅನಂತರ ಅಳತೆ ಮಾಡಿ ವಿಹಿತವಾದಷ್ಟನ್ನು ಕುಮಾರಿಯ ಕೈಯಿಂದ ಹಿಟ್ಟುಮಾಡಿಸಿ ಆ ಹಿಟ್ಟನ್ನು ನದೀನೀರಿನಿಂದ ನಿರ್ಮಲಪಾತ್ರೆಯಲ್ಲಿ ಕಲಸಿ ಮುದ್ದೆಮಾಡಿ ಜಿತಮನಸ್ಸಿನಿಂದ ಪರಿಶುದ್ಧನಾಗಿ ದೀಪದ ಪಾತ್ರೆಯನ್ನು ಯೋಜನೆಮಾಡುವಾಗ ಹನುಮಂತನ ಕವಚವನ್ನು ಹೇಳಬೇಕು.

೨೨-೨೩. ಆ ಪಾತ್ರೆಯನ್ನು ಪರಿಶುದ್ಧವಾದ ಭೂಮಿಯಲ್ಲಿಟ್ಟು ಮಂಗಳ ವಾರದ ದಿನ ಅದರಲ್ಲಿ ದೀಪವನ್ನು ಹಚ್ಚಿಸಿ, ದಾನ ಮಾಡಿಸಬೇಕು. ಸಾಧ್ಯನ ಹೆಸರಿನಿಂದ ಸಹಿತವಾದ ಮಾಲಾಮಂತ್ರದ ವರ್ಣಗಳಷ್ಟು ಎಳೆಗಳುಳ್ಳ ಬತ್ತಿ ಯನ್ನು ಮಾಡಿ ದೀಪಕ್ಕೆ ಉಪಯೋಗಿಸಬೇಕು. ಅಥವಾ ಮಾಲಾಮಂತ್ರದ ವರ್ಣಗಳ ಮೂರನೆಯ ಒಂದು ಭಾಗದಷ್ಟಾದರೂ ಎಳೆಗಳನ್ನು ರಚಿಸಿ ಅದರಿಂದ ಬತ್ತಿಗಳನ್ನು ಮಾಡಬೇಕು. ಅಥವಾ ಉದ್ದೇಶ್ಯಕಾರ್ಯವು ಗುರುವಾಗಿದ್ದರೆ ಮಾಲಾಮಂತ್ರದ ವರ್ಣಗಳಷ್ಟು ಎಳೆಗಳ ಬತ್ತಿಯನ್ನೇ ಉಪಯೋಗಿಸಬೇಕು.

ಕೂಟತುಲ್ಯಾಃ ಸ್ಮೃತಾ ನಿತ್ಯೇ ಸಾಮಾನ್ಯೇಽಥ ವಿಶೇಷಕೇ ।
ರುದ್ರಾಃ ಕೂಟಗುಣಾಃ ಪ್ರೋಕ್ತಾಃ ನ ಪಾತ್ರೇ ನಿಯಮೋ ಮತಃ ॥ ೨೪ ॥

ಏಕವಿಂಶತಿಸಂಖ್ಯಾಕಾಸ್ತಂತವೋಽಥಾಧ್ವನಿ ಸ್ಮೃತಾಃ ।
ರಕ್ತಸೂತ್ರಂ ಹನುಮತೋ ದೀಪದಾನೇ ಪ್ರಕೀರ್ತಿತಂ ॥ ೨೫ ॥

ಕೃಷ್ಣಮುಚ್ಚಾಟನೇ ದ್ವೇಷೇಽರುಣಂ ಮಾರಣಕರ್ಮಣಿ ।
ಕೂಟತುಲ್ಯಪಲಂ ತೈಲಂ ಗುರುಕಾರ್ಯೇ ಶಿವೈರ್ಗುಣಂ ॥ ೨೬ ॥

ನಿತ್ಯೇ ಪಂಚಪಲಂ ಪ್ರೋಕ್ತಮಥವಾ ಮಾನಸೀ ರುಚಿಃ ॥ ೨೭ ॥

---

೨೪. ಸಾಮಾನ್ಯ ವಿಶೇಷ ಸಂದರ್ಭಗಳಲ್ಲೆಲ್ಲಾ ನಿತ್ಯ ದೀಪಕ್ಕೆ ಕೂಟಗಳಷ್ಟು ಎಳೆಗಳುಳ್ಳ ಬತ್ತಿಯನ್ನು ಉಪಯೋಗಿಸಬೇಕು. ಹನ್ನೊಂದು ಎಂಬುದು ಕೂಟಸಂಖ್ಯೆಯೆಂದುಕ್ತವಾಗಿದೆ. ಪಾತ್ರೆಯ ವಿಷಯದಲ್ಲಿ ನಿರ್ಬಂಧವಿಲ್ಲ.

೨೫. ಇಪ್ಪತ್ತೊಂದು ಎಳೆಗಳುಳ್ಳ ಬತ್ತಿಯನ್ನು ಉಪಯೋಗಿಸುವುದು ಉತ್ತಮ ಕಲ್ಪ : ಹನುಮಂತನ ದೀಪವನ್ನು ದಾನ ಮಾಡಬೇಕಾದರೆ ಕೆಂಪು ಬಣ್ಣದ ಬತ್ತಿಯು ಪ್ರಶಸ್ತವೆಂದು ಹೇಳಲ್ಪಟ್ಟಿದೆ.

೨೬. ಶತ್ರುಗಳನ್ನು ಉಚ್ಚಾಟನೆ ಮಾಡುವ ಉದ್ದೇಶದಿಂದ ದೀಪವನ್ನು ದಾನ ಮಾಡಬೇಕಾದರೆ ಕರಿಯ ಬತ್ತಿಯನ್ನೂ, ದ್ವೇಷ ಅಥವಾ ಶತ್ರುಸಂಹಾರಕ್ಕಾಗಿ ದೀಪದಾನ ಮಾಡುವ ಸಂದರ್ಭದಲ್ಲಿ ಕೆಂಪು ಬಣ್ಣದ ಬತ್ತಿಯನ್ನೂ ಉಪಯೋಗಿಸಬೇಕು. ಮಹಾಕಾರ್ಯೋದ್ದೇಶವಿರುವಾಗ ದೀಪಕ್ಕೆ ಹನ್ನೊಂದು ಪಲ ಎಣ್ಣೆಯನ್ನೂ ಮತ್ತು ಹನ್ನೊಂದೆಳೆ ಬತ್ತಿಯನ್ನೂ ಉಪಯೋಗಿಸಬೇಕು.

೨೭. ನಿತ್ಯ ದೀಪಕ್ಕೆ ಐದು ಪಲ ಅಥವಾ ಕರ್ತೃವಿನ ಮನಸ್ಸಿಗೆ ತೋರಿದಷ್ಟು ಎಣ್ಣೆಯನ್ನು ಉಪಯೋಗಿಸಬಹುದು.

ಹನುಮತ್ಪ್ರತಿಮಾಯಾಸ್ತು ಸನ್ನಿಧೌ ದೀಪದಾಪನಂ ।
ಶಿವಾಲಯೇಽಥವಾ ಕುರ್ಯಾನ್ನಿತ್ಯನೈಮಿತ್ತಿಕೇ ಸ್ಥಲೇ　　॥ ೨೮ ॥

ವಿಶೇಷೋಽಸ್ತ್ಯತ್ರ ಯಃ ಕಶ್ಚಿನ್ಮಾರುತೇರುಚ್ಯತೇ ಮಯಾ　　॥ ೨೯ ॥

ಪ್ರತಿಮಾಗ್ರೇ ಪ್ರಮೋದೇನ ಗ್ರಹಭೂತಗ್ರಹೇಷು ಚ ।
ಚತುಷ್ಪಥೇ ತಥಾ ಪ್ರೋಕ್ತಂ ಷಟ್ಸು ದೀಪಪ್ರದಾಪನಂ　　॥ ೩೦ ॥

ಸನ್ನಿಧೌ ಸ್ಫಾಟಿಕೇ ಲಿಂಗೇ ಶಾಲಗ್ರಾಮಸ್ಯ ಸನ್ನಿಧೌ ।
ನಾನಾಭೋಗಶ್ರಿಯೈ ಪ್ರೋಕ್ತಂ ದೀಪದಾನಂ ಹನೂಮತಃ　　॥ ೩೧ ॥

ಗಣೇಶಸನ್ನಿಧೌ ವಿಘ್ನಮಹಾಸಂಕಟನಾಶನೇ ।
ವಿಷವ್ಯಾಧಿಭಯೇ ಘೋರೇ ಹನುಮತ್ಸನ್ನಿಧೌ ಸ್ಮೃತಂ　　॥ ೩೨ ॥

---

೨೮. ಆಂಜನೇಯನ ಪ್ರತಿಮೆಯಸನ್ನಿಧಿ, ಈಶ್ವರದೇವಾಲಯ ಅಥವಾ ನಿತ್ಯನೈಮಿತ್ತಿಕಕರ್ಮಮಾಡುವಸ್ಥಳಗಳಲ್ಲಿ ದೀಪದಾನಮಾಡಬೇಕು.

೨೯-೩೦. ಇದರಲ್ಲಿಯೂ ಆಂಜನೇಯನ ಮುಂಭಾಗದಲ್ಲಿ ಮಾಡುವ ದೀಪದಾನಕ್ಕೆ ವಿಶೇಷ ಮಹಿಮೆ ಇದೆ. ಅದನ್ನೂ ಹೇಳುತ್ತೇನೆ. ಹಾಗೆಯೇ ಗ್ರಹ, ಭೂತಗಳ ಸನ್ನಿಧಿ, ನಾಲ್ಕು ದಾರಿಗಳು ಸೇರುವ ಸ್ಥಳ, (ಚೌಕ) ಈ ಆರು ಸ್ಥಳಗಳಲ್ಲಿ ದೀಪದಾನವು ಉಕ್ತವಾಗಿದೆ.

೩೧. ಸ್ಫಟಿಕಲಿಂಗಸನ್ನಿಧಿ, ಸಾಲಗ್ರಾಮ ಸನ್ನಿಧಿಗಳಲ್ಲಿ ಮಾಡುವ ಹನುಮದ್ದೀಪದಾನವು ನಾನಾವಿಧ ಭೋಗಸಂಪತ್ತನ್ನು ಕೊಡುವುದು.

೩೨. ಗಣೇಶನ ಸನ್ನಿಧಿಯಲ್ಲಿ ಮಾಡುವ ದೀಪದಾನವು ವಿಘ್ನ ಮತ್ತು ಮಹಾ ಸಂಕಟಗಳನ್ನು ನಾಶಪಡಿಸುವುದು. ಹನುಮಂತನ ಸನ್ನಿಧಿಯಲ್ಲಿ ದೀಪದಾನಮಾಡಿದರೆ ಭಯಂಕರವಾದ ವಿಷ ಮತ್ತು ವ್ಯಾಧಿಗಳ ಭೀತಿಯು ನಾಶವಾಗುವುದು.

ದುರ್ಗಾಯಾಃ ಸನ್ನಿಧೌ ಪ್ರೋಕ್ತಂ ಸಂಗ್ರಾಮೇ ದೀಪದಾಪನಂ ।
ಚತುಷ್ಪಥೇ ವ್ಯಾಧಿನಷ್ಟೇ ದುಷ್ಟದೃಷ್ಟೌ ತಥೈವ ಚ ॥ ೩೩ ॥

ರಾಜದ್ವಾರೇ ಬಂಧಮುಕ್ತ್ಯೈ ಕಾರಾಗರೇಽಥ ವಾ ಮತಂ ।
ಅಶ್ವತ್ಥವಟಮೂಲೇ ತು ಸರ್ವಕಾರ್ಯಪ್ರಸಿದ್ಧಯೇ ॥ ೩೪ ॥

ವಶ್ಯೇ ಭಯೇ ವಿವಾದೇ ಚ ವೇಶ್ಮಸಂಗ್ರಾಮಸಂಕಟೇ ।
ದ್ಯೂತೇ ದೃಷ್ಟಿಸ್ತಂಭನೇ ಚ ವಿದ್ವೇಷೇ ಮಾರಣೇ ತಥಾ ॥ ೩೫ ॥

ಮೃತಕೋತ್ಥಾಪನೇ ಚೈವ ಪ್ರತಿಮಾಚಲನೇ ತಥಾ ।
ವಿಷೇ ವ್ಯಾಧೌ ಜ್ವರೇ ಭೂತಗ್ರಹೇ ಕೃತ್ಯಾವಿಮೋಚನೇ ॥ ೩೬ ॥

ಕ್ಷತಗ್ರಂಥೌ ಮಹಾರಣ್ಯೇ ದುರ್ಗೇ ವ್ಯಾಘ್ರೇ ಚ ದಂತಿನಿ ।
ಕ್ರೂರಸತ್ವೇಷು ಸರ್ವೇಷು ಶಶ್ವದ್ಬಂಧವಿಮೋಕ್ಷಣೇ ॥ ೩೭ ॥

ಪಥಿಕಾಗಮನೇ ಚೈವ ದುಃಸ್ಥಾನೇ ರಾಜಮೋಹನೇ ।
ಆಗಮೇ ನಿರ್ಗಮೇ ಚೈವ ರಾಜದ್ವಾರೇ ಪ್ರಕೀರ್ತಿತಂ ॥ ೩೮ ॥

---

೩೩. ಯುದ್ಧದಲ್ಲಿ ಜಯವನ್ನು ಹೊಂದಲು ದುರ್ಗಾದೇವಿಯ ಸನ್ನಿಧಿಯಲ್ಲಿ ದೀಪದಾನ ಮಾಡಬೇಕು. ರೋಗದಿಂದ ನರಳುತ್ತಿರುವಾಗ ಮತ್ತು ದುಷ್ಟ ದರ್ಶನವಾದಾಗ ಚೌಕದಲ್ಲಿ ದೀಪವನ್ನು ಹಚ್ಚಿಡಬೇಕು.

೩೪. ಜೈಲಿನಿಂದ ಬಿಡಿಸಿಕೊಳ್ಳುವುದಕ್ಕಾಗಿ, ರಾಜಮಾರ್ಗ ಅಥವಾ ಜೈಲಿನಲ್ಲಿ ದೀಪವನ್ನು ರಚಿಸಬೇಕು. ಅಶ್ವತ್ಥ ಅಥವಾ ಆಲದ ಮರದ ಕೆಳಗೆ ದೀಪವನ್ನಿಟ್ಟರೆ ಸಕಲಕಾರ್ಯಸಿದ್ಧಿಯಾಗುವುದು.

೩೫-೩೯. ವಶೀಕರಣ, ಭಯ, ಕಲಹ, ಯುದ್ಧ, ವ್ಯಸನ, ಜೂಜು, ಕಣ್ಣಿಗೆ ಕಾಣಿಸದಂತೆ ಆಗಿರುವುದು, ದ್ವೇಷ, ಮೃತ್ಯುಭಯ, ಶವವು ಏಳುವುದು, ಪ್ರತಿಮೆಯು ಚಲಿಸುವುದು, ವಿಷ, ರೋಗ, ಜ್ವರ, ಭೂತಗ್ರಹ, ಕೆಲಸ ಹೋಗುವುದು, ಹೆಗ್ಗಾಡಿನಲ್ಲಿ ದುರ್ಗದಲ್ಲಿ, ವ್ಯಾಘ್ರ, ಆನೆ ಮುಂತಾದ ಕ್ರೂರ ಪ್ರಾಣಿಗಳ ಬಂಧನದಿಂದ ಬಿಡುಗಡೆ, ದೇಶಾಂತರಗತರ ಆಗಮನ, ರಾಜ ಮೋಹಕವಾದ

ದೀಪದಾನಂ ಹನುಮತೋ ನಾತ್ರ ಕಾರ್ಯಾ ವಿಚಾರಣಾ ॥ ೩೯ ॥

ರುದ್ರೈಕವಿಂಶಪಿಂಡಾಶ್ಚ ತ್ರಿಧಾ ತಂಡುಲಮಾನಕಂ ।
ಲಘುಮಾನಂ ಸ್ಮೃತಂ ಪಂಚ ಸಪ್ತ ವಾ ನವ ವಾ ತಥಾ ॥ ೪೦ ॥

ಕ್ಷೀರೇಣ ನವನೀತೇನ ದಧ್ನಾ ವಾ ಗೋಮಯೇನ ಚ ।
ಪ್ರತಿಮಾಕರಣಂ ಪ್ರೋಕ್ತಂ ಮಾರುತೇರ್ದೀಪದಾಪನೇ ॥ ೪೧ ॥

ದಕ್ಷಿಣಾಭಿಮುಖಂ ವೀರಂ ಕೃತ್ವಾ ಕೇಸರಿವಿಕ್ರಮಂ ॥ ೪೨ ॥

ಮುಕ್ತವಿನ್ಯಸ್ತಪಾದಂ ಚ ಕಿರೀಟೇನ ವಿರಾಜಿತಂ ।
ಲಿಖೇದ್ಭಿತ್ತೌ ಪಟೇ ವಾಪಿ ಪೀಠೇ ವಾ ಮಾರುತೇಃ ಶುಭೇ ॥ ೪೩ ॥

ಮಾಲಾಮಂತ್ರೇಣ ದಾತವ್ಯಂ ದೀಪದಾನಂ ಹನೂಮತಃ ।
ನಿತ್ಯದೀಪಃ ಪ್ರಕರ್ತವ್ಯೋ ದ್ವಾದಶಾಕ್ಷರವಿದ್ಯಯಾ ॥ ೪೪ ॥

---

ದುಷ್ಟಸ್ಥಾನಗಳಲ್ಲಿ ಹೋಗಿ ಬರುವಿಕೆ ಇತ್ಯಾದಿ ಸಂದರ್ಭಗಳಲ್ಲಿ ರಾಜದ್ವಾರದಲ್ಲಿ ಹನುಮದ್ದೀಪದಾನವನ್ನು ಮಾಡಿದರೆ ಇಷ್ಟಾರ್ಥವು ನೆರವೇರುತ್ತದೆ; ಸಂದೇಹವಿಲ್ಲ.

೪೦. ದೀಪದ್ರವ್ಯವಾದ ತಂಡುಲಪಿಷ್ಟವು ಹನ್ನೊಂದು ಅಥವಾ ಇಪ್ಪತ್ತೊಂದು ಮುಷ್ಟಿಗಳಷ್ಟಿರಬೇಕು. ಇದು ದೊಡ್ಡಳತೆಯು. ಲಘುಮಾನವು ಐದು, ಏಳು ಅಥವಾ ಒಂಬತ್ತು ಮುಷ್ಟಿಪರಿಮಿತಗಳೆಂದು ಮೂರು ವಿಧವಾಗಿದೆ.

೪೧. ಹನುಮದ್ದೀಪದಾನದಲ್ಲಿ ಹಾಲು, ಮೊಸರು, ಬೆಣ್ಣೆ ಅಥವಾ ಗೋಮಯಗಳಿಂದ ಹನುಮಂತನ ಆಕೃತಿಯನ್ನು ಉಲ್ಲೇಖಿಸಬೇಕು.

೪೨-೪೩. ದಕ್ಷಿಣ ದಿಕ್ಕಿಗೆದುರಾಗಿ ಹಾರುತ್ತಿರುವ, ಸಿಂಹದಂತೆ ಪರಾಕ್ರಮವನ್ನು ಬೀರುತ್ತಿರುವ, ಪಾದವಿನ್ಯಾಸವುಳ್ಳ, ಕಿರೀಟದಿಂದ ವಿರಾಜಮಾನವಾದ, ವೀರ ಆಂಜನೇಯನ ರೂಪವನ್ನು ಗೋಡೆ ಅಥವಾ ವಸ್ತ್ರ ಅಥವಾ ಶುಭ ಪೀಠ ಇವುಗಳಲ್ಲಿ ಬರೆಯಬೇಕು.

೪೪-೪೫. ಹನುಮನ್ಮಾಲಾಮಂತ್ರದಿಂದ ದೀಪದಾನ ಮಾಡಬೇಕು.

ವಿಶೇಷಸ್ತತ್ರ ಯುಸ್ತಂ ವೈ ದೀಪದಾನೇsವಧಾರಯ |
ಷಷ್ಠ್ಯಾದೌ ಚ ದ್ವಿತೀಯಾದಾವಿಮಂ ದೀಪಮಿತೀರಯೇತ್ ॥ ೪೫ ॥

ಗೃಹಾಣೇತಿ ಪದಂ ಪಶ್ಚಾಚ್ಛೇಷಂ ಪೂರ್ವವದುಚ್ಚರೇತ್ ।
ಕೂಟಾದೌ ನಿತ್ಯದೀಪೇ ಚ ಮಂತ್ರಂ ಸೂರ್ಯಾರ್ಕ್ಷರಂ ವದೇತ್ ॥ ೪೬ ॥

ತತ್ರ ಮಾಲಾಖ್ಯ ಮನುನಾ ತತ್ತತ್ಕಾರ್ಯೇಷು ಕಾರಯೇತ್ |
ಗೋಮಯೇನೋಪಲಿಪ್ತಾಯಾಂ ಭೂಮೌ ತದ್ಗತಮಾನಸಃ ॥ ೪೭ ॥

ಷಟ್ಕೋಣಂ ವಸುಪತ್ರಂ ಚ ಭೂಮೌ ರೇಖಾಸಮನ್ವಿತಂ ।
ಕಮಲಂ ಚ ಲಿಖೇದ್ಭದ್ರಂ ತತ್ರ ದೀಪಂ ನಿಧಾಪಯೇತ್ ॥ ೪೮ ॥

ಶೈವೇ ವಾ ವೈಷ್ಣವೇ ಪೀಠೇ ಪೂಜಯೇದಂಜನಾಸುತಂ ।
ಕೂಟಷಟ್ಕಂಚ ಷಟ್ಕೋಣೇ ಅಂತರಾಲೇ ಪರಂ ಲಿಖೇತ್ ॥ ೪೯ ॥

---

ದ್ವಾದಶಾಕ್ಷರ ಮಂತ್ರದಿಂದ ನಿತ್ಯದೀಪವನ್ನು ಹಚ್ಚಬೇಕು. ಆ ದೀಪದಾನದಲ್ಲಿ ವಿಶೇಷವನ್ನು ಹೇಳುವೆನು ಕೇಳು.

೪೫-೪೬. ಷಷ್ಠ್ಯಾದಿ ಮತ್ತು ದ್ವಿತೀಯಾವಿಭಕ್ತ್ಯಂತ ಪದಗಳನ್ನು ಸೇರಿಸಿ "ಇಮಂ ದೀಪಂ ಗೃಹಾಣ" ಎಂಬುದಾಗಿ ಹೇಳಿ ಬಳಿಕ ಉಳಿದುದನ್ನು ಹಿಂದಿನಂತೆ ಹೇಳಬೇಕು. ಕೂಟಾದಿಯಲ್ಲಿಯೂ, ನಿತ್ಯದೀಪದಲ್ಲಿಯೂ ಸಹ ದ್ವಾದಶಾಕ್ಷರಮಂತ್ರವನ್ನು ಹೇಳಬೇಕು.

೪೭-೪೮. ಅದರಲ್ಲಿಯೂ ಆಯಾಯಾ ಕಾರ್ಯಗಳಲ್ಲಿ ಮಾಲಾಮಂತ್ರವನ್ನು ಹೇಳುತ್ತಾ ಗೋಮಯದಿಂದ (ಹಸುವಿನ ಸಗಣಿಯಿಂದ) ಸಾರಿಸಿದ ಸ್ಥಳದಲ್ಲಿ ಅವನಲ್ಲಿಯೇ ಮನಸ್ಸಿಟ್ಟು ಆರು ಮೂಲೆಗಳು ಮತ್ತು ಎಂಟು ದಳಗಳುಳ್ಳ ಪದ್ಮಮಂಡಲವನ್ನು ಬರೆಯಬೇಕು. ಅದರ ಮೇಲೆ ಮಂಗಳಕರವಾದ ದೀಪವನ್ನು ಇಡಬೇಕು.

೪೯. ಶೈವ ಅಥವಾ ವೈಷ್ಣವ ಪೀಠದಲ್ಲಿ ಆಂಜನೇಯನನ್ನು ಪೂಜಿಸಬೇಕು. ಆರು ಕೋಣಗಳಲ್ಲಿ ಆರು ಕೂಟಗಳನ್ನೂ, ಮಧ್ಯದಲ್ಲಿ ಉಳಿದುದನ್ನೂ ಬರೆಯಬೇಕು.

ಷಟ್ಕೋಣೇಷು ಷಡಂಗಾನಿ ಬೀಜಯುಕ್ತಾನಿ ಸಂಲಿಖೇತ್ ।
ಸೌಮ್ಯಂ ಮಧ್ಯಗತಂ ಲೇಖ್ಯಂ ತತ್ರ ಸಂಪೂಜ್ಯ ಮಾರುತಿಂ ॥ ೫೦ ॥

ಷಟ್ಕೋಣೇಷು ಷಡಂಗಾನಿ ನಾಮಾನಿ ಚ ಪುರೋಕ್ತವತ್ ।
ವಸುಪತ್ರೇ ಕ್ರಮಾತ್ಪೂಜ್ಯಾ ಅಷ್ಟಾವೇತೇ ಚ ವಾನರಃ ॥ ೫೧ ॥

ಸುಗ್ರೀವಾಯಾಂಗದಾಯಾಥ ಸುಷೇಣಾಯ ನಲಾಯ ಚ ।
ನೀಲಾಯಾಥೋ ಜಾಂಬುವತೇ ಪ್ರಹಸ್ತಾಯ ತಥೈವ ಚ ॥ ೫೨ ॥

ಸುವೇಷಾಯ ತತಃ ಪಶ್ಚಾದ್ಯಜೇತ್‌ಷಡಂಗದೇವತಾಃ ।
ಆದಾವಂಜನಿಪುತ್ರಾಯ ತತಶ್ಚ ರುದ್ರಮೂರ್ತಯೇ ॥ ೫೩ ॥

ತತೋ ವಾಯುಸುತಾಯಾಥ ಜಾನಕೀಜೀವನಾಯ ಚ ।
ರಾಮದೂತಾಯ ಬ್ರಹ್ಮಾಸ್ತ್ರನಿವಾರಣಾಯ ತತ್ಪರಂ ॥ ೫೪ ॥

---

೫೦-೫೧. ಆರು ಕೋಣಗಳಲ್ಲಿಯೂ ಬೀಜಾಕ್ಷರಸಹಿತವಾದ ಷಡಂಗ ಮಂತ್ರಗಳನ್ನು ಬರೆಯಬೇಕು. ಮಧ್ಯದಲ್ಲಿ ಮಾರುತಿಯ ಸೌಮ್ಯಮೂರ್ತಿಯನ್ನು ಬರೆದು ಪೂಜಿಸಿ, ಹಿಂದೆ ಹೇಳಿದಂತೆ ಆರು ಕೋಣಗಳಲ್ಲಿ ಷಡಂಗ ನಾಮಗಳನ್ನೂ, ಎಂಟು ದಳಗಳಲ್ಲಿ ಮುಂದೆ ಹೇಳುವ ಎಂಟು ವಾನರರನ್ನೂ ಕ್ರಮವಾಗಿ ಪೂಜಿಸಬೇಕು.

೫೨-೫೩. "ಸುಗ್ರೀವಾಯ ನಮಃ, ಅಂಗದಾಯ ನಮಃ, ಸುಷೇಣಾಯ ನಮಃ, ನಲಾಯ ನಮಃ, ನೀಲಾಯ ನಮಃ, ಜಾಂಬುವತೇ ನಮಃ, ಪ್ರಹಸ್ತಾಯ ನಮಃ, ಸುವೇಷಾಯ ನಮಃ" ಎಂಬುದಾಗಿ ಅಷ್ಟವಾನರರನ್ನು ಪೂಜಿಸಿ, ಅನಂತರ ಷಡಂಗದೇವತೆಗಳನ್ನು ಪೂಜಿಸಬೇಕು.

೫೩-೫೪. ಹೇಗೆಂದರೆ :—ಮೊದಲು "ಅಂಜನಾಪುತ್ರಾಯ ನಮಃ" ಅನಂತರ "ರುದ್ರಮೂರ್ತಯೇ ನಮಃ" ಬಳಿಕ "ವಾಯುಸುತಾಯ ನಮಃ" ತರುವಾಯ "ಜಾನಕೀಜೀವನಾಯ ನಮಃ" ಆಮೇಲೆ "ರಾಮದೂತಾಯ ನಮಃ" ಕೊನೆಯದಾಗಿ "ಬ್ರಹ್ಮಾಸ್ತ್ರನಿವಾರಣಾಯ ನಮಃ" ಎಂಬುದಾಗಿ ಷಡಂಗ ದೇವತೆಗಳನ್ನು ಪೂಜಿಸಬೇಕು.

**ಪಂಚೋಪಚಾರೈಃ ಸಂಪೂಜ್ಯ ದೇಶಕಾಲೌ ಚ ಕೀರ್ತಯೇತ್ ।**
**ಕುಶೋದಕಂ ಸಮಾದಾಯ ದೀಪಮಂತ್ರಂ ಸಮುಚ್ಚರೇತ್ ॥ ೫೫ ॥**

**ಉತ್ತರಾಭಿಮುಖೋ ಜಪ್ತ್ವಾ ಸಾಧಯೇತ್ಸಾಧಕೋತ್ತಮಃ ।**
**ತಂ ಮಂತ್ರಂ ಕೋಟಿಧಾ ಜಪ್ತ್ವಾ ಜಲಂ ಭೂಮೌ ವಿನಿಕ್ಷಿಪೇತ್ ॥ ೫೬ ॥**

**ತತಃ ಕರಪುಟಂ ಕೃತ್ವಾ ಯಥಾಶಕ್ತಿ ಜಪೇನ್ಮನುಂ ।**
**ಅನೇನ ದೀಪವರ್ಯೇಣ ಉದಙ್ಮುಖಗತೇನ ವೈ ॥ ೫೭ ॥**

**ತಥಾ ವಿಧೇಹಿ ಹನುಮನ್ಯಥಾಸ್ಯುರ್ಮೇ ಮನೋರಥಾಃ ।**
**ತ್ರಯೋದಶೈವಂ ದ್ರವ್ಯಾಣಿ ಗೋಮಯಂ ಮೃತ್ತಿಕಾ ಮಸೀ ॥ ೫೮ ॥**

**ಅಲಕ್ತಂ ದರದಂ ರಕ್ತಚಂದನಂ ಚಂದನಂ ಮಧು ।**
**ಕಸ್ತೂರಿಕಾ ದಧಿ ಕ್ಷೀರಂ ನವನೀತಂ ಘೃತಂ ತಥಾ ॥ ೫೯ ॥**

---

೫೫. ಪಂಚೋಪಚಾರಗಳಿಂದ ಪೂಜಿಸಿ ದೇಶಕಾಲಗಳನ್ನು ಹೇಳಬೇಕು. ಅನಂತರ ಕುಶೋದಕವನ್ನು ತೆಗೆದುಕೊಂಡು ದೀಪಮಂತ್ರವನ್ನು ಪಠನೆ ಮಾಡಬೇಕು.

೫೬. ಸಾಧಕವರ್ಯನು ಉತ್ತರ ದಿಕ್ಕಿಗೆ ಎದುರಾಗಿ ಕುಳಿತು ಜಪಿಸಿ ಸಾಧಿಸಿಬೇಕು. ಆ ಮಂತ್ರವನ್ನು ಆರಾವರ್ತಿ ಜಪಿಸಿ ನೀರನ್ನು ಭೂಮಿಯಲ್ಲಿ ಬಿಡಬೇಕು.

೫೭-೫೮. ಅನಂತರ ಕೈಮುಗಿದುಕೊಂಡು ತನ್ನ ಶಕ್ತ್ಯನುಸಾರ ಮಂತ್ರವನ್ನು ಜಪಿಸಬೇಕು. ಬಳಿಕ “ಹನುಮಂತನೇ! ಉತ್ತರಾಭಿಮುಖವಾದ ಈ ಉತ್ಕೃಷ್ಟವಾದ ದೀಪವನ್ನು ಸ್ವೀಕರಿಸಿ ನನ್ನ ಮನೋರಥವನ್ನು ಪೂರ್ಣಗೊಳಿಸು” ಎಂಬುದಾಗಿ ಪ್ರಾರ್ಥಿಸಬೇಕು.

೫೮-೫೯. ಗೋಮಯ, ಮೃತ್ತಿಕೆ, ಮಸಿ, ಅರಗು, ದರದ, ಕೆಂಪು ಗಂಧ, ಗಂಧ, ಜೇನುತುಪ್ಪ, ಕಸ್ತೂರಿ, ಮೊಸರು, ಹಾಲು, ಬೆಣ್ಣೆ ಮತ್ತು ತುಪ್ಪ ಎಂಬುದಾಗಿ ಹದಿಮೂರು ವಸ್ತುಗಳನ್ನು ಸಂದರ್ಭಾನುಸಾರವಾಗಿ ಉಪಯೋಗಿಸಬೇಕು.

ಗೋಮಯಂ ದ್ವಿವಿಧಂ ತತ್ರ ಪ್ರೋಕ್ತಂ ಗೋಮಹಿಷೀಭವಂ ।
ಪಶ್ಚಾದ್ವಿನಷ್ಟದ್ರವ್ಯಾಪ್ತೌ ಮಾಹಿಷಂ ಗೋಮಯಂ ಸ್ಮೃತಂ ॥ ೬೦ ॥

ಪಥಿಕಾಗಮನೇ ದೂರಾನ್ಮಹಾದುರ್ಗಸ್ಯ ರಕ್ಷಣೇ ।
ಬಾಲಾದಿರಕ್ಷಣೇ ಚೈವ ಚೋರಾದಿಭಯನಾಶನೇ ॥ ೬೧ ॥

ಸ್ತ್ರೀವಶ್ಯಾದಿಷು ಕಾರ್ಯೇಷು ಶಸ್ತ್ರಂ ಗೋಗೋಮಯಂ ಮುನೇ ।
ಭೂಮಿಸ್ಪೃಷ್ಟಂ ನ ತದ್ಗ್ರಾಹ್ಯಮಂತರಿಕ್ಷಾಚ್ಚ ಭಾಜನೇ ॥ ೬೨ ॥

ಚತುರ್ವಿಧಾ ಮೃತ್ತಿಕಾ ತು ಶ್ವೇತಾ ಪೀತಾಽರುಣಾಸಿತಾ ।
ತತ್ರ ಗೋಪೀಚಂದನಂ ತು ಹರಿತಾಲಂ ಚ ಗೈರಿಕಂ ॥ ೬೩ ॥

ಮಷೀ ಲಾಕ್ಷಾರಸೋದ್ಭೂತಾ ಸರ್ವಂ ವಾನ್ಯತ್ಸ್ಫುಟಂ ಮತಂ ।
ಕೃತ್ವಾ ಗೋಪೀಚಂದನೇನ ಚತುರಸ್ರಂ ಗೃಹಂ ಸುಧೀಃ ॥ ೬೪ ॥

---

೬೦. ಅವುಗಳಲ್ಲಿ ಗೋಮಯ ಎಂದರೆ ಸಗಣಿಯು ಹಸುವಿನದು ಎಮ್ಮೆಯದು ಎಂಬುದಾಗಿ ಎರಡು ವಿಧವೆಂದು ಉಕ್ತವಾಗಿದೆ. ಕಳೆದುಹೋದ ಪದಾರ್ಥವನ್ನು ಪುನಃ ಪಡೆಯಲು ಎಮ್ಮೆಯ ಸಗಣಿಯನ್ನು ಉಪಯೋಗಿಸಬೇಕು.

೬೧-೬೨. ದೂರ ಹೋಗಿದ್ದವರು ಬರುವುದು, ದೊಡ್ಡ ಕೋಟೆಯನ್ನು ರಕ್ಷಿಸುವುದು, ಬಾಲಾದಿ ರಕ್ಷಣ, ಕಳ್ಳಕಾಕರರ ಭಯಪರಿಹಾರ, ಸ್ತ್ರೀವಶೀಕರಣ ಮುಂತಾದ ಕಾರ್ಯಗಳಲ್ಲಿ ಹಸುವಿನ ಗೋಮಯವು ಪ್ರಶಸ್ತವು. ನೆಲದ ಮೇಲೆ ಬಿದ್ದ ಗೋಮಯವು ಗ್ರಾಹ್ಯವಲ್ಲ. ಮೇಲಿನಿಂದಲೇ ಪಾತ್ರೆಯಲ್ಲಿ ಹಿಡಿದು ತೆಗೆದುಕೊಳ್ಳಬೇಕು.

೬೩. ಮೃತ್ತಿಕೆಯು ಬಿಳಿ, ಹಳದಿ, ಕೆಂಪು, ಕಪ್ಪು ಬಣ್ಣಗಳುಳ್ಳದ್ದಾಗಿ ನಾಲ್ಕು ವಿಧವಾಗಿದೆ. ಅದರಲ್ಲಿ ಗೋಪೀಚಂದನ, ಅರಿದಳ, ಸುವರ್ಣ ಇವುಗಳು ಪೀತಮೃತ್ತಿಕೆಯಲ್ಲಿ ಸೇರಿವೆ.

೬೪-೬೫. ಅರಗಿನ ರಸದಿಂದ ನಿರ್ಮಿತವಾದುದು ಮಸಿಯು. ಉಳಿದುದೆಲ್ಲವೂ ಸ್ಪಷ್ಟವಾಗಿವೆ. ಜ್ಞಾನಿಯು ಗೋಪೀಚಂದನದಿಂದ ಚದುರವಾಗಿ

ತನ್ಮಧ್ಯೇ ಮಾಹಿಷೇಣಾಥ ಕುರ್ಯಾನ್ಮೂರ್ತಿಂ ಹನೂಮತಃ ।
ಬೀಜಂ ಕ್ರೋಧಾಚ್ಚ ತತ್ಪುಚ್ಛಂ ಲಿಖೇನ್ಮಂತ್ರೀ ಸಮಾಹಿತಃ ॥ ೬೫ ॥

ತೈಲೇನ ಸ್ನಾಪಯೇನ್ಮೂರ್ತಿಂ ಗುಡೇನ ತಿಲಕಂ ಚರೇತ್ ।
ಶತಪತ್ರಸಮೋ ಧೂಪಃ ಶಾಲನಿರ್ಯಾಸಸಂಭವಃ ॥ ೬೬ ॥

ಕುರ್ಯಾಚ್ಚ ತೈಲದೀಪಂ ತು ವರ್ತಿಪಂಚಕಸಂಯುತಂ ।
ದಧ್ಯೋದನೇನ ನೈವೇದ್ಯಂ ದದ್ಯಾತ್ಸಾಧಕಸತ್ತಮಃ ॥ ೬೭ ॥

ವಾರತ್ರಯಂ ಕಂಠದೇಶೇ ಸಶೇಷವಿಷಮುದ್ಧರನ್ ।
ಏವಂ ಕೃತೇ ತು ನಷ್ಟಾನಾಂ ಮಹಿಷೀಣಾಂ ಗವಾಮಪಿ ॥ ೬೮ ॥

ದಾಸೀದಾಸಾದಿಕಾನಾಂ ಚ ನಷ್ಟಾನಾಂ ಪ್ರಾಪ್ತಿರೀರಿತಾ ।
ಚೋರಾದಿ ದುಷ್ಟಸತ್ವಾನಾಂ ಸರ್ಪಾದೀನಾಂ ಭಯೇ ಪುನಃ ॥ ೬೯ ॥

---

ಮಂಡಲ (ಮನೆ) ವನ್ನು ಉಲ್ಲೇಖಿಸಿ ಅದರ ಮಧ್ಯದಲ್ಲಿ ಎಮ್ಮೆಯ ಸಗಣಿಯಿಂದ ಹನುಮಂತನ ಮೂರ್ತಿಯನ್ನು ರಚಿಸಬೇಕು. ಮಂತ್ರಿಯು ಬೀಜಾಕ್ಷರವನ್ನೂ ಕ್ರೋಧದಿಂದ ವೃದ್ಧಿಹೊಂದಿದ ಅದರ ಬಾಲವನ್ನೂ ಸಮಾಧಾನಚಿತ್ತನಾಗಿ ಬರೆಯಬೇಕು.

೬೬. ಆ ಮೂರ್ತಿಗೆ ಎಣ್ಣೆಯಿಂದ ಸ್ನಾನಮಾಡಿಸಿ, ಬೆಲ್ಲದಿಂದ ತಿಲಕವನ್ನು ಹಚ್ಚಬೇಕು. ವೃಕ್ಷನಿರ್ಯಾಸಸಂಭೂತವಾದ ಧೂಪವು ಕಮಲಕ್ಕೆ ಸಮಾನವಾದುದು.

೬೭-೬೮. ಐದು ಬತ್ತಿಗಳಿಂದ ಸಹಿತವಾದ ತೈಲದೀಪವನ್ನು ಕಲ್ಪಿಸಬೇಕು. ಸಾಧಕವರ್ಯನು ಮೂರಾವರ್ತಿ ಕಂಠವಲ್ಲಿ ವಿಷವನ್ನು ಉದ್ಧರಿಸುವವನಾಗಿ ಮೊಸರನ್ನವನ್ನು ನೈವೇದ್ಯ ಮಾಡಬೇಕು.

೬೮-೬೯. ಈ ರೀತಿಯಾಗಿ ಮಾಡಿದರೆ ಕಳೆದುಹೋಗಿದ್ದ ಎಮ್ಮೆ, ಗೋವು, ದಾಸಿ, ದಾಸ ಮುಂತಾದುವುಗಳು ಸಿಗುವುವು ಎಂದು ಉಕ್ತವಾಗಿದೆ.

೬೯-೭೩. ಕಳ್ಳ ಮುಂತಾದ ದುಷ್ಟಪ್ರಾಣಿಗಳ ಮತ್ತು ಸರ್ಪ ಮುಂತಾದುವುಗಳ ಭಯವುಂಟಾದಾಗ ತಾಲಪತ್ರದಿಂದ ನಾಲ್ಕು ಬಾಗಿಲುಗಳುಳ್ಳ,

ತಾಲೇನ ಚ ಚತುರ್ದ್ವಾರಂ ಗೃಹಂ ಕೃತ್ವಾ ಸುಶೋಭನಂ ।
ಪೂರ್ವದ್ವಾರೇ ಗಜಃ ಸ್ಥಾಪ್ಯೋ ದಕ್ಷಿಣೇ ಮಹಿಷಸ್ತಥಾ ॥ ೭೦ ॥

ಸರ್ಪಸ್ತು ಪಶ್ಚಿಮೇ ದ್ವಾರೇ ವ್ಯಾಘ್ರಶ್ಚೈವೋತ್ತರೇ ತಥಾ ।
ಏವಂ ಕ್ರಮೇಣ ಖಡ್ಗಂ ಚ ಕ್ಷುರಿಕಾದಂಡಮುದ್ಗರಾನ್ ॥ ೭೧ ॥

ವಿಲಿಖ್ಯ ಮಧ್ಯೇ ಮೂರ್ತಿಂ ಚ ಮಹಿಷೀಗೋಮಯೇನ ವೈ ।
ಕೃತ್ವಾ ಡಮರುಹಸ್ತಾಂ ಚ ಚಕಿತಾಕ್ಷೀಂ ಪ್ರಯತ್ನತಃ ॥ ೭೨ ॥

ಪಯಸಾ ಸ್ನಾಪನಂ ರಕ್ತಚಂದನೇನಾನುಲೇಪನಂ ।
ಜಾತೀಪುಷ್ಪೈಸ್ತು ಸಂಪೂಜ್ಯ ಶುದ್ಧಧೂಪಂ ಪ್ರಕಲ್ಪಯೇತ್ ॥ ೭೩ ॥

ಘೃತೇನ ದೀಪಂ ದತ್ವಾಽಥ ಪಾಯಸಾನ್ನಂ ನಿವೇದಯೇತ್ ।
ಗಗನಂ ದೀಪಕೇಂದ್ವಾಢ್ಯಂ ಚಾಸ್ತ್ರಂ ಚ ಪುರತೋ ಜಪೇತ್ ॥ ೭೪ ॥

ಏವಂ ಸಪ್ತದಿನಂ ಕೃತ್ವಾ ಮುಚ್ಯತೇ ಮಹತೋ ಭಯಾತ್ ।
ಅನಯೋರ್ಭೌಮವಾರೇ ತು ಕುರ್ಯಾದಾರಂಭಮಾದರಾತ್ ॥ ೭೫ ॥

---

ಮಂಗಲಕರವಾದ ಮನೆಯನ್ನು ರಚಿಸಿ, ಪೂರ್ವಬಾಗಿಲಿನಲ್ಲಿ ಆನೆಯನ್ನೂ, ದಕ್ಷಿಣದಲ್ಲಿ ಕೋಣವನ್ನೂ, ಪಶ್ಚಿಮದಲ್ಲಿ ಸರ್ಪವನ್ನೂ, ಉತ್ತರದಲ್ಲಿ ಹುಲಿಯನ್ನೂ ಬರೆದು, ಇದೇ ಕ್ರಮದಿಂದ ಕತ್ತಿ, ಚೂರಿ, ದಂಡ ಮತ್ತು ಕಬ್ಬಿಣದ ಕುಸುಮಾರಿ ಇವುಗಳನ್ನು ಬರೆದು ಮಧ್ಯದಲ್ಲಿ ಎಮ್ಮೆಯ ಸಗಣಿಯಿಂದ ಕೈಯಲ್ಲಿ ಡಮರು, ಚಕಿತವಾದ ಕಣ್ಣು, ಇವುಗಳುಳ್ಳ ವಿಗ್ರಹವನ್ನು ಬರೆದು, ಹಾಲಿನಿಂದ ಅಭಿಷೇಕಮಾಡಿ, ಕೆಂಪುಗಂಧವನ್ನು ಲೇಪಿಸಿ, ಜಾಜೀಹೂವುಗಳಿಂದ ಪೂಜೆಮಾಡಿ ನಿರ್ಮಲವಾದ ಧೂಪಹಾಕಬೇಕು.

೭೪. ತುಪ್ಪದ ದೀಪವನ್ನು ಸಮರ್ಪಿಸಿ, ಬಳಿಕ ಪಾಯಸಾನ್ನವನ್ನು ನಿವೇದಿಸಬೇಕು. ಅದರ ಮುಂದೆ "ಹೂಂ ಫಟ್" ಎಂಬುದಾಗಿ ಜಪಿಸಬೇಕು.

೭೫. ಈ ಪ್ರಕಾರ ಏಳು ದಿನಗಳು ಮಾಡಿದರೆ ಮಹಾಭಯವು ಪರಿಹಾರವಾಗುವುದು. ಈ ಎರಡು ವಿಧಾನಗಳನ್ನೂ ಮಂಗಳವಾರದ ದಿನ ಭಕ್ತಿಯಿಂದ ಪ್ರಾರಂಭಿಸಬೇಕು.

ಶತ್ರುಸೇನಾಭಯೇ ಪ್ರಾಪ್ತೇ ಗೈರಿಕೇಣ ತು ಮಂಡಲಂ ।
ಕೃತ್ವಾ ತದಂತರೇ ತಾಲಮೀಷನ್ನಮ್ರಂ ಸಮಾಲಿಖೇತ್ ॥ ೭೬ ॥

ತತ್ರಾವಲಂಬಮಾನಾಂ ಚ ಪ್ರತಿಮಾಂ ಗೋಮಯೇನ ತು ।
ವಾಮಹಸ್ತೇನ ತಾಲಾಗ್ರಂ ದಕ್ಷಿಣೇ ಜ್ಞಾನಮುದ್ರಿಕಾ ॥ ೭೭ ॥

ತಾಲಾಮೂಲಾತ್ಸ್ವಕಾಷ್ಠಾಯಾಂ ಮಾರ್ಗೇ ಹಸ್ತಮಿತೇ ಗೃಹಂ ।
ಚತುರಸ್ರಂ ವಿಧಾಯಾಥ ತನ್ಮಧ್ಯೇ ಮೂರ್ತಿಮಾಲಿಖೇತ್ ॥ ೭೮ ॥

ದಕ್ಷಿಣಾಭಿಮುಖೀಂ ರಮ್ಯಾಂ ಹೃದಯೇ ವಿಹಿತಾಂಜಲಿಂ ।
ತೋಯೇನ ಸ್ನಾನಗಂಧಾದಿ ಯಥಾಸಂಭವಮರ್ಪಯೇತ್ ॥ ೭೯ ॥

ಕೃಶರಾನ್ನಂ ಚ ನೈವೇದ್ಯಂ ಸಾಜ್ಯಂ ತಸ್ಯೈ ನಿವೇದಯೇತ್ ।
ಕಿಲಿದ್ವಯಂ ಜಪಂ ಪ್ರೋಕ್ತಮೇವಂ ಕುರ್ಯಾದ್ದಿನೇದಿನೇ ॥ ೮೦ ॥

---

೭೬. ಶತ್ರುಸೈನ್ಯದಿಂದ ಭಯವು ಸಂಭವಿಸಿದಾಗ ಗೈರಿಕಧಾತು ಅಥವಾ ಸುವರ್ಣದಿಂದ ಮಂಡಲವನ್ನು ರಚಿಸಿ ಅದರಲ್ಲಿ ಸ್ವಲ್ಪ ಬಗ್ಗಿರುವ ತಾಲವೃಕ್ಷಾಕೃತಿಯನ್ನು ಬರೆಯಬೇಕು.

೭೭. ಆ ತಾಲವೃಕ್ಷದಲ್ಲಿ ಬಲಗೈಯಲ್ಲಿ ಜ್ಞಾನಮುದ್ರೆಯನ್ನೂ, ಎಡಗೈಯಲ್ಲಿ ತಾಳವೃಕ್ಷದ ಅಗ್ರಭಾಗವನ್ನೂ ಹಿಡಿದು ಜೋಲುತ್ತಿರುವ ಹನುಮಂತನ ವಿಗ್ರಹವನ್ನು ಬರೆಯಬೇಕು.

೭೮-೭೯. ತಾಳವೃಕ್ಷದ ಬುಡದಲ್ಲಿ ಹಸ್ತ ಪರಿಮಿತಪ್ರದೇಶದಲ್ಲಿ ಚತುರಸ್ರವಾದ ಗೃಹವನ್ನು ರಚಿಸಿ, ಅದರ ಮಧ್ಯದಲ್ಲಿ ಹೃದಯಸ್ಥಾನದಲ್ಲಿ ಅಂಜಲಿಬದ್ಧವುಳ್ಳ, ಮನೋಹರವಾದ ದಕ್ಷಿಣಾಭಿಮುಖಮೂರ್ತಿಯನ್ನು ಬರೆಯಬೇಕು. ಅದನ್ನು ನೀರಿನಿಂದ ಸ್ನಾನಮಾಡಿಸಿ ಉಚಿತವಾದ ಗಂಧಾದಿಗಳನ್ನು ಸಮರ್ಪಿಸಬೇಕು.

೮೦-೮೧. ಕೃಶರಾನ್ನ (ಚಿತ್ರಾನ್ನ) ಮತ್ತು ತುಪ್ಪವನ್ನು ನೈವೇದ್ಯ ಮಾಡಬೇಕು. "ಕಿಲಿಕಿಲಿ" ಎಂದು ಜಪವನ್ನು ಮಾಡಬೇಕು.

ಏವಂ ಕೃತೇ ಭವೇಚ್ಛೀಘ್ರಂ ಪಥಿಕಾನಾಂ ಸಮಾಗಮಃ |
ಶ್ಯಾಮಪಾಷಾಣಖಂಡೇನ ಲಿಖಿತ್ವಾ ಭೂಪತೇರ್ಗೃಹಂ || ೮೧ ||
ಪ್ರಾಕಾರಂ ತು ಚತುರ್ದ್ವಾರಯುಕ್ತಂ ದ್ವಾರೇಷು ತತ್ರ ವೈ |
ಅನ್ಯೋನ್ಯಪುಚ್ಛಪರಿಧಿತ್ರಯಯುಕ್ತಾಂ ಹನೂಮತಃ || ೮೨ ||
ಕುರ್ಯಾನ್ಮೂರ್ತಿಂ ಗೋಮಯೇನ ಧತ್ತೂರಕುಸುಮೈರ್ಯಜೇತ್ |
ಜಟಾಮಾಂಸೀಭವಂ ಧೂಪಂ ತೈಲಾಕ್ತಘೃತದೀಪಕಂ || ೮೩ ||
ನೈವೇದ್ಯಂ ತಿಲತೈಲಾಕ್ತಸಕ್ಷಾರಾ ಮಾಷರೋಟಿಕಾ |
ಧ್ಯೇಯೋ ದಕ್ಷಿಣಹಸ್ತೇನ ರೋಟಿಕಾಂ ಭಕ್ಷಯನ್ಹರಿಃ || ೮೪ ||
ವಾಮಹಸ್ತೇನ ಪಾಷಾಣೈಸ್ತ್ರಾಸಯನ್ ಪರಸೈನಿಕಾನ್ |
ಮಾರಯನ್ಭ್ರುಕುಟೀಂ ಬದ್ಧ್ವಾ ಭೀಷಯನ್ಮಥಯನ್ಸ್ಥಿತಃ || ೮೫ ||

---

ಈ ಪ್ರಕಾರ ಪ್ರತಿದಿನವೂ ಮಾಡಬೇಕು. ಈ ರೀತಿ ಮಾಡುತ್ತಿದ್ದರೆ ಶೀಘ್ರವಾಗಿ ಪ್ರಯಾಣಹೊರಟಿದ್ದವರ ಸಮಾಗಮವಾಗುವುದು.

೮೧-೮೩. ಶ್ಯಾಮ ವರ್ಣದ ಕಲ್ಲಿನ ಚೂರಿನಿಂದ ರಾಜಗೃಹವನ್ನು ಬರೆದು, ನಾಲ್ಕು ದ್ವಾರಗಳಿಂದ ಸಹಿತವಾದ ಪ್ರಾಕಾರವನ್ನು ರಚಿಸಿ, ಆದ್ವಾರಗಳಲ್ಲಿ ಪರಸ್ಪರ ಬಾಲಗಳ ಮೂರು ಸುತ್ತುಗಳಿಂದ ಸಹಿತವಾದ ಹನುಮಂತನ ಮೂರ್ತಿಯನ್ನು ಗೋಮಯದಿಂದ ಮಾಡಿ ಆ ಮೂರ್ತಿಯನ್ನು ದತ್ತೂರಿಹೂವುಗಳಿಂದ ಪೂಜಿಸಬೇಕು.

೮೩-೮೪. ಜಟಾಮಾಂಸಿಯ ಧೂಪವನ್ನೂ, ಎಣ್ಣೆ ಮಿಶ್ರವಾದ ತುಪ್ಪದ ದೀಪವನ್ನೂ, ಉಪ್ಪುಹಾಕಿದ ಎಳ್ಳೆಣ್ಣೆಯಲ್ಲಿ ಕರೆದ ಉದ್ದಿನ ರೊಟ್ಟಿಯ (ವಡೆ) ನೈವೇದ್ಯವನ್ನೂ ಸಮರ್ಪಿಸಬೇಕು.

೮೪-೮೫. ಬಲಗೈಯಿಂದ ಆ ರೊಟ್ಟಿಯನ್ನು ತಿನ್ನುತ್ತಿರುವ, ಎಡಗೈಯಿಂದ ಕಲ್ಲುಗಳಿಂದ ಹೊಡೆದು ಶತ್ರುಸೈನಿಕರನ್ನು ಕೊಲ್ಲುತ್ತಿರುವ, ಹುಬ್ಬುಗಂಟಿಕ್ಕಿಕೊಂಡು ಶತ್ರುವನ್ನು ಭಯಪಡಿಸಿ ಮರ್ದನಮಾಡುತ್ತಿರುವ ಕಪಿಯನ್ನು ಧ್ಯಾನಿಸಬೇಕು.

ಜಪೇಚ್ಚ ಭುಗ್ಭುಗಿತಿ ವೈ ಸಹಸ್ರಂ ಧ್ಯಾನತತ್ಪರಃ ।
ಏವಂ ಕೃತವಿಧಾನೇನ ಪರಸೈನ್ಯಂ ವಿನಾಶಯೇತ್ || ೮೬ ||

ರಕ್ಷಾ ಭವತಿ ದುರ್ಗಾಣಾಂ ಸತ್ಯಂ ಸತ್ಯಂ ನ ಸಂಶಯಃ ।
ಪ್ರಯೋಗಾ ಬಹವಸ್ತತ್ರ ಸಂಕ್ಷೇಪಾದ್ಗದಿತಾ ಮಯಾ || ೮೭ ||

ಪ್ರತ್ಯಹಂ ಯೋ ವಿಧಾನೇನ ದೀಪದಾನಂ ಹನೂಮತಃ ।
ತಸ್ಯ ಸಾಧ್ಯಂ ನ ವೈ ಕಿಂಚಿದ್ವಿದ್ಯತೇ ಭುವನತ್ರಯೇ || ೮೮ ||

ನ ದೇಯಂ ದುಷ್ಟಹೃದಯೇ ದುಷ್ಟಚಿಂತನಬುದ್ಧಯೇ ।
ಅವಿನೀತಾಯ ಶಿಷ್ಯಾಯ ಪಿಶುನಾಯ ಕದಾಚನ || ೮೯ ||

ಕೃತಘ್ನಾಯ ನ ದಾತವ್ಯಂ ದಾತವ್ಯಂ ಚ ಪರೀಕ್ಷಿತೇ ।
ಬಹುನಾ ಕಿಮಿಹೋಕ್ತೇನ ಸರ್ವಂ ದದ್ಯಾತ್ಕಪೀಶ್ವರಃ || ೯೦ ||

---

೮೬-೮೭. ಧ್ಯಾನದಲ್ಲಿ ಆಸಕ್ತನಾಗಿ "ಭುಗ್ ಭುಗ್" ಎಂಬುದಾಗಿ ಒಂದು ಸಾವಿರ ಜಪಮಾಡಬೇಕು. ಈ ವಿಧಾನವನ್ನಾಚರಿಸಿದವನು ಶತ್ರುಸೈನ್ಯವನ್ನು ನಾಶಪಡಿಸುವನು. ದುರ್ಗಗಳಿಗೆ ರಕ್ಷಕನಾಗುವನು. ನಿಜ, ನಿಜ, ಸಂದೇಹವಿಲ್ಲ. ಇವೇ ಮುಂತಾಗಿ ವಿಧಾನಗಳು ಬಹಳವಾಗಿವೆ. ಅವನ್ನು ನಿನಗೆ ಸಂಕ್ಷೇಪವಾಗಿ ಹೇಳಿರುವೆನು.

೮೮. ಪ್ರತಿದಿನವೂ ವಿಧಾನೋಕ್ತಪ್ರಕಾರ ಹನುಮದ್ದೀಪದಾನಮಾಡುವವನು ಮೂರು ಲೋಕಗಳಲ್ಲಿ ಎಲ್ಲವನ್ನೂ ಸಾಧಿಸುವನು. ಅವನಿಗೆ ಅಸಾಧ್ಯವಾದುದು ಯಾವುದೂ ಇರುವುದಿಲ್ಲ.

೮೯ ೯೦. ಕಲುಷಿತಚಿತ್ತನೂ, ದುರಾಲೋಚನೆಮಾಡುವವನೂ, ಅವಿನೀತನಾದ ಶಿಷ್ಯ, ಚಾಡಿಕೋರ ಮತ್ತು ಕೃತಘ್ನನೂ ಆದವನಿಗೆ ಈ ಮಂತ್ರವನ್ನು ಯಾವಾಗಲೂ ಉಪದೇಶಿಸಬಾರದು. ಪರೀಕ್ಷಿಸಿ ಯೋಗ್ಯನಾದವನಿಗೇ ಉಪದೇಶಿಸಬೇಕು. ಹೆಚ್ಚು ಹೇಳುವುದೇನು! ಕಪೀಶ್ವರನು ಉಪಾಸಕನಿಗೆ ಸಕಲೇಷ್ಟಾರ್ಥಗಳನ್ನೂ ಕೊಡುವನು.

ಅಥ ಮಂತ್ರಾಂತರಂ ವಕ್ಷ್ಯೇ ತತ್ತ್ವಜ್ಞಾನಪ್ರದಾಯಕಂ |
ತಾರೋ ನಮೋ ಹನುಮತೇ ಜಾಠರತ್ರಯಮೀರಯೇತ್ || ೯೧ ||

ದನಕ್ಷೋಭಂ ಸಮಾಭಾಷ್ಯ ಸಂಹರದ್ವಯಮೀರಯೇತ್ |
ಆತ್ಮತತ್ತ್ವಂ ತತಃ ಪಶ್ಚಾತ್ಪ್ರಕಾಶಯಯುಗಂ ತತಃ || ೯೨ ||

ವರ್ಮಾಸ್ತ್ರವಹ್ನಿಜಾಯಾಂತಃ ಸಾರ್ಧಷಡ್ವಿಂಶದರ್ಣವಾನ್ |
ವಸಿಷ್ಠೋಽಸ್ಯ ಮುನಿಶ್ಛಂದೋಽನುಷ್ಟುಪ್ ಚ ದೇವತಾ ಪುನಃ || ೯೩ ||

ಹನುಮಾನ್ಮುನಿಸಪ್ತರ್ತುವೇದಾಷ್ಟನಿಗವೈಃ ಕ್ರಮಾತ್ |
ಮಂತ್ರಾರ್ಣೈಶ್ಚ ಷಡಗಾನಿ ಕೃತ್ವಾ ಧ್ಯಾಯೇತ್ಕಪೀಶ್ವರಂ || ೯೪ ||

ಜಾನುಸ್ಥವಾಮಬಾಹುಂ ಚ ಜ್ಞಾನಮುದ್ರಾಪರಂ ಹೃದಿ |
ಅಧ್ಯಾತ್ಮಚಿತ್ತಮಾಸೀನಂ ಕದಲೀವನಮಧ್ಯಗಂ || ೯೫ ||

---

೯೧-೯೩. ಈಗ ತತ್ತ್ವಜ್ಞಾನದಾಯಕವಾದ ಬೇರೆ ಮಂತ್ರವನ್ನು ಹೇಳುವೆನು :—(ಜಾಠರತ್ರಯಂ= ಮಲಪ, ತಾರ= ಓಂ) "ಓಂ ನಮೋ ಹನುಮತೇ ಮಲಪದನಕ್ಷೋಭಂ ಸಂಹರ ಸಂಹರ ಆತ್ಮತತ್ತ್ವಂ ಪ್ರಕಾಶಯ ಪ್ರಕಾಶಯ ಹುಂ ಫಟ್ ಸ್ವಾಹಾ" ಇದು ಮೂವತ್ತಾರೂವರೆ ಅಕ್ಷರಗಳನ್ನೊಳಗೊಂಡಿರುವ ಮಂತ್ರವು.

೯೩-೯೪. ಇದಕ್ಕೆ ವಸಿಷ್ಠನು ಋಷಿಯು, ಅನುಷ್ಟುಪ್ ಛಂದಸ್ಸು, ಹನುಮಂತನೇ ದೇವತೆ. ಕ್ರಮವಾಗಿ ಈ ಮಂತ್ರದ 7, 7, 6, 4, 8, 4 ವರ್ಣಗಳಿಂದ ಷಡಂಗಗಳನ್ನು ನ್ಯಾಸಮಾಡಿ ಕಪೀಶ್ವರನನ್ನು ಧ್ಯಾನಿಸಬೇಕು.

೯೫-೯೬. ಮೊಳಕಾಲುಗಳ ಮೇಲೆ ಎಡತೋಳನ್ನು ಇಟ್ಟುಕೊಂಡಿರುವ, ಜ್ಞಾನಮುದ್ರೆಯಿಂದ ಯುಕ್ತವಾದ ಬಲಗೈಯನ್ನು ಹೃದಯದಲ್ಲಿ ಇಟ್ಟಿರುವ, ಬಾಳೆಯ ವನ ಮಧ್ಯದಲ್ಲಿ ಅಧ್ಯಾತ್ಮ ಚಿಂತಾಪರನಾಗಿ ಕುಳಿತಿರುವ, ಕೋಟಿ ಬಾಲಸೂರ್ಯರಂತೆ ಹೊಳೆಯುತ್ತಿರುವ, ಜ್ಞಾನದಾಯಕನಾದ ಹನುಮಂತ

ಬಾಲಾರ್ಕಕೋಟಿಪ್ರತಿಮಂ ಧ್ಯಾಯೇತ್ ಜ್ಞಾನಪ್ರದಂ ಹರಿಂ ।
ಧ್ಯಾತ್ವೇವ ಪ್ರಜಪೇಲ್ಲಕ್ಷಂ ದಶಾಂಶಂ ಜುಹುಯಾತ್ತಿಲೈಃ ॥ ೯೬ ॥

ಸಾಜ್ಯೈಃ ಸಂಪೂಜಯೇತ್ಪೀಠೇ ಪೂರ್ವೋಕ್ತೇ ಪೂರ್ವವತ್ಪ್ರಭುಂ ।
ಜಪ್ತೋಯಂ ಮದನಕ್ಷೋಭಂ ನಾಶಯೇತ್ಯೇವ ನಿಶ್ಚಿತಂ ॥ ೯೭ ॥

ತತ್ವಜ್ಞಾನಮವಾಪ್ನೋತಿ ಕಪೀಂದ್ರಸ್ಯ ಪ್ರಸಾದತಃ ।
ಅಥ ಮಂತ್ರಾಂತರಂ ವಕ್ಷ್ಯೇ ಭೂತವಿದ್ರಾವಣಂ ಪರಂ ॥ ೯೮ ॥

ತಾರಃ ಕಾಶೀಕುಕ್ಷಿಪರವರಾಹಶ್ಚಾಂಜನೀಪದಂ ।
ಪವನೋ ವರಪುತ್ರಾಂತೇ ಆವೇಶಿದ್ವಯಮೀರಯೇತ್ ॥ ೯೯ ॥

ತಾರಃ ಶ್ರೀಹನುಮತ್ಪಶ್ಚಾದಸ್ತ್ರಂ ಪಂಚಭುಜಾಕ್ಷರಃ ।
ಬ್ರಹ್ಮಾ ಮುನಿಸ್ಯಾದ್ಗಾಯತ್ರೀ ಛಂದೋತ್ರ ದೇವತಾ ಪುನಃ ॥ ೧೦೦ ॥

---

ನನ್ನು ಧ್ಯಾನಿಸಬೇಕು. ಈ ಪ್ರಕಾರ ಧ್ಯಾನಿಸಿ ಒಂದು ಲಕ್ಷ ಜಪಮಾಡಿ ಘೃತ ಸಹಿತವಾದ ಎಳ್ಳುಗಳಿಂದ ಹತ್ತುಸಾವಿರ ಹೋಮ ಮಾಡಬೇಕು.

೯೭-೯೮. ಹಿಂದೆ ಹೇಳಿದ ಪೀಠದಲ್ಲಿ ಆಂಜನೇಯಸ್ವಾಮಿಯನ್ನು ಪೂರ್ವೋಕ್ತರೀತಿಯಿಂದ ಪೂಜಿಸಬೇಕು. ಈ ರೀತಿ ಮಂತ್ರವನ್ನು ಜಪಿಸಿದರೆ ಮದನಬಾಧೆಯು ಖಂಡಿತ ನಾಶವಾಗುವುದು. ಕಪಿವರನ ಅನುಗ್ರಹದಿಂದ ತತ್ವಜ್ಞಾನವು ಲಭಿಸುತ್ತದೆ.

೯೮-೧೦೦. ಈಗ ಭೂತೋಚ್ಚಾಟನೆ ಮಾಡಿಸುವ ಮಂತ್ರವನ್ನು ಹೇಳುತ್ತೇನೆ :—(ತಾರ= ಓಂ, ಕಾಶೀ= ಆ, ಪರಂ= ಂ, ವರಾಹ= ಹ) "ಓಂ ಆಂ ಹಂ ಅಂಜನೀಪವನವರಪುತ್ರ ಆವೇಶಿ ಆವೇಶಿ ಓಂ ಶ್ರೀ ಹನುಮನ್ ಫಟ್" ಎಂಬುದು ಇಪ್ಪತ್ತೈದು ಅಕ್ಷರಗಳ ಮಂತ್ರವು.

೧೦೦-೧೦೧. ಇದಕ್ಕೆ ಬ್ರಹ್ಮನೇ ಋಷಿಯು. ಗಾಯತ್ರೀ ಛಂದಸ್ಸು. ಹನುಮಂತನೇ ದೇವತೆ. "ಶ್ರೀಂ" ಎಂಬುದು ಬೀಜ. "ಫಟ್"

ಹನುಮಾನ್ಕಮಲಾಬೀಜಂ ಫಟ್ ಶಕ್ತಿಃ ಪರಿಕೀರ್ತಿತಾ ।
ಷಡ್ದೀರ್ಘಾಢ್ಯೇನ ಬೀಜೇನ ಷಡಂಗಾನಿ ಸಮಾಚರೇತ್ ॥ ೧೦೧ ॥
ಆಂಜನೇಯಂ ಪಾಟಲಾಸ್ಯಂ ಸ್ವರ್ಣಾದ್ರಿಸಮವಿಗ್ರಹಂ ।
ಪಾರಿಜಾತದ್ರುಮಮೂಲಸ್ಥಂ ಚಿಂತಯೇತ್ಸಾಧಕೋತ್ತಮಃ ॥ ೧೦೨ ॥
ಏವಂ ಧ್ಯಾತ್ವಾ ಜಪೇಲ್ಲಕ್ಷಂ ದಶಾಂಶಂ ಜುಹುಯಾತ್ತಿಲೈಃ ।
ತ್ರಿಮಧ್ವಕ್ತೈರ್ಯಜೇತ್ಪೀಠೇ ಪೂರ್ವೋಕ್ತೇ ಪೂರ್ವವತ್ಸುಧೀಃ ॥ ೧೦೩ ॥
ಅನೇನ ಮನುನಾ ಮಂತ್ರೀ ಗ್ರಹಗ್ರಸ್ತಂ ಪ್ರಮಾರ್ಜಯೇತ್ ।
ಆಕ್ರಂದಂಸ್ತಂ ವಿಮುಚ್ಯಾಥ ಗ್ರಹಃ ಶೀಘ್ರಂ ಪಲಾಯತೇ ॥ ೧೦೪ ॥
ಮನವೋಮೀ ಸದಾ ಗೋಪ್ಯಾ ನ ಪ್ರಕಾಶ್ಯಾಃ ಯತಸ್ತತಃ ।
ಪರೀಕ್ಷಿತಾಯ ಶಿಷ್ಯಾಯ ದೇಯಾ ವಾ ನಿಜಸೂನವೇ ॥ ೧೦೫ ॥

---

ಎಂಬುದು ಶಕ್ತಿ. ಆರು ದೀರ್ಘಗಳಿಂದ ಸಹಿತವಾದ ಬೀಜಗಳಿಂದ ಷಡಂಗಗಳ ನ್ಯಾಸವನ್ನಾಚರಿಸಬೇಕು.

೧೦೨. ಬಿಳುಪು ಮಿಶ್ರವಾದ ಕೆಂಪುಬಣ್ಣದ ಮುಖವುಳ್ಳ, ಸುವರ್ಣ ಪರ್ವತದಂತಿರುವ ಶರೀರವುಳ್ಳ ಪಾರಿಜಾತವೃಕ್ಷದಡಿಯಲ್ಲಿರುವ ಆಂಜನೇಯ ನನ್ನು ಸಾಧಕವರ್ಯನು ಧ್ಯಾನಿಸಬೇಕು.

೧೦೩. ಈ ಪ್ರಕಾರ ಧ್ಯಾನಿಸಿ ಒಂದು ಲಕ್ಷ ಜಪಮಾಡಿ, ಮಧುತ್ರಯ ಯುಕ್ತವಾದ ಎಳ್ಳುಗಳಿಂದ ಹತ್ತುಸಾವಿರ ಹೋಮಗಳನ್ನು ಮಾಡಬೇಕು. ಬಳಿಕ ಪೂರ್ವೋಕ್ತಪೀಠದಲ್ಲಿ ಹಿಂದೆ ಹೇಳಿದ ಪ್ರಕಾರ ಪೂಜಿಸಬೇಕು.

೧೦೪. ಮಂತ್ರಿಯು ಈ ಮಂತ್ರದಿಂದ ಗ್ರಹಹಿಡಿದಿರುವವನಿಗೆ ಮಾರ್ಜನೆ ಮಾಡಬೇಕು. ಹಾಗೆ ಮಾಡಿದರೆ ಗ್ರಹವು ಅಳುತ್ತಾ ಅವನನ್ನು ಬಿಟ್ಟು ಬೇಗ ಓಡಿಹೋಗುತ್ತದೆ.

೧೦೫. ಈ ಮಂತ್ರಗಳನ್ನು ಯಾವಾಗಲೂ ರಹಸ್ಯವಾಗಿ ಇಟ್ಟಿರಬೇಕು. ಎಲ್ಲಿಯೂ ಪ್ರಕಾಶಪಡಿಸಬಾರದು. ಗುಣಶೀಲಾದಿಗಳನ್ನು ಪರೀಕ್ಷಿಸಿ ಸಚ್ಛಿಷ್ಯ ಅಥವಾ ಮಗನಿಗೆ ಮಾತ್ರ ಈ ಮಂತ್ರಗಳನ್ನು ಉಪದೇಶಿಸಬೇಕು.

**ಹನುಮದ್ಭಜನಾಸಕ್ತಃ ಕಾರ್ತವೀರ್ಯಾರ್ಜುನಂ ಸುಧೀಃ |**
**ವಿಶೇಷತಃ ಸಮಾರಾಧ್ಯ ಯಥೋಕ್ತಂ ಫಲಮಾಪ್ನುಯಾತ್ || ೧೦೬ ||**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ದೀಪವಿಧಿನಿರೂಪಣಂ ನಾಮ ಪಂಚಸಪ್ತತಿತಮೋಽಧ್ಯಾಯಃ**

---

೧೦೬. ಹನುಮಂತನ ಭಜನೆಯಲ್ಲಿ ಆಸಕ್ತನಾದ ಜ್ಞಾನಿಯು ಕಾರ್ತವೀರ್ಯಾರ್ಜುನನನ್ನು ವಿಶೇಷವಾಗಿ ಆರಾಧಿಸಿ ವಿಧಾನೋಕ್ತಫಲವನ್ನು ಪಡೆಯಬೇಕು.

.ಇಂತು ಶ್ರೀನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ಮೂರನೆಯ ಪಾದದಲ್ಲಿ ದೀಪವಿಧಿನಿರೂಪಣವೆಂಬ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.

## ಕಥಾಸಂಗ್ರಹ

ಹನುಮದ್ದೀಪವಿಧಾನವು ಸಪರಿಕರವಾಗಿ ನಿರೂಪಿಸಲ್ಪಟ್ಟಿದೆ. ದೀಪಪಾತ್ರೆಗಳ ಪರಿಮಾಣ, ಭಿನ್ನ ಭಿನ್ನ ತೈಲಗಳ ದೀಪದಾನದ ಫಲವಿಶೇಷ, ಬತ್ತಿಯರಚನಾಪ್ರಕಾರ, ಸನ್ನಿಧಾನವಿಶೇಷದಿಂದ ದೀಪದಾನದ ಫಲಬೇಧ ಇತ್ಯಾದಿಗಳನ್ನು ಹೇಳಿ ಬಳಿಕ ಜ್ಞಾನಪ್ರದವಾದ ಮೂವತ್ತಾರೂವರೆ ಅಕ್ಷರಗಳ ಮಂತ್ರ ಮತ್ತು ಶತ್ರೂಚ್ಚಾಟನೆಯನ್ನು ಮಾಡಿಸುವ ಇಪ್ಪತ್ತೈದು ಅಕ್ಷರಗಳ ಮಂತ್ರವನ್ನೂ ಸಪರಿಕರವಾಗಿ ಹೇಳಿದೆ.



# ಷಟ್ ಸಪ್ತತಿತಮೋಽಧ್ಯಾಯಃ

ನಾರದ ಉವಾಚ

ಕಾರ್ತವೀರ್ಯಪ್ರಭೃತಯೋ ನೃಪಾ ಬಹುವಿಧಾ ಭುವಿ ।
ಜಾಯಂತೇಥ ಪ್ರಲೀಯಂತೇ ಸ್ವಸ್ವಕರ್ಮಾನುಸಾರತಃ ॥ ೧ ॥

ತತ್ಕಥಂ ರಾಜವರ್ಯೋಽಸೌ ಲೋಕೇ ಸೇವ್ಯತ್ವಮಾಗತಃ ।
ಸಮುಲ್ಲಂಘ್ಯ ನೃಪಾನನ್ಯಾನೇತನ್ಮೇ ನುದ ಸಂಶಯಂ ॥ ೨ ॥

ಸನತ್ಕುಮಾರ ಉವಾಚ

ಶೃಣು ನಾರದ ವಕ್ಷ್ಯಾಮಿ ಸಂದೇಹವಿನಿವೃತ್ತಯೇ ।
ತಥಾ ಸೇವ್ಯತ್ವಮಾಪನ್ನಃ ಕಾರ್ತವೀರ್ಯಾರ್ಜುನೋ ಭುವಿ ॥ ೩ ॥

---

## ಎಪ್ಪತ್ತಾರನೆಯ ಅಧ್ಯಾಯವು

೧. ಭೂಲೋಕದಲ್ಲಿ ಕಾರ್ತವೀರ್ಯಮುಂತಾದ ಅನೇಕ ರಾಜರು ತಮ್ಮ ತಮ್ಮ ಕರ್ಮಾನುಸಾರವಾಗಿ ಹುಟ್ಟಿ ಮಡಿಯುತ್ತಿರುವರು.

೨. ಅವರೆಲ್ಲರಲ್ಲಿಯೂ ಕಾರ್ತವೀರ್ಯಾರ್ಜುನನು ಇತರ ರಾಜರನ್ನೆಲ್ಲಾ ಮೀರಿ ಲೋಕದಲ್ಲಿ ಪೂಜ್ಯತೆಯನ್ನು ಹೇಗೆ ಹೊಂದಿದನು? ನನ್ನ ಈ ಸಂಶಯವನ್ನು ಪರಿಹರಿಸು ಎಂಬುದಾಗಿ ನಾರದನು ಸನತ್ಕುಮಾರನನ್ನು ಕೇಳಿದನು.

೩. ಸನತ್ಕುಮಾರನು ಹೇಳಿದನು ;—ನಾರದನೇ! ಕೇಳು; ಭೂಲೋಕದಲ್ಲಿ ಕಾರ್ತವೀರ್ಯಾರ್ಜುನನು ಪೂಜ್ಯತೆಯನ್ನು ಹೊಂದಿದ ಬಗೆಯನ್ನು ಹೇಳಿ ನಿನ್ನ ಸಂಶಯವನ್ನು ಪರಿಹರಿಸುವೆನು.

**ಯಃ ಸುದರ್ಶನಚಕ್ರಸ್ಯಾವತಾರಃ ಪೃಥಿವೀತಲೇ ।**
**ದತ್ತಾತ್ರೇಯಂ ಸಮಾರಾಧ್ಯ ಲಬ್ಧವಾಂಸ್ತೇಜ ಉತ್ತಮಂ ॥ ४ ॥**

**ತಸ್ಯ ಕ್ಷಿತೀಶ್ವರೇಂದ್ರಸ್ಯ ಸ್ಮರಣಾದೇವ ನಾರದ ।**
**ಶತ್ರೂಂಜಯತಿ ಸಂಗ್ರಾಮೇ ನಷ್ಟಂ ಪ್ರಾಪ್ನೋತಿ ಸತ್ವರಂ ॥ ೫ ॥**

**ತೇನಾಸ್ಯ ಮಂತ್ರಪೂಜಾದಿ ಸರ್ವತಂತ್ರೇಷು ಗೋಪಿತಂ ।**
**ತುಭ್ಯಂ ಪ್ರಕಾಶಯಿಷ್ಯೇಽಹಂ ಸರ್ವಸಿದ್ಧಿಪ್ರದಾಯಕಂ ॥ ೬ ॥**

**ವಹ್ನಿತಾರಯುತಾ ರೌದ್ರೀ ಲಕ್ಷ್ಮೀರಗ್ನೀಂದುಶಾಂತಿಯುಕ್ ।**
**ವೇಧಾ ಧರೇಂದುಶಾಂತ್ಯಾಢ್ಯೋ ನಿದ್ರಾರ್ಘೀಶಾಗ್ನಿಬಿಂದುಯುಕ್ ॥ ೭ ॥**

---

೪. ಭೂಲೋಕದಲ್ಲಿ ಸುದರ್ಶನ ಚಕ್ರದ ಆವೇಶಾವತಾರನಾದ ಕಾರ್ತವೀರ್ಯಾರ್ಜುನನು ದತ್ತಾತ್ರೇಯನನ್ನು ಆರಾಧಿಸಿ ಉತ್ತಮ ತೇಜಸ್ಸನ್ನು ಪಡೆದನು.

೫. ನಾರದನೇ! ಆ ರಾಜಶ್ರೇಷ್ಠನ ಸ್ಮರಣೆಮಾತ್ರದಿಂದ ಯುದ್ಧದಲ್ಲಿ ಶತ್ರುಜಯವನ್ನು ಪಡೆಯುವನು ಮತ್ತು ಕಳೆದುಕೊಂಡ ವಸ್ತುವನ್ನು ತಿರುಗಿ ಹೊಂದುವನು.

೬. ಆದುದರಿಂದ ಈ ಕಾರ್ತವೀರ್ಯಾರ್ಜುನನ ಮಂತ್ರ, ಪೂಜಾ ವಿಧಾನಗಳೆಲ್ಲವನ್ನೂ ಸಕಲ ತಂತ್ರಗಳಲ್ಲಿಯೂ ರಹಸ್ಯವಾಗಿಟ್ಟಿದೆ ಸಕಲ ಸಿದ್ಧಿಪ್ರದವಾದ ಆ ಮಂತ್ರಾದಿಗಳನ್ನು ನಿನಗೆ ತಿಳಿಸುವೆನು.

೭-೯. (ತಾದ್ರೀ= ಫ, ವಹ್ನಿ= ರ, ತಾರ= ಓಂ, ಇವೆರಡರಿಂದ ಸಹಿತವಾದ ಫ= ಫ್ರೋಂ, ಅಗ್ನಿ= ರ, ಇಂದು= ಂ, ಶಾಂತಿ= ಈ, ಇವುಗಳಿಂದ ಸಹಿತವಾದ ಲಕ್ಷ್ಮೀ= ವ, ವ್ರೀಂ, ಧರೇಂದುಶಾಂತ್ಯಾಢ್ಯಃ= ಲ, ಂ, ಈ, ಇವುಗಳಿಂದ ಸಹಿತವಾದ ವೇಧಾ= ಕ= ಕ್ಲೀಂ, ಅರ್ಘಿಶಾಗ್ನಿಬಿಂದುಯುಕ್= ಊ, ರ, ಂ, ಇವುಗಳಿಂದ ಸಹಿತವಾದ ನಿದ್ರಾ= ಭ= ಭ್ರೂಂ,

**ಪಾಶೋ ಮಾಯಾಂಕುಶಂ ಪದ್ಮಾ ವರ್ಮಾಸ್ತ್ರೇ ಕಾರ್ತವೀಪದಂ ।**
**ರೇಫೋ ವಾಯ್ವಾಸನೋಽನಂತೋ ವಹ್ನಿಜೌ ಕರ್ಣಸಂಸ್ಥಿತೌ　　॥ ೮ ॥**

**ಮೇಷಃ ಸದೀರ್ಘಃ ಪವನೋ ಮನುರುಕ್ತೋ ಹೃದಂತಿಕಃ ।**
**ಊನವಿಂಶತಿವರ್ಣೋಽಯಂ ತಾರಾದಿರ್ನಖವರ್ಣಕಃ　　॥ ೯ ॥**

**ದತ್ತಾತ್ರೇಯೋಮುನಿಶ್ಚಾಸ್ಯ ಛಂದೋನುಷ್ಟುಬುದಾಹೃತಂ ।**
**ಕಾರ್ತವೀರ್ಯಾರ್ಜುನೋ ದೇವೋ ಬೀಜಶಕ್ತಿರ್ಧ್ರುವಶ್ಚ ಹೃತ್　॥ ೧೦ ॥**

**ಶೇಷಾಢ್ಯಬೀಜಯುಗ್ಮೇನ ಹೃದಯಂ ವಿನ್ಯಸೇದ್ಬುಧಃ ।**
**ಶಾಂತಿಯುಕ್ತಚತುರ್ಥೇನ ಕಾಮಾದ್ಯೇನ ಶಿರೋಂಗಕಂ　　॥ ೧೧ ॥**

**ಇಂದ್ವಾಢ್ಯಂ ವಾಮಕರ್ಣಾದ್ಯಮಾಯಯೋರ್ವೀಶಯುಕ್ತಯಾ ।**
**ಶಿಖಾಮಂಕುಶಪದ್ಮಾಭ್ಯಾಂ ಸವಾಗ್ಭ್ಯಾಂ ವರ್ಮವಿನ್ಯಸೇತ್　॥ ೧೨ ॥**

---

ಪಾಶ= ಆಂ, ಮಾಯಾ= ಹ್ರೀಂ, ಅಂಕುಶ= ಕ್ರೋಂ, ಪದ್ಮಾ= ಶ್ರೀಂ, ವರ್ಮ= ಹುಂ, ಅಸ್ತ್ರ= ಫಟ್ "ಕಾರ್ತವೀ" ಎಂಬುದು, ವಾಯ್ವಾಸನೋಂತ= ಯಾ ಎಂಬ ವರ್ಣದಿಂದ ಸಹಿತವಾದ ರೇಫ= ರ= ರ್ಯಾ, ಕರ್ಣಸಂಸ್ಥಿತೌ= ಉ ಎಂಬ ಅಕ್ಷರದಿಂದ ಸಹಿತವಾದ ವಹ್ನಿಜೌ= ಜರ= ಜುರ, ಸದೀರ್ಘೋಽಮೇಷಾ= ನಾ, ಪವನ= ಯ, ಹೃತ್= ನಮಃ, ತಾರ= ಓಂ) "ಓಂ ಫ್ರೋಂ ವ್ರೀಂ ಕ್ಲೀಂ ಭ್ರೂಂ ಆಂ ಹ್ರೀಂ ಕ್ರೋಂ ಶ್ರೀಂ ಹುಂ ಫಟ್ ಕಾರ್ತವಿರ್ಯಾರ್ಜುನಾಯ ನಮಃ" ಈ ಇಪ್ಪತ್ತು ವರ್ಣಗಳುಳ್ಳುದು ಕಾರ್ತವೀರ್ಯಾರ್ಜುನ ಮಂತ್ರವು.

೧೦. ಇದಕ್ಕೆ ದತ್ತಾತ್ರೇಯನು ಋಷಿ, ಅನುಷ್ಟುಪ್ ಛಂದಸ್ಸು, ಕಾರ್ತವೀರ್ಯಾರ್ಜುನನೇ ದೇವತೆ, ಓಂ ಎಂಬುದೇ ಬೀಜ, ನಮಃ ಎಂಬುದು ಶಕ್ತಿಯು.

೧೧-೧೩. (ಶೇಷ= ಆ) "ಆಂಫ್ರೋಂ ವ್ರೀಂ ಹೃದಯಾಯ ನಮಃ" ಎಂಬುದಾಗಿ ಹೃದಯವನ್ನೂ "ಈಂ ಕ್ಲೀಂ ಭ್ರೂಂ ಶಿರಸೇ ಸ್ವಾಹಾ" ಎಂದು

ವರ್ಮಾಸ್ತ್ರಾಭ್ಯಾಮಸ್ತ್ರಮುಕ್ತಂ ಶೇಷಾರ್ಣೈರ್ವ್ಯಾಪಕಂ ಪುನಃ ।
ಹೃದಯೇ ಜಠರೇ ನಾಭೌ ಜಠರೇ ಗುಹ್ಯದೇಶತಃ ॥ ೧೩ ॥

ದಕ್ಷಪಾದೇ ವಾಮಪಾದೇ ಸಕ್ಥ್ನಿ ಜಾನುನಿ ಜಂಘಯೋಃ ।
ವಿನ್ಯಸೇದ್ಬೀಜದಶಕಂ ಪ್ರಣವದ್ವಯಮಧ್ಯಗಂ ॥ ೧೪ ॥

ತಾರಾದ್ಯಾ ನವ ಶೇಷಾರ್ಣಾಃ ಮಸ್ತಕೇ ಚ ಲಲಾಟಕೇ ।
ಭ್ರುವೋಃ ಶ್ರುತ್ಯೋಸ್ತಥೈವಾಕ್ಷ್ಣೋರ್ನಸಿ ವಕ್ತ್ರೇ ಗಲೇಂಸಕೇ ॥ ೧೫ ॥

---

ತಲೆಯನ್ನೂ "ಊಂ ಹಂ ಶಿಖಾಯೈ ವಷಟ್" ಎಂದು ಶಿಖೆಯನ್ನೂ "ಕ್ರೋಂ ಶ್ರೀಂ ಕವಚಾಯ ಹುಂ" ಎಂದು ಕವಚವನ್ನೂ "ಹುಂ ಫಟ್ ಅಸ್ತ್ರಾಯ ಫಟ್" ಎಂದು ಅಸ್ತ್ರವನ್ನೂ ನ್ಯಾಸವಮಾಡಬೇಕು. ಉಳಿದ ವರ್ಣಗಳಿಂದ ಎಂದರೆ "ಕಾರ್ತವೀರ್ಯಾರ್ಜುನಾಯ ನಮಃ" ಎಂದು ಸರ್ವಾಂಗ ನ್ಯಾಸವಮಾಡಬೇಕು.

೧೩-೧೬. ವರ್ಣನ್ಯಾಸವನ್ನು ಹೇಳುತ್ತಾರೆ:—"ಓಂ ಫ್ರೋಂ ಓಂ" ಎಂದು ಹೃದಯದಲ್ಲಿಯೂ, "ಓಂ ವ್ರೀಂ ಓಂ" ಎಂದು ಜಠರದಲ್ಲಿಯೂ, "ಓಂ ಕ್ಲೀಂ ಓಂ" ಎಂದು ಹೊಕ್ಕಳಿನಲ್ಲಿಯೂ, "ಓಂ ಭ್ರೂಂ ಓಂ" ಎಂದು ಕಿಬ್ಬೊಟ್ಟೆಯಲ್ಲಿಯೂ, "ಓಂ ಆಂ ಓಂ" ಎಂದು ಬಲಗಾಲಿನಲ್ಲಿಯೂ, "ಓಂ ಹ್ರೀಂ ಓಂ" ಎಂದು ಎಡಗಾಲಿನಲ್ಲಿಯೂ, "ಓಂ ಕ್ರೋಂ ಓಂ" ಎಂದು ತೊಡೆಯಲ್ಲಿಯೂ, "ಓಂ ಶ್ರೀಂ ಓಂ" ಎಂದು ಮೊಣಕಾಲಿನಲ್ಲಿಯೂ, "ಓಂ ಹುಂ ಓಂ" ಎಂದು ಬಲಕಣಕಾಲಿನಲ್ಲಿಯೂ, "ಓಂ ಫಟ್ ಓಂ" ಎಂದು ಎಡಕಣಕಾಲಿನಲ್ಲಿಯೂ, "ಓಂ ಕಾಂ" ಎಂದು ಶಿರಸ್ಸಿನಲ್ಲಿಯೂ, "ಓಂ ತಂ" ಎಂದು ಹಣೆಯಲ್ಲಿಯೂ, "ಓಂ ವಂ" ಎಂದು ಹುಬ್ಬುಗಳಲ್ಲಿಯೂ, "ಓಂ ರಂ" ಎಂದು ಕಿವಿಗಳಲ್ಲಿಯೂ, "ಓಂ ಜಂ" ಎಂದು ಕಣ್ಣುಗಳಲ್ಲಿಯೂ, "ಓಂ ನಂ" ಎಂದು ಮೂಗಿನಲ್ಲಿಯೂ, "ಓಂ ಯಂ"

ಸರ್ವಮಂತ್ರೇಣ ಸರ್ವಾಂಗೇ ಕೃತ್ವಾ ವ್ಯಾಪಕಮಾದೃತಃ ।
ಸರ್ವೇಷ್ಟಸಿದ್ಧಯೇ ಧ್ಯಾಯೇತ್ಕಾರ್ತವೀರ್ಯಂ ಜನೇಶ್ವರಂ　　॥ ೧೬ ॥

ಉದ್ಯದರ್ಕಸಹಸ್ರಾಭಂ ಸರ್ವಭೂಪತಿವಂದಿತಂ ।
ದೋರ್ಭಿಃ ಪಂಚಶತೈರ್ದಕ್ಷೈರ್ಬಾಣಾನ್ವಾಮೈರ್ಧನೂಂಷಿ ಚ　　॥ ೧೭ ॥

ದಧತಂ ಸ್ವರ್ಣಮಾಲಾಢ್ಯಂ ರಕ್ತವಸ್ತ್ರಸಮಾವೃತಂ ।
ಚಕ್ರಾವತಾರಂ ಶ್ರೀವಿಷ್ಣೋರ್ಧ್ಯಾಯೇದರ್ಜುನಭೂಪತಿಂ　　॥ ೧೮ ॥

ಲಕ್ಷಮೇಕಂ ಜಪೇನ್ಮಂತ್ರಂ ದಶಾಂಶಂ ಜುಹುಯಾತ್ತಿಲೈಃ ।
ಸತಂಡುಲೈಃ ಪಾಯಸೇನ ವಿಷ್ಣುಪೀಠೇ ಯಜೇತ್ತು ತಂ　　॥ ೧೯ ॥

---

ಎಂದು ಬಾಯಿಯಲ್ಲಿಯೂ, "ಓಂ ನಂ" ಎಂದು ಕುತ್ತಿಗೆಯಲ್ಲಿಯೂ, "ಓಂ ಮಂ" ಎಂದು ಭುಜಗಳಲ್ಲಿಯೂ ನ್ಯಾಸಮಾಡಿ ಪುನಃ ಸಮಗ್ರಮಂತ್ರದಿಂದ ಸರ್ವಾಂಗನ್ಯಾಸಮಾಡಬೇಕು. ಅನಂತರ ಸಕಲೇಷ್ಟಸಿದ್ಧಿಗಾಗಿ ಜನಪತಿಯಾದ ಕಾರ್ತವೀರ್ಯಾರ್ಜುನನನ್ನು ಧ್ಯಾನಿಸಬೇಕು.

೧೭-೧೮. ಧ್ಯಾನ :—ಉದಯಿಸುತ್ತಿರುವ ಸಾವಿರಾರು ಸೂರ್ಯರಂತೆ ಕಾಂತಿಯುಳ್ಳ, ಸಕಲಭೂಪಾಲರಿಂದ ನಮಸ್ಕರಿಸಲ್ಪಡುತ್ತಿರುವ, ಐನೂರು ಬಲ ಬಾಹುಗಳಿಂದ ಬಾಣಗಳನ್ನೂ, ಐನೂರು ಎಡ ಬಾಹುಗಳಿಂದ ಧನುಸ್ಸುಗಳನ್ನೂ ಧರಿಸಿರುವ, ಬಂಗಾರದ ಹಾರವನ್ನು ಹಾಕಿಕೊಂಡಿರುವ, ಕೆಂಪು ಬಟ್ಟೆಯನ್ನುಟ್ಟಿರುವ, ಶ್ರೀ ವಿಷ್ಣುವಿನ ಚಕ್ರಾವೇಶಾವತಾರನಾದ ಕಾರ್ತವೀರ್ಯಾರ್ಜುನ ಭೂಪಾಲನನ್ನು ಧ್ಯಾನಿಸಬೇಕು.

೧೯. ಈ ಮಂತ್ರವನ್ನು ಒಂದು ಲಕ್ಷ ಜಪಿಸಿ, ಎಳ್ಳು ಅಕ್ಕಿ ಪಾಯಸಗಳಿಂದ ಹತ್ತುಸಾವಿರ ಹೋಮ ಮಾಡಬೇಕು. ಅವನನ್ನು ವೈಷ್ಣವ ಪೀಠದಲ್ಲಿ ಪೂಜಿಸಬೇಕು.

ಷಟ್ಕೋಣೇಷು ಷಡಂಗಾನಿ ತತೋ ದಿಕ್ಷು ವಿದಿಕ್ಷು ಚ ।
ಚೌರಮದವಿಭಂಜನಂ ಮಾರೀಮದವಿಭಂಜನಂ ॥ ೨೦ ॥

ಅರಿಮದವಿಭಂಜನಂ ದೈತ್ಯಮದ ವಿಭಂಜನಂ ।
ದುಷ್ಟನಾಶಂ ದುಃಖನಾಶಂ ದುರಿತಾಪದ್ವಿನಾಶಕಂ ॥ ೨೧ ॥

ದಿಕ್ಷ್ವಷ್ಟಶಕ್ತಯಃ ಪೂಜ್ಯಾಃ ಪ್ರಾಚ್ಯಾದಿಷ್ವಸಿತಪ್ರಭಾಃ ।
ಕ್ಷೇಮಂಕರೀ ವಶ್ಯಕರೀ ಶ್ರೀಕರೀ ಚ ಯಶಸ್ಕರೀ ॥ ೨೨ ॥

ಆಯುಷ್ಕರೀ ತಥಾ ಪ್ರಜ್ಞಾಕರೀ ವಿದ್ಯಾಕರೀ ಚ ಪುನಃ ।
ಧನಕರ್ಯಷ್ಟಮೀ ಪಶ್ಚಾಲ್ಲೋಕೇಶಾ ಅಸ್ತ್ರಸಂಯುತಾಃ ॥ ೨೩ ॥

ಏವಂ ಸಂಸಾಧಿತೋ ಮಂತ್ರಃ ಪ್ರಯೋಗಾರ್ಹಃ ಪ್ರಜಾಯತೇ ।
ಕಾರ್ತವೀರ್ಯಾರ್ಜುನಸ್ಯಾಥ ಪೂಜಾಯಂತ್ರಮಿಹೋಚ್ಯತೇ ॥ ೨೪ ॥

---

೨೦-೨೧. ಆರು ಕೋಣಗಳಲ್ಲಿ ಷಡಂಗಗಳನ್ನು ಪೂಜಿಸಿ ತರುವಾಯ ಪೂರ್ವಾದಿ ದಿಕ್ಕುಗಳಲ್ಲಿ ಚೋರಮದನಾಶಕ, ಮಾರೀಮದನಾಶಕ, ಶತ್ರುಮದ ನಾಶಕ ಮತ್ತು ದೈತ್ಯಮದವಿಭೇದಕ ಇವರನ್ನೂ, ಆಗ್ನೇಯಾದಿ ವಿದಿಕ್ಕು ಗಳಲ್ಲಿ ದುಷ್ಟನಾಶಕ, ದುಃಖನಾಶಕ, ಪಾಪನಾಶಕ ಮತ್ತು ಆಪನ್ನಿವಾರಕರನ್ನೂ ಪೂಜಿಸಬೇಕು.

೨೨-೨೪. ಪೂರ್ವ ಮುಂತಾದ ದಿಕ್ಕುಗಳಲ್ಲಿ ಅಸಿತ ತೇಜಸ್ಕರಾದ ಕ್ಷೇಮಂಕರೀ, ವಶ್ಯಕರೀ, ಶ್ರೀಕರೀ, ಯಶಸ್ಕರೀ, ಆಯುಷ್ಕರೀ, ಪ್ರಜ್ಞಾಕರೀ, ವಿದ್ಯಾಕರೀ ಮತ್ತು ಧನಕರೀ ಎಂಬ ಎಂಟು ಶಕ್ತಿಗಳನ್ನು ಪೂಜಿಸಬೇಕು. ಅನಂತರ ಅವರವರ ಆಯುಧಸಹಿತರಾದ ಇಂದ್ರಾದಿ ಲೋಕಪಾಲಕರನ್ನೂ, ಪೂಜಿಸಬೇಕು. ಈ ರೀತಿಯಾಗಿ ಅನುಷ್ಠಾನಮಾಡಿದರೆ, ಪ್ರಜೇಶ್ವರನಾದ ಕಾರ್ತವೀರ್ಯಾರ್ಜುನನ ಮಂತ್ರವು ಸಿದ್ಧವಾಗಿ ಪ್ರಯೋಗಿಸಲು ಯೋಗ್ಯ ವಾಗುವುದು.

ಸ್ವಬೀಜಾನಂಗಧ್ರುವವಾಕ್ಕರ್ಣಿಕಂ ದಿಗ್ದಲಂ ಲಿಖೇತ್ ।
ತಾರಾದಿವರ್ಣಾಂತದಲಂ ಶೇಷವರ್ಣಾದಲಾಂತರಂ || ೨೫ ||

ಉಷ್ಮಾಢ್ಯಸ್ವರಕಿಂಜಲ್ಕಂ ಶೇಷಾರ್ಣೈಃ ಪರಿವೇಷ್ಟಿತಂ ।
ಕೋಣಾಲಂಕೃತಭೂತಾರ್ಣಭೂಗೃಹಂ ಯಂತ್ರಮೀಶಿತುಃ || ೨೯ ||

ಶುದ್ಧಭೂಮಾವಷ್ಟಗಂಧೈರ್ಲಿಖಿತ್ವಾ ಯಂತ್ರಮಾದರಾತ್ ।
ತತ್ರ ಕುಂಭಂ ಪ್ರತಿಷ್ಠಾಪ್ಯ ತತ್ರಾವಾಹ್ಯಾರ್ಚಯೇನ್ನೃಪಂ || ೨೭ ||

---

೨೪-೨೬. ಈಗ ಪೂಜೆಮಾಡುವ ಯಂತ್ರವಿಧಾನವನ್ನು ಹೇಳುವೆನು :- (ಸ್ವಬೀಜ= ಫ್ರೋಂ ಅನಂಗ= ಕ್ಲೀಂ ಧ್ರುವ= ಓಂ ವಾಕ್= ಐಂ) "ಫ್ರೋಂ, ಕ್ಲೀಂ, ಓಂ, ಐಂ" ಎಂಬ ನಾಲ್ಕು ವರ್ಣಗಳನ್ನು ಕೋಶದೊಳಗೆ ಬರೆದು ಅದರ ಸುತ್ತಲೂ ಗುಂಡಗೆ ರೇಖೆಯನ್ನು ಗುರ್ತಿಸಬೇಕು. ಅದರಸುತ್ತಲೂ ಹತ್ತು ದಳಗಳನ್ನು ಬರೆದು ಅದರಲ್ಲಿ ಒಂದೊಂದರಲ್ಲಿ ಒಂದೊಂದಕ್ಷರದಂತೆ ಈ ಮಂತ್ರದಲ್ಲಿನ "ಓಂ ಫ್ರೋಂ ವ್ರೀಂ ಕ್ಲೀಂ ಭ್ರೂಂ ಆಂ ಹ್ರೀಂ ಕ್ರೋಂ ಶ್ರೀಂ ಹುಂ" ಎಂಬ ಹತ್ತು ಅಕ್ಷರಗಳನ್ನು ಬರೆದು, ಉಳಿದ ಮಂತ್ರವರ್ಣಗಳನ್ನು ಆ ದಳಗಳ ಮಧ್ಯಭಾಗದಲ್ಲಿ ಬರೆದು, ದಳಗಳ ಕುಸುರು ಎಂದರೆ ಗುಂಡಗಿರುವ ಕೋಶದ ಒಳಭಾಗದಲ್ಲಿ ಸುತ್ತಲೂ ಸ್ವರ ಮತ್ತು ಶ, ಷ, ಸ, ಹ ಎಂಬ ವರ್ಣಗಳನ್ನು ಬರೆಯಬೇಕು. ಬಳಿಕ ಆ ದಳಗಳ ಸುತ್ತಲೂ ಉಳಿದ ತಕಾರಾದಿ ವರ್ಣಗಳನ್ನೆಲ್ಲವನ್ನೂ ಬರೆಯಬೇಕು. ಈ ರೀತಿಯಾಗಿ ಬರೆದುದನ್ನು ಒಳಗೆ ಸೇರಿಸಿ, ಸುತ್ತಲೂ ಚತುರಸ್ರಮಂಡಲವನ್ನು ಬರೆದು, ಅದರ ನಾಲ್ಕು ಕೋಣಗಳಲ್ಲಿ ಭೂತಾಕ್ಷರ= ಉ, ಋ, ಈ, ಅ, ಌ ಇವುಗಳನ್ನು ಬರೆಯಬೇಕು. ಹೀಗೆ ಬರೆದುದೇ ಕಾರ್ತವೀರ್ಯಾರ್ಜುನಭೂಪಾಲಪೂಜನಯಂತ್ರವು.

೨೭. ಈ ಯಂತ್ರವನ್ನು ಪರಿಶುದ್ಧವಾದ ಭೂಮಿಯಲ್ಲಿ ಅಷ್ಟಗಂಧಗಳಿಂದ ಭಕ್ತಿಪೂರ್ವಕವಾಗಿ ಬರೆದು ಅದರಲ್ಲಿ ಕುಂಭವನ್ನು ಪ್ರತಿಷ್ಠೆಮಾಡಿ ಅದರಲ್ಲಿ ಕಾರ್ತವೀರ್ಯಾರ್ಜುನಭೂಪಾಲನನ್ನು ಆವಾಹನೆ ಮಾಡಿ ಪೂಜಿಸಬೇಕು.

ಸ್ಪೃಷ್ಟ್ವಾ ಕುಂಭಂ ಜಪೇನ್ಮಂತ್ರಂ ಸಹಸ್ರಂ ವಿಜಿತೇಂದ್ರಿಯಃ ।
ಅಭಿಷಿಂಚೇತ್ತದಂಭೋಭಿಃ ಪ್ರಿಯಂ ಸರ್ವೇಷ್ಟಸಿದ್ಧಯೇ ॥ ೨೮ ॥

ಪುತ್ರಾನ್ಯಶೋ ರೋಗನಾಶಮಾಯುಃ ಸ್ವಜನರಂಜನಂ ।
ವಾಕ್ಸಿದ್ಧಿಂ ಸುವೃಶಃ ಕುಂಭಾಭಿಷಿಕ್ತೋ ಲಭತೇ ನರಃ ॥ ೨೯ ॥

ಶತ್ರೂಪದ್ರವ ಆಪನ್ನೇ ಗ್ರಾಮೇ ವಾ ಪುಟಭೇದನೇ ।
ಸಂಸ್ಥಾಪಯೇದಿದಂ ಯಂತ್ರಂ ಶತ್ರುಭೀತಿನಿವೃತ್ತಯೇ ॥ ೩೦ ॥

ಸರ್ಷಪಾರಿಷ್ಟಲಶುನಕಾರ್ಪಾಸೈರ್ಮಾರ್ಯತೇ ರಿಪುಃ ।
ಧತ್ತೂರೈಃ ಸ್ತಭ್ಯತೇ ನಿಂಬೈರ್ದ್ವೇಷ್ಯತೇ ವಶ್ಯತೇಂಬುಜೈಃ ॥ ೩೧ ॥

---

೨೮. ಆ ಕುಂಭದ ಮೇಲೆ ಕೈಯನ್ನಿಟ್ಟುಕೊಂಡು ಜಿತೇಂದ್ರಿಯನಾಗಿ ಈ ಮಂತ್ರವನ್ನು ಒಂದು ಸಾವಿರ ಜಪಿಸಿ ಆ ಕುಂಭೋದಕದಿಂದ ಸಕಲೇಷ್ಟಾರ್ಥ ಪ್ರಾಪ್ತಿಗಾಗಿ ಭಕ್ತನಿಗೆ ಅಭಿಷೇಕ ಮಾಡಬೇಕು.

೨೯. ಈ ರೀತಿ ಅಭಿಷೇಕಮಾಡಿಸಿಕೊಳ್ಳಲ್ಪಟ್ಟವನು ಮಕ್ಕಳು, ಕೀರ್ತಿ, ರೋಗನಾಶ, ಆಯುಸ್ಸು ಸ್ವಜನಾನುರಾಗ, ವಾಕ್ಸಿದ್ಧಿ ಮತ್ತು ಹೆಂಗಸರು ಇವುಗಳನ್ನು ಪಡೆಯುವನು.

೩೦. ಹಳ್ಳಿ ಅಥವಾ ಪಟ್ಟಣಗಳಲ್ಲಿ ಶತ್ರುಬಾಧೆಯು ಸಂಭವಿಸಿದಾಗ ಅಂತಹ ಶತ್ರುಭಯಪರಿಹಾರಕ್ಕಾಗಿ ಈ ಯಂತ್ರವನ್ನು ಸ್ಥಾಪಿಸಬೇಕು. ಅದರಿಂದ ಭಯಪರಿಹಾರವಾಗುವುದು.

೩೧. ಸಾಸವೆ, ನುಗ್ಗೇಕಾಯಿ, ಉಳ್ಳಿಗಡ್ಡೆ, ಹತ್ತಿಯಬಟ್ಟೆ ಇವುಗಳಿಂದ ಹೋಮ ಮಾಡಿದರೆ ಶತ್ರುವು ಸಾಯುವನು. ದತ್ತೂರಿಯಿಂದ ಹೋಮ ಮಾಡಿದರೆ ಶತ್ರುವು ಸ್ತಬ್ಧನಾಗುವನು. ಬೇವಿನಕಾಯಿಗಳಿಂದ ಹೋಮ ಮಾಡಿದರೆ ದ್ವೇಷ ಮಾಡುವನು. ಕಮಲಗಳಿಂದ ಹೋಮ ಮಾಡಿದರೆ ಶತ್ರುವು ಸ್ವಾಧೀನನಾಗುವನು.

ಉಚ್ಚಾಟನೇ ವಿಭೀತಸ್ಯ ಸಮಿದ್ಭಿಃ ಖದಿರಸ್ಯ ಚ ।
ಕಟುತೈಲಮಹಿಷ್ಯಾಜ್ಯೈರ್ಹೋಮದ್ರವ್ಯಾಂಜನಂ ಸ್ಮೃತಂ || ೩೨ ||

ಯವೈರ್ಹುತೇ ಶ್ರೀಯಃ ಪ್ರಾಪ್ತಿಸ್ತಿಲೈರಾಜ್ಯೈರಘಕ್ಷಯಃ ।
ತಿಲತಂಡುಲಸಿದ್ಧಾರ್ಥಜಾಲೈರ್ವಶ್ಯೋ ನೃಪೋ ಭವೇತ್ || ೩೩ ||

ಅಪಾಮಾರ್ಗಾರ್ಕದೂರ್ವಾಣಾಂ ಹೋಮೋ ಲಕ್ಷ್ಮೀಪ್ರದೋಽಘನುತ್ ।
ಸ್ತ್ರೀವಶ್ಯಕೃತ್ಪ್ರಿಯಂಗೂಣಾಂ ಪುರಾಣಾಂ ಭೂತಶಾಂತಿದಃ || ೩೪ ||

ಅಶ್ವತ್ಥೋದುಂಬುರಪ್ಲಕ್ಷವಟಬಿಲ್ವಸಮುದ್ಭವಾಃ ।
ಸಮಿಧೋ ಲಭತೇ ಹುತ್ವಾ ಪುತ್ರಾನಾಯುರ್ಧನಂ ಸುಖಂ || ೩೫ ||

---

೩೨. ಶತ್ರುವನ್ನು ಉಚ್ಚಾಟನೆ ಮಾಡಬೇಕಾದರೆ ತಾರೆ ಅಥವಾ ಕಗ್ಗಳಿಯ ಸಮಿತ್ತುಗಳಿಂದ ಹೋಮ ಮಾಡಬೇಕು. ಇಲ್ಲಿ ಹೇಳಿರುವ ಸಾಸಿವೆ ಮುಂತಾದ ಹೋಮ ದ್ರವ್ಯಗಳೆಲ್ಲವನ್ನೂ ಕಹಿಯಾದ ಎಣ್ಣೆ, ಎಮ್ಮೆಯತುಪ್ಪ ಗಳಲ್ಲಿ ನೆನೆಸಿ ಹೋಮ ಮಾಡಬೇಕು ಎಂದು ಉಕ್ತವಾಗಿದೆ.

೩೩. ಯವ ಹೋಮದಿಂದ ಸಂಪತ್ತು, ಎಳ್ಳುತುಪ್ಪಗಳ ಹೋಮದಿಂದ ಪಾಪನಾಶವೂ ಉಂಟಾಗುವುದು. ಎಳ್ಳು, ಅಕ್ಕಿ, ಬಿಳಿಯ ಸಾಸುವೆಗಳಿಂದ ಹೋಮ ಮಾಡಿದರೆ ರಾಜನು ವಶನಾಗುವನು.

೩೪. ಉತ್ತರಣೆಯ ಕಡ್ಡಿ, ಎಕ್ಕೆಯ ಕಡ್ಡಿ, ಗರಿಕೆಯ ಹುಲ್ಲುಗಳ ಹೋಮವು ಐಶ್ವರ್ಯಪ್ರದ ಮತ್ತು ಪಾಪಸಂಹಾರಕವೂ ಆಗುವುದು. ನವಣೆಯ ಹೋಮವು ಸ್ತ್ರೀವಶ್ಯಕಾರಿಯು. ಗುಗ್ಗುಲಗಳ ಹೋಮವು ಭೂತಶಾಂತಿ ದಾಯಕವು.

೩೫. ಅರಳಿ, ಅತ್ತಿ, ಹುಣಸೆ, ಆಲ ಮತ್ತು ಬಿಲ್ವ ಇವುಗಳ ಸಮಿತ್ತು

**ನಿರ್ಮೋಕಹೇಮಸಿದ್ಧಾರ್ಥಲವಣೈಶ್ಚೌರನಾಶನಂ ।**
**ರೋಚನಾಗೋಮಯೈಸ್ತಂಭೋ ಭೂಪ್ರಾಪ್ತಿಃ ಶಾಲಿಭಿರ್ಹುತೈಃ ॥ ೩೬ ॥**

**ಹೋಮಸಂಖ್ಯಾ ತು ಸರ್ವತ್ರ ಸಹಸ್ರಾದಯುತಾವಧಿ ।**
**ಪ್ರಕಲ್ಪನೀಯಾ ಮಂತ್ರಜ್ಞೈಃ ಕಾರ್ಯಗೌರವಲಾಘವಾತ್ ॥ ೩೭ ॥**

**ಕಾರ್ತವೀರ್ಯಸ್ಯ ಮಂತ್ರಾಣಾಮುಚ್ಯಂತೇ ಸಿದ್ಧಿದಾಃ ಭಿದಾಃ ।**
**ಕಾರ್ತವೀರ್ಯಾರ್ಜುನಂ ಜೇಂತೆಮಂತೇ ಚ ನಮಸಾನ್ವಿತಂ ॥ ೩೮ ॥**

**ಸ್ವಬೀಜಾದ್ಯೋ ದಶಾರ್ಣೋಽಸೌ ಅನ್ಯೇ ನವಶಿವಾಕ್ಷರಾಃ ।**
**ಆದ್ಯಬೀಜದ್ವಯೇನಾಸೌ ದ್ವಿತೀಯೋ ಮಂತ್ರ ಈರಿತಃ ॥ ೩೯ ॥**

---

ಗಳನ್ನು ಹೋಮಮಾಡಿದರೆ ಮಕ್ಕಳು, ಆಯುಸ್ಸು, ಹಣ, ಸುಖ ಇವುಗಳು ದೊರಕುವುವು.

೩೬. ಹಾವಿನ ಪೊರೆ, ದತ್ತೂರ, ಬಿಳಿಯ ಸಾಸುವೆ ಮತ್ತು ಉಪ್ಪು ಇವುಗಳಿಂದ ಹೋಮ ಮಾಡಿದರೆ ಕಳ್ಳರ ನಾಶವಾಗುವುದು. ಗೋರೋಚನ ಗೋಮಯಗಳಿಂದ ಹೋಮ ಮಾಡಿದರೆ ಸ್ತಂಭನವೂ, ಬತ್ತಗಳಿಂದ ಹೋಮ ಮಾಡಿದರೆ ಭೂಮಿಯ ಲಾಭವೂ ಆಗುವುದು.

೩೭. ಮಂತ್ರಜ್ಞರು ಉದ್ದೇಶಕಾರ್ಯಗಳ ಮಹತ್ವ ಅಥವಾ ಅಲ್ಪತ್ವ ಗಳಿಗನುಗುಣವಾಗಿ ಒಂದು ಸಾವಿರದಿಂದ ಹತ್ತು ಸಾವಿರದವರೆಗೂ ಹೋಮ ಗಳನ್ನು ಇಷ್ಟೇ ಮಾಡಬೇಕೆಂಬುದನ್ನು ಗೊತ್ತುಮಾಡಬೇಕು.

೩೮. ಸಿದ್ಧಿಪ್ರದಗಳಾದ ಕಾರ್ತವೀರ್ಯಾರ್ಜುನನ ಮಂತ್ರಗಳ ಪ್ರಭೇದ ಗಳನ್ನು ಹೇಳುವೆನು :—ಮುಂದೆ ಹೇಳುವ ಮಂತ್ರಗಳಲ್ಲೆಲ್ಲಾ "ಕಾರ್ತ ವೀರ್ಯಾರ್ಜುನಾಯ ನಮಃ" ಎಂಬುದನ್ನು ಸೇರಿಸಬೇಕು.

೩೯-೪೨, ಫ್ರೋಂ ಎಂಬ ಬೀಜಾಕ್ಷರದಿಂದ ಸಹಿತವಾಗಿ ಇದು ಹತ್ತು ವರ್ಣಗಳುಳ್ಳ ಮಂತ್ರವಾಗುವುದು. ಇದರ ಒಂಬತ್ತು ಮಂತ್ರಗಳೂ ಹನ್ನೊಂದ ಕ್ಷರಗಳನ್ನೊಳಗೊಂಡಿವೆ. ಆ ಹತ್ತು ಮಂತ್ರಗಳು ಯಾವುವೆಂದರೆ;—

ಸ್ವಕಾಮಾಭ್ಯಾಂ ತೃತೀಯೋಽಸೌ ಸ್ವಭ್ರೂಭ್ಯಾಂ ತು ಚತುರ್ಥಕಃ ।
ಸ್ವಪಾಶಾಭ್ಯಾಂ ಪಂಚಮೋಽಸೌ ಷಷ್ಠಃ ಸ್ವೇನ ಚ ಮಾಯಯಾ ॥ ೪೦ ॥

ಸ್ವಾಂಕುಶಾಭ್ಯಾಂ ಸಪ್ತಮಃ ಸ್ಯಾತ್ಸ್ವರಮಾಭ್ಯಾಮಥಾಷ್ಟಮಃ ।
ಸ್ವವಾಗ್ಭವಾಭ್ಯಾಂ ನವಮಃ ವರ್ಮಾಸ್ತ್ರಾಭ್ಯಾಮಥಾಂತಿಮಃ ॥ ೪೧ ॥

ದ್ವಿತೀಯಾದಿನವಾಂತೇ ತು ಬೀಜಯೋಃ ಸ್ಯಾದ್ವ್ಯತಿಕ್ರಮಃ ।
ಮಂತ್ರೇ ತು ದಶಮೇ ವರ್ಣಾ ನವ ವರ್ಮಾಸ್ತ್ರಮಧ್ಯಗಾಃ ॥ ೪೨ ॥

ಏತೇಷು ಮಂತ್ರವರ್ಯೇಷು ಸ್ವಾನುಕೂಲಂ ಮನುಂ ಭಜೇತ್ ।
ಏಷಾಮಾದ್ಯೇ ವಿರಾಟ್‌ಛಂದೋಽನ್ಯೇಷು ತ್ರಿಷ್ಟುಬುದಾಹೃತಂ ॥ ೪೩ ॥

---

1. ಫ್ರೋಂ ಕಾರ್ತವೀರ್ಯಾರ್ಜುನಾಯ ನಮಃ
2. ಫ್ರೋಂ ವ್ರೀಂ ಕಾರ್ತವೀರ್ಯಾರ್ಜುನಾಯ ನಮಃ
3. ಫ್ರೋಂ ಕ್ಲೀಂ ಕಾರ್ತವೀರ್ಯಾರ್ಜುನಾಯ ನಮಃ
4. ಫ್ರೋಂ ಭ್ರೂಂ ಕಾರ್ತವೀರ್ಯಾರ್ಜುನಾಯ ನಮಃ
5. ಫ್ರೋಂ ಆಂ ಕಾರ್ತವೀರ್ಯಾರ್ಜುನಾಯ ನಮಃ
6. ಫ್ರೋಂ ಹ್ರೀಂ ಕಾರ್ತವೀರ್ಯಾರ್ಜುನಾಯ ನಮಃ
7. ಫ್ರೋಂ ಕ್ರೋಂ ಕಾರ್ತವೀರ್ಯಾರ್ಜುನಾಯ ನಮಃ
8. ಫ್ರೋಂ ಶ್ರೀಂ ಕಾರ್ತವೀರ್ಯಾರ್ಜುನಾಯ ನಮಃ
9. ಫ್ರೋಂ ಐಂ ಕಾರ್ತವೀರ್ಯಾರ್ಜುನಾಯ ನಮಃ
10. ಹುಂ ಫಟ್ ಕಾರ್ತವೀರ್ಯಾರ್ಜುನಾಯ ನಮಃ

೪೩. ಶ್ರೇಷ್ಠವಾದ ಈ ಮಂತ್ರಗಳಲ್ಲಿ ತನಗೆ ಅನುಕೂಲವಾದ ಮಂತ್ರವನ್ನು ಆರಾಧಿಸಬಹುದು. ಇವುಗಳ ಪೈಕಿ ಮೊದಲನೆಯ ಮಂತ್ರಕ್ಕೆ ಮಾತ್ರ 'ವಿರಾಟ್' ಎಂಬುದು ಛಂದಸ್ಸು. ಉಳಿದವುಗಳಿಗೆ ತ್ರಿಷ್ಟುಪ್ ಎಂಬುದು ಛಂದಸ್ಸು ಎಂದು ತಿಳಿಯಬೇಕು.

**ದಶಮಂತ್ರಾ ಇಮೇ ಪ್ರೋಕ್ತಾ ಯದಾ ಸ್ಯುಃ ಪ್ರಣವಾದಿಕಾಃ ।**
**ತದಾದಿಮಃ ಶಿವಾರ್ಣಃ ಸ್ಯಾದನ್ಯೇ ತು ದ್ವಾದಶಾಕ್ಷರಾಃ ॥ ೪೪ ॥**

**ತ್ರಿಷ್ಟುಪ್ ಛಂದಸ್ತಥಾದ್ಯೇ ಸ್ಯಾದನ್ಯೇಷು ಜಗತೀ ಮತಾ ।**
**ಏವಂ ವಿಂಶತಿಮಂತ್ರಾಣಾಂ ಯಜನಂ ಪೂರ್ವವನ್ಮತಂ ॥ ೪೫ ॥**

**ದೀರ್ಘಾಢ್ಯಾ ಮೂಲಬೀಜೇನ ಕುರ್ಯಾದೇಷಾಂ ಷಡಂಗಕಂ ।**
**ತಾರೋ ಹೃತ್ಕಾರ್ತವೀರ್ಯಾರ್ಜುನಾಯ ವರ್ಮಾಸ್ತ್ರಠದ್ವಯಂ ॥ ೪೬ ॥**

**ಚತುರ್ದಶಾರ್ಣೋ ಮಂತ್ರೋಯಮಸ್ಯೇಜ್ಯಾ ಪೂರ್ವವನ್ಮತಾ ।**
**ಭೂನೇತ್ರಸಪ್ತನೇತ್ರಾಕ್ಷಿವರ್ಣೈರಸ್ಯಾಂಗಪಂಚಕಂ ॥ ೪೭ ॥**

---

೪೪. ಈ ಹತ್ತುಮಂತ್ರಗಳಿಗೂ ಆದಿಯಲ್ಲಿ ಓಂಕಾರವನ್ನು ಸೇರಿಸಿದರೆ ಮೊದಲನೆಯದು ಹನ್ನೊಂದುಅಕ್ಷರಗಳ ಮಂತ್ರವೂ, ಉಳಿದ ಒಂಬತ್ತು ಮಂತ್ರಗಳು ಹನ್ನೆರಡುಅಕ್ಷರಗಳ ಮಂತ್ರಗಳಾಗುವುವು.

೪೫. ಹಾಗೆಯೇ ಮೊದಲನೆಯ ಮಂತ್ರದಲ್ಲಿ ತ್ರಿಷ್ಟುಪ್ ಛಂದಸ್ಸೂ, ಉಳಿದುದಕ್ಕೆ ಜಗತೀ ಎಂಬ ಛಂದಸ್ಸೂ ಎಂದು ತಿಳಿಯಬೇಕು. ಈ ಪ್ರಕಾರ ವಾದ ಇಪ್ಪತ್ತುಮಂತ್ರಗಳಿಗೂ ಪೂಜೆಯನ್ನು ಹಿಂದೆ ಹೇಳಿರುವಂತೆಯೇ ಆಚರಿಸಬೇಕು.

೪೬. ಈ ಮಂತ್ರಗಳಿಗೆ ದೀರ್ಘಯುಕ್ತವಾದ ಮೂಲಬೀಜ ಎಂದರೆ ಪ್ರ ಎಂಬ ಅಕ್ಷರಗಳಿಂದ= ಪ್ರಾಂ ಹೃದಯಂ 'ಪ್ರೀಂ ಶಿರಃ' ಇತ್ಯಾದಿ ಕ್ರಮವಾಗಿ ಷಡಂಗನ್ಯಾಸ ಮಾಡಬೇಕು.

೪೬-೪೭. (ಮಂತ್ರಾಂತರವನ್ನು ಹೇಳುತ್ತಾರೆ :–ಠದ್ವಯಂ= ಸ್ವಾಹಾ. ಉಳಿದ ಸಂಕೇತ ವಿವರಣೆಯು ಹಿಂದೆ ಕೊಟ್ಟಿದೆ.) 'ಓಂ ನಮಃ ಕಾರ್ತವೀರ್ಯಾರ್ಜುನಾಯ ಹುಂ ಫಟ್ ಸ್ವಾಹಾ' ಈ ಮಂತ್ರವು ಹದಿನಾಲ್ಕು ಅಕ್ಷರಗಳುಳ್ಳುದು. ಇದರ ಅಂಗವಾದ ಪೂಜೆಯನ್ನು ಹಿಂದಿನಂತೆಯೇ ಆಚರಿಸಬೇಕು. ಕ್ರಮವಾಗಿ ಈ ಮಂತ್ರದಲ್ಲಿನ 1, 2, 7, 2, 2 ಅಕ್ಷರಗಳಿಂದ ಪಂಚಾಂಗನ್ಯಾಸವನ್ನು ಮಾಡಬೇಕು.

ತಾರೋಹೃದ್ಭಗವಾ ಙೇಂತಃ ಕಾರ್ತವೀರ್ಯಾರ್ಜುನಸ್ತಥಾ ।
ವರ್ಮಾಸ್ತ್ರಾಗ್ನಿಪ್ರಿಯಾ ಮಂತ್ರಃ ಪ್ರೋಕ್ತೋ ಹ್ಯಷ್ಟಾದಶಾರ್ಣಕಃ ॥೪೮॥

ತ್ರಿವೇದಸಪ್ತಯುಗ್ಮಾಕ್ಷಿವರ್ಣೈಃ ಪಂಚಾಂಗಕಂ ಮನೋಃ ।
ನಮೋ ಭಗವತೇ ಶ್ರೀತಿ ಕಾರ್ತವೀರ್ಯಾರ್ಜುನಾಯ ಚ ॥ ೪೯ ॥

ಸರ್ವದುಷ್ಟಾಂತಕಾಯೇತಿ ತಪೋಬಲಪರಾಕ್ರಮಃ ।
ಪರಿಪಾಲಿತಸಪ್ತಾಂತೇ ದ್ವೀಪಾಯ ಸರ್ವರಾಪದಂ ॥ ೫೦ ॥

ಜನ್ಯಚೂಡಾಮಣಾಂತೇ ಯೇ ಮಹಾಶಕ್ತಿಮತೇ ತತಃ ।
ಸಹಸ್ರಬಾಹವೇ ಪ್ರಾಂತೇ ವರ್ಮಾಸ್ತ್ರಾಂತೋ ಮಹಾಮನುಃ ॥ ೫೧ ॥

---

೪೮. ಇನ್ನೊಂದು ಮಂತ್ರವನ್ನು ಹೇಳುತ್ತಾರೆ :—' ಓಂ ನಮೋ ಭಗವತೇ ಕಾರ್ತವೀರ್ಯಾರ್ಜುನಾಯ ಹುಂ ಫಟ್ ಸ್ವಾಹಾ ' ಇದು ಹದಿನೆಂಟು ವರ್ಣಗಳ ಕಾರ್ತವೀರ್ಯಾರ್ಜುನನ ಮಂತ್ರವು.

೪೯. ಕ್ರಮವಾಗಿ ಇದರಲ್ಲಿನ 3, 4, 7, 2, 2 ವರ್ಣಗಳಿಂದ ಪಂಚಾಂಗಗಳನ್ನು ನ್ಯಾಸಮಾಡಬೇಕು.

೪೯-೫೧. ಮಹಾಮಂತ್ರವನ್ನು ಹೇಳುತ್ತಾರೆ :—' ನಮೋ ಭಗವತೇ ಶ್ರೀ ಕಾರ್ತವೀರ್ಯಾರ್ಜುನಾಯ ಸರ್ವದುಷ್ಟಾಂತಕಾಯ ತಪೋಬಲಪರಾಕ್ರಮ ಪರಿಪಾಲಿತಸಪ್ತದ್ವೀಪಾಯ ಸರ್ವರಾಜನ್ಯಚೂಡಾಮಣಯೇ ಮಹಾಶಕ್ತಿಮತೇ ಸಹಸ್ರಬಾಹವೇ ಹುಂ ಫಟ್ ' ಇದು ಮಹಾಮಂತ್ರವು.

೫೨-೫೪. ಇದು ಅರವತ್ತುಮೂರು ಅಕ್ಷರಗಳುಳ್ಳ ಮಹಾಮಂತ್ರವೆಂದು ಉಕ್ತವಾಗಿದೆ. ಸ್ಮರಣೆಮಾತ್ರದಿಂದ ಮಹಾವಿಘ್ನಗಳನ್ನು ಪರಿಹರಿಸುತ್ತದೆ. ಚತುರ್ಥ್ಯಂತಗಳಾದ ' ರಾಜನ್ಯಚಕ್ರವರ್ತಿನೇ ' ಮುಂತಾದ ಆರು ಪದಗಳಿಂದ ಷಡಂಗನ್ಯಾಸ ಮಾಡಬೇಕು. ಹೇಗೆಂದರೆ :—' ರಾಜನ್ಯಚಕ್ರವರ್ತಿನೇ ಹೃದಯಾಯ ನಮಃ ' ಎಂದು ಹೃದಯವನ್ನೂ, ' ವೀರಾಯ ಶಿರಸೇ ಸ್ವಾಹಾ '

ತ್ರಿಷಷ್ಟಿವರ್ಣವಾನ್ಪ್ರೋಕ್ತಃ ಸ್ಮರಣಾತ್ಸರ್ವವಿಘ್ನಹೃತ್ ।
ರಾಜನ್ಯಚಕ್ರವರ್ತೀ ಚ ವೀರಃ ಶೂರಸ್ತೃತೀಯಕಃ ॥ ೫೨ ॥

ಮಾಹಿಷ್ಮತೀಪತಿಃ ಪಶ್ಚಾಚ್ಚತುರ್ಥಃ ಸಮುದೀರಿತಃ ।
ರೇವಾಂಬುಪರಿತೃಪ್ತಶ್ಚ ಕಾರಾಗೇಹಪ್ರಬಾಧಿತಃ ॥ ೫೩ ॥

ದಶಾಸ್ಯೇತಿ ಚ ಷಡ್ಭಿಃ ಸ್ಯಾತ್ಪದೈರ್ಜಾತ್ಯಂತ್ಯೈಃ ಷಡಂಗಕಂ ।
ಸಿಂಚ್ಯಮಾನಂ ಯುವತಿಭಿಃ ಕ್ರೀಡಂತಂ ನರ್ಮದಾಜಲೇ ॥ ೫೪ ॥

ಹಸ್ತೈರ್ಜಲೌಘಂ ರುಂಧಂತಂ ಧ್ಯಾಯೇನ್ಮತ್ತಂ ನೃಪೋತ್ತಮಂ ।
ಏವಂ ಧ್ಯಾತ್ವಾಯುತಂ ಮಂತ್ರಂ ಜಪೇದನ್ಯತ್ತು ಪೂರ್ವವತ್ ॥ ೫೫ ॥

ಪೂರ್ವವತ್ಸರ್ವಮೇತಸ್ಯ ಸಮಾರಾಧನಮೀರಿತಂ ।
ಕಾರ್ತವೀರ್ಯಾರ್ಜುನೋ ನಾಮ ರಾಜಾ ಬಾಹುಸಹಸ್ರವಾನ್ ॥ ೫೬ ॥

---

ಎಂದು ಶಿರಸ್ಸನ್ನೂ, 'ಶೂರಾಯ ಶಿಖಾಯೈ ವಷಟ್' ಎಂದು ತಲೆಯ ಕೂದಲನ್ನೂ, 'ಮಾಹಿಷ್ಮತೀಪತಯೇ ಕವಚಾಯ ಹುಂ' ಎಂದು ಕವಚವನ್ನೂ, 'ರೇವಾಂಬುಪರಿತೃಪ್ತಾಯ ನೇತ್ರಾಯ ವೌಷಟ್' ಎಂದು ನೇತ್ರವನ್ನೂ, 'ಕಾರಾಗೇಹ ಪ್ರಬಾಧಿತದಶಾಸ್ಯಾಯ ಅಸ್ತ್ರಾಯ ಫಟ್' ಎಂದು ಅಸ್ತ್ರವನ್ನೂ ನ್ಯಾಸಮಾಡಬೇಕು.

೫೪-೫೬. ನರ್ಮದಾ ನದಿಯ ಜಲದಲ್ಲಿ ಯುವತಿಯರಿಂದ ಸೇಚನೆ ಮಾಡಿಸಿಕೊಳ್ಳಲ್ಪಡುತ್ತಾ ಕ್ರೀಡಿಸುತ್ತಿರುವ, ಕೈಗಳಿಂದ ಜಲರಾಶಿಯನ್ನು ತಡೆಯುತ್ತಿರುವ, ಮತ್ತನಾದ ರಾಜೋತ್ತಮನನ್ನು ಧ್ಯಾನಿಸಬೇಕು. ಈ ರೀತಿ ಧ್ಯಾನಿಸಿ ಈ ಮಂತ್ರವನ್ನು ಹತ್ತುಸಾವಿರ ಜಪಮಾಡಬೇಕು. ಉಳಿದ ಈ ಮಂತ್ರಾಂಗವಾದ ಪೂಜಾದಿಗಳನ್ನು ಹಿಂದಿನ ವಿಧಾನಗಳಂತೆಯೇ ಮಾಡಬೇಕು. ಈ ಮಂತ್ರದ ಆರಾಧನೆಯ ಕ್ರಮವನ್ನು ಹಿಂದಿನಂತೆಯೇ ತಿಳಿಯಬೇಕು.

೫೬-೫೭. ಹೃತನಷ್ಟಲಾಭಪ್ರದಮಂತ್ರವನ್ನು ಹೇಳುತ್ತಾರೆ :–'ಕಾರ್ತವೀರ್ಯಾರ್ಜುನೋ ನಾಮ ರಾಜಾ ಬಾಹುಸಹಸ್ರವಾನ್ ॥ ತಸ್ಯ ಸಂಸ್ಮರಣಾ

**ತಸ್ಯ ಸಂಸ್ಮರಣಾದೇವ ಹೃತಂ ನಷ್ಟಂ ಚ ಸಂವದೇತ್ ।**
**ಲಭ್ಯತೇ ಮಂತ್ರವರ್ಯೋಽಯಂ ದ್ವಾತ್ರಿಂಶದ್ವರ್ಣಸಂಯುತಃ ॥ ೫೭ ॥**

**ಪಾದೈಃ ಸರ್ವೇಣ ಪಂಚಾಂಗಂ ಧ್ಯಾನಪೂಜಾದಿ ಪೂರ್ವವತ್ ।**
**ಕಾರ್ತವೀರ್ಯಾಯ ಶಬ್ದಾಂತೇ ವಿದ್ಮಹೇ ಪದಮುಚ್ಚರೇತ್ ॥ ೫೮ ॥**

**ಮಹಾವೀರ್ಯಾಯ ವರ್ಣಾಂತೇ ಧೀಮಹೀತಿ ಪದಂ ವದೇತ್ ।**
**ತನ್ನೋಽರ್ಜುನಃ ಪ್ರವರ್ಣಾಂತೇ ಚೋದಯಾತ್ಪದಮೀರಯೇತ್ ॥ ೫೯ ॥**

**ಗಾಯತ್ರ್ಯೇಷಾರ್ಜುನಸ್ಯೋಕ್ತಾ ಪ್ರಯೋಗಾದೌ ಜಪೇತ್ತು ತಾಂ ।**
**ಅನುಷ್ಟುಭಂ ಮನುಂ ರಾತ್ರೌ ಜಪತಾಂ ಚೌರಸಂಚಯಾಃ ॥ ೬೦ ॥**

---

ದೇವ ಹೃತಂ ನಷ್ಟಂಚ ಲಭ್ಯತೇ ॥ ' ಅರ್ಥ :—ಸಾವಿರತೋಳುಗಳುಳ್ಳ ಕಾರ್ತವೀರ್ಯಾರ್ಜುನನೆಂಬ ರಾಜನ ಸ್ಮರಣೆ ಮಾಡುವ ಮಾತ್ರದಿಂದ ಅಪಹರಿಸಲ್ಪಟ್ಟ ಮತ್ತು ಹೋಗಿದ್ದ ವಸ್ತುವು ಸಿಗುತ್ತದೆ.

ಇದು ಮೂವತ್ತೆರಡಕ್ಷರಗಳುಳ್ಳ ಶ್ಲೋಕರೂಪವಾದ ಉತ್ತಮ ಮಂತ್ರವು.

೫೮-೬೦. ನಾಲ್ಕು ಪಾದಗಳು, ಸಂಪೂರ್ಣ ಮಂತ್ರ ಈ ಐದರಿಂದ ಪಂಚಾಂಗಗಳನ್ನು ನ್ಯಾಸಮಾಡಬೇಕು. ಇದಕ್ಕೂ ಪೂರ್ವದಂತೆಯೇ ಧ್ಯಾನ ಪೂಜಾದಿಗಳನ್ನಾಚರಿಸಬೇಕು.

' ಕಾರ್ತವೀರ್ಯಾಯ ವಿದ್ಮಹೇ ಮಹಾವೀರ್ಯಾಯ ಧೀಮಹಿ ತನ್ನೋಽರ್ಜುನಃ ಪ್ರಚೋದಯಾತ್ ' ಇದು ಕಾರ್ತವೀರ್ಯಾರ್ಜುನನ ಗಾಯತ್ರಿಯು. ಪ್ರಯೋಗಾದಿಗಳಲ್ಲಿ ಇದನ್ನು ಜಪಿಸಬೇಕು.

೬೦-೬೧. ರಾತ್ರಿಯಕಾಲದಲ್ಲಿ ಅನುಷ್ಟುಪ್ ಶ್ಲೋಕರೂಪವಾದ ಈ ಮಂತ್ರವನ್ನು ಜಪಿಸಿದರೆ ಆ ಸ್ಥಳದಿಂದ ಕಳ್ಳರು ದೂರಓಡಿಹೋಗುವರು.

ಪಲಾಯಂತೇ ಗೃಹಾದ್ದೂರಂ ತರ್ಪಣಾದ್ಧವನಾದಪಿ ।
ಅಥೋ ದೀಪವಿಧಿಂ ವಕ್ಷ್ಯೇ ಕಾರ್ತವೀರ್ಯಪ್ರಿಯಂಕರಂ ॥ ೬೧ ॥

ವೈಶಾಖೇ ಶ್ರಾವಣೇ ಮಾರ್ಗೇ ಕಾರ್ತಿಕಾಶ್ವಿನಪೌಷತಃ ।
ಮಾಘಫಾಲ್ಗುನಯೋರ್ಮಾಸೇ ದೀಪಾರಂಭಂ ಸಮಾಚರೇತ್ ॥ ೬೨ ॥

ತಿಥೌ ರಿಕ್ತವಿಹೀನಾಯಾಂ ವಾರೇ ಶನಿಕುಜೌ ವಿನಾ ।
ಹಸ್ತೋತ್ತರಾಶ್ವಿರೌದ್ರೇಷು ಪುಷ್ಯವೈಷ್ಣವವಾಯುಭೇ ॥ ೬೩ ॥

ದ್ವಿದೈವತೇ ಚ ರೋಹಿಣ್ಯಾಂ ದೀಪಾರಂಭೋ ಹಿತಾವಹಃ ।
ಚರಮೇ ಚ ವ್ಯತೀಪಾತೇ ಧೃತೌ ವೃದ್ಧೌ ಸುಕರ್ಮಣಿ ॥ ೬೪ ॥

ಪ್ರೀತೌ ಹರ್ಷೇ ಚ ಸೌಭಾಗ್ಯೇ ಶೋಭನಾಯುಷ್ಮತೋರಪಿ ।
ಕರಣೇ ವಿಷ್ಟಿರಹಿತೇ ಗ್ರಹಣೇಽರ್ಧೋದಯಾದಿಷು ॥ ೬೫ ॥

---

ಹಾಗೆಯೇ ತರ್ಪಣ ಹವನಗಳನ್ನು ಮಾಡಿದರೂ ಕಳ್ಳರು ಹತ್ತಿರ ಸುಳಿಯು ವುದಿಲ್ಲ. ಈಗ ಕಾರ್ತವೀರ್ಯಾರ್ಜುನನಿಗೆ ಪ್ರೀತಿಕರವಾದ ದೀಪವಿಧಾನ ವನ್ನು ಹೇಳುವೆನು.

೬೨. ವೈಶಾಖ, ಶ್ರಾವಣ, ಮಾರ್ಗಶೀರ್ಷ, ಕಾರ್ತೀಕ, ಆಶ್ವಯುಜ, ಪುಷ್ಯ, ಮಾಘ ಮತ್ತು ಫಾಲ್ಗುಣ ಈ ತಿಂಗಳುಗಳಲ್ಲಿ ದೀಪವನ್ನು ಹಚ್ಚು ವುದಕ್ಕೆ ಆರಂಭಿಸಬೇಕು.

೬೩-೬೬. ಚೌತಿ, ನವಮಿ ಮತ್ತು ಚತುರ್ದಶೀತಿಥಿಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿಯೂ, ಶನಿವಾರ ಮಂಗಳವಾರಗಳನ್ನು ಬಿಟ್ಟು ಉಳಿದ ವಾರಗಳಲ್ಲಿಯೂ, ಹಸ್ತ, ಉತ್ತರಾ, ಆಶ್ವಿನೀ, ಆರಿದ್ರ, ಪುಷ್ಯ, ಶ್ರವಣ, ಸ್ವಾತಿ, ವಿಶಾಖ ಮತ್ತು ರೋಹಿಣೀ ನಕ್ಷತ್ರಗಳಲ್ಲಿಯೂ ದೀಪವನ್ನಾರಂಭಿಸುವುದು ಶ್ರೇಯಸ್ಕರವು. ವೈಧೃತಿ, ವ್ಯತೀಪಾತ, ಧೃತಿ, ವೃದ್ಧಿ, ಸುಕರ್ಮ, ಪ್ರೀತಿ, ಹರ್ಷ, ಸೌಭಾಗ್ಯ, ಶೋಭನ, ಆಯುಷ್ಮತ್ ಈ ಯೋಗಗಳಲ್ಲಿಯೂ, ವಿಷ್ಟಿ

ಯೋಗೇಷು ರಾತ್ರೌ ಪೂರ್ವಾಹ್ಣೇ ದೀಪಾರಂಭಃ ಕೃತಃ ಶುಭಃ ।
ಕಾರ್ತಿಕೇ ಶುಕ್ಲಸಪ್ತಮ್ಯಾಂ ನಿಶೀಥೇತೀವ ಶೋಭನಃ ॥ ೬೬ ॥

ಯದಿ ತತ್ರ ರವೇರ್ವಾರಃ ಶ್ರವಣಂ ಭಂ ಚ ದುರ್ಲಭಂ ।
ಅತ್ಯಾವಶ್ಯಕಕಾರ್ಯೇಷು ಮಾಸಾದೀನಾಂ ನ ಶೋಧನಂ ॥ ೬೭ ॥

ಆದ್ಯೇ ಹ್ಯುಪೋಷ್ಯ ನಿಯತೋ ಬ್ರಹ್ಮಚಾರೀ ಶಯೀತ ಕೌ ।
ಪ್ರಾತಃ ಸ್ನಾತ್ವಾ ಶುದ್ಧಭೂಮೌ ಲಿಪ್ತಾಯಾಂ ಗೋಮಯೋದಕೈಃ ॥೬೮॥

ಪ್ರಾಣಾನಾಯಮ್ಯ ಸಂಕಲ್ಪ್ಯ ನ್ಯಾಸಾನ್ಪೂರ್ವೋದಿತಾಂಶ್ಚರೇತ್ ।
ಷಟ್ಕೋಣಂ ರಚಯೇದ್ಭೂಮೌ ರಕ್ತಚಂದನತಂಡುಲೈಃ ॥ ೬೯ ॥

---

ರಹಿತವಾದ ಕರಣಗಳಲ್ಲಿಯೂ, ಗ್ರಹಣ, ಅರ್ಧೋದಯ ಮುಂತಾದ ಪರ್ವಗಳಲ್ಲಿಯೂ ಸಹ ರಾತ್ರಿ ಅಥವಾ ಪ್ರಾತಃಕಾಲದಲ್ಲಿ ದೀಪವನ್ನಾರಂಭಿಸುವುದು ಮಂಗಳಕರವು. ಕಾರ್ತಿಕಮಾಸದ ಶುಕ್ಲಪಕ್ಷ ಸಪ್ತಮಿಯ ದಿವಸ ಅರ್ಧರಾತ್ರಿಯು ದೀಪಾರಂಭಕ್ಕೆ ಅತ್ಯಂತ ಪ್ರಶಸ್ತವು.

೬೭. ಆ ದಿನದಲ್ಲಿ ಭಾನುವಾರ, ದುರ್ಲಭವಾದ ಶ್ರವಣನಕ್ಷತ್ರ ಇವೆರಡೂ ಸೇರಿದರೆ ಇನ್ನೂ ಶ್ರೇಯಸ್ಕರವು. ಅತ್ಯಾವಶ್ಯಕವಾದ ಕಾರ್ಯೋದ್ದೇಶದಿಂದ ದೀಪದಾನ ಮಾಡಬೇಕಾದ ಸಂದರ್ಭದಲ್ಲಿ ಮಾಸ ಮುಂತಾದುವುಗಳನ್ನು ನೋಡಬೇಕಾಗಿಲ್ಲ.

## ದೀಪವಿಧಿಪ್ರಯೋಗ

೬೮-೬೯. ದೀಪವನ್ನು ಪ್ರಾರಂಭಿಸುವುದಕ್ಕೆ ಮೊದಲು ಉಪವಾಸ ಮಾಡಿ ಆ ದಿನ ಬ್ರಹ್ಮಚರ್ಯದಿಂದ ನೆಲದಮೇಲೆ ಮಲಗಬೇಕು. ಬೆಳಿಗ್ಯೆ ಸ್ನಾನಮಾಡಿ ಸಗಣಿಯಿಂದ ಸಾರಿಸಿದ ಪರಿಶುದ್ಧ ಭೂಮಿಯಲ್ಲಿ ಕುಳಿತು ಪ್ರಾಣಾಯಾಮ ಪೂರ್ವಕವಾಗಿ ಸಂಕಲ್ಪಮಾಡಿ ಹಿಂದೆ ಹೇಳಿರುವ ನ್ಯಾಸಗಳನ್ನು ಮಾಡಬೇಕು. ಬಳಿಕ ನೆಲದಮೇಲೆ ಕೆಂಪುಗಂಧಮಿಶ್ರಿತವಾದ ಅಕ್ಕಿಗಳಿಂದ ಷಟ್ಕೋಣಮಂಡಲವನ್ನು ರಚಿಸಬೇಕು.

**ಅಂತಃ ಸ್ಮರಂ ಸಮಾಲಿಖ್ಯ ಷಟ್ಕೋಣೇಷು ಸಮಾಲಿಖೇತ್ ।**
**ನವಾರ್ಣೈರ್ವೇಷ್ಟಯೇತ್ತಚ್ಚ ತ್ರಿಕೋಣಂ ತದ್ಬಹಿಃ ಪುನಃ ॥ ೭೦ ॥**

**ಏವಂ ವಿಲಿಖ್ಯತೇ ಯಂತ್ರೇ ನಿದಧ್ಯಾದ್ದೀಪಭಾಜನಂ ।**
**ಸ್ವರ್ಣಜಂ ರಜತೋತ್ಥಂ ವಾ ತಾಮ್ರಜಂ ತದಭಾವತಃ ॥ ೭೧ ॥**

**ಕಾಂಸ್ಯಪಾತ್ರಂ ಮೃಣ್ಮಯಂ ಚ ಕನಿಷ್ಠಂ ಲೋಹಜಂ ಮೃತೌ ।**
**ಶಾಂತಯೇ ಮುದ್ಗಚೂರ್ಣೋತ್ಥಂ ಸಂಧೌ ಗೋಧೂಮಚೂರ್ಣಕಂ॥೭೨॥**

**ಆಜ್ಯೇ ಪಲಸಹಸ್ರೇ ತು ಪಾತ್ರಂ ಶತಪಲಂ ಸ್ಮೃತಂ ।**
**ಆಜ್ಯೇಯುತಪಲೇ ಪಾತ್ರಂ ಪಲಪಂಚಶತೀಕೃತಂ ॥ ೭೩ ॥**

---

೭೦. ಅದರೊಳಗೆ ಮಧ್ಯದಲ್ಲಿ 'ಕ್ಲೀಂ' ಎಂಬ ಕಾಮಬೀಜಾಕ್ಷರವನ್ನು ಬರೆದು, ಮಂಡಲದ ಆರು ಮೂಲೆಗಳಲ್ಲಿ 'ಓಂ ಫ್ರೋಂ, ವ್ರೀಂ, ಭ್ರೂಂ, ಆಂ, ಹ್ರೀಂ' ಎಂಬ ಆರು ಬೀಜಾಕ್ಷರಗಳನ್ನು ಬರೆಯಬೇಕು. ಆ ಷಟ್ಕೋಣ ಮಂಡಲದ ಸುತ್ತಲೂ 'ಕಾರ್ತವೀರ್ಯಾರ್ಜುನಾಯ ನಮಃ' ಎಂಬ ಒಂಬತ್ತು ಅಕ್ಷರಗಳನ್ನೂ, ನಾಲ್ಕು ದಿಕ್ಕುಗಳಲ್ಲಿಯೂ 'ಫ್ರೋಂ, ಶ್ರೀಂ, ಹುಂ, ಫಟ್' ಎಂಬ ಬೀಜಾಕ್ಷರಗಳನ್ನೂ ಬರೆದು ಅದರ ಸುತ್ತಲೂ ಪುನಃ ತ್ರಿಕೋಣರೇಖೆಯನ್ನು ಬರೆಯಬೇಕು.

೭೧-೭೨. ಈ ರೀತಿ ಬರೆದ ಯಂತ್ರದಲ್ಲಿ ದೀಪಪಾತ್ರೆಯನ್ನು ಇಡಬೇಕು. ಬಂಗಾರ, ಬೆಳ್ಳಿ, ಅವಿಲ್ಲದಿದ್ದರೆ ತಾಮ್ರ ಅಥವಾ ಕಂಚು ಅಥವಾ ಮಣ್ಣು ಇವುಗಳಿಂದ ಮಾಡಿದ ಪಾತ್ರೆಯನ್ನು ದೀಪಕ್ಕಾಗಿ ಉಪಯೋಗಿಸಬೇಕು. ಇವುಗಳಲ್ಲಿ ಮಣ್ಣಿನ ಪಾತ್ರೆಯು ಕೀಳು. ಮಾರಣಪ್ರಯೋಗದಲ್ಲಿ ಲೋಹದಪಾತ್ರೆಯನ್ನೂ, ಶಾಂತಿಗೆ ಹೆಸರುಹಿಟ್ಟಿನ ಪಾತ್ರೆಯನ್ನೂ, ಸಂಧಿಕಾರ್ಯದಲ್ಲಿ ಗೋಧಿಹಿಟ್ಟಿನ ಪಾತ್ರೆಯನ್ನೂ ದೀಪಹಚ್ಚುವುದಕ್ಕೆ ಉಪಯೋಗಿಸಬೇಕು.

೭೩. ಸಾವಿರ ಪಲ ತುಪ್ಪದ ದೀಪ ಹಚ್ಚುವುದಕ್ಕೆ ಪಾತ್ರೆಯು ನೂರು ಪಲವುಳ್ಳದಾಗಿರಬೇಕು. ತುಪ್ಪವು ಹತ್ತುಸಾವಿರ ಪಲವಿದ್ದರೆ ಐನೂರು ಪಲದ ಪಾತ್ರೆಯನ್ನು ರಚಿಸಬೇಕು.

ಪಂಚಸಪ್ತತಿಸಂಖ್ಯೇ ತು ಪಾತ್ರಂ ಷಷ್ಟಿಪಲಂ ಸ್ಮೃತಂ ।
ತ್ರಿಸಹಸ್ರೇ ಘೃತಪಲೇ ಶರಾರ್ಕಪಲಭಾಜನಂ ॥ ೭೪ ॥

ದ್ವಿಸಹಸ್ರೇ ಶರಶಿವಮಿತಂ ಭಾಜನಮಿಷ್ಯತೇ ।
ಶತೇಽಕ್ಷಿಶರಸಂಖ್ಯಾತಮೇವಮನ್ಯತ್ರ ಕಲ್ಪಯೇತ್ ॥ ೭೫ ॥

ನಿತ್ಯದೀಪೇ ವಹ್ನಿಪಲಂ ಪಾತ್ರಮಾಜ್ಯಂ ಪಲಂ ಸ್ಮೃತಂ ।
ಏವಂ ಪಾತ್ರಂ ಪ್ರತಿಷ್ಠಾಪ್ಯ ವರ್ತೀಃ ಸೂತ್ರೋತ್ಥಿತಾಃ ಕ್ಷಿಪೇತ್ ॥ ೭೬ ॥

ಏಕಾ ತಿಸ್ರೋಽಥ ವಾ ಪಂಚ ಸಪ್ತಾದ್ಯಾ ವಿಷಮಾ ಅಪಿ ।
ತಿಥಿಮಾನಾದಾಸಹಸ್ರಂ ತಂತುಸಂಖ್ಯಾ ವಿನಿರ್ಮಿತಾಃ ॥ ೭೭ ॥

---

೭೪. ಎಪ್ಪತ್ತೈದು ಪಲತುಪ್ಪದಿಂದ ದೀಪ ಹಚ್ಚಬೇಕಾದರೆ ಅರವತ್ತು ಪಲತೂಕದ ಪಾತ್ರೆಯನ್ನು ರಚಿಸಬೇಕು. ಮೂರುಸಾವಿರಪಲತುಪ್ಪದ ದೀಪವನ್ನು ಹಚ್ಚಲು ನೂರಿಪ್ಪತ್ತೈದು ಪಲದ ಪಾತ್ರೆಯನ್ನು ರಚಿಸಬೇಕು.

೭೫. ಎರಡುಸಾವಿರ ಪಲ ತುಪ್ಪವಿದ್ದರೆ ನೂರುಹದಿನೈದು ಪಲಗಳ ಪಾತ್ರೆಯನ್ನೂ, ಒಂದುನೂರು ಪಲ ತುಪ್ಪದ ದೀಪಹಚ್ಚಲು ಐವತ್ತೆರಡು ಪಲಗಳ ಪಾತ್ರೆಯನ್ನೂ ರಚಿಸಬೇಕು. ಇದೇ ರೀತಿಯಾಗಿ ದೀಪಕ್ಕೆ ಉಪಯೋಗಿಸುವ ತುಪ್ಪದ ಪರಿಮಾಣಾನುಸಾರವಾಗಿ ಪಾತ್ರೆಯ ಪರಿಮಾಣವನ್ನೂ ನಿರ್ಧರಿಸಬೇಕು.

೭೬. ನಿತ್ಯ ದೀಪಕ್ಕೆ ಮೂರು ಪಲಗಳ ಪಾತ್ರೆ, ಒಂದು ಪಲ ತುಪ್ಪ ಇವುಗಳನ್ನು ಉಪಯೋಗಿಸಬೇಕು. ಈ ಪ್ರಕಾರ ಪಾತ್ರೆಯನ್ನು ಸ್ಥಾಪನೆಮಾಡಿ ಅದರಲ್ಲಿ ಎಳೆಬತ್ತಿಯನ್ನು ಹಾಕಬೇಕು.

೭೭. ಒಂದು, ಮೂರು, ಐದು ಮತ್ತು ಏಳು ಮುಂತಾಗಿ ಹದಿನೈದರಿಂದ ಸಾವಿರದವರೆಗೆ ವಿಷಮಸಂಖ್ಯಾಕಗಳಾದ ಎಳೆಗಳಿಂದ ರಚಿಸಿದ ಬತ್ತಿಯನ್ನು ದೀಪಕ್ಕೆ ಉಪಯೋಗಿಸಬೇಕು.

**ಗೋಘೃತಂ ಪ್ರಕ್ಷಿಪೇತ್ತತ್ರ ಶುದ್ಧವಸ್ತ್ರವಿಶೋಧಿತಂ ।**
**ಸಹಸ್ರಪಲಸಂಖ್ಯಾದಿ ದಶಾಂತಂ ಕಾರ್ಯಗೌರವಾತ್ ॥ ೭೮ ॥**

**ಸುವರ್ಣಾದಿಕೃತಾಂ ರಮ್ಯಾಂ ಶಲಾಕಾಂ ಷೋಡಶಾಂಗುಲಾಂ ।**
**ತದರ್ಧಾಂ ವಾ ತದರ್ಧಾಂ ವಾ ಸೂಕ್ಷ್ಮಾಗ್ರಾಂ ಸ್ಥೂಲಮೂಲಕಾಂ ॥೭೯॥**

**ವಿಮುಂಚೇದ್ದಕ್ಷಿಣೇ ಭಾಗೇ ಪಾತ್ರಮಧ್ಯೇ ಕೃತಾಗ್ರಿಕಾಂ ।**
**ಪಾತ್ರದಕ್ಷಿಣದಿಗ್ದೇಶೇ ಮುಕ್ತ್ವಾಂಗುಲಚತುಷ್ಟಯಂ ॥ ೮೦ ॥**

**ಅಧೋಗ್ರಾಂ ದಕ್ಷಿಣಾಧಾರಾಂ ನಿಖನೇಚ್ಛುರಿಕಾಂ ಶುಭಾಂ ।**
**ದೀಪಂ ಪ್ರಜ್ವಾಲಯೇತ್ತತ್ರ ಗಣೇಶಸ್ಮೃತಿಪೂರ್ವಕಂ ॥ ೮೧ ॥**

---

೭೮. ಹೀಗೆ ರಚಿಸಿದ ಪಾತ್ರೆಯಲ್ಲಿ ನಿರ್ಮಲವಸ್ತ್ರದಿಂದ ಶೋಧಿಸಿದ ಹಸುವಿನ ತುಪ್ಪವನ್ನು ಹಾಕಬೇಕು. ಉದ್ದೇಶ ಕಾರ್ಯದ ಯೋಗ್ಯತಾನುಸಾರವಾಗಿ ದೀಪಕ್ಕೆ ಉಪಯೋಗಿಸುವ ತುಪ್ಪವು ಸಾವಿರ ಪಲದಿಂದ ಹತ್ತು ಪಲದವರೆಗೂ ಇರಬೇಕು.

೭೯-೮೦. ಅವರವರಿಗೆ ದ್ರವ್ಯಾನುಕೂಲವಿದ್ದಂತೆ ಬಂಗಾರ ಮುಂತಾದ ಲೋಹಗಳಿಂದ ಮಾಡಿದ, ಮನೋಹರವಾದ, ಹದಿನಾರು ಅಥವಾ ಎಂಟು ಅಥವಾ ನಾಲ್ಕು ಅಂಗುಲ ಉದ್ದವುಳ್ಳ, ಸೂಕ್ಷ್ಮವಾದ ಅಗ್ರಭಾಗ, ಸ್ಥೂಲವಾದ ಬುಡಭಾಗವುಳ್ಳ, ಸಲಾಕೆಯನ್ನು ದೀಪಪಾತ್ರೆಯ ಬಲಭಾಗದಲ್ಲಿ ಅದರ ಮಧ್ಯದಲ್ಲಿ ಅಗ್ರಭಾಗವು ಬರುವಂತೆ ಇಡಬೇಕು.

೮೦-೮೧. ಪಾತ್ರೆಯ ಬಲಭಾಗದ ಸ್ಥಳದಲ್ಲಿ ನಾಲ್ಕು ಅಂಗುಲ ಪ್ರದೇಶವನ್ನು ಬಿಟ್ಟು, ಚೂರಿಯನ್ನು ಕೆಳಮುಖ ಮಾಡಿ ದಕ್ಷಿಣ ದಿಕ್ಕಿಗೆ ಧಾರೆಯನ್ನು ಮಾಡಿ ಭೂಮಿಯಲ್ಲಿ ಹೂಳಬೇಕು. ಅಲ್ಲಿ ಗಣೇಶಸ್ಮರಣೆ ಮಾಡುತ್ತಾ ದೀಪವನ್ನು ಉರಿಸಬೇಕು.

ದೀಪಾತ್ಪೂರ್ವತ್ರ ದಿಗ್ಭಾಗೇ ಸರ್ವತೋಭದ್ರಮಂಡಲೇ ।
ತಂಡುಲಾಷ್ಟದಲೇ ವಾಪಿ ವಿಧಿವತ್ಸ್ಥಾಪಯೇದ್ಘಟಂ ॥ ೮೨ ॥

ತತ್ರಾವಾಹ್ಯ ನೃಪಾಧೀಶಂ ಪೂಜಯೇತ್ಪೂರ್ವವತ್ಸುಧೀಃ ।
ಜಲಾಕ್ಷತಾನ್ಸಮಾದಾಯ ದೀಪಂ ಸಂಕಲ್ಪಯೇತ್ತತಃ ॥ ೮೩ ॥

ದೀಪಸಂಕಲ್ಪಮಂತ್ರೋಽಯಂ ಕಥ್ಯತೇ ದ್ವೀಷುಭೂಮಿತಃ ।
ಪ್ರಣವಃ ಪಾಶಮಾಯೇ ಚ ಶಿಖಾ ಕಾರ್ತಾಕ್ಷರಾಣಿ ಚ ॥ ೮೪ ॥

ವೀರ್ಯಾರ್ಜುನಾಯ ಮಾಹಿಷ್ಮತೀನಾಥಾಯ ಸಹಸ್ರ ಚ ।
ಬಾಹವೇ ಇತಿ ವರ್ಣಾಂತೇ ಸಹಸ್ರಪದಮುಚ್ಚರೇತ್ ॥ ೮೫ ॥

ಕ್ರತುದೀಕ್ಷಿತಹಸ್ತಾಯ ದತ್ತಾತ್ರೇಯಪ್ರಿಯಾಯ ಚ ।
ಆತ್ರೇಯಾನುಸೂಯಾಂತೇ ಗರ್ಭರತ್ನಾಯ ತತ್ಪರಂ ॥ ೮೬ ॥

---

೮೨. ದೀಪದ ಪೂರ್ವದಿಕ್ಕಿನಲ್ಲಿ ಸರ್ವತೋಭದ್ರಮಂಡಲ ಅಥವಾ ಅಕ್ಕಿಯಿಂದ ರಚಿಸಿದ ಅಷ್ಟದಳಗಳ ಪದ್ಮದಲ್ಲಿ ವಿಧಾನೋಕ್ತಪ್ರಕಾರ ಕುಂಭವನ್ನು ಸ್ಥಾಪಿಸಬೇಕು.

೮೩. ಅದರಲ್ಲಿ ಕಾರ್ತವೀರ್ಯಾರ್ಜುನರಾಜನನ್ನು ಆವಾಹನೆಮಾಡಿ ಪೂರ್ವೋಕ್ತಪ್ರಕಾರದಿಂದ ಪೂಜೆಮಾಡಬೇಕು. ತರುವಾಯ ನೀರು ಅಕ್ಷತೆಗಳನ್ನು ತೆಗೆದುಕೊಂಡು ದೀಪವನ್ನು ಸಂಕಲ್ಪಿಸಬೇಕು.

೮೪-೯೧. ಒಂದುನೂರೈವತ್ತೆರಡಕ್ಷರಗಳುಳ್ಳ ದೀಪಸಂಕಲ್ಪಮಂತ್ರವನ್ನು ಹೇಳುತ್ತೇನೆ:—(ಪಾಶ= ಆಂ, ಮಾಯಾ= ಹ್ರೀಂ, ಶಿಖಾ= ವಷಟ್, ವಾಮಕರ್ಣೇಂದುಸ್ಥಿತೌ ನಭೋಽಗ್ನೀ= ಊಬಿಂದುಯುತೌ ಹರೌ= ಹ್ರೂಂ, ಪಾಶ= ಆಂ, ಅಮುಕ ಎಂಬ ಪದದ ಸ್ಥಾನದಲ್ಲಿ ಸಾಧ್ಯನಾಮವನ್ನು ಸೇರಿಸಬೇಕು. ಮಾಯಾ= ಹ್ರೀಂ, ತಾರ= ಓಂ, ಸ್ವಂ ಬೀಜಂ= ಫ್ರೋಂ, ಆತ್ಮಭೂ= ಕ್ಲೀಂ, ಆಕಾಶದ್ವಯ= ಎರಡು ಹಕಾರಗಳು, ವಾಮನೇತ್ರಂ

ನಭೋಗ್ನೀ ವಾಮಕರ್ಣೇಂದುಸ್ಥಿತೌ ಪಾಶ ಇಮಂ ತತಃ ।
ದೀಪಂ ಗೃಹಾಣ ಅಮುಕಂ ರಕ್ಷ ರಕ್ಷ ಪದಂ ಪುನಃ ॥ ೮೭ ॥

ದುಷ್ಟಾನ್ನಾಶಯಯುಗ್ಮಂ ಸ್ಯಾತ್ತಥಾ ಪಾತಯ ಘಾತಯ ।
ಶತ್ರೂನ್ ಜಹಿದ್ವಯಂ ಮಾಯಾ ತಾರಃ ಸ್ವಂ ಬೀಜಮಾತ್ಮಭೂಃ ॥ ೮೮ ॥

ವಹ್ನಿಪ್ರಿಯಾ ಅನೇನಾಥ ದೀಪವರ್ಯೇಣ ಪಶ್ಚಿಮಾ ।
ಭಿಮುಖೇನಾಮುಕಂ ರಕ್ಷ ಅಮುಕಾಂತೇ ವರಪ್ರದಾ ॥ ೮೯ ॥

ನಾಯಾಕಾಶದ್ವಯಂ ವಾಮನೇತ್ರಚಂದ್ರಯುತಂ ಶಿವಾ ।
ವೇದಾದಿಕಾಮಚಾಮುಂಡಾಃ ಸ್ವಾಹಾ ತುಪೂ ಸಬಿಂದುಕೌ ॥ ೯೦ ॥

ಪ್ರಣವೋಗ್ನಿಪ್ರಿಯಾ ಮಂತ್ರೋ ನೇತ್ರಬಾಣಧರಾಕ್ಷರಃ ।
ದತ್ತಾತ್ರೇಯೋ ಮುನಿರ್ಮಾಲಾಮಂತ್ರಸ್ಯ ಪರಿಕೀರ್ತಿತಃ ॥ ೯೧ ॥

---

ಚಂದ್ರಯುತಂ= ಈ, ಬಿಂದುಗಳಿಂದ ಸಹಿತವಾದ= ಹೀಂ ಹೀಂ, ಶಿವಾ= ಹ್ರೀಂ ವೇದಾದಿ= ಓಂ, ಕಾಮ= ಕ್ಲೀಂ, ಚಾಮುಂಡಾ= ಚ್ರೀಂ, ತುಪೂಸ ಬಿಂದುಕೌ= ಅನುಸ್ವಾರಸಹಿತವಾದ ತವರ್ಗ ಪವರ್ಗಗಳ ಅಕ್ಷರಗಳು. ನೇತ್ರ ಬಾಣಧರಾಕ್ಷರಃ= 152 ಅಕ್ಷರಗಳುಳ್ಳದು) ಇದರಿಂದ ನಿಷ್ಪನ್ನವಾದ ಮಂತ್ರ— "ಓಂ ಅಂ ಹ್ರೀಂ ವಷಟ್ ಕಾರ್ತವೀರ್ಯಾರ್ಜುನಾಯ ಮಾಹಿಷ್ಮತೀ ನಾಥಾಯ ಸಹಸ್ರಬಾಹವೇ ಸಹಸ್ರಕ್ರತುದೀಕ್ಷಿತಹಸ್ತಾಯ ದತ್ತಾತ್ರೇಯ ಪ್ರಿಯಾಯ ಆತ್ರೇಯಾಯಾನಸೂಯಾಗರ್ಭರತ್ನಾಯ ಹ್ರೂಂ ಅಂ ಇಮಂ ದೀಪಂ ಗೃಹಾಣ ಅಮುಕಂ ರಕ್ಷ ರಕ್ಷ ದುಷ್ಟಾನ್ನಾಶಯ ನಾಶಯ ಪಾತಯ ಪಾತಯ ಘಾತಯ ಘಾತಯ ಶತ್ರೂನ್ ಜಹಿ ಜಹಿ ಹ್ರೀಂ ಓಂ ಫ್ರೇಂ ಕ್ಲೀಂ ಸ್ವಾಹಾ ಅನೇನ ದೀಪವರ್ಯೇಣ ಪಶ್ಚಿಮಾಭಿಮುಖೇನ ಅಮುಕಂ ರಕ್ಷ ಅಮುಕವರಪ್ರದಾನಾಯ ಹೀಂ ಹೀಂ ಹ್ರೀಂ ಓಂ ಕ್ಲೀಂ ಚ್ರೀಂ ಸ್ವಾಹಾ ತಂ ಥಂ ದಂ ಧಂ ನಂ ಪಂ ಫಂ ಬಂ ಭಂ ಮಂ ಓಂ ಸ್ವಾಹಾ" ಇದು ನೂರ ಐವತ್ತೆರಡಕ್ಷರಗಳುಳ್ಳ ದೀಪದಾನದ ಮಾಲಾಮಂತ್ರವು.

**ಛಂದೋಽಮಿತಂ ಕಾರ್ತವೀರ್ಯಾರ್ಜುನೋ ದೇವೋಽಖಿಲಾಪ್ತಿಕೃತ್ ।**
**ಚಾಮುಂಡಯಾ ಷಡಂಗಾನಿ ಚರೇತ್ ಷಡ್ದೀರ್ಘಯುಕ್ತಯಾ ॥ ೯೨ ॥**

**ಧ್ಯಾತ್ವಾ ದೇವಂ ತತೋ ಮಂತ್ರಂ ಪಠಿತ್ವಾಂತೇ ಕ್ಷಿಪೇಜ್ಜಲಂ ।**
**ಗೋವಿಂದಾಢ್ಯೋ ಹಲೀ ಸೇಂದುಶ್ಚಾಮುಂಡಾಬೀಜಮೀರಿತಂ ॥ ೯೩ ॥**

**ತತೋ ನವಾಕ್ಷರಂ ಮಂತ್ರಂ ಸಹಸ್ರಂ ತತ್ಪುರೋ ಜಪೇತ್ ।**
**ತಾರೋಽನಂತೋ ಬಿಂದುಯುಕ್ತೋ ಮಾಯಾಸ್ಪಂ ವಾಮನೇತ್ರಯುಕ್ ॥**

**ಕೂರ್ಮಾಗ್ನೀ ಶಾಂತಿಬಿಂದ್ವಾಢ್ಯೌ ವಹ್ನಿಜಾಯಾಂಕುಶಂ ಧ್ರುವಂ ।**
**ಋಷಿಃ ಪೂರ್ವೋದಿತೋಽನುಷ್ಟುಪ್‌ಛಂದೋಽನ್ಯತ್ಪೂರ್ವವತ್ಪುನಃ ॥ ೯೫ ॥**

---

೯೧-೯೨. ಈ ಮಂತ್ರಕ್ಕೆ ದತ್ತಾತ್ರೇಯನು ಋಷಿ, ಛಂದಸ್ಸು ಅಮಿತ, ದೇವತೆಯು ಕಾರ್ತವೀರ್ಯಾರ್ಜುನನು. ಈ ಮಂತ್ರವು ಸಕಲೇಷ್ಟಪ್ರದವು. "ಚ್ರಾಂ, ಚ್ರೀಂ, ಚ್ರೂಂ, ಚ್ರೈಂ, ಚ್ರೌಂ, ಚ್ರಃ" ಎಂಬುದಾಗಿ ಆರು ದೀರ್ಘಯುಕ್ತವಾದ ಚಾಮುಂಡೇಶ್ವರಿಯ ಬೀಜಾಕ್ಷರದಿಂದ ಹೃದಯಾದಿ ಆರು ಅಂಗಗಳಲ್ಲಿ ನ್ಯಾಸವಮಾಡಬೇಕು.

೯೩. ಮಂತ್ರದೇವತೆಯನ್ನು ಧ್ಯಾನಿಸಿ ತರುವಾಯ ಮಂತ್ರ ಹೇಳಿ ಕೊನೆಯಲ್ಲಿ ಕೈಯಲ್ಲಿ ನೀರನ್ನು ಹಾಕಿಕೊಂಡು ಬಿಡಬೇಕು.

(ಗೋವಿಂದ= ಈ, ಹಲೀ= ಚ, ಇಂದು= ೦) ಚ್ರೀಂ ಎಂಬುದು ಚಾಮುಂಡೇಶ್ವರಿಯ ಬೀಜವೆಂದು ಉಕ್ತವಾಗಿದೆ.

೯೪-೯೫. ತರುವಾಯ ಒಂಬತ್ತು ಅಕ್ಷರಗಳ ಮಂತ್ರವನ್ನು ದೀಪದ ಮುಂದೆ ಒಂದು ಸಾವಿರ ಜಪಮಾಡಬೇಕು.

ನವಾಕ್ಷರಮಂತ್ರ :—(ತಾರ= ಓಂ, ಅನಂತ= ಆ, ಬಿಂದು= ೦, ಮಾಯಾ= ಹ್ರೀಂ, ಸ್ಪಂ ವಾಮನೇತ್ರಯುಕ್= ಫ್ರೀಂ, ಕೂರ್ಮಾಗ್ನೀ ಶಾಂತಿ ಬಿಂದ್ವಾಢ್ಯೌ= ವ್ರೀಂ, ವಹ್ನಿಜಾಯಾ= ಸ್ವಾಹಾ, ಅಂಕುಶಂ= ಕ್ರೋಂ,

**ಸಹಸ್ರಂ ಮಂತ್ರರಾಜಂ ಚ ಜಪಿತ್ವಾ ಕವಚಂ ಪಠೇತ್ ।**
**ಏವಂ ದೀಪಪ್ರದಾನಸ್ಯ ಕರ್ತಾಪ್ನೋತ್ಯಖಿಲೇಪ್ಸಿತಂ ॥ ೯೬ ॥**

**ದೀಪಪ್ರಬೋಧಕಾಲೇ ತು ವರ್ಜಯೇದಶುಭಾಂ ಗಿರಂ ।**
**ವಿಪ್ರಸ್ಯ ದರ್ಶನಂ ತತ್ರ ಶುಭದಂ ಪರಿಕೀರ್ತಿತಂ ॥ ೯೭ ॥**

**ಶೂದ್ರಾಣಾಂ ಮಧ್ಯಮಂ ಪ್ರೋಕ್ತಂ ಮ್ಲೇಚ್ಛಸ್ಯ ವಧಬಂಧದಂ ।**
**ಆಖ್ವೋತ್ವೋರ್ದರ್ಶನಂ ದುಷ್ಟಂ ಗವಾಶ್ವಸ್ಯ ಸುಖಾವಹಂ ॥ ೯೮ ॥**

**ದೀಪಜ್ವಾಲಾಸಮಾಸಿದ್ಧ್ಯೈ ವಕ್ರಾ ನಾಶವಿಧಾಯಿನೀ ।**
**ಸಶಬ್ದಾ ಭಯದಾ ಕರ್ತುರುಜ್ವಲಾ ಸುಖದಾ ಮತಾ ॥ ೯೯ ॥**

---

ಧ್ರುವಂ= ಓಂ.) " ಓಂ ಅಂ ಹ್ರೀಂ ಫ್ರೋಂ ವ್ರೀಂ ಸ್ವಾಹಾ ಕ್ಲೋಂ ಓಂ " ಎಂಬುದೇ ನವಾಕ್ಷರ ಮಂತ್ರವು. ಈ ಮಂತ್ರಕ್ಕೆ ದತ್ತಾತ್ರೇಯನು ಋಷಿಯು· ಅನುಷ್ಟುಪ್ ಛಂದಸ್ಸು. ಪೂರ್ವದಂತೆಯೇ ಷಡಂಗಾದಿಗಳು ವಿಹಿತವಾಗಿವೆ.

೯೬. ಈ ಶ್ರೇಷ್ಠಮಂತ್ರವನ್ನು ಸಾವಿರಜಪಮಾಡಿ ಕವಚವನ್ನು ಪಠನೆ ಮಾಡಬೇಕು. ಈ ರೀತಿಯಾಗಿ ದೀಪ ದಾನಮಾಡಿದವನು ಸಕಲೇಷ್ಟಾರ್ಥಗಳನ್ನೂ ಪಡೆಯುವನು.

೯೭. ದೀಪವು ಉರಿಯುವ ಕಾಲದಲ್ಲಿ ಅಮಂಗಳ ಮಾತನ್ನಾಡಬಾರದು. ಆ ಸಂದರ್ಭದಲ್ಲಿ ಬ್ರಾಹ್ಮಣದರ್ಶನವು ಶುಭಪ್ರದವು.

೯೮. ಶೂದ್ರದರ್ಶನವು ಮಧ್ಯಮವು. ಮ್ಲೇಂಛದರ್ಶನವು ಸಂಹಾರ ಅಥವಾ ಬಂಧಕ್ಕೆ ಕಾರಣವಾಗುವುದು. ಇಲಿ ಬೆಕ್ಕುಗಳ ದರ್ಶನವು ದೂಷಿತವು. ಗೋವು ಕುದುರೆಗಳ ದರ್ಶನವು ಸುಖಪ್ರದವು.

೯೯. ಸಮನಾಗಿ ದೀಪ ಉರಿಯುತ್ತಿದ್ದರೆ ಸಿದ್ಧಿಯುಂಟಾಗುವುದು. ಅದು ಸೊಟ್ಟಾಗಿ ಉರಿದರೆ ನಾಶವುಂಟಾಗುವುದು. ದೀಪ ಉರಿಯುವಾಗ ಶಬ್ದ

ಕೃಷ್ಣಾ ಶತ್ರುಭಯೋತ್ಪತ್ತ್ಯೈ ವಮಂತೀ ಪಶುನಾಶಿನೀ ।
ಕೃತೇ ದೀಪೇ ಯದಾ ಪಾತ್ರಂ ಭಗ್ನಂ ಭವತಿ ದೈವತಃ　　॥ ೧೦೦ ॥

ಪಕ್ಷಾದರ್ವಾಕ್ತದಾ ಗಚ್ಛೇದ್ಯಜಮಾನೋ ಯಮಾಲಯಂ ।
ವರ್ತ್ಯಂತರಂ ಯದಾ ಕುರ್ಯಾತ್ಕಾರ್ಯಂ ಸಿದ್ಧ್ಯೇದ್ವಿಲಂಬತಃ　　॥ ೧೦೧ ॥

ನೇತ್ರಹೀನೋ ಭವೇತ್ಕರ್ತಾ ತಸ್ಮಿನ್ದೀಪಾಂತರೇ ಕೃತೇ ।
ಅಶುಚಿಸ್ಪರ್ಶನೇ ವ್ಯಾಧಿರ್ದೀಪನಾಶೇ ತು ಚೌರಭೀಃ　　॥ ೧೦೨ ॥

ಶ್ವಮಾರ್ಜಾರಾಖುಸಂಸ್ಪರ್ಶೇ ಭವೇದ್ಭೂಪತಿತೋ ಭಯಂ ।
ಯಾತ್ರಾರಂಭೇ ವಸುಪಲೈಃ ಕೃತೋ ದೀಪೋಽಖಿಲೇಷ್ಟದಃ　　॥ ೧೦೩ ॥

---

ವಾದರೆ ಕರ್ತೃವಿಗೆ ಭಯಸಂಭವಿಸುತ್ತದೆ. ಪ್ರಕಾಶಮಾನವಾಗಿ ಉರಿದರೆ ಸುಖವುಂಟಾಗುವುದು.

೧೦೦-೧೦೧. ದೀಪವು ಕಪ್ಪಾಗಿದ್ದರೆ ಶತ್ರುಭಯುವೂ, ಸಿಡಿಯುತ್ತಿದ್ದರೆ ಪಶುನಾಶವೂ ಸಂಭವಿಸುತ್ತದೆ. ದೀಪ ಹಚ್ಚಿದ ಮೇಲೆ ದೈವಿಕವಾಗಿ ಪಾತ್ರೆಯು ಒಡೆದು ಹೋದರೆ ಒಂದು ಪಕ್ಷದೊಳಗಾಗಿ ಯಜಮಾನನು ಸಾಯುವನು. ಮಧ್ಯದಲ್ಲಿ ಬೇರೆ ಬತ್ತಿಯನ್ನು ಸಂಯೋಜನೆ ಮಾಡಿದರೆ ಕಾರ್ಯಸಿದ್ಧಿಯು ವಿಲಂಬವಾಗುವುದು.

೧೦೨-೧೦೩. ಅದರಲ್ಲಿಯೇ ಬೇರೆ ದೀಪವನ್ನು ಮಾಡಿದರೆ ಯಜಮಾನನಿಗೆ ಕಣ್ಣು ಹೋಗುವುದು. ಅಶುದ್ಧಸ್ಪರ್ಶವಾದರೆ ರೋಗವೂ, ದೀಪವು ನಷ್ಟವಾದರೆ ಕಳ್ಳರ ಭಯವೂ, ನಾಯಿ, ಬೆಕ್ಕು, ಇಲಿಗಳ ಸಂಪರ್ಕವಾದರೆ ಭೂಪಾಲರಿಂದ ಭಯವೂ ಸಂಭವಿಸುವುದು. ಯಾತ್ರೆಗೆ ಹೋಗುವಾಗ ಎಂಟು ಪಲಗಳಿಂದ ಮಾಡಿದ ದೀಪವು ಸಕಲೇಷ್ಟಾರ್ಥಪ್ರದವಾಗುವುದು.

ತಸ್ಮಾದ್ದೀಪಃ ಪ್ರಯತ್ನೇನ ರಕ್ಷಣೀಯೋಂತರಾಯತಃ ।
ಆಸಮಾಪ್ತಿ ಪ್ರಕುರ್ವೀತ ಬ್ರಹ್ಮಚರ್ಯಂ ಚ ಭೂಶಯಃ ॥ ೧೦೪ ॥
ಸ್ತ್ರೀಶೂದ್ರಪತಿತಾದೀನಾಂ ಸಂಭಾಷಾಮಪಿ ವರ್ಜಯೇತ್ ।
ಜಪೇತ್ಸಹಸ್ರಂ ಪ್ರತ್ಯೇಕಂ ಮಂತ್ರರಾಜಂ ನವಾಕ್ಷರಂ ॥ ೧೦೫ ॥
ಸ್ತೋತ್ರಪಾಠಂ ಪ್ರತಿದಿನಂ ನಿಶೀಥಿನ್ಯಾಂ ವಿಶೇಷತಃ ।
ಏಕಪಾದೇನ ದೀಪಾಗ್ರೇ ಸ್ಥಿತ್ವಾ ಯೋ ಮಂತ್ರನಾಯಕಂ ॥ ೧೦೬ ॥
ಸಹಸ್ರಂ ಪ್ರಜಪೇದ್ರಾತ್ರೌ ಸೋಭೀಷ್ಟಂ ಕ್ಷಿಪ್ರಮಾಪ್ನುಯಾತ್ ।
ಸಮಾಪ್ಯ ಶೋಭನದಿನೇ ಸಂಭೋಜ್ಯ ದ್ವಿಜಸತ್ತಮಾನ್ ॥ ೧೦೭ ॥
ಕುಂಭೋದಕೇನ ಕರ್ತಾರಮಭಿಷಿಂಚೇನ್ಮನುಂ ಜಪೇತ್ ।
ಕರ್ತಾ ತು ದಕ್ಷಿಣಾಂ ದದ್ಯಾತ್ಪುಷ್ಕಲಾಂ ತೋಷಹೇತವೇ ॥ ೧೦೮ ॥

---

೧೦೪. ಆದಕಾರಣ ದೀಪವನ್ನು ವಿಘ್ನಗಳದೆಸೆಯಿಂದ ಪ್ರಯತ್ನಪಟ್ಟು ಕಾಪಾಡಬೇಕು. ಕೊನೆಯವರೆಗೂ ಬ್ರಹ್ಮಚರ್ಯೆ ನೆಲದ ಮೇಲೆ ಮಲಗುವುದು ಇವನ್ನು ಯಜಮಾನನು ನಡೆಯಿಸಬೇಕು.

೧೦೫. ಸ್ತ್ರೀಯರು, ಶೂದ್ರರು, ಪತಿತರು ಮುಂತಾದವರೊಡನೆ ಮಾತನ್ನೂ ಸಹ ಆಡಬಾರದು. ಪ್ರತ್ಯೇಕವಾಗಿಯೂ ಉತ್ತಮವಾದ ನವಾಕ್ಷರ ಮಂತ್ರವನ್ನು ಸಾವಿರಸಾರಿ ಜಪಮಾಡಬೇಕು.

೧೦೬-೧೦೭. ಪ್ರತಿದಿನವೂ ಸ್ತೋತ್ರವನ್ನು ಹೇಳಬೇಕು. ರಾತ್ರಿಯ ಕಾಲದಲ್ಲಿ ವಿಶೇಷವಾಗಿ ಪಠನೆಮಾಡಬೇಕು. ದೀಪದ ಮುಂದೆ ಒಂದೇ ಕಾಲಿನಿಂದ ನಿಂತು ಈ ಉತ್ತಮ ಮಂತ್ರವನ್ನು ರಾತ್ರಿಯ ಕಾಲದಲ್ಲಿ ಒಂದು ಸಾವಿರ ಜಪಿಸುವವನು ಬೇಗ ಇಷ್ಟಾರ್ಥವನ್ನು ಪಡೆಯುವನು.

೧೦೭-೧೦೮. ಹೀಗೆ ಜಪವಿಧಾನವನ್ನು ಮುಗಿಸಿ ಒಳ್ಳೆಯ ದಿನದಲ್ಲಿ ಬ್ರಾಹ್ಮಣೋತ್ತಮರಿಗೆ ಭೋಜನಮಾಡಿಸಿ ಅವರಿಂದ ಯಜಮಾನನಿಗೆ ಮಂತ್ರವನ್ನು ಜಪಿಸುತ್ತಾ ಅಭಿಷೇಕಮಾಡಿಸಬೇಕು. ಯಜಮಾನನಾದರೋ ಬ್ರಾಹ್ಮಣರಿಗೆ ಸಂತೋಷವಾಗುವಂತೆ ಹೆಚ್ಚಾಗಿ ದಕ್ಷಿಣೆಯನ್ನು ಕೊಡಬೇಕು.

ಗುರೌ ತುಷ್ಟೇ ದದಾತೀಷ್ಟಂ ಕೃತವೀರ್ಯಸುತೋ ನೃಪಃ ।
ಗುರ್ವಾಜ್ಞಯಾ ಸ್ವಯಂ ಕುರ್ಯಾದ್ಯದಿ ವಾ ಕಾರಯೇದ್ಗುರುಂ ॥ ೧೦೯ ॥

ದತ್ವಾ ಧನಾದಿಕಂ ತಸ್ಮೈ ದೀಪದಾನಾಯ ನಾರದ ।
ಗುರ್ವಾಜ್ಞಾಮಂತರಾ ಕುರ್ಯಾದ್ಯೋ ದೀಪಂ ಸ್ವೇಷ್ಟಸಿದ್ಧಯೇ ॥ ೧೧೦ ॥

ಸಿದ್ಧಿರ್ನ ಜಾಯತೇ ತಸ್ಯ ಹಾನಿರೇವ ಪದೇಪದೇ ।
ಉತ್ತಮಂ ಗೋಘೃತಂ ಪ್ರೋಕ್ತಂ ಮಧ್ಯಮಂ ಮಹಿಷೀಭವಂ ॥ ೧೧೧ ॥

ತಿಲತೈಲಂ ತು ತಾದೃಕ್ ಸ್ಯಾತ್ಕನೀಯೋಜಾದಿಜಂ ಘೃತಂ ।
ಆಸ್ಯರೋಗೇ ಸುಗಂಧೇನ ದದ್ಯಾತ್ತೈಲೇನ ದೀಪಕಂ ॥ ೧೧೨ ॥

ಸಿದ್ಧಾರ್ಥಸಂಭವೇನಾಥ ದ್ವಿಷತಾಂ ನಾಶನಾಯ ಚ ।
ಸಹಸ್ರೇಣ ಪಲೈರ್ದೀಪೇ ವಿಹಿತೇ ಚ ನ ದೃಶ್ಯತೇ ॥ ೧೧೩ ॥

---

೧೦೯. ಗುರುಗಳನ್ನು ಸಂತೋಷಪಡಿಸಿದರೆ ಕಾರ್ತವೀರ್ಯಾರ್ಜುನ ರಾಜನು ಇಷ್ಟಾರ್ಥವನ್ನು ಕೊಡುವನು. ಗುರುಗಳ ಅಪ್ಪಣೆಯನ್ನು ಪಡೆದು ತಾನು ದೀಪದಾನವನ್ನು ಮಾಡಬೇಕು. ಅಥವಾ ಗುರುಗಳಿಂದಲೇ ಮಾಡಿಸಬೇಕು.

೧೧೦-೧೧೧. ನಾರದನೇ! ಗುರುಗಳಿಗೆ ದೀಪದಾನಕ್ಕಾಗಿ ತಾನೇ ಹಣ ಮುಂತಾದುವನ್ನು ಕೊಟ್ಟು ಮಾಡಿಸಬೇಕು. ಗುರುಗಳ ಅಪ್ಪಣೆಯನ್ನು ಪಡೆಯದೆ ದೀಪವಿಧಾನವನ್ನು ಆಚರಿಸುವವನು ಇಷ್ಟಾರ್ಥಸಾಧಕವಾದ ಸಿದ್ಧಿಯನ್ನು ಹೊಂದುವುದಿಲ್ಲ. ಅಂತಹವನಿಗೆ ಆಗಾಗ ಹಾನಿಯೇ ಆಗುವುದು. ಹಸುವಿನ ತುಪ್ಪವು ದೀಪಕ್ಕೆ ಉತ್ತಮ. ಎಮ್ಮೆಯದು ಮಧ್ಯಮವು.

೧೧೨. ಎಳ್ಳೆಣ್ಣೆಯೂ ಮಧ್ಯಮವು. ಮೇಕೆ ಮುಂತಾದುವುಗಳ ತುಪ್ಪವು ಅಧಮ. ಬಾಯಿಯಲ್ಲಿ ರೋಗವು ಬಂದಾಗ ಸುಗಂಧತೈಲದಿಂದ ದೀಪದಾನ ಮಾಡಿದರೆ ಅದು ವಾಸಿಯಾಗುವುದು.

೧೧೩. ಸಿದ್ಧಿಯನ್ನು ಪಡೆದ ಪುರುಷನು ಶತ್ರುನಾಶಕ್ಕಾಗಿ ಸಹಸ್ರ ಪಲಗಳಿಂದ ದೀಪವನ್ನು ರಚಿಸಿದರೆ ಶೀಘ್ರವಾಗಿ ಶುತ್ರುಗಳು ಅದೃಶ್ಯರಾಗುವರು.

ಕಾರ್ಯಸಿದ್ಧಿಸ್ತಥಾ ಕುರ್ಯಾತ್ರಿವಾರಂ ದೀಪಜಂ ವಿಧಿಂ ।
ತದಾ ಸುದರ್ಲಭಮಪಿ ಕಾರ್ಯಂ ಸಿದ್ಧ್ಯೇನ್ನ ಸಂಶಯಃ ॥ ೧೧೪ ॥
ದೀಪಪ್ರಿಯಃ ಕಾರ್ತವೀರ್ಯೋ ಮಾರ್ತಂಡೋ ನತಿವಲ್ಲಭಃ ।
ಸ್ತುತಿಪ್ರಿಯೋ ಮಹಾವಿಷ್ಣುರ್ಗಣೇಶಸ್ತರ್ಪಣಪ್ರಿಯಃ ॥ ೧೧೫ ॥
ದುರ್ಗಾರ್ಚನಪ್ರಿಯಾ ನೂನಮಭಿಷೇಕಪ್ರಿಯಃ ಶಿವಃ ।
ತಸ್ಮಾತ್ತೇಷಾಂ ಪ್ರತೋಷಾಯ ವಿದಧ್ಯಾತ್ತತ್ತದಾದರಾತ್ ॥ ೧೧೬ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಪಾದೇ ಕಾರ್ತವೀರ್ಯ ಮಾಹಾತ್ಮ್ಯೇ ಮಂತ್ರದೀಪ
ಕಥನಂ ನಾಮ ಷಟ್ಸಪ್ತತಿತಮೋಽಧ್ಯಾಯಃ

---

೧೧೪. ವಿಧಾನೋಕ್ತಪ್ರಕಾರ ಮೂರಾವರ್ತಿ ದೀಪದಾನಮಾಡಿದರೆ ಉದ್ದೇಶ್ಯಸಿದ್ಧಿಯಾಗಿ ಹೊಂದಲಶಕ್ಯವಾದ ಫಲವೂ ಸಹ ಲಭಿಸುವುದು; ಸಂದೇಹ ವಿಲ್ಲ.

೧೧೫-೧೧೬. ಕಾರ್ತವೀರ್ಯಾರ್ಜುನಮಹಾರಾಜನಿಗೆ ದೀಪವು ಪ್ರಿಯ ವಾದುದು. ಸೂರ್ಯನು ನಮಸ್ಕಾರಪ್ರಿಯನು. ಮಹಾವಿಷ್ಣುವು ಸ್ತೋತ್ರಪ್ರಿಯನು. ಗಣೇಶನಿಗೆ ತರ್ಪಣದಲ್ಲಿ ಪ್ರೀತಿ. ದುರ್ಗಾದೇವಿಗೆ ಪೂಜೆಯಲ್ಲಿ ಅಭಿಮಾನವು. ರುದ್ರನು ಅಭಿಷೇಕಪ್ರಿಯನು. ಆದಕಾರಣ ಆಯಾ ದೇವತೆಗಳನ್ನು ಸಂತೋಷ ಪಡಿಸಿ ಅನುಗ್ರಹವನ್ನು ಸಂಪಾದಿಸುವುದಕ್ಕಾಗಿ ಅವರವರಿಗೆ ಪ್ರಿಯವಾದುದನ್ನು ಭಕ್ತಿಯಿಂದ ಆಚರಿಸಬೇಕು.

ಇಂತು ಶ್ರೀನಾರದೀಯಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ಮೂರನೆಯ ಪಾದದಲ್ಲಿ ಕಾರ್ತವೀರ್ಯಮಹಿಮೆ ಮತ್ತು
ಮಂತ್ರದೀಪವರ್ಣನೆಯೆಂಬ ಎಪ್ಪತ್ತಾರನೆಯ ಅಧ್ಯಾಯವು
ಮುಗಿದುದು.

## ಕಥಾಸಂಗ್ರಹ

ಕಾರ್ತವೀರ್ಯಾರ್ಜುನನ ಮಾಹಾತ್ಮ್ಯೆಯನ್ನು ಹೇಳತೊಡಗಿ ಮಂತ್ರ, ಅದರ ಜಪಕ್ರಮ, ಫಲ ಮುಂತಾದುವುಗಳನ್ನು ನಿರೂಪಿಸಿ ಕಾರ್ತವೀರ್ಯಾರ್ಜುನನ ಗಾಯತ್ರಿಯನ್ನೂ ಮತ್ತು ಮಾಲಾಮಂತ್ರವನ್ನೂ ಸಹ ಹೇಳಿದೆ. ಬಳಿಕ ದೀಪವಿಧಾನವನ್ನೂ ವಿಸ್ತಾರವಾಗಿ ನಿರೂಪಿಸಿದೆ.

# ಸಪ್ತಸಪ್ತತಿತಮೋಽಧ್ಯಾಯಃ

ನಾರದ ಉವಾಚ

ಸಾಧುಸಾಧು ಮಹಾಪ್ರಾಜ್ಞ ಸರ್ವತಂತ್ರವಿಶಾರದ ।
ತ್ವಯಾ ಮಹ್ಯಂ ಸಮಾಖ್ಯಾತಂ ವಿಧಾನಂ ತಂತ್ರಗೋಪಿತಂ ॥ ೧

ಅಧುನಾ ತು ಮಹಾಭಾಗ ಕಾರ್ತವೀರ್ಯಹನೂಮತೋಃ ।
ಕವಚೇ ಶ್ರೋತುಮಿಚ್ಛಾಮಿ ತದ್ವದಸ್ವ ಕೃಪಾನಿಧೇ ॥ ೨ ॥

ಸನತ್ಕುಮಾರ ಉವಾಚ

ಶೃಣು ವಿಪ್ರೇಂದ್ರ ವಕ್ಷ್ಯಾಮಿ ಕವಚಂ ಪರಮಾದ್ಭುತಂ ।
ಕಾರ್ತವೀರ್ಯಸ್ಯ ಯೇನಾಸೌ ಪ್ರಸನ್ನಃ ಕಾರ್ಯಸಿದ್ಧಿಕೃತ್ ॥ ೩ ॥

ಸಹಸ್ರಾದಿತ್ಯಸಂಕಾಶೇ ನಾನಾರತ್ನಸಮುಜ್ವಲೇ ।
ಭಾಸ್ವದ್ಧ್ವಜಪತಾಕಾಢ್ಯೇ ತುರಗಾಯುತಭೂಷಿತೇ ॥ ೪ ॥

---

## ಎಪ್ಪತ್ತೇಳನೆಯ ಅಧ್ಯಾಯವು

೧-೨. ನಾರದನು ಹೇಳಿದನು:—ಸಕಲತಂತ್ರವಿಶಾರದನಾದ ಮಹಾಜ್ಞಾನಿಯೇ! ಒಳ್ಳೆಯದು! ಒಳ್ಳೆಯದು! ತಂತ್ರಗಳಲ್ಲಿ ರಹಸ್ಯವಾದ ವಿಧಾನವು ನಿನ್ನಿಂದ ಹೇಳಲ್ಪಟ್ಟಿತು. ಭಾಗ್ಯಶಾಲಿಯಾದ ದಯಾಸಾಗರನೇ! ಈಗ ಕಾರ್ತವೀರ್ಯ ಮತ್ತು ಹನುಮಂತನ ಕವಚಗಳನ್ನು ಕೇಳಬಯಸುವೆನು. ಅವನ್ನು ನನಗೆ ಹೇಳು.

೩. ಸನತ್ಕುಮಾರನು ಹೇಳಿದನು:—ಬ್ರಾಹ್ಮಣೋತ್ತಮನೇ! ಕೇಳು, ಕಾರ್ತವೀರ್ಯನು ಪ್ರಸನ್ನನಾಗಿ ಕಾರ್ಯಸಿದ್ಧಿಯನ್ನುಂಟುಮಾಡುವುದಕ್ಕೆ ಸಾಧಕವಾದ ಅವನ ಕವಚವನ್ನು ಹೇಳುವೆನು.

೪-೧೪. ಒಂದುಸಾವಿರ ಸೂರ್ಯರಿಗೆ ಸಮಾನವಾದ, ನಾನಾವಿಧ ರತ್ನಗಳಿಂದ ಹೊಳೆಯುತ್ತಿರುವ, ಪ್ರಕಾಶಮಾನವಾದ ಧ್ವಜಪತಾಕೆಗಳಿಂದ ಯುಕ್ತ

ಮಹಾಸಂವರ್ತಕಾಂಬೋಧಿಭೀಮರಾವವಿರಾವಿಣಿ ।
ಸಮುದ್ಧೃತಮಹಾಛತ್ರವಿತಾನಿತವಿಯತ್ಪಥೇ ॥ ೫ ॥

ಮಹಾರಥವರೇ ದೀಪ್ತನಾನಾಯುಧವಿರಾಜಿತೇ ।
ಸುಸ್ಥಿತಂ ವಿಪುಲೋದಾರಂ ಸಹಸ್ರಭುಜಮಂಡಿತಂ ॥ ೬ ॥

ವಾಮೈರುದ್ದಂಡಕೋದಂಡಾನ್ದಧಾನಮಪರೈಃ ಶರಾನ್ ।
ಕಿರೀಟಹಾರಮುಕುಟಕೇಯೂರವಲಯಾಂಗದೈಃ ॥ ೭ ॥

ಮುದ್ರಿಕೋದರಬಂಧಾದ್ಯೈರ್ಮಂಜೀನೂಪುರಕಾದಿಭಿಃ ।
ಭೂಷಿತಂ ವಿವಿಧಾಕಲ್ಪೈರ್ಭಾಸ್ವರೈಃ ಸುಮಹಾಧನೈಃ ॥ ೮ ॥

ಆಬದ್ಧಕವಚಂ ವೀರಂ ಸುಪ್ರಸನ್ನಾನನಾಂಬುಜಂ ।
ಧನುರ್ಜ್ಯಾಸಿಂಹನಾದೇನ ಕಂಪಯಂತಂ ಜಗತ್ತ್ರಯಂ ॥ ೯ ॥

---

ವಾದ, ಹತ್ತುಸಾವಿರ ಕುದುರೆಗಳಿಂದ ಅಲಂಕೃತವಾದ, ಮಹಾಪ್ರಳಯಸಮುದ್ರದ ಭಯಂಕರ ಶಬ್ದದಂತೆ ಧ್ವನಿಮಾಡುತ್ತಿರುವ, ಮೇಲ್ಭಾಗದಲ್ಲಿ ಎತ್ತಿಕೊಂಡಿರುವ ಮಹಾಛತ್ರ ಮತ್ತು ಮೇಲ್ಕಟ್ಟುಗಳುಳ್ಳ, ಪ್ರಕಾಶಮಾನವಾದ ನಾನಾವಿಧವಾದ ಆಯುಧಗಳಿಂದ ವಿರಾಜಿಸುತ್ತಿರುವ, ಶ್ರೇಷ್ಠವಾದ ಮಹಾರಥದಲ್ಲಿ ಕುಳಿತಿರುವ, ಮಹಾ ಉದಾರಿಯಾದ, ಸಾವಿರಭುಜಗಳಿಂದಲಂಕೃತನಾದ, ಎಡಭುಜಗಳಿಂದ ಉದ್ದಂಡ ಧನುಸ್ಸುಗಳನ್ನೂ ಬಲಗೈಗಳಿಂದ ಬಾಣಗಳನ್ನೂ ಧರಿಸಿಕೊಂಡಿರುವ, ಕಿರೀಟ, ಹಾರ, ಬಾಹ್ವಾಭರಣ, ಕಡಗ, ಅಂಗದ, ಮುದ್ರೆಯುಉಂಗುರು, ನಡುಕಟ್ಟು ಮುಂತಾದುವುಗಳಿಂದಲೂ ಉಡೆದಾರ, ಪಾದಾಭರಣ, ಮುಂತಾದುವುಗಳಿಂದಲೂ ಮತ್ತು ಅಮೂಲ್ಯವೂ ಪ್ರಕಾಶಮಾನವೂ ಆಗಿರುವ ನಾನಾವಿಧ ಅಲಂಕಾರಗಳಿಂದ ಭೂಷಿತನಾದ, ಕವಚವನ್ನು ತೊಟ್ಟಿರುವ, ಪರಾಕ್ರಮಶಾಲಿಯಾದ, ಅತ್ಯಂತ ಪ್ರಸನ್ನವಾದ ಮುಖಕಮಲವುಳ್ಳ, ಧನುಷ್ಟಂಕಾರ ಮತ್ತು ಸಿಂಹನಾದಗಳಿಂದ ಮೂರುಲೋಕಗಳನ್ನೂ ನಡುಗಿಸುತ್ತಿರುವ, ಸಕಲ ಶತ್ರುಗಳನ್ನೂ ನಾಶಮಾಡಿರುವ, ಸಕಲರೋಗಪರಿಹಾರಕನಾದ, ಸಕಲಸಂಪತ್ತುಗಳನ್ನೂ ಕೊಡುವ, ವಿಜಯಲಕ್ಷ್ಮಿಯಿಂದ ಸೇವಿತನಾದ, ಸಕಲಸೌಭಾಗ್ಯಗಳ

ಸರ್ವಶತ್ರುಕ್ಷಯಕರಂ ಸರ್ವವ್ಯಾಧಿವಿನಾಶನಂ ।
ಸರ್ವಸಂಪತ್ಪ್ರದಾತಾರಂ ವಿಜಯಶ್ರೀನಿಷೇವಿತಂ　　॥ ೧೦ ॥

ಸರ್ವಸೌಭಾಗ್ಯದಂ ಭದ್ರಂ ಭಕ್ತಾಭಯವಿಧಾಯಿನಂ ।
ದಿವ್ಯಮಾಲ್ಯಾನುಲೇಪಾಢ್ಯಂ ಸರ್ವಲಕ್ಷಣಸಂಯುತಂ　　॥ ೧೧ ॥

ರಥನಾಗಾಶ್ವಪಾದಾತವೃಂದಮಧ್ಯಗಮೀಶ್ವರಂ ।
ವರದಂ ಚಕ್ರವರ್ತಿನಂ ಸರ್ವಲೋಕೈಕಪಾಲಕಂ　　॥ ೧೨ ॥

ಸಮಾನೋದಿತಸಾಹಸ್ರದಿವಾಕರಸಮದ್ಯುತಿಂ ।
ಮಹಾಯೋಗಭವೈಶ್ವರ್ಯಕೀರ್ತ್ಯಾಕ್ರಾಂತಜಗತ್ತ್ರಯಂ　　॥ ೧೩ ॥

ಶ್ರೀಮಚ್ಚಕ್ರಂ ಹರೇರಂಶಾದವತೀರ್ಣಂ ಮಹೀತಲೇ ।
ಸಮ್ಯಗಾತ್ಮಾದಿಭೇದೇನ ಧ್ಯಾತ್ವಾ ರಕ್ಷಾಮುದೀರಯೇತ್　　॥ ೧೪ ॥

ಅಸ್ಯಾಂಗಮೂರ್ತಯಃ ಪಂಚ ಪಾಂತು ಮಾಂ ಸ್ಫಟಿಕೋಜ್ವಲಾಃ ।
ಅಗ್ನೀಶಾಸುರವಾಯವ್ಯಕೋಣೇಷು ಹೃದಯಾದಿಕಾಃ　　॥ ೧೫ ॥

---

ನ್ನೀಯುವ ಮಂಗಳಕರನೂ ಭಕ್ತರಿಗೆ ಅಭಯದಾತೃವೂ ಆಗಿರುವ, ದಿವ್ಯಮಾಲಿಕೆ ಗಂಧಗಳಿಂದ ಯುಕ್ತನಾದ, ಸಕಲಸಲ್ಲಕ್ಷಣಗಳಿಂದ ಕೂಡಿರುವ ರಥ, ಆನೆ, ಕುದುರೆ, ಕಾಲಾಳುಗಳ ಸಮುದಾಯದ ಮಧ್ಯದಲ್ಲಿರುವ ಒಡೆಯನೂ, ವರಪ್ರದನೂ, ಚಕ್ರವರ್ತಿಯೂ, ಲೋಕಕ್ಕೆಲ್ಲಾ ಮುಖ್ಯಪಾಲಕನೂ, ಆಗಿರುವ ಒಂದೇ ಕಾಲದಲ್ಲಿ ಉದಯಿಸಿದ ಸಾವಿರಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ, ಮಹಾಯೋಗವೈಭವದಿಂದುಂಟಾದ ಐಶ್ವರ್ಯ ಕೀರ್ತಿಗಳಿಂದ ಆವರಿಸಲ್ಪಟ್ಟ ಮೂರು ಲೋಕಗಳುಳ್ಳ, ಭೂಮಿಯಲ್ಲಿ ವಿಷ್ಣುವಿನ ಚಕ್ರಾವೇಶದಿಂದವತರಿಸಿದ ಕಾರ್ತವೀರ್ಯಾರ್ಜುನನನ್ನು ಆತ್ಮಾದಿಭಿನ್ನನೆಂದು ಚೆನ್ನಾಗಿ ಧ್ಯಾನಿಸಿ ರಕ್ಷೆಯನ್ನು ಹೇಳಬೇಕು.

೧೫-೧೬. ಸ್ಫಟಿಕದಂತೆ ಹೊಳೆಯುತ್ತಿರುವ, ಆಗ್ನೇಯ, ಈಶಾನ್ಯ, ನೈರುತ್ಯ, ವಾಯವ್ಯ ಮೂಲೆಗಳಲ್ಲಿ ಹೃದಯಾದಿಗಳುಳ್ಳ, ಎಲ್ಲಾ ಕಡೆಯಲ್ಲೂ

ಸರ್ವತೋಽಸ್ತ್ರಜ್ವಲದ್ರೂಪಾ ದರಚರ್ಮಾಸಿಪಾಣಯಃ ।
ಅವ್ಯಾಹತಬಲೈಶ್ವರ್ಯಶಕ್ತಿಸಾಮರ್ಥ್ಯವಿಗ್ರಹಾಃ ॥ ೧೬ ॥

ಕ್ಷೇಮಂಕರೀಶಕ್ತಿಯುತಶ್ಚೌರವರ್ಗವಿಭಂಜನಃ ।
ಪ್ರಾಚೀಂ ದಿಶಂ ರಕ್ಷತು ಮೇ ಬಾಣಬಾಣಾಸನಾಯುಧಃ ॥ ೧೭ ॥

ಶ್ರೀಕರೀಶ್ತ್ತಕ್ತಿಸಹಿತೋ ಮಾರೀಭಯವಿನಾಶಕಃ ।
ಶರಚಾಪಧರಃ ಶ್ರೀಮಾನ್ ದಿಶಂ ಮೇ ಪಾತು ದಕ್ಷಿಣಾಂ ॥ ೧೮ ॥

ಮಹಾವಶ್ಯಕರೀಯುಕ್ತಃ ಸರ್ವಶತ್ರುವಿನಾಶಕೃತ್ ।
ಮಹೇಷುಚಾಪಧೃಕ್ಪಾತು ಮಮ ಪ್ರಾಚೇತಸೀಂ ದಿಶಂ ॥ ೧೯ ॥

ಯಶಸ್ಕರ್ಯಾ ಸಮಾಯುಕ್ತೋ ದೈತ್ಯಸಂಘವಿನಾಶನಃ ।
ಪರಿರಕ್ಷತು ಮೇ ಸಮ್ಯಗ್ನಿದಿಶಂ ಚೈತ್ರಭಾನವೀಂ ॥ ೨೦ ॥

---

ಅಸ್ತ್ರದಂತೆ ವಿರಾಜಿಸುತ್ತಿರುವ ರೂಪವುಳ್ಳ ಶಂಖ, ಚರ್ಮ, ಖಡ್ಗಗಳನ್ನು ಧರಿಸಿದ ಹಸ್ತಗಳುಳ್ಳ, ಸವೆಯದಂತಹ ಬಲ, ಐಶ್ವರ್ಯ, ಶಕ್ತಿ ಸಾಮರ್ಥ್ಯಗಳಿಂದ ಕೂಡಿರುವ ಶರೀರವುಳ್ಳ ಈ ಕಾರ್ತವೀರ್ಯಾರ್ಜುನನ ಐದು ಅಂಗಮೂರ್ತಿಗಳು ನನ್ನನ್ನು ರಕ್ಷಿಸಲಿ.

೧೭. ಬಾಣಬತ್ತಳಿಕೆಗಳೇ ಆಯುಧವಾಗಿಯುಳ್ಳ, ಚೋರಸಮೂಹನಾಶಕನಾದ ಕ್ಷೇಮಂಕರೀ ಶಕ್ತಿಯುತನು ನನ್ನನ್ನು ಪೂರ್ವದಿಕ್ಕಿನಲ್ಲಿ ರಕ್ಷಿಸಲಿ.

೧೮. ಮಾರೀಭಯಪರಿಹಾರಕನೂ, ಬಾಣಧನುರ್ಧಾರಿಯೂ, ಶ್ರೀಮಂತನೂ ಆದ ಶ್ರೀಕರೀಶಕ್ತಿಸಹಿತನು ನನ್ನನ್ನು ದಕ್ಷಿಣದಿಕ್ಕಿನಲ್ಲಿ ಕಾಪಾಡಲಿ.

೧೯. ಮಹಾಬಾಣಧನುರ್ಧಾರಿಯಾದ, ಸಕಲಶತ್ರುಗಳನ್ನೂ ನಾಶಪಡಿಸುವ ಮಹಾವಶ್ಯಕರೀ ಶಕ್ತಿಯುತನು ನನ್ನನ್ನು ಪಶ್ಚಿಮದಿಕ್ಕಿನಲ್ಲಿ ರಕ್ಷಿಸಲಿ.

೨೦. ದೈತ್ಯಸಮೂಹನಾಶಕನಾದ ಯಶಸ್ಕರೀಶಕ್ತಿಯಿಂದ ಕೂಡಿದ ಕಾರ್ತವೀರ್ಯನು ನನ್ನನ್ನು ಆಗ್ನೇಯದಿಕ್ಕಿನಲ್ಲಿ ಕಾಪಾಡಲಿ.

ವಿದ್ಯಾಕರೀಸಮಾಯುಕ್ತಃ ಸುಮಹದ್ದುಃಖನಾಶನಃ ।
ಪಾತು ಮೇ ನೈಋತಿಂ ಚಾಪಪಾಣಿರ್ನಿದಿಶಮೀಶ್ವರಃ ॥ ೨೧ ॥

ಧನಕರ್ರ್ಯಾ ಸಮಾಯುಕ್ತೋ ಮಹಾದುರಿತನಾಶನಃ ।
ಇಷ್ವಾಸನೇಷುಧೃಕ್ಪಾತು ವಿದಿಶಂ ಮಮ ವಾಯವೀಂ ॥ ೨೨ ॥

ಆಯುಷ್ಕರ್ರ್ಯಾ ಯುತಃ ಶ್ರೀಮಾನ್ಮಹಾಭಯವಿನಾಶನಃ ।
ಚಾಪೇಷುಧಾರೀ ಶೈವೀಂ ಮೇ ವಿದಿಶಂ ಪರಿರಕ್ಷತು ॥ ೨೩ ॥

ವಿಜಯಶ್ರೀಯುತಃ ಸಾಕ್ಷಾತ್ಸಹಸ್ರಾರಧರೋ ವಿಭುಃ ।
ದಿಶಮೂರ್ಧ್ವಾಮವತು ಮೇ ಸರ್ವದುಷ್ಟಭಯಂಕರಃ ॥ ೨೪ ॥

ಶಂಖಭೃತ್ಸುಮಹಾಶಕ್ತಿಸಂಯುತೋಽಸ್ಯಧರಾಂ ದಿಶಂ ।
ಪರಿರಕ್ಷತು ಮೇ ದುಃಖಧ್ವಾಂತಸಂಭೇದಭಾಸ್ಕರಃ ॥ ೨೫ ॥

---

೨೧. ಮಹತ್ತರದುಃಖನಾಶಕನಾದ ಧನುಷ್ಪಾಣಿಯಾದ ವಿದ್ಯಾಕರೀ ಶಕ್ತಿಯಿಂದ ಸಹಿತನಾದ ಸ್ವಾಮಿಯು ನನ್ನನ್ನು ನೈರುತ್ಯಮೂಲೆಯಲ್ಲಿ ಕಾಪಾಡಲಿ.

೨೨. ಮಹಾಪಾಪನಾಶಕನು, ಬಾಣಬತ್ತಳಿಕೆಯನ್ನು ಧರಿಸಿರುವ ಧನಕರೀಶಕ್ತಿಸಹಿತನಾದ ರಾಜನು ನನ್ನನ್ನು ವಾಯುವ್ಯಮೂಲೆಯಲ್ಲಿ ಕಾಪಾಡಲಿ.

೨೩. ಮಹಾಭಯವಿನಾಶಕಾರಿಯು, ಧನುರ್ಬಾಣಧಾರಿಯೂ ಆದ ಆಯುಷ್ಕರೀಶಕ್ತಿಯಿಂದಕೂಡಿದ ಶ್ರೀಮಂತನಾದ ಸ್ವಾಮಿಯು ಈಶಾನ್ಯಮೂಲೆಯಲ್ಲಿ ರಕ್ಷಿಸಲಿ.

೨೪. ಸಹಸ್ರಚಕ್ರಧಾರಿಯು, ಸಮಸ್ತದುಷ್ಟಜನಭಯಂಕರನು ವಿಜಯಶ್ರೀಶಕ್ತಿಯುತನೂ ಆದ ಸ್ವಾಮಿಯು ನನ್ನನ್ನು ಊರ್ಧ್ವದಿಕ್ಕಿನಲ್ಲಿ ಕಾಪಾಡಲಿ.

೨೫. ಸೂರ್ಯನಂತೆ ದುಃಖವೆಂಬ ಕಗ್ಗತ್ತಲೆಯನ್ನು ನಾಶಪಡಿಸುವ ಶಂಖಧಾರಿಯಾದ ಸುಮಹಾಶಕ್ತಿಯುತನಾದ ಸ್ವಾಮಿಯು ಅಧೋದಿಕ್ಕಿನಲ್ಲಿ ಕಾಪಾಡಲಿ.

ಮಹಾಯೋಗಸಮಾಯುಕ್ತಃ ಸರ್ವದಿಕ್ಚಕ್ರಮಂಡಲಃ ।
ಮಹಾಯೋಗೀಶ್ವರಃ ಪಾತು ಸರ್ವತೋ ಮಮ ಪದ್ಮಭೃತ್ ॥ ೨೬ ॥

ಏತಾಸ್ತು ಮೂರ್ತಯೋ ರಕ್ತಾ ರಕ್ತಮಾಲ್ಯಾಂಶುಕಾವೃತಾಃ ।
ಪ್ರಧಾನದೇವತಾರೂಪಾಃ ಪೃಥಗ್ರಥವರೇ ಸ್ಥಿತಾಃ ॥ ೨೭ ॥

ಶಕ್ತಯಃ ಪದ್ಮಹಸ್ತಾಶ್ಚ ನೀಲೇಂದೀವರಸನ್ನಿಭಾಃ ।
ಶುಕ್ಲಮಾಲಾನುವಸನಾಃ ಸುಲಿಪ್ತತಿಲಕೋಜ್ವಲಾಃ ॥ ೨೮ ॥

ತತ್ಪಾರ್ಷದೇಶ್ವರಾಃ ಸ್ವಸ್ವವಾಹನಾಯುಧಭೂಷಣಾಃ ।
ಸ್ವಸ್ವದಿಕ್ಷು ಸ್ಥಿತಾಃ ಪಾಂತು ಮಾಮಿಂದ್ರಾದ್ಯಾ ಮಹಾಬಲಾಃ ॥ ೨೯ ॥

ಏತಾಸ್ತಸ್ಯ ಸಮಾಖ್ಯಾತಾಃ ಸರ್ವಾವರಣದೇವತಾಃ ।
ಸರ್ವತೋ ಮಾಂ ಸದಾ ಪಾಂತು ಸರ್ವಶಕ್ತಿಸಮನ್ವಿತಾಃ ॥ ೩೦ ॥

---

೨೬. ಮಹಾಯೋಗಸಮಾಧಿಸ್ಥನೂ, ಸಕಲದಿಕ್ಚಕ್ರಾಧೀಶ್ವರನೂ, ಪದ್ಮಧಾರಿಯೂ ಆಗಿರುವ ಮಹಾಯೋಗಿಶ್ರೇಷ್ಠನು ನನ್ನನ್ನು ಸಕಲದಿಕ್ಕುಗಳ ವಿಪತ್ತಿನಿಂದ ಕಾಪಾಡಲಿ.

೨೭. ಕೆಂಪಗಿರುವ ಪುಷ್ಪಮಾಲಿಕೆ ಮತ್ತು ಬಟ್ಟೆಗಳನ್ನು ಧರಿಸಿರುವ ಪ್ರಧಾನದೇವತಾರೂಪರಾದ ಕೆಂಪಗಿರುವ ಈ ಮೂರ್ತಿಗಳು ಬೇರೆಯಾದ ಉತ್ತಮರಥದಲ್ಲಿ ಇರುವರು.

೨೮. ಶಕ್ತಿಗಳೂ ಕೂಡ ಕೈಯಲ್ಲಿ ಪದ್ಮಗಳನ್ನು ಹಿಡಿದುಕೊಂಡು ಕನ್ನೈದಿಲೆಯಂತೆ ಹೊಳೆಯುತ್ತಾ ಬಿಳಿಯ ಮಾಲಿಕೆ ಮತ್ತು ಬಟ್ಟೆಗಳನ್ನು ಧರಿಸಿ ಚೆನ್ನಾಗಿ ಧರಿಸಿದ ತಿಲಕಗಳಿಂದ ಪ್ರಕಾಶಮಾನರಾಗಿರುವರು.

೨೯. ಮಹಾಬಲಿಷ್ಠರಾದ ಇಂದ್ರಾದಿ ದಿಕ್ಪಾಲಕರು ತಮ್ಮ ತಮ್ಮ ವಾಹನ, ಆಯುಧಾಲಂಕಾರಗಳಿಂದ ಯುಕ್ತರಾಗಿ ತಮ್ಮ ತಮ್ಮ ದಿಕ್ಕುಗಳಲ್ಲಿ ನನ್ನನ್ನು ರಕ್ಷಿಸಲಿ.

೩೦. ಇವರು ಕಾರ್ತವೀರ್ಯನಿಗೆ ಸಕಲಾವರಣ ದೇವತೆಗಳೆಂದು ಉಕ್ತರಾಗಿದ್ದಾರೆ. ಇವರು ಸಕಲ ಶಕ್ತಿಗಳಿಂದ ಯುಕ್ತರಾಗಿ ಎಲ್ಲಾ ಕಡೆಗಳಿಂದಲೂ ನನ್ನನ್ನು ಯಾವಾಗಲೂ ಕಾಪಾಡಲಿ.

ಹೃದಯೇ ಚೋದರೇ ನಾಭೌ ಜಠರೇ ಗುಹ್ಯಮಂಡಲೇ ।
ತೇಜೋರೂಪಾಃ ಸ್ಥಿತಾಃ ಪಾಂತು ಪಾಂಭಾಸುರವನದ್ರುಮಾಃ ॥ ೩೧ ॥

ದಿಶಂ ಚಾನ್ಯೇ ಮಹಾವರ್ಣಾ ಮಂತ್ರರೂಪಾ ಮಹೋಜ್ವಲಾಃ ।
ವ್ಯಾಪಕತ್ವೇನ ಪಾಂತ್ವಸ್ಮಾನಾಪಾದತಲಮಸ್ತಕಂ ॥ ೩೨ ॥

ಕಾರ್ತವೀರ್ಯಃ ಶಿರಃ ಪಾತು ಲಲಾಟಂ ಹೈಹಯೇಶ್ವರಃ ।
ಸುಮುಖೋ ಮೇ ಮುಖಂ ಪಾತು ಕರ್ಣೌ ವ್ಯಾಪ್ತಜಗತ್ರಯಃ ॥ ೩೩ ॥

ಸುಕುಮಾರೋ ಹನುಂ ಪಾತು ಭ್ರೂಯುಗಂ ಮೇ ಧನುರ್ಧರಃ ।
ನಯನಂ ಪುಂಡರೀಕಾಕ್ಷೋ ನಾಸಿಕಾಂ ಮೇ ಗುಣಾಕರಃ ॥ ೩೪ ॥

ಅಧರೋಷ್ಠೌ ಸದಾ ಪಾತು ಬ್ರಹ್ಮಜ್ಞೋಯೋ ದ್ವಿಜಾನ್ಕವಿಃ ।
ಸರ್ವಶಾಸ್ತ್ರಕಲಾಧಾರೀ ಜಿಹ್ವಾಂ ಚಿಬುಕಮವ್ಯಯಃ ॥ ೩೫ ॥

---

೩೧. ಹೃದಯ, ಹೊಟ್ಟೆ, ಹೊಕ್ಕಳು, ಗುಹ್ಯಪ್ರದೇಶ ಇವುಗಳಲ್ಲಿ ತೇಜೋರೂಪಗಳಿಂದಿರುವ ಇಚ್ಛಾಕಲ್ಪವೃಕ್ಷಗಳು ಆಯಾ ಅವಯವಗಳನ್ನು ಸಂರಕ್ಷಿಸಲಿ.

೩೨. ಮಹಾಪ್ರಕಾಶಮಾನವಾದ ಮಂತ್ರರೂಪ ಮಹಾವರ್ಣಗಳು ದಿಕ್ಕುಗಳಲ್ಲಿ ವ್ಯಾಪಿಸಿ, ಪಾದದಿಂದ ತಲೆಯವರೆಗೂ ನಮ್ಮನ್ನು ಕಾಪಾಡಲಿ.

೩೩. ಕಾರ್ತವೀರ್ಯನು ಶಿರಸ್ಸನ್ನೂ, ಹೈಹಯೇಶ್ವರನು ಹಣೆಯನ್ನೂ ರಕ್ಷಿಸಲಿ. ಸುಮುಖನು ನನ್ನ ಮುಖವನ್ನೂ, ತ್ರಿಲೋಕವ್ಯಾಪಕನು ಕಿವಿಗಳನ್ನೂ ಕಾಪಾಡಲಿ.

೩೪. ಸುಕುಮಾರನು ಕೆನ್ನೆಯ ಮೇಲ್ಭಾಗವನ್ನೂ, ಧನುರ್ಧರನು ನನ್ನ ಎರಡು ಹುಬ್ಬುಗಳನ್ನೂ, ಪುಂಡರೀಕಾಕ್ಷನು ಕಣ್ಣನ್ನೂ, ಗುಣಾಕರನು ಮೂಗನ್ನೂ ರಕ್ಷಿಸಲಿ.

೩೫. ಬ್ರಹ್ಮಜ್ಞೇಯನು ಮೇಲೆ ಮತ್ತು ಕೆಳಗಣ ತುಟಿಗಳನೂ ಕವಿಯು ಹಲ್ಲುಗಳನ್ನೂ, ಸರ್ವಶಸ್ತ್ರಕಲಾಧಾರಿಯು ನಾಲಗೆಯನ್ನೂ, ಅವ್ಯಯನು ಗಡ್ಡವನ್ನೂ ರಕ್ಷಿಸಲಿ.

ದತ್ತಾತ್ರೇಯಪ್ರಿಯಃ ಕಂಠಂ ಸ್ಕಂಧೌ ರಾಜಕುಲೇಶ್ವರಃ ।
ಭುಜೌ ದಶಾಸ್ಯದರ್ಪಘ್ನೋ ಹೃದಯಂ ಮೇ ಮಹಾಬಲಃ ॥ ೩೬ ॥

ಕುಕ್ಷಿಂ ರಕ್ಷತು ಮೇ ವಿದ್ವಾನ್ ವಕ್ಷಃ ಪರಪುರಂಜಯಃ ।
ಕರೌ ಸರ್ವಾರ್ಥದಃ ಪಾತು ಕರಾಗ್ರಾಣಿ ಜಗತ್ಪ್ರಿಯಃ ॥ ೩೭ ॥

ರೇವಾಂಬುಲೀಲಾಸಂದೃಪ್ತೋ ಜಠರಂ ಪರಿರಕ್ಷತು ।
ವೀರಶೂರಸ್ತು ಮೇ ನಾಭಿಂ ಪಾರ್ಶ್ವೌ ಮೇ ಸರ್ವದುಷ್ಟಹಾ ॥ ೩೮ ॥

ಸಹಸ್ರಭುಜಭೃತ್ಪೃಷ್ಠಂ ಸಪ್ತದ್ವೀಪಾಧಿಪಃ ಕಟಿಂ ।
ಊರೂ ಮಾಹಿಷ್ಮತೀನಾಥೋ ಜಾನುನೀ ವಲ್ಲಭೋ ಭುವಃ ॥ ೩೯ ॥

ಜಂಘೇ ವೀರಾಧಿಪಃ ಪಾತು ಪಾತು ಪಾದೌ ಮನೋಜವಃ ।
ಪಾತು ಸರ್ವಾಯುಧಧರಃ ಸರ್ವಾಂಗಂ ಸರ್ವಮರ್ಮಸು ॥ ೪೦ ॥

---

೩೬. ದತ್ತಾತ್ರೇಯಪ್ರಿಯನು ಕುತ್ತಿಗೆಯನ್ನೂ, ರಾಜಕುಲೇಶ್ವರನ ಹೆಗಲುಗಳನ್ನೂ, ರಾವಣದರ್ಪಹಾರಿಯು ಭುಜಗಳನ್ನೂ, ಮಹಾಬಲನು ನನ್ನ ಹೃದಯವನ್ನೂ ರಕ್ಷಿಸಲಿ.

೩೭. ವಿದ್ವಾಂಸನು ನನ್ನ ಕುಕ್ಷಿಯನ್ನೂ, ಪರಪುರಂಜಯನು ವಕ್ಷಃಸ್ಥಲವನ್ನೂ, ಸರ್ವಾರ್ಥದಾತೃವು ಕೈಗಳನ್ನೂ, ಜಗತ್ಪ್ರಿಯನು ಕೈಗಳ ಅಗ್ರಭಾಗವನ್ನೂ ರಕ್ಷಿಸಲಿ.

೩೮. ನರ್ಮದಾನದಿಯ ಜಲದಲ್ಲಿ ಕ್ರೀಡಾಸಕ್ತನಾದವನು ಉದರವನ್ನೂ, ವೀರಶೂರನು ನನ್ನ ನಾಭಿಯನ್ನೂ, ಸರ್ವದುಷ್ಟಹರನು ನನ್ನ ಪಕ್ಕೆಗಳನ್ನೂ ರಕ್ಷಿಸಲಿ.

೩೯. ಸಹಸ್ರಭುಜಧಾರಿಯು ಪೃಷ್ಠಭಾಗವನ್ನೂ, ಸಪ್ತದ್ವೀಪಾಧಿಪತಿಯು ನಡುವನ್ನೂ, ಮಾಹಿಷ್ಮತೀನಾಥನು ತೊಡೆಗಳನ್ನೂ ಭೂವಲ್ಲಭನು ಮೊಣಕಾಲುಗಳನ್ನೂ ರಕ್ಷಿಸಲಿ.

೪೦. ವೀರಾಧಿಪನು ಜಂಘೆಗಳನ್ನು ರಕ್ಷಿಸಲಿ. ಮನೋಜವನು ಪಾದಗಳನ್ನು ರಕ್ಷಿಸಲಿ. ಸರ್ವಾಯುಧಧಾರಿಯು ಸಕಲ ಮರ್ಮಸ್ಥಾನಗಳಲ್ಲಿ ಸರ್ವಾಂಗವನ್ನೂ ರಕ್ಷಿಸಲಿ.

ಸರ್ವದುಷ್ಟಾಂತಕಃ ಪಾತು ಧಾತ್ವಷ್ಟಕಕಲೇವರಂ ।
ಪ್ರಾಣಾದಿದಶ ಜೀವೇಶಾನ್ಸರ್ವಶಿಷ್ಟೇಷ್ಟದೋವತು ॥ ೪೧ ॥

ವಶೀಕೃತೇಂದ್ರಿಯಗ್ರಾಮಃ ಪಾತು ಸರ್ವೇಂದ್ರಿಯಾಣಿ ಮೇ ।
ಅನುಕ್ತಮಪಿ ಯತ್ಸ್ಥಾನಂ ಶರೀರಾಂತರ್ಬಹಿಶ್ಚ ಯತ್ ॥ ೪೨ ॥

ತತ್ಸರ್ವಂ ಪಾತು ಮೇ ಸರ್ವಲೋಕನಾಥೇಶ್ವರೇಶ್ವರಃ ।
ವಜ್ರಾತ್ಸಾರತರಂ ಚೇದಂ ಶರೀರಂ ಕವಚಾವೃತಂ ॥ ೪೩ ॥

ಬಾಧಾಶತವಿನಿರ್ಮುಕ್ತಮಸ್ತು ಮೇ ಭಯವರ್ಜಿತಂ ।
ಬದ್ಧ್ವೇದಂ ಕವಚಂ ದಿವ್ಯಮಭೇದ್ಯಂ ಹೈಹಯೇಶಿತುಃ ॥ ೪೪ ॥

ವಿಚರಾಮಿ ದಿವಾರಾತ್ರೌ ನಿರ್ಭಯೋನಾಂತರಾತ್ಮನಾ ।
ರಾಜಮಾರ್ಗೇ ಮಹಾದುರ್ಗೇ ಮಾರ್ಗೇ ಚೌರಾದಿಸಂಕುಲೇ ॥ ೪೫ ॥

---

೪೧. ಸರ್ವದುಷ್ಟಾಂತಕನು ಅಷ್ಟಧಾತುಗಳಿಂದಯುಕ್ತವಾದ ಶರೀರವನ್ನು ರಕ್ಷಿಸಲಿ. ಸರ್ವಶಿಷ್ಟೇಷ್ಟಪ್ರದನು ಪ್ರಾಣ ಮುಂತಾದ ಹತ್ತು ಜೀವೇಶ್ವರರನ್ನು ರಕ್ಷಿಸಲಿ.

೪೨-೪೩. ಇಂದ್ರಿಯಸಮೂಹಗಳನ್ನು ವಶಪಡಿಸಿಕೊಂಡಿರುವ ಕಾರ್ತವೀರ್ಯನು ನನ್ನ ಸರ್ವೇಂದ್ರಿಯಗಳನ್ನೂ ರಕ್ಷಿಸಲಿ. ಸರ್ವಲೋಕನಾಥೇಶ್ವರೇಶ್ವರನು ಇಲ್ಲಿ ಹೇಳದಿರುವ ನನ್ನ ಶರೀರದ ಒಳಗಿನ ಮತ್ತು ಹೊರಗಿನ ಎಲ್ಲಾ ಸ್ಥಾನಗಳನ್ನೂ ರಕ್ಷಿಸಲಿ.

೪೩-೪೪. ಈ ಕವಚದಿಂದ ಆವರಿಸಲ್ಪಟ್ಟ ಈ ಶರೀರವು ವಜ್ರಕ್ಕಿಂತಲೂ ಶ್ರೇಷ್ಠತರವಾಗಿ ನೂರಾರು ಬಾಧೆಗಳಿಂದ ಬಿಡುಗಡೆಯನ್ನು ಹೊಂದಿ ನನಗೆ ಭಯವನ್ನು ಪರಿಹರಿಸಲಿ.

೪೪-೪೫. ಹೈಹಯೇಶ್ವರನಾದ ಕಾರ್ತವೀರ್ಯನ ಅಭೇದ್ಯವಾದ ಈ ಕವಚವನ್ನು ಧರಿಸಿ ಹಗಲು ರಾತ್ರಿಗಳಲ್ಲಿ ಒಳಹೊರಗೂ ನಿರ್ಭಯವಾಗಿ ಸಂಚರಿಸುವೆನು.

ವಿಷಮೇ ವಿಪಿನೇ ಘೋರೇ ದಾವಾಗ್ನೌ ಗಿರಿಕಂದರೇ ।
ಸಂಗ್ರಾಮೇ ಶಸ್ತ್ರಸಂಘಾತೇ ಸಿಂಹವ್ಯಾಘ್ರನಿಷೇವಿತೇ ॥ ೪೬ ॥

ಗಹ್ವರೇ ಸರ್ವಸಂಕೀರ್ಣೇ ಸಂಧ್ಯಾಕಾಲೇ ನೃಪಾಲಯೇ ।
ವಿವಾದೇ ವಿಪುಲಾವರ್ತೇ ಸಮುದ್ರೇ ಚ ನದೀತಟೇ ॥ ೪೭ ॥

ಪರಿಪಂಥಿಜನಾಕೀರ್ಣೇ ದೇಶೇ ದಸ್ಯುಗಣಾವೃತೇ ।
ಸರ್ವಸ್ವಹರಣೇ ಪ್ರಾಪ್ತೇ ಪ್ರಾಪ್ತೇ ಪ್ರಾಣಸ್ಯ ಸಂಕಟೇ ॥ ೪೮ ॥

ನಾನಾರೋಗಜ್ವರಾವೇಶೇ ಪಿಶಾಚಪ್ರೇತಯಾತನೇ ।
ಮಾರೀದುಃಸ್ವಪ್ನಪೀಡಾಸು ಕ್ಲಿಷ್ಟೇ ವಿಶ್ವಾಸಘಾತಕೇ ॥ ೪೯ ॥

ಶಾರೀರೇ ಚ ಮಹಾದುಃಖೇ ಮಾನಸೇ ಚ ಮಹಾಜ್ವರೇ ।
ಆಧಿವ್ಯಾಧಿಭಯೇ ವಿಘ್ನಜ್ವಾಲೋಪದ್ರವಕೇಽಪಿ ಚ ॥ ೫೦ ॥

ನ ಭವೇತ್ತು ಭಯಂ ಕಿಂಚಿತ್ಕವಚೇನಾವೃತಸ್ಯ ಮೇ ।
ಆಗಂತುಕಾಮಾನಖಿಲಾನಸ್ಮಾದ್ವಸುವಿಲುಂಪಕಾನ್ ॥ ೫೧ ॥

---

೪೫-೪೮. ರಾಜಮಾರ್ಗ, ಮಹಾದುರ್ಗ, ಕಳ್ಳಕಾಕರಿರುವ ಮಾರ್ಗ, ವಿಷಮಾರಣ್ಯ, ಭಯಂಕರ ಕಾಡುಗಿಚ್ಚು, ಪರ್ವತ, ಗುಹೆ, ಶಸ್ತ್ರಾಘಾತ, ಪ್ರಚುರವಾದ ಯುದ್ಧ, ಸಿಂಹ ಹುಲಿಗಳಿಂದ ತುಂಬಿದ ಸರ್ವಸಂಕೀರ್ಣವಾದ ಗುಹೆ, ಸಂಧ್ಯಾಕಾಲ, ಅರಮನೆ, ಕಲಹ, ವಿಶಾಲವಾದ ಸುಳಿಗಳುಳ್ಳ ಸಮುದ್ರ, ನದೀದಡ, ಶತ್ರುಜನಗಳಿಂದಪೂರಿತವಾದ ಮತ್ತು ಕಳ್ಳರ ಸಮೂಹದಿಂದ ಆಕ್ರಮಿಸಲ್ಪಟ್ಟ ದೇಶದಲ್ಲಿಯೂ, ಸರ್ವಸ್ವಹರಣ ಮತ್ತು ಪ್ರಾಣಸಂಕಟಗಳು ಸಂಭವಿಸಿದಾಗಲೂ ಸಹ ನಿರ್ಭಯಮನಸ್ಸಿನಿಂದ ಹಗಲೂ ರಾತ್ರಿ ಸಂಚರಿಸುವೆನು.

೪೯-೫೧. ನಾನಾವಿಧ ಕಾಹಿಲೆಗಳು, ಜ್ವರ, ಪಿಶಾಚ ಪ್ರೇತಗಳ ಬಾಧೆ, ಮಾರೀ ಮತ್ತು ದುಃಸ್ವಪ್ನಗಳ ಪೀಡೆ, ಕಷ್ಟ, ವಿಶ್ವಾಸಘಾತ, ಶಾರೀರಕಮಹಾದುಃಖ, ಮಾನಸಿಕಮಹಾಜ್ವರ, ಮನೋವ್ಯಥೆ, ರೋಗಗಳ ಭಯ, ವಿಘ್ನಮತ್ತು ಬೆಂಕಿಯ ಉರಿಯಬಾಧೆ ಇವುಗಳು ಸಂಭವಿಸಿದಾಗಲೂ ಕವಚದಿಂದಾವೃತನಾದ ನನಗೆ ಭಯವಾಗದಿರಲಿ.

ನಿವಾರಯತು ದೋರ್ದಂಡಸಹಸ್ರೇಣ ಮಹಾರಥಃ ।
ಸ್ವಕರೋದ್ಧೃತಸಾಹಸ್ರಪಾಶಬದ್ಧಾನ್ಸುದುರ್ಜಯಾನ್ ॥ ೫೨ ॥

ಸಂರುದ್ಧಗತಿಸಾಮರ್ಥ್ಯಾನ್ಕರೋತು ಕೃತವೀರ್ಯಜಃ ।
ಸೃಣಿಸಾಹಸ್ರನಿರ್ಭಿನ್ನಾನ್ಸಹಸ್ರಶರಖಂಡಿತಾನ್ ॥ ೫೩ ॥

ರಾಜಚೂಡಾಮಣಿಃ ಕ್ಷಿಪ್ರಂ ಕರೋತ್ವಸ್ಮದ್ವಿರೋಧಕಾನ್ ।
ಖಡ್ಗಸಾಹಸ್ರದಲಿತಾನ್ಸಹಸ್ರಮುಸಲಾರ್ದಿತಾನ್ ॥ ೫೪ ॥

ಚೌರಾದಿದುಷ್ಟಸತ್ವೌಘಾನ್ಕರೋತು ಕಮಲೇಕ್ಷಣಃ ।
ಸ್ವಶಂಖನಾದಸಂತ್ರಸ್ತಾನ್ ಸಹಸ್ರಾರಸಹಸ್ರಭೃತ್ ॥ ೫೫ ॥

---

೫೧–೫೨. ನಮ್ಮ ಐಶ್ವರ್ಯಹಾನಿಕರವಾದ ಸಮಸ್ತ ಅನಿಷ್ಟಗಳನ್ನೂ ಮಹಾರಥಿಕನಾದ ಕಾರ್ತವೀರ್ಯನು ದಂಡದಂತಿರುವ ಸಹಸ್ರಬಾಹುಗಳಿಂದ ನಿವಾರಿಸಲಿ.

೫೨–೫೩. ಕೃತವೀರ್ಯಪುತ್ರನು ಬಂಧಿತರಾಗಿ ಸಂಚಾರಶಕ್ತಿಯಿಲ್ಲದಿರುವವರನ್ನು ತನ್ನ ಕೈಗಳಿಂದ ಸಾವಿರಾರು ಪಾಶಬಂಧನಗಳನ್ನು ಕಿತ್ತುಹಾಕಿ ಅವರನ್ನು ಜಯಿಸಲಶಕ್ಯರನ್ನಾಗಿ ಮಾಡಲಿ.

೫೩–೫೪. ರಾಜಶ್ರೇಷ್ಠನಾದ ಕಾರ್ತವೀರ್ಯನು ನಮ್ಮ ವಿರೋಧಿಗಳನ್ನು ಸಾವಿರ ಅಂಕುಶಗಳಿಂದ ಭೇದಿಸಿ ಶೀಘ್ರವಾಗಿ ಸಾವಿರ ಬಾಣಗಳಿಂದ ಚೂರು ಚೂರು ಮಾಡಲಿ.

೫೪-೫೫. ಕಮಲನೇತ್ರನಾದ ಕಾರ್ತವೀರ್ಯಾರ್ಜುನನು ಕಳ್ಳ ಮುಂತಾದ ದುಷ್ಟಪ್ರಾಣಿಗಳ ಸಮೂಹವನ್ನು ಸಾವಿರಾರು ಖಡ್ಗಗಳಿಂದ ಚುಚ್ಚಿ, ಸಾವಿರಾರು ಒನಕೆಗಳಿಂದ ಮರ್ದನಮಾಡಿ, ತನ್ನ ಶಂಖಧ್ವನಿಯಿಂದ ಭಯಯುಕ್ತರನ್ನಾಗಿ ಮಾಡಲಿ.

ಅವತಾರೋ ಹರೇಃ ಸಾಕ್ಷಾತ್ಪಾಲಯತ್ವಖಿಲಂ ಮಮ ।
ಕಾರ್ತವೀರ್ಯ ಮಹಾವೀರ್ಯ ಸರ್ವದುಷ್ಟವಿನಾಶನ ॥ ೫೬ ॥

ಸರ್ವತ್ರ ಸರ್ವದಾ ದುಷ್ಟಚೌರಾನ್ನಾಶಯ ನಾಶಯ ।
ಕಿಂ ತ್ವಂ ಸ್ವಪಿಷಿ ದುಷ್ಟಘ್ನ ಕಿಂ ತಿಷ್ಠಸಿ ಚಿರಾಯಸಿ ॥ ೫೭ ॥

ಉತ್ತಿಷ್ಠ ಪಾಹಿ ನಃ ಸರ್ವಭಯೇಭ್ಯಃ ಸ್ವಸುತಾನಿವ ।
ಯೇ ಚೌರಾ ವಸುಹರ್ತಾರೋ ವಿದ್ವಿಷೋ ಯೇ ಚ ಹಿಂಸಕಾಃ ॥ ೫೮ ॥

ಸಾಧುಭೀತಿಕರಾ ದುಷ್ಟಾಶ್ಛದ್ಮಕಾ ಯೇ ದುರಾಶಯಾಃ ।
ದುರ್ಹೃದೋ ದುಷ್ಟಭೂಪಾಲಾ ದುಷ್ಟಾಮಾತ್ಯಾಶ್ಚ ಪಾಪಕಾಃ ॥ ೫೯ ॥

ಯೇ ಚ ಕಾರ್ಯವಿಲೋಪ್ತಾರೋ ಯೇ ಖಲಾಃ ಪರಿಪಂಥಿನಃ ।
ಸರ್ವಸ್ವಹಾರಿಣೋ ಯೇ ಚ ಪಂಚ ಮಾಯಾವಿನೋಽಪರೇ ॥ ೬೦ ॥

ಮಹಾಕ್ಲೇಶಕರಾ ಮ್ಲೇಚ್ಛಾ ದಸ್ಯವೋ ವೃಷಲಾಶ್ಚ ಯೇ ।
ಯೇಽಗ್ನಿದಾ ಗರದಾತಾರೋ ವಂಚಕಾಃ ಶಸ್ತ್ರಪಾಣಯಃ ॥ ೬೧ ॥

---

೫೬-೫೭. ಸಾವಿರಾರು ಚಕ್ರಗಳನ್ನು ಧರಿಸಿರುವ, ಸಾಕ್ಷಾತ್ತಾಗಿ ಹರಿಯ ಆವೇಶಾವತಾರನಾದ ಕಾರ್ತವೀರ್ಯಾರ್ಜುನನು ನನ್ನ ಸಕಲವನ್ನೂ ರಕ್ಷಿಸಲಿ. ಮಹಾಪರಾಕ್ರಮಶಾಲಿಯೂ, ಸಕಲ ದುಷ್ಟವಿನಾಶಕಾರಿಯೂ ಆಗಿರುವ ಕಾರ್ತವೀರ್ಯನೇ ! ಸಕಲ ಸ್ಥಳಗಳಲ್ಲಿಯೂ ಯಾವಾಗಲೂ ದುಷ್ಟರು ಮತ್ತು ಕಳ್ಳರನ್ನು ನಾಶಮಾಡು, ನಾಶಮಾಡು. ದುಷ್ಟಸಂಹಾರಕನೇ ! ನಿದ್ರೆಮಾಡುತ್ತಿರುವೆಯಾ ಏನು ? ಏಕೆ ಕುಳಿತು ಸಾವಕಾಶಮಾಡುತ್ತಿರುವೆ ?

೫೮-೬೩. ಏಳು, ನಿನ್ನ ಮಕ್ಕಳಂತೆ ಭಾವಿಸಿ ನಮ್ಮನ್ನು ಸಕಲ ಭಯಗಳಿಂದಲೂ ರಕ್ಷಿಸು. ದ್ರವ್ಯವನ್ನಪಹರಿಸುವ ಕಳ್ಳರು, ದ್ವೇಷಿಗಳು, ಹಿಂಸೆ ಮಾಡುವವರು, ಸಜ್ಜನರನ್ನು ಭಯಪಡಿಸುವವರು, ದುಷ್ಟರು, ವಂಚಕರು, ದುರಾಗ್ರಹಿಗಳು, ದುರ್ಮನಸ್ಕರು, ದುಷ್ಟರಾಜರು, ದುಷ್ಟಮಂತ್ರಿಗಳು, ಪಾಪಿ

ಯೇ ಪಾಪಾ ದುಷ್ಟಕರ್ಮಾಣೋ ದುಃಖದಾ ದುಷ್ಟಬುದ್ಧಯಃ ।
ವ್ಯಾಜಕಾಃ ಕುಪಥಾಸಕ್ತಾ ಯೇ ಚ ನಾನಾಭಯಪ್ರದಾಃ ॥ ೬೨ ॥

ಛಿದ್ರಾನ್ವೇಷರತಾ ನಿತ್ಯಂ ಯೇಽಸ್ಮಾನ್ಬಾಧಿತುಮುದ್ಯತಾಃ ।
ತೇ ಸರ್ವೇ ಕಾರ್ತವೀರ್ಯಸ್ಯ ಮಹಾಶಂಖರವಾಹತಾಃ ॥ ೬೩ ॥

ಸಹಸಾ ವಿಲಯಂ ಯಾಂತು ದೂರಾದೇವ ವಿಮೋಹಿತಾಃ ।
ಯೇ ದಾನವಾ ಮಹಾದೈತ್ಯಾ ಯೇ ಯಕ್ಷಾ ಯೇ ಚ ರಾಕ್ಷಸಾಃ ॥ ೬೪ ॥

ಪಿಶಾಚಾ ಯೇ ಮಹಾಸತ್ವಾ ಯೇ ಭೂತಬ್ರಹ್ಮರಾಕ್ಷಸಾಃ ।
ಅಪಸ್ಮಾರಗ್ರಹಾ ಯೇ ಚ ಯೇ ಗ್ರಹಾಃ ಪಿಶಿತಾಶನಾಃ ॥ ೬೫ ॥

ಮಹಾಲೋಹಿತಭೋಕ್ತಾರೋ ವೇತಾಲಾ ಯೇ ಚ ಗುಹ್ಯಕಾಃ ।
ಗಂಧರ್ವಾಪ್ಸರಸಃ ಸಿದ್ಧಾ ಯೇ ಚ ದೇವಾದಿಯೋನಯಃ ॥ ೬೬ ॥

ಡಾಕಿನ್ಯೋ ದ್ರುಣಸಾಃ ಪ್ರೇತಾಃ ಕ್ಷೇತ್ರಪಾಲಾ ವಿನಾಯಕಾಃ ।
ಮಹಾವ್ಯಾಘ್ರಮಹಾಮೇಘಾ ಮಹಾತುರಗರೂಪಕಾಃ ॥ ೬೭ ॥

---

ಗಳು, ಕರ್ತವ್ಯವನ್ನು ಮಾಡದಿರುವವರು, ದುರ್ಜನರು, ವಿರೋಧಿಗಳು, ಸರ್ವಸ್ವಾಪಹಾರಿಗಳು, ಐಮುಜನವಾಯಾವಿಗಳು, ಮಹಾದುಃಖವನ್ನುಂಟುಮಾಡುವವರು, ತುರುಷ್ಕರು, ಕಳ್ಳರು, ವೃಷಲರು, ಬೆಂಕಿಯಿಡುವವರು, ವಿಷಕೊಡುವವರು, ಮೋಸಗಾರರು, ಕೈಯಲ್ಲಿ ಶಸ್ತ್ರವನ್ನು ಹಿಡಿದಿರುವವರು, ಪಾಪಿಷ್ಠರು, ನಿಷಿದ್ಧಕರ್ಮಕಾರಿಗಳು, ದುಃಖದಾತೃಗಳು, ಕುತ್ಸಿತಬುದ್ಧಿಯುಳ್ಳವರು, ನೆಪವನ್ನು ಹೇಳುವವರು, ಕುಮಾರ್ಗದಲ್ಲಿ ಆಸಕ್ತರು, ನಾನಾವಿಧ ಭಯಪ್ರದರು ರಂಧ್ರಾನ್ವೇಷಣಪರರು ಮತ್ತು ಯಾವಾಗಲೂ ನಮ್ಮನ್ನು ಹಿಂಸೆಮಾಡಲುದ್ಯುಕ್ತರಾಗಿರುವವರು ಅವರೆಲ್ಲರೂ ಕಾರ್ತವೀರ್ಯಾರ್ಜುನನ ಶಂಖಧ್ವನಿಯಿಂದ ಹತರಾಗಿ ದೂರದಿಂದಲೇ ಮೂರ್ಛಿತರಾಗಿ ತಕ್ಷಣ ನಾಶವನ್ನು ಹೊಂದಲಿ.

೬೪-೭೭. ದಾನವರು, ಮಹಾದೈತ್ಯರು, ಯಕ್ಷರು, ರಾಕ್ಷಸರು, ಪಿಶಾಚಗಳು, ಮಹಾಬಲಿಷ್ಠರಾದ ಭೂತ ಬ್ರಹ್ಮರಾಕ್ಷಸಗಳು, ಅಪಸ್ಮಾರವನ್ನುಂಟು

ಮಹಾಗಜಾ ಮಹಾಸಿಂಹಾ ಮಹಾಮಹಿಷಯೋನಯಃ ।
ಋಕ್ಷವಾರಾಹಶುನಕವಾನರೋಲೂಕಮೂರ್ತಯಃ ॥ ೬೮ ॥

ಮಹೋಷ್ಟ್ರಖರಮಾರ್ಜಾರಸರ್ಪಗೋವೃಷಮಸ್ತಕಾಃ ।
ನಾನಾರೂಪಾ ಮಹಾಸತ್ತ್ವಾ ನಾನಾಕ್ಲೇಶಸಹಸ್ರದಾಃ ॥ ೬೯ ॥

ನಾನಾರೋಗಕರಾಃ ಕ್ಷುದ್ರಾ ಮಹಾವೀರ್ಯಾ ಮಹಾಬಲಾಃ ।
ವಾತಿಕಾಃ ಪೈತ್ತಿಕಾ ಘೋರಾ ಶ್ಲೈಷ್ಮಿಕಾಃ ಸನ್ನಿಪಾತಿಕಾಃ ॥ ೭೦ ॥

ಮಾಹೇಶ್ವರಾ ವೈಷ್ಣವಾಶ್ಚ ವೈರಿಂಚಾಶ್ಚ ಮಹಾಗ್ರಹಾಃ ।
ಸ್ಕಾಂದಾ ವೈನಾಯಕಾಃ ಕ್ರೂರಾ ಯೇ ಚ ಪ್ರಮಥಗುಹ್ಯಕಾಃ ॥ ೭೧ ॥

ಮಹಾಶತ್ರುಗ್ರಹಾ ರೌದ್ರಾ ಮಹಾಮಾರೀಮಸೂರಿಕಾಃ ।
ಐಕಾಹಿಕಾ ದ್ವ್ಯಾಹಿಕಾಶ್ಚ ತ್ರ್ಯಾಹಿಕಾಶ್ಚ ಮಹಾಜ್ವರಾಃ ॥ ೭೨ ॥

ಚಾತುರ್ಥಿಕಾಃ ಪಾಕ್ಷಿಕಾಶ್ಚ ಮಾಸ್ಯಾಃ ಷಾಣ್ಮಾಸಿಕಾಶ್ಚ ಯೇ ।
ಸಾಂವತ್ಸರಾ ದುರ್ನಿವಾರ್ಯಾ ಜ್ವರಾಃ ಪರಮದಾರುಣಾಃ ॥ ೭೩ ॥

---

ಮಾಡುವ ಗ್ರಹಗಳು, ಮಾಂಸಭಕ್ಷಕರಾದ ಗ್ರಹಗಳು, ರಕ್ತಪಾನಮಾಡುವವರು, ಬೇತಾಳಗಳು, ಗುಹ್ಯಕರು, ಗಂಧರ್ವರು, ಅಪ್ಸರಸ್ತ್ರೀಯರು, ಸಿದ್ಧರು, ದೇವಾದಿ ಕುಲೋತ್ಪನ್ನರು, ಡಾಕಿನೀಶಕ್ತಿಗಳು, ದ್ರುಣಸರು, ಪ್ರೇತಗಳು, ಕ್ಷೇತ್ರಪಾಲರು, ವಿನಾಯಕರು, ದೊಡ್ಡ ಹುಲಿಗಳು, ಮಹಾಮೇಘಗಳು, ದೊಡ್ಡ ಕುದುರೆಗಳು, ದೊಡ್ಡ ಆನೆಗಳು, ಮಹಾಸಿಂಹಗಳು, ಕೋಣಗಳು, ನಾಯಿ, ಹಂದಿ. ಕರಡಿ, ಕಪಿ, ಗೂಬೆಗಳು, ದೊಡ್ಡ ಒಂಟೆ, ಕತ್ತೆ, ಬೆಕ್ಕು, ಸರ್ಪ, ಎತ್ತು, ಹಸು ಮುಂತಾದುವುಗಳು, ನಾನಾವಿಧ ರೂಪಗಳನ್ನು ತಾಳಿರುವ, ಸಾವಿರಾರು ಕ್ಲೇಶ ದಾಯಕವಾದ ಮಹಾಪ್ರಾಣಿಗಳು, ಬಹುವಿಧವಾದ ರೋಗಗಳನ್ನುಂಟು ಮಾಡುವ ಕ್ಷುದ್ರಬಾಧೆಗಳು, ಮಹಾಪರಾಕ್ರಮಿಗಳು, ಬಲಿಷ್ಠರು, ವಾತ ಪಿತ್ಥ ಶ್ಲೇಷ್ಮ ನಿಮಿತ್ತಕಗಳಾದ ಘೋರಸನ್ನಿಪಾತಕಗಳು, ಮಾಹೇಶ್ವರ, ವೈಷ್ಣವ, ಬ್ರಾಹ್ಮಮಹಾಗ್ರಹಗಳು, ಸ್ಕಂಥ ಮತ್ತು ವಿನಾಯಕಸಂಬಂಧಿಗಳಾದ ಕ್ರೂರ ಶಕ್ತಿಗಳು, ಪ್ರಮಥಗುಹ್ಯಕರು, ಮಹಾಶತ್ರುಗ್ರಹಗಳು, ಭಯಂಕರರಾದ

ಸ್ವಾಗ್ನಿಕಾ ಯೇ ಮಹೋತ್ಪಾತಾ ಯೇ ಚ ದುಸ್ಸ್ವಪ್ನಿಕಾ ಗ್ರಹಾಃ ।
ಕೂಷ್ಮಾಂಡಾ ಜೃಂಭಿಕಾ ಭೌಮಾದ್ರೋಣಾಃ ಸಾನ್ನಿಧ್ಯವಂಚಕಾಃ ॥ ೭೪ ॥

ಭ್ರಮಿಕಾಃ ಪ್ರಾಣಹರ್ತಾರೋ ಯೇ ಚ ಬಾಲಗ್ರಹಾದಯಃ ।
ಮನೋಬುದ್ಧೀಂದ್ರಿಯಹರಾಃ ಸ್ಫೋಟಕಾಶ್ಚ ಮಹಾಗ್ರಹಾಃ ॥ ೭೫ ॥

ಮಹಾಶನಾ ಬಲಿಭುಜೋ ಮಹಾಕುಣಪಭೋಜನಾಃ ।
ದಿವಾಚರಾ ರಾತ್ರಿಚರಾ ಯೇ ಚ ಸಂಧ್ಯಾಸು ದಾರುಣಾಃ ॥ ೭೬ ॥

ಪ್ರಮತ್ತಾ ವಾsಪ್ರಮತ್ತಾ ವೈ ಯೇ ಮಾಂ ಬಾಧಿತುಮುದ್ಯತಾಃ ।
ತೇ ಸರ್ವೇ ಕಾರ್ತವೀರ್ಯಸ್ಯ ಧನುರ್ಮುಕ್ತಶರಾಹತಾಃ ॥ ೭೭ ॥

ಸಹಸ್ರಧಾ ಪ್ರಣಶ್ಯಂತು ಭಗ್ನಸತ್ವಬಲೋದ್ಯಮಾಃ ।
ಯೇ ಸರ್ಪಾ ಯೇ ಮಹಾನಾಗಾ ಮಹಾಗಿರಿಬಿಲಾಶಯಾಃ ॥ ೭೮ ॥

---

ಮಹಾಮಾರೀ ಮಸೂರಿಗಳು ಒಂದು, ಎರಡು, ಮೂರು ದಿನಗಳು ಬರುವ ಮಹಾಜ್ವರಗಳು, ನಾಲ್ಕುದಿನಗಳಿಗೊಂದಾವರ್ತಿ, ಹಾಗೆಯೇ ಪಕ್ಷ, ತಿಂಗಳು, ಆರು ತಿಂಗಳು, ಒಂದು ವರ್ಷಕ್ಕೊಂದಾವರ್ತಿ ಬರುವ ತಡೆಯಲಶಕ್ಯವೂ ಮಹಾ ಭಯಂಕರವೂ ಆದ ಮಹಾಜ್ವರಗಳು, ಸ್ವಪ್ನದಲ್ಲಿ ಕಾಣುವ ಅನಿಷ್ಟಸೂಚನೆಗಳು ದುಸ್ವಪ್ನಕಾರಕ ಗ್ರಹಗಳು, ಕೂಷ್ಮಾಂಡ, ಜೃಂಭಿಕಾ, ಭೌಮ, ದ್ರೋಣ ಎಂಬ ಸಾನ್ನಿಧ್ಯವಂಚಕ ಗ್ರಹಗಳು, ಚಿತ್ತವಿಭ್ರಮಕಾರಕ ಮತ್ತು ಪ್ರಾಣಾಪಹಾರಕ ರಾದ ಬಾಲಗ್ರಹಾದಿಗಳು, ಮನಸ್ಸು ಬುದ್ಧಿ ಇಂದ್ರಿಯಗಳನ್ನು ಅಪಹರಿಸುವ ಸ್ಫೋಟಗಳು, ಹೆಚ್ಚು ಆಹಾರವನ್ನು ತಿನ್ನುವ ಬಲಿಭೋಕ್ತೃಗಳಾದ ಅಧಿಕವಾಗಿ ಶವವನ್ನು ಭಕ್ಷಿಸುವ ಮಹಾಗ್ರಹಗಳು ದಿವಾಚರರು, ನಿಶಾಚರರು, ಸಂಧ್ಯಾಕಾಲ ಗಳಲ್ಲಿ ಉಗ್ರರು ಮತ್ತು ವಿಶೇಷವಾಗಿ ಕೊಬ್ಬಿದವರು ಅಥವಾ ಪ್ರಮತ್ತರಲ್ಲದವರು ಆಗಿ ನನ್ನನ್ನು ಪೀಡಿಸಲು ಉದ್ಯುಕ್ತರಾಗಿರುವರೋ ಅವರೆಲ್ಲರೂ ಕಾರ್ತವೀರ್ಯನ ಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳ ಪೆಟ್ಟಿನಿಂದ ನಾಶಪಡಿಸಲ್ಪಟ್ಟ ಸತ್ವ ಬಲ ಪ್ರಯತ್ನಗಳುಳ್ಳವರಾಗಿ ಸಾವಿರಾರು ವಿಧವಾಗಿ ನಾಶವಾಗಲಿ.

೭೮-೮೪. ಸಾಧಾರಣ ಹಾವುಗಳು, ದೊಡ್ಡ ಪರ್ವತ ಬಿಲಗಳಲ್ಲಿ ವಾಸ ಮಾಡುವ ಮಹಾಸರ್ಪಗಳು, ಕಾಲಸರ್ಪಗಳು, ಮಹಾದಂಷ್ಟ್ರಗಳು, ಮಹಾ

ಕಾಲವ್ಯಾಲಾ ಮಹಾದಂಷ್ಟ್ರಾ ಮಹಾಜಗರಸಂಜ್ಞಕಾಃ ।
ಅನಂತಶೂಲಿಕಾದ್ಯಾಶ್ಚ ದಂಷ್ಟ್ರಾವಿಷಮಹಾಭಯಾಃ ॥ ೭೯ ॥

ಅನೇಕಶತಶೀರ್ಷಾಶ್ಚ ಖಂಡಪುಚ್ಛಾಶ್ಚ ದಾರುಣಾಃ ।
ಮಹಾವಿಷಜಲೌಕಾಶ್ಚ ವೃಶ್ಚಿಕಾ ರಕ್ತಪುಚ್ಛಕಾಃ ॥ ೮೦ ॥

ಆಶೀವಿಷಾಃ ಕಾಲಕೂಟಾ ಮಹಾಹಾಲಾಹಲಾಹ್ವಯಾಃ ।
ಜಲಸರ್ಪಾ ಜಲವ್ಯಾಲಾ ಜಲಗ್ರಾಹಾಶ್ಚ ಕಚ್ಛಪಾಃ ॥ ೮೧ ॥

ಮತ್ಸ್ಯಕಾ ವಿಷಪುಚ್ಛಾಶ್ಚ ಯೇ ಚಾನ್ಯೇ ಜಲವಾಸಿನಃ ।
ಜಲಜಾಃ ಸ್ಥಲಜಾಶ್ಚೈವ ಕೃತ್ರಿಮಾಶ್ಚ ಮಹಾವಿಷಾಃ ॥ ೮೨ ॥

ಗುಪ್ತರೂಪಾಃ ಗುಪ್ತವಿಷಾಃ ಮೂಷಿಕಾ ಗೃಹಗೋಧಿಕಾಃ ।
ನಾನಾವಿಷಾಶ್ಚ ಯೇ ಘೋರಾಃ ಮಹೋಪವಿಷಸಂಜ್ಞಿಕಾಃ ॥ ೮೩ ॥

ಯೇಽಸ್ಮಾನ್ ಬಾಧಿತುಮಿಚ್ಛಂತಿ ಶರೀರಪ್ರಾಣನಾಶಕಾಃ ।
ತೇ ಸರ್ವೇ ಕಾರ್ತವೀರ್ಯಸ್ಯ ಖಡ್ಗಸಾಹಸ್ರದಾರಿತಾಃ ॥ ೮೪ ॥

---

ಜಗರನಾಮಕ ಸರ್ಪಗಳು, ದಂಷ್ಟ್ರಾವಿಷಗಳಿಂದ ಮಹಾಭಯಂಕರಗಳಾದ ಅನಂತ, ಶೂಲಿಕಾ ಮುಂತಾದುವು, ನೂರಾರು ತಲೆಗಳುಳ್ಳವು, ಭಯಂಕರಗಳಾದ ಕತ್ತರಿಸಲ್ಪಟ್ಟ ಬಾಲಗಳುಳ್ಳವು, ಮಹಾವಿಷಪೂರಿತವಾದ ಜಲೌಕಗಳು, ಕೆಂಪು ಬಾಲಗಳುಳ್ಳ ಚೇಳುಗಳು, ಆಶೀವಿಷ, ಕಾಲಕೂಟ, ಮಹಾಹಾಲಾಹಲನಾಮಕ ಸರ್ಪಗಳು, ಜಲಸರ್ಪ, ಜಲವ್ಯಾಲ, ಜಲಗ್ರಾಹ, ಕಚ್ಛಪ, ಮತ್ಸ್ಯಕ, ವಿಷಪುಚ್ಛ ಮುಂತಾದ ನೀರಿನಲ್ಲಿ ವಾಸಿಸುವ ಸರ್ಪವಿಶೇಷಗಳು, ಜಲಜ, ಸ್ಥಲಜ, ಕೃತ್ರಿಮಗಳಾದ ಮಹಾವಿಷಜಂತುಗಳು, ಗುಪ್ತರೂಪಿಗಳೂ, ಗುಪ್ತವಿಷಗಳೂ ಆದ ಇಲಿ ಹೆಗ್ಗಣಗಳು, ಮಹಾವಿಷ ಉಪವಿಷಸಂಜ್ಞಕಗಳಾದ ನಾನಾವಿಧ ಕ್ರೂರ ವಿಷ ಜಂತಗಳೂ, ಹೀಗೆ ನಮ್ಮನ್ನು ಹಿಂಸಿಸಲಿಚ್ಛಿಸುವ ಶರೀರಪ್ರಾಣಗಳನ್ನು ನಾಶಪಡಿಸುವ ಜಂತುಗಳೆಲ್ಲವೂ ಕಾರ್ತವೀರ್ಯಾರ್ಜುನನ ಕತ್ತಿಗಳಿಂದ ಕತ್ತರಿಸಲ್ಪಟ್ಟು ಇಂದ್ರಿಯಶಕ್ತಿಹೀನರಾಗಿ ದೂರದಿಂದಲೇ ನಾಶವಾಗಲಿ.

ದೂರಾದೇವ ವಿನಶ್ಯಂತು ಪ್ರಣಷ್ಟೇಂದ್ರಿಯಸಾಹಸಾಃ ।
ಮನುಷ್ಯಾಃ ಪಶವೋ ವೃಕ್ಷವಾನರಾ ವನಗೋಚರಾಃ ॥ ೮೫ ॥

ಸಿಂಹವ್ಯಾಘ್ರವರಾಹಾಶ್ಚ ಮಹಿಷಾ ಯೇ ಮಹಾಮೃಗಾಃ ।
ಗಜಾಸ್ತುರಂಗಾ ಗವಯಾ ರಾಸಭಾಃ ಶರಭಾ ವೃಕಾಃ ॥ ೮೬ ॥

ಶುನಕಾ ದ್ವಿಪಿನಃ ಶುಭ್ರಾ ಮಾರ್ಜಾರಾ ಬಿಲಲೋಲುಪಾಃ ।
ಶೃಗಾಲಾಃ ಶಶಕಾಃ ಶ್ಯೇನಾ ಗರತ್ಮಂತೋ ವಿಹಂಗಮಾಃ ॥ ೮೭ ॥

ಭೇರುಂಡಾ ವಾಯಸಾ ಗೃಧ್ರಾ ಹಂಸಾದ್ಯಾಃ ಪಕ್ಷಿಜಾತಯಃ ।
ಉದ್ಭಿಜಾಶ್ಚಾಂಡಜಾಶ್ಚೈವ ಸ್ವೇದಜಾಶ್ಚ ಜರಾಯುಜಾಃ ॥ ೮೮ ॥

ನಾನಾಭೇದಕುಲೇ ಜಾತಾ ನಾನಾಭೇಧಾಃ ಪೃಥಗ್ವಿಧಾಃ ।
ಯೇಽಸ್ಮಾನ್ ಬಾಧಿತುಮಿಚ್ಛಂತಿ ಸಂಧ್ಯಾಸು ಚ ದಿವಾ ನಿಶಿ ॥ ೮೯ ॥

ತೇ ಸರ್ವೇ ಕಾರ್ತವೀರ್ಯಸ್ಯ ಗದಾಸಾಹಸ್ರದಾರಿತಾಃ ।
ದೂರಾದೇವ ವಿನಶ್ಯಂತು ವಿನಷ್ಟಗತಿಪೌರುಷಾಃ ॥ ೯೦ ॥

---

೮೫-೯೦. ನಮ್ಮನ್ನು ಬಾಧಿಸಲಿಚ್ಛಿಸುವ ಮನುಷ್ಯರು, ಪಶುಗಳು, ಗಿಡದಲ್ಲಿರುವ ಕಪಿಗಳು, ಕಾಡಿನಲ್ಲಿರುವ ಸಿಂಹ, ಹುಲಿ, ಹಂದಿ, ಕೋಣಗಳು ಮಹಾಮೃಗಗಳಾದ ಆನೆ, ಕುದುರೆ, ಗವಯ, ಕತ್ತೆ, ಕರಡಿ, ತೋಳ, ನಾಯಿ, ಹುಲಿ, ಬಿಲದ್ವಾರದಲ್ಲಿ ಆಸಕ್ತಗಳಾದ ಬೆಕ್ಕುಗಳು, ನರಿ, ಮೊಲ, ಗಿಡಗ, ಗರುಡ, ಭೇರುಂಡ, ಕಾಗೆ, ಹದ್ದು, ಹಂಸ ಮುಂತಾದ ಆಕಾಶಚಾರಿಯಾದ ಪಕ್ಷಿಗಳು, ತರುಗುಲ್ಮಾದಿ ಉದ್ಭಿಜ್ಜಗಳು, ಕೋಳಿ ಮುಂತಾದ ಅಂಡಜಗಳು, ಕ್ರಿಮಿ ಮುಂತಾದ ಸ್ವೇದಜಗಳು, ಮನುಷ್ಯ ಮುಂತಾಗ ಜರಾಯುಜಗಳು ಭಿನ್ನಭಿನ್ನವಾದ ಕುಲಗಳಲ್ಲಿ ಹುಟ್ಟಿದ ನಾನಾವಿಧ ಪ್ರಾಣಿವಿಶೇಷಗಳೆಲ್ಲವೂ ಹಗಲು ರಾತ್ರಿ ಸಂಧ್ಯಾಕಾಲದಲ್ಲಿಯೂ ಕಾರ್ತವೀರ್ಯನ ಸಾವಿರ ಗದೆಗಳಿಂದ ಹೊಡೆಯಲ್ಪಟ್ಟು, ಗಮನಸಾಮರ್ಥ್ಯವಿಲ್ಲದಂತಾಗಿ ದೂರದಿಂದಲೇ ನಾಶವಾಗಲಿ.

ಯೇ ಚಾಕ್ಷೇಮಪ್ರದಾತಾರಃ ಕೂಟಮಾಯಾವಿನಶ್ಚ ಯೇ ।
ಮಾರಣೋಚ್ಚಾಟನೋನ್ಮೂಲದ್ವೇಷಮೋಹನಕಾರಕಾಃ ॥ ೯೧ ॥

ವಿಶ್ವಾಸಘಾತಕಾ ದುಷ್ಟಾ ಯೇ ಚ ಸ್ವಾಮಿದ್ರುಹೋ ನರಾಃ ।
ಯೇ ಚಾತತಾಯಿನೋ ದುಷ್ಟಾ ಯೇ ಪಾಪಾ ಗೋಪ್ಯಹಾರಿಣಃ ॥ ೯೨ ॥

ದಾಹೋಪಘಾತಗರಲಶಸ್ತ್ರಪಾತಾತಿದುಃಖದಾಃ ।
ಕ್ಷೇತ್ರವಿತ್ತಾದಿಹರಣಬಂಧನಾದಿಭಯಪ್ರದಾಃ ॥ ೯೩ ॥

ಈತಯೋ ವಿವಿಧಾಕಾರಾಃ ಯೇ ಚಾನ್ಯೇ ದುಷ್ಟಜಾತಯಃ ।
ಪೀಡಾಕರಾ ಯೇ ಸತತಂ ಛಿದ್ರಮಿಚ್ಛಂತಿ ಬಾಧಿತುಂ ॥ ೯೪ ॥

ತೇ ಸರ್ವೇ ಕಾರ್ತವೀರ್ಯಸ್ಯ ಚಕ್ರಸಾಹಸ್ರದಾರಿತಾಃ ।
ದೂರಾದೇವ ಕ್ಷಯಂ ಯಾಂತು ವಿನಷ್ಟಬಲಸಾಹಸಾಃ ॥ ೯೫ ॥

---

೯೧-೯೫. ಯಾವಾಗಲೂ ನಮ್ಮನ್ನು ಬಾಧಿಸಬೇಕೆಂದು ಛಿದ್ರವನ್ನು ಬಯಸುವ ಅಮಂಗಳಪ್ರದಾತೃಗಳಾದ, ಸುಳ್ಳುಗಾರರು, ಮಾಯಾವಿಗಳು, ಮಾರಣ, ಉಚ್ಚಾಟನ, ನಿರ್ನಿಮಿತ್ತದ್ವೇಷ, ಮೋಹಗಳನ್ನುಂಟುಮಾಡುವ, ವಿಶ್ವಾಸಘಾತಕರು, ದುಷ್ಟರೂ, ಸ್ವಾಮಿದ್ರೋಹಿಗಳೂ ಆದ ಮನುಷ್ಯರು, ಆತತಾಯಿಗಳು, ತುಂಟರು, ಪಾಪಿಗಳು, ರಹಸ್ಯವಾಗಿಟ್ಟ ಹಣವನ್ನಪಹರಿಸುವವರು ಸುಡುವುದು, ಹೊಡೆಯುವುದು, ವಿಷಪ್ರದಾನ, ಶಸ್ತ್ರಘಾತಗಳಿಂದ ಅತ್ಯಂತ ದುಃಖವನ್ನು ಉಂಟುಮಾಡುವವರು, ಭೂಮಿ, ದ್ರವ್ಯ ಮುಂತಾದುವುಗಳನ್ನಪಹರಿಸಿ ಬಂಧನಾದಿಗಳಿಂದ ಭಯಪಡಿಸುವವರು, ನಾನಾವಿಧವಾದ ಈತಿಬಾಧೆಗಳು, ಪೀಡಿಸುವ ದುಷ್ಟಜಂತುಗಳು ಇವೆಲ್ಲವೂ ಕಾರ್ತವೀರ್ಯನ ಚಕ್ರಸಹಸ್ರದಿಂದ ಸೀಳಲ್ಪಟ್ಟು ಶಕ್ತಿ ಸಾಹಸಹೀನಗಳಾಗಿ ದೂರದಲ್ಲಿಯೇ ನಾಶವನ್ನು ಹೊಂದಲಿ.

ಯೇ ಮೇಘಾ ಯೇ ಮಹಾವರ್ಷಾ ಯೇ ವಾತಾ ಯಾಶ್ಚ ವಿದ್ಯುತಃ ।
ಯೇ ಮಹಾಶನಯೋ ದಿಪ್ತಾ ಯೇ ನಿರ್ಘಾತಾಶ್ಚ ದಾರುಣಾಃ ॥ ೯೬ ॥

ಉಲ್ಕಾಪಾತಾಶ್ಚ ಯೇ ಘೋರಾಃ ಯೇ ಮಹೇಂದ್ರಾಯುಧಾದಯಃ ।
ಸೂರ್ಯೇಂದುಕುಜಸೌಮ್ಯಾಶ್ಚ ಗುರುಕಾವ್ಯಶನೈಶ್ಚರಾಃ ॥ ೯೭ ॥

ರಾಹುಕೇತೂ ಮಹಾಘೋರಾ ನಕ್ಷತ್ರಾ ರಾಶಯಸ್ತಥಾ ।
ತಿಥಯಃ ಸಂಕ್ರಮಾ ಮಾಸಾಃ ಹಾಯನಾ ಯುಗನಾಯಕಾಃ ॥ ೯೮ ॥

ಮನ್ವಂತರಾಧಿಪಾಃ ಸಿದ್ಧಾಃ ಋಷಯೋ ಯೋಗಸಿದ್ಧಯಃ ।
ನಿಧಯೋ ಋಗ್ಯಜುಸ್ಸಾಮಾಥರ್ವಾಣಶ್ಚೈವ ವಹ್ನಯಃ ॥ ೯೯ ॥

ಋತವೋ ಲೋಕಪಾಲಾಶ್ಚ ಪಿತರೋ ದೇವಸಂಹತಿಃ ।
ವಿದ್ಯಾಶ್ಚೈವ ಚತುಃಷಷ್ಟಿಭೇದಾಃ ಯಾ ಭುವನತ್ರಯೇ ॥ ೧೦೦ ॥

ಯೇತ್ವತ್ರ ಕೀರ್ತಿತಾಃ ಸರ್ವೇ ಯೇ ಚಾನ್ಯೇ ನಾನುಕೀರ್ತಿತಾಃ ।
ತೇ ಸಂತು ನಃ ಸದಾ ಸೌಮ್ಯಾಃ ಸರ್ವಕಾಲಸುಖಾವಹಾಃ ॥ ೧೦೧ ॥

---

೯೬-೧೦೨. ಮೇಘಗಳು, ದೊಡ್ಡ ಮಳೆಗಳು, ಗಾಳಿಗಳು, ಮಿಂಚುಗಳು, ಮಹಾಪಾಷಾಣಗಳು, ವಿರಾಜಮಾನವಾದ ನಿರ್ಘಾತಗಳು, ಭಯಂಕರವಾದ ಬೆಂಕಿಯ ಪತನವು, ಘೋರವಾದ ವಜ್ರಾಯುಧ ಮುಂತಾದುವು, ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು, ಕ್ರೂರನಕ್ಷತ್ರಗಳು, ರಾಶಿಗಳು, ತಿಥಿ, ಸಂಕ್ರಮಣ, ಮಾಸ, ವರ್ಷ, ಯುಗನಾಥ, ಮನ್ವಂತರಾಧಿಪತಿ, ಸಿದ್ಧರು, ಋಷಿಗಳು, ಯೋಗಿಗಳು, ನಿಧಿಗಳು, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಅಗ್ನಿಗಳು, ಋತುಗಳು, ಲೋಕಪಾಲಕರು, ಪಿತೃಗಳು, ದೇವಸಂಘ, ಮೂರುಲೋಕಗಳಲ್ಲಿರುವ ಅರವತ್ತುನಾಲ್ಕು ವಿದ್ಯೆಗಳು, ಇಲ್ಲಿ ಉಕ್ತವಾದುವೂ ಹೇಳಲ್ಪಡದಿರುವುವೂ ಸಹ ಎಲ್ಲವೂ ಯೋಗೀಂ

**ಆಜ್ಞಯಾ ಕಾರ್ತವೀರ್ಯಸ್ಯ ಯೋಗೀಂದ್ರಸ್ಯಾಮಿದ್ಯುತೇಃ ।**
**ಕಾರ್ತವೀರ್ಯಾರ್ಜುನೋ ಧನ್ವೀ ರಾಜೇಂದ್ರೋ ಹೈಹಯೇಶ್ವರಃ ॥ ೧೦೨ ॥**

**ದಶಾಸ್ಯದರ್ಪಹಾ ರೇವಾಲೀಲಾದೃಪ್ತಃ ಸುದರ್ಜಯಃ ।**
**ದುಃಖಹಾ ಚೌರದಮನೋ ರಾಜರಾಜೇಶ್ವರಃ ಪ್ರಭುಃ ॥ ೧೦೩ ॥**

**ಸರ್ವಜ್ಞಃ ಸರ್ವದಃ ಶ್ರೀಮಾನ್ ಸರ್ವಶಿಷ್ಟೇಷ್ಟದಃ ಕೃತೀ ।**
**ರಾಜಚೂಡಾಮಣಿರ್ಯೋಗೀ ಸಪ್ತದ್ವೀಪಾಧಿನಾಯಕಃ ॥ ೧೦೪ ॥**

**ವಿಜಯೀ ವಿಶ್ವಜಿದ್ವಾಗ್ಮೀ ಮಹಾಗತಿರಲೋಲುಪಃ ।**
**ಯಜ್ವಾ ವಿಪ್ರಪ್ರಿಯೋ ವಿದ್ವಾನ್ ಬ್ರಹ್ಮಜ್ಞೋಯಃ ಸನಾತನಃ ॥ ೧೦೫ ॥**

**ಮಾಹಿಷ್ಮತೀಪತಿರ್ಯೋಧಾ ಮಹಾಕೀರ್ತಿರ್ಮಹಾಭುಜಃ ।**
**ಸುಕುಮಾರೋ ಮಹಾವೀರೋ ಮಾರಿಘ್ನೋ ಮದಿರೇಕ್ಷಣಃ ॥ ೧೦೬ ॥**

---

ದ್ರನೂ ಮತ್ತು ಅಪರಿಮಿತ ತೇಜಸ್ವಿಯೂ ಆದ ಕಾರ್ತವೀರ್ಯಾರ್ಜುನನ ಅಪ್ಪಣೆಯಿಂದ ಯಾವಾಗಲೂ ನಮಗೆ ಸುಖಪ್ರದಗಳಾಗಿ ಸೌಮ್ಯವಾಗಿರಲಿ.

೧೦೨-೧೧೪. ಈಗ ಕಾರ್ತವೀರ್ಯಾರ್ಜುನನ ನೂರೆಂಟು ನಾಮಗಳನ್ನು ಹೇಳುತ್ತಾರೆ:--ಕಾರ್ತವೀರ್ಯಾರ್ಜುನ, ಧನ್ವೀ= ಧನುಸ್ಸನ್ನು ಧರಿಸಿರುವವನು, ರಾಜೇಂದ್ರಃ= ರಾಜಶ್ರೇಷ್ಠ, ಹೈಹಯೇಶ್ವರಃ= ಹೈಹಯಸ್ವಾಮಿ, ದಶಾಸ್ಯದರ್ಪಹಾ= ರಾವಣನ ಗರ್ವವನ್ನು ನಾಶಪಡಿಸಿದವನು, ರೇವಾಲೀಲಾದೃಪ್ತ= ನರ್ಮದಾನದಿಯಲ್ಲಿ ಜಲಕ್ರೀಡೆಯಿಂದ ಮತ್ತನಾಗಿರುವವನು, ಸುದುರ್ಜಯಃ= ಜಯಿಸಲಶಕ್ಯನು, ದುಃಖಹಾ= ದುಃಖಪರಿಹಾರಕನು, ಚೋರದಮನಃ= ಕಳ್ಳರನ್ನು ನಾಶಪಡಿಸುವವನು, ರಾಜರಾಜೇಶ್ವರಃ= ಚಕ್ರವರ್ತಿಯು, ಪ್ರಭುಃ= ಸ್ವಾಮಿಯು, ಸರ್ವಜ್ಞನು, ಸರ್ವದಃ= ಇಷ್ಟಾರ್ಥವೆಲ್ಲವನ್ನೂ ಕೊಡುವವನು, ಶ್ರೀಮಾನ್, ಸರ್ವಶಿಷ್ಟೇಷ್ಟದಃ= ಸಕಲಶಿಷ್ಟರಿಗೂ ಇಷ್ಟಾರ್ಥಪ್ರದನು, ಕೃತೀ=ಪಂಡಿತನೂ, ರಾಜಚೂಡಾಮಣಿಯೂ, ಯೋಗಿಯೂ ಏಳು ದ್ವೀಪಗಳಿಗೂ ಒಡೆಯನೂ, ಜಯಶಾಲಿಯೂ, ವಿಶ್ವಜಿತ್= ಜಗತ್ತನ್ನೇ

**ಶತ್ರುಘ್ನಃ ಶಾಶ್ವತಃ ಶೂರಃ ಶಂಖಭೃದ್ಯೋಗಿವಲ್ಲಭಃ ।**
**ಮಹಾಭಗವತೋ ಧೀಮಾನ್ಮಹಾಭಯವಿನಾಶನಃ ॥ ೧೦೭ ॥**

**ಅಸಾಧ್ಯವಿಗ್ರಹೋ ದಿವ್ಯೋ ಭಾವೋ ವ್ಯಾಪ್ತಜಗತ್ರಯಃ ।**
**ಜಿತೇಂದ್ರಿಯೋ ಜಿತಾರಾತಿಃ ಸ್ವಚ್ಛಂದೋಽನಂತವಿಕ್ರಮಃ ॥ ೧೦೮ ॥**

**ಚಕ್ರಭೃತ್ಪರಚಕ್ರಘ್ನಃ ಸಂಗ್ರಾಮವಿಧಿಪೂಜಿತಃ ।**
**ಸರ್ವಶಾಸ್ತ್ರಕಲಾಧಾರೀ ವಿರಜಾ ಲೋಕವಂದಿತಃ ॥ ೧೦೯ ॥**

**ವೀರೋ ವಿಮಲಸತ್ವಾಢ್ಯೋ ಮಹಾಬಲಪರಾಕ್ರಮಃ ।**
**ವಿಜಯಶ್ರೀಮಹಾಮಾನ್ಯೋ ಜಿತಾರಿರ್ಮಂತ್ರನಾಯಕಃ ॥ ೧೧೦ ॥**

**ಖಡ್ಗಭೃತ್ಕಾಮದಃ ಕಾಂತಃ ಕಾಲಘ್ನಃ ಕಮಲೇಕ್ಷಣಃ ।**
**ಭದ್ರವಾದಪ್ರಿಯೋ ವೈದ್ಯೋ ವಿಬುಧೋ ವರದೋ ವಶೀ ॥ ೧೧೧ ॥**

---

ಜಯಿಸಿರುವವನು, ವಾಗ್ಮಿಯು, ಮಹಾಗತಿಃ=ಮಹಾಜ್ಞಾನಿಯು, ಅಲೋಲುಪಃ ನಿಸ್ಪೃಹನು, ಯಜ್ವಾ= ಯಜ್ಞಮಾಡಿದವನು, ವಿಪ್ರಪ್ರಿಯಃ= ಬ್ರಾಹ್ಮಣ ಪ್ರಿಯನು, ವಿದ್ವಾಂಸನು, ಬ್ರಹ್ಮಜ್ಞೇಯಃ= ಬ್ರಹ್ಮಜ್ಞಾನಿಯು, ಸನಾತನಃ= ಪುರಾತನನು, ಮಾಹಿಷ್ಮತೀಪತಿಯೂ, ಯೋಧಾ= ಯುದ್ಧಮಾಡುವವನೂ, ಮಹಾಕೀರ್ತಿವಂತನೂ, ಮಹಾಭುಜಃ= ವಿಸ್ತಾರವಾದ ಭುಜಗಳುಳ್ಳವನು, ಸುಕುಮಾರನು, ಮಹಾವಿಗ್ರಹಃ= ದೊಡ್ಡ ಶರೀರವುಳ್ಳವನು, ಮಾರಿಘ್ನಃ= ಮಾರಿಯನ್ನು ಸಂಹರಿಸುವವನು, ಮದಿರೇಕ್ಷಣಃ= ಮತ್ತದೃಷ್ಟಿಯುಳ್ಳವನು, ಶತ್ರುಘ್ನಃ= ಶತ್ರುಸಂಹಾರಕನು, ಶಾಶ್ವತಃ= ನಿತ್ಯನು, ಶೂರ, ಶಂಖಭೃತ್ = ಶಂಖಧಾರಿಯು, ಯೋಗಿವಲ್ಲಭಃ= ಯೋಗಿಪ್ರಿಯನು, ಮಹಾಭಾಗವತಃ= ದೊಡ್ಡ ಭಗವದ್ಭಕ್ತನು, ಧೀಮಾನ್-ಬುದ್ಧಿವಂತನು, ಮಹಾಭಯವಿನಾಶನಃ= ಮಹಾಭೀತಿಪರಿಹಾರಕನು, ಅಸಾಧ್ಯವಿಗ್ರಹಃ= ಸಾಧಿಸಲಶಕ್ಯವಾದ ಶರೀರವುಳ್ಳವನು, ದಿವ್ಯಭಾವಃ= ಮಂಗಳಪ್ರದನು, ವ್ಯಾಪ್ತಜಗತ್ರಯಃ= ಮೂರುಲೋಕಗಳಲ್ಲಿಯೂ ವ್ಯಾಪಿಸಿರುವವನು, ಜಿತೇಂದ್ರಿಯನು, ಜಿತಾರಾತಿಃ= ಶತ್ರುಗಳನ್ನು

**ಮಹಾಧನೋ ನಿಧಿಪತಿಃ ಮಹಾಯೋಗೀ ಗುರುಪ್ರಿಯಃ ।**
**ಯೋಗಾಢ್ಯಸ್ಸರ್ವರೋಗಘ್ನೋ ರಾಜಿತಾಖಿಲಭೂತಲಃ ॥ ೧೧೨ ॥**

**ದಿವ್ಯಾಸ್ತ್ರಭೃದಮೇಯಾತ್ಮಾ ಸರ್ವಗೋಪ್ತಾ ಮಹೋಜ್ವಲಃ ।**
**ಸರ್ವಾಯುಧಧರೋಽಭೀಷ್ಟಪ್ರದಃ ಪರಪುಂಜಯಃ ॥ ೧೧೩ ॥**

---

ಜಯಿಸಿರುವವನು, ಸ್ವಚ್ಛಂದಃ= ತನ್ನ ಇಷ್ಟಾನುಸಾರ ನಡೆಯುವವನು, ಅನಂತವಿಕ್ರಮಃ= ಅಪಾರಪರಾಕ್ರಮಶಾಲಿ, ಚಕ್ರಭೃತ್= ಚಕ್ರಧಾರಿ, ಪರ ಚಕ್ರಘ್ನಃ= ಶತ್ರುಚಕ್ರಗಳನ್ನು ನಾಶಪಡಿಸುವವನು, ಸಂಗ್ರಾಮವಿಧಿಪೂಜಿತಃ= ಸಂಗ್ರಾಮವಿಧಾನದಿಂದ ಸತ್ಕೃತನು, ಸಕಲಶಾಸ್ತ್ರಕಲಾಧಾರಿಯು, ವಿರಜಾಃ= ರಜೋಗುಣರಹಿತನು, ಲೋಕವಂದಿತನು, ವೀರನು, ವಿಮಲಸತ್ವಾಢ್ಯಃ= ನಿರ್ಮಲಸತ್ವಗುಣಸ್ವರೂಪನು, ಮಹಾಬಲಪರಾಕ್ರಮವುಳ್ಳವನು, ವಿಜಯಶ್ರೀ ಮಹಾಮಾನ್ಯಃ= ವಿಜಯಸಂಪತ್ತಿನಿಂದ ಅತಿಶಯವಾಗಿ ಮಾನ್ಯನಾಗಿರುವವನು ಜಿತಾರಿಃ= ಕಾಮಾದಿ ಶತ್ರುಗಳನ್ನು ಜಯಿಸಿರುವವನು, ಮಂತ್ರಾಧಿಪತಿಯು, ಖಡ್ಗಧಾರಿಯು, ಇಷ್ಟಪ್ರದನು, ಮನೋಹರನು, ಕಾಲಘ್ನಃ= ಕಾಲಕೃತ ವಿಕಾರರಹಿತನು, ಕಮಲೇಕ್ಷಣಃ= ಪದ್ಮದಂತೆ ನೇತ್ರವುಳ್ಳವನು, ಭದ್ರವಾದ ಪ್ರಿಯಃ= ಮಂಗಳವಚನಪ್ರಿಯನು, ವೈದ್ಯಃ= ಸಂಸಾರವೆಂಬ ರೋಗನಾಶ ಕನು, ವಿಬುಧನು, ವರಪ್ರದನು, ವಶೀ= ಭಕ್ತಪರಾಧೀನ, ಮಹಾಧನಃ= ದೊಡ್ಡ ಧನಿಕನು, ನಿಧಿಪತಿಃ= ಗಣಿಗೊಡೆಯನು, ಮಹಾಯೋಗಿಯು, ಗುರು ಪ್ರಿಯಃ= ಗುರುಗಳ ಪ್ರೀತಿಗೆ ಪಾತ್ರನು, ಯೋಗಾಢ್ಯಃ= ಯೋಗಪೂರ್ಣನು, ಸರ್ವರೋಗಘ್ನಃ= ಸಕಲರೋಗನಾಶಕನು, ರಾಜಿತಾಖಿಲಭೂತಲಃ= ತನ್ನ ಕಾಂತಿಯಿಂದ ಪ್ರಕಾಶಿಸಲ್ಪಟ್ಟ ಭೂಪ್ರದೇಶವುಳ್ಳವನು, ದಿವ್ಯಾಸ್ತ್ರಭೃತ್= ದೇವಯೋಗ್ಯವಾದ ಅಸ್ತ್ರಗಳನ್ನು ಧರಿಸಿರುವವನು, ಅಮೇಯಾತ್ಮಾ= ಅಜ್ಞೇ ಯವಾದ ಸ್ವರೂಪವುಳ್ಳವನು, ಸರ್ವಗೋಪ್ತಾ= ಸರ್ವರಕ್ಷಕ ಮಹೋಜ್ವಲಃ= ಮಹಾಪ್ರಕಾಶಮಾನನು, ಸರ್ವಾಯುಧಧಾರಿಯು, ಅಭೀಷ್ಟಪ್ರದ, ಪರಪುರಂ-ಜಯಃ= ಶತ್ರುಪಟ್ಟಣವನ್ನು ಜಯಿಸಿದವನು, ಯೋಗಸಿದ್ಧನು, ಮಹಾಕಾಯನು

ಯೋಗಸಿದ್ಧೋ ಮಹಾಕಾಯೋ ಮಹಾವೃಂದಶತಾಧಿಪಃ ।
ಸರ್ವಜ್ಞಾನನಿಧಿಃ ಸರ್ವಸಿದ್ಧಿದಾನಕೃತೋದ್ಯಮಃ　　|| ೧೧೪ ||

ಇತ್ಯಷ್ಟಶತನಾಮೋಕ್ತ್ಯಾ ಮೂರ್ತಯೋ ದಶದಿಕ್ಪಥಿ ।
ಸಮ್ಯಕ್ದಶದಿಶೋ ವ್ಯಾಪ್ಯ ಪಾಲಯಂತು ಚ ಮಾಂ ಸದಾ　　|| ೧೧೫ ||

ಸ್ವಸ್ಥಾಃ ಸರ್ವೇಂದ್ರಿಯಾಃ ಸಂತು ಶಾಂತಿರಸ್ತು ಸದಾ ಮಮ ।
ಶೇಷಾದ್ಯಾ ಮೂರ್ತಯೋಽಷ್ಟೌ ಚ ವಿಕ್ರಮೇಣೈವ ಭಾಸ್ವರಾಃ　　|| ೧೧೬ ||

ಅಗ್ನಿನಿಋತಿವಾಯ್ವೀಶಕೋಣಗಾಃ ಪಾಂತು ಮಾಂ ಸದಾ ।
ಮಮ ಸೌಖ್ಯಮಸಂಬಾಧಮಾರೋಗ್ಯಮಪರಾಜಯಃ　　|| ೧೧೭ ||

ದುಃಖಹಾನಿರವಿಘ್ನಶ್ಚ ಪ್ರಜಾವೃದ್ಧಿಃ ಸುಖೋದಯಃ ।
ವಾಂಛಾಪ್ತಿರತಿಕಲ್ಯಾಣಮನ್ಯೈಷಮ್ಯಮನಾಮಯಂ　　|| ೧೧೮ ||

---

ಮಹಾವೃಂದಶತಾಧಿಪಃ= ನೂರಾರು ಮಹಾಸಂಘಗಳಿಗಧಿಪತಿಯು, ಸಕಲ ಜ್ಞಾನನಿಧಿ, ಸರ್ವಸಿದ್ಧಿದಾನಕೃತೋದ್ಯಮಃ= ಸಕಲಸಿದ್ಧಿಗಳನ್ನೂ ಕೊಡುವ ಯತ್ನವುಳ್ಳವನು ಇವು ಕಾರ್ತವಿರ್ಯಾರ್ಜುನನ ನೂರೆಂಟು ನಾಮಗಳು.

೧೧೫. ಈ ರೀತಿಯಾದ ನೂರೆಂಟು ನಾಮಗಳನ್ನು ಪಠನೆಮಾಡುವುದರಿಂದ ಅವನ ಮೂರ್ತಿಗಳು ಚೆನ್ನಾಗಿ ಹತ್ತು ದಿಕ್ಕುಗಳಲ್ಲಿಯೂ ವ್ಯಾಪಿಸಿ ದಶ ದಿಙ್ಮಾರ್ಗಗಳಲ್ಲಿಯೂ ನನ್ನನ್ನು ಸರ್ವದಾ ಪಾಲಿಸಲಿ.

೧೧೬-೧೧೭. ಸಕಲೇಂದ್ರಿಯಗಳೂ ಸ್ವಸ್ಥವಾಗಿದ್ದು ನನಗೆ ಯಾವಾಗಲೂ ಶಾಂತಿಯುಂಟಾಗಲಿ. ಪರಾಕ್ರಮದಿಂದಲೇ ಪ್ರಕಾಶಮಾನರಾದ ಶೇಷಾದಿ ಅಷ್ಟಮೂರ್ತಿಗಳು ಆಗ್ನೇಯ, ನೈರುತ್ಯ, ವಾಯುವ್ಯ ಮತ್ತು ಈಶಾನ್ಯ ಮೂಲೆಗಳಲ್ಲಿದ್ದು ನನ್ನನ್ನು ಸರ್ವದಾ ರಕ್ಷಿಸಲಿ.

೧೧೭-೧೨೧. ನನಗೆ ನಿರಾಬಾಧವಾದ ಸೌಖ್ಯ, ಆರೋಗ್ಯ, ಪರಾಜಯವಿಲ್ಲದಿರುವಿಕೆ, ದುಃಖನಾಶ, ವಿಘ್ನಪರಿಹಾರ, ಸಂತಾನಸಮೃದ್ಧಿ, ಸುಖೋತ್ಪತ್ತಿ,

**ಅನಾಲಸ್ಯಮಭೀಷ್ಟಂ ಸ್ಯಾನ್ಮೃತ್ಯುಹಾನಿರ್ಬಲೋನ್ನತಿಃ ।**
**ಭಯಹಾನಿರ್ಯಶಃಕಾಂತಿವಿದ್ಯಾಋದ್ಧಿರ್ಮಹಾಶ್ರಿಯಃ ॥ ೧೧೯ ॥**

**ಅನಷ್ಟದ್ರವ್ಯತಾ ಚೈವ ನಷ್ಟಸ್ಯ ಪುನರಾಗಮಃ ।**
**ದೀರ್ಘಾಯುಷ್ಯಂ ಮನೋಹರ್ಷಃ ಸೌಕುಮಾರ್ಯಮಭೀಪ್ಸಿತಂ ॥ ೧೨೦ ॥**

**ಅಪ್ರಧೃಷ್ಯತಮತ್ವಂ ಚ ಮಹಾಸಾಮರ್ಥ್ಯಮೇವ ಚ ।**
**ಸಂತು ಮೇ ಕಾರ್ತವೀರ್ಯಸ್ಯ ಹೈಹಯೇಂದ್ರಸ್ಯ ಕೀರ್ತನಾತ್ ॥ ೧೨೧ ॥**

**ಯ ಇದಂ ಕಾರ್ತವೀರ್ಯಸ್ಯ ಕವಚಂ ಪುಣ್ಯವರ್ಧನಂ ।**
**ಸರ್ವಪಾಪಪ್ರಶಮನಂ ಸರ್ವೋಪದ್ರವನಾಶನಂ ॥ ೧೨೨ ॥**

**ಸರ್ವಶಾಂತಿಕರಂ ಗುಹ್ಯಂ ಸಮಸ್ತಭಯನಾಶನಂ ।**
**ವಿಜಯಾರ್ಥಪ್ರದಂ ನೄಣಾಂ ಸರ್ವಸಂಪತ್ಪ್ರದಂ ಶುಭಂ ॥ ೧೨೩ ॥**

---

ಇಷ್ಟಪ್ರಾಪ್ತಿ, ಅಧಿಕಮಂಗಳ, ವೈಷಮ್ಯವಿಲ್ಲದಿರುವುದು, ರೋಗಹೀನತೆ, ಆಲಸ್ಯಾಭಾವ, ಇಷ್ಟಾರ್ಥಲಾಭ, ಸಾಯದಿರುವುದು, ಶಕ್ತಿಸಮೃದ್ಧಿ, ಭಯವಿಲ್ಲದಿರುವುದು, ಕೀರ್ತಿ, ತೇಜಸ್ಸು, ವಿದ್ಯೆ, ಸಮೃದ್ಧಿ, ಉತ್ಸವ, ಸಂಪತ್ತು, ಹಣವು ಹಾಳಾಗದಿರುವುದು, ಹೋದುದು ಸಿಕ್ಕುವುದು, ದೀರ್ಘಾಯುಸ್ಸು, ಮನಸ್ಸಂತೋಷ, ಸುಕುಮಾರತೆ, ಅಭೀಷ್ಟಸಿದ್ಧಿ, ಯಾರಿಂದಲೂ ತಡೆಯಲಶಕ್ಯವಾಗಿರುವಿಕೆ ಮತ್ತು ಮಹಾಸಾಮರ್ಥ್ಯ ಇವುಗಳು ಹೈಹಯೇಂದ್ರನಾದ ಕಾರ್ತವೀರ್ಯನನಾಮ ಸಂಕೀರ್ತನದಿಂದ ಉಂಟಾಗಲಿ.

೧೨೨–೧೨೪. ಪುಣ್ಯಾಭಿವೃದ್ಧಿಕರವೂ, ಸಕಲಪಾಪಪರಿಹಾರಕವೂ, ಸಕಲಉಪದ್ರವಗಳನ್ನು ಹೋಗಲಾಡಿಸುವುದೂ, ಸರ್ವಶಾಂತಿಕಾರಕವೂ, ಗೋಪ್ಯವು, ಸಮಸ್ತಭಯಪರಿಹಾರಕವು, ಮನುಷ್ಯರಿಗೆ ವಿಜಯಾದಿ ಸಕಲ

ಶೃಣುಯಾದ್ವಾ ಪಠೇದ್ವಾಪಿ ಸರ್ವಕಾಮಾನವಾಪ್ನುಯಾತ್ ।
ಚೋರೈರ್ಹೃತಂ ಯದಾ ಪಶ್ಯೇತ್ಪಶ್ವಾದಿಧನಮಾತ್ಮನಃ　　|| ೧೨೪ ||

ಸಪ್ತವಾರಂ ತದಾ ಜಪ್ಯಾನ್ನಿಶಿ ಪಶ್ಚಿಮದಿಙ್ಮುಖಃ ।
ಸಪ್ತರಾತ್ರೇಣ ಲಭತೇ ನಷ್ಟದ್ರವ್ಯಂ ನ ಸಂಶಯಃ　　|| ೧೨೫ ||

ಸಪ್ತವಿಂಶತಿಧಾ ಜಪ್ತ್ವಾ ಪ್ರಾಚೀದಿಗ್ವದನಃ ಪುಮಾನ್ ।
ದೇವಾಸುರನಿಭಂ ಚಾಪಿ ಪರಚಕ್ರಂ ನಿವಾರಯೇತ್　　|| ೧೨೬ ||

ವಿವಾದೇ ಕಲಹೇ ಘೋರೇ ಪಂಚಧಾ ಯಃ ಪಠೇದಿದಂ ।
ವಿಜಯೋ ಜಾಯತೇ ತಸ್ಯ ನ ಕದಾಚಿತ್ಪರಾಜಯಃ　　|| ೧೨೭ ||

---

ಸಂಪತ್ತುಗಳನ್ನು ಕೊಡುವುದೂ ಆಗಿರುವ ಈ ಕಾರ್ತವೀರ್ಯಕವಚವನ್ನು ಶ್ರವಣ ಅಥವಾ ಪಠನೆಮಾಡುವವನು ಸಕಲಾಭೀಷ್ಟಗಳನ್ನೂ ಪಡೆಯುವನು.

೧೨೪-೧೨೫. ತನ್ನ ಪಶು ಮುಂತಾದ ಧನವು ಕಳ್ಳರಿಂದ ಅಪಹರಿಸಲ್ಪಟ್ಟಿದನ್ನು ಕಂಡಾಗ ರಾತ್ರಿಕಾಲದಲ್ಲಿ ಪಶ್ಚಿಮಾಭಿಮುಖವಾಗಿ ಕುಳಿತು ಈ ಕವಚವನ್ನು ಏಳಾವರ್ತಿ ಜಪಿಸಬೇಕು. ಹಾಗೆ ಏಳು ರಾತ್ರಿ ಜಪಿಸುವುದರೊಳಗಾಗಿ ನಷ್ಟದ್ರವ್ಯವು ಸಿಗುತ್ತದೆ. ಸಂದೇಹವಿಲ್ಲ.

೧೨೬. ಪೂರ್ವ ದಿಕ್ಕಿಗೆ ಮುಖಮಾಡಿ ಕುಳಿತು ಇಪ್ಪತ್ತೇಳಾವರ್ತಿ ಇದನ್ನು ಜಪಿಸುವ ಮನುಷ್ಯನು, ದೇವತೆ ಮತ್ತು ಅಸುರರಿಗೆ ಸಮಾನರಾಗಿದ್ದರೂ ಶತ್ರುಗಳ ಸಮೂಹವನ್ನು ತಡೆಯುವನು.

೧೨೭. ವಿವಾದ, ಭಯಂಕರ ಕಲಹ ಸಂದರ್ಭಗಳಲ್ಲಿ ಐದಾವರ್ತಿ ಇದನ್ನು ಪಠನೆಮಾಡುವವನು ಜಯಶೀಲನಾಗುವನು. ಅಂತಹವನಿಗೆ ಯಾವಾಗಲೂ ಸೋಲಾಗುವುದಿಲ್ಲ.

ಸರ್ವರೋಗಪ್ರಪೀಡಾಸು ತ್ರೇಧಾ ವಾ ಪಂಚಧಾ ಪಠೇತ್ ।
ಸ ರೋಗಮೃತ್ಯು ವೇತಾಲಭೂತಪ್ರೇತೈರ್ನಬಾಧ್ಯತೇ ॥ ೧೨೮ ॥

ಸಮ್ಯಕ್ ದ್ವಾದಶಧಾ ರಾತ್ರೌ ಪ್ರಜಪೇದ್ಬಂಧಮುಕ್ತಯೇ ।
ತ್ರಿದಿನಾನ್ನಿಗಡಾದ್ಬದ್ಧೋ ಮುಚ್ಯತೇ ನಾತ್ರ ಸಂಶಯಃ ॥ ೧೨೯ ॥

ಅನೇನೈವ ವಿಧಾನೇನ ಸರ್ವಸಾಧನಕರ್ಮಣಿ ।
ಅಸಾಧ್ಯಮಪಿ ಸಪ್ತಾಹಾತ್ಸಾಧಯೇನ್ಮಂತ್ರವಿತ್ತಮಃ ॥ ೧೩೦ ॥

ಯಾತ್ರಾಕಾಲೇ ಪಠಿತ್ವೇದಂ ಮಾರ್ಗೇ ಗಚ್ಛತಿ ಯಃ ಪುಮಾನ್ ।
ನ ದುಷ್ಟಚೋರವ್ಯಾಘ್ರಾದ್ಯೈರ್ಭಯಂ ಸ್ಯಾತ್ಪರಿಪಂಥಿಭಿಃ ॥ ೧೩೧ ॥

---

೧೨೮. ಸಕಲ ರೋಗ ಮತ್ತು ಭೂತಪ್ರೇತಗಳ ಪೀಡೆ ಇವುಗಳು ಸಂಭವಿಸಿದಾಗ ಇದನ್ನು ಮೂರು ಅಥವಾ ಐದಾವರ್ತಿ ಪಠನೆಮಾಡುವವನು ರೋಗ, ಮೃತ್ಯು ಬೇತಾಳ, ಭೂತ, ಪ್ರೇತಗಳಿಂದ ಹಿಂಸಿಸಲ್ಪಡುವುದಿಲ್ಲ.

೧೨೯. ಕಾರಾಗೃಹದಿಂದ ಬಿಡುಗಡೆ ಹೊಂದಲು ರಾತ್ರಿಯಕಾಲದಲ್ಲಿ ಹನ್ನೆರಡಾವರ್ತಿ ಇದನ್ನು ಭಕ್ತಿಯಿಂದ ಜಪಿಸಿದರೆ ಮೂರು ದಿನಗಳಲ್ಲಿ ಜೈಲಿನಿಂದ ಬಿಡುಗಡೆಯನ್ನು ಹೊಂದುವನು, ಸಂದೇಹವಿಲ್ಲ.

೧೩೦. ಮಂತ್ರಜ್ಞವರ್ಯನು ಈ ವಿಧಾನದಿಂದಲೇ ಏಳು ದಿನಗಳು ಅನುಷ್ಠಾನಮಾಡಿದರೆ ಸಮಸ್ತಸಾಧನೆಗಳಿಂದಲೂ ಅಸಾಧ್ಯವಾದುದನ್ನು ಸಹ ಸಾಧಿಸಬಹುದು.

೧೩೧. ಯಾತ್ರೆಗೆ ಹೋಗುವಸಮಯದಲ್ಲಿ ಇದನ್ನು ಪಠನೆ ಮಾಡಿ ಮಾರ್ಗದಲ್ಲಿ ಹೋದವನು ದುಷ್ಟರಾದ ಕಳ್ಳರು, ಹುಲಿ ಮುಂತಾದುವುಗಳಿಂದಲೂ ಶತ್ರುಗಳಿಂದಲೂ ಸಹ ಭಯವು ಸಂಭವಿಸುವುದಿಲ್ಲ.

ಜಪನ್ನಾಸೇಚನಂ ಕುರ್ವಂಸ್ಸ್ವಲೇನಾಂಜಲಿನಾ ತನೌ ।
ನ ಚಾಸೌ ವಿಷಕೃತ್ಯಾದಿರೋಗಸ್ಫೋಟೈಃ ಪ್ರಬಾಧ್ಯತೇ ॥ ೧೩೨ ॥

ಕಾರ್ತವೀರ್ಯಃ ಖಲದ್ವೇಷೀ ಕೃತವೀರ್ಯಸುತೋ ಬಲೀ ।
ಸಹಸ್ರಬಾಹುಃ ಶತ್ರುಘ್ನೋ ರಕ್ತವಾಸಾ ಧನುರ್ಧರಃ ॥ ೧೩೩ ॥

ರಕ್ತಗಂಧೋ ರಕ್ತಮಾಲ್ಯೋ ರಾಜಾ ಸ್ಮರ್ತುರಭೀಷ್ಟದಃ ।
ದ್ವಾದಶೈತಾನಿ ನಾಮಾನಿ ಕಾರ್ತವೀರ್ಯಸ್ಯ ಯಃ ಪಠೇತ್ ॥ ೧೩೪ ॥

ಸಂಪದಸ್ತಸ್ಯ ಜಾಯಂತೇ ಜನಾಸ್ತಸ್ಯ ವಶೇ ಸದಾ ।
ಯಃ ಸೇವತೇ ಸದಾ ವಿಪ್ರ ಶ್ರೀಮಚ್ಚಕ್ರಾವತಾರಕಂ ॥ ೧೩೫ ॥

ತಸ್ಯ ರಕ್ಷಾಂ ಸದಾ ಕುರ್ಯಾಚ್ಚಕ್ರಂ ವಿಷ್ಣೋರ್ಮಹಾತ್ಮನಃ ।
ಮಯ್ಯೈತತ್ಕವಚಂ ವಿಪ್ರ ದತ್ತಾತ್ರೇಯಾನ್ಮುನೀಶ್ವರಾತ್ ॥ ೧೩೬ ॥

---

೧೩೨. ಇದನ್ನು ಜಪಿಸುತ್ತಾ ಬೊಗಸೆಯಿಂದ ಶರೀರದ ಮೇಲೆ ನೀರನ್ನು ಹಾಕಿಕೊಳ್ಳುವವನು ವಿಷಪ್ರಯೋಗ, ರೋಗ, ಕುರು ಇವುಗಳಿಂದ ಹಿಂಸಿಸಲ್ಪಡುವುದಿಲ್ಲ.

೧೩೩-೧೩೫. ಕಾರ್ತವೀರ್ಯ, ಖಲದ್ವೇಷೀ, ಕೃತವೀರ್ಯಸುತ, ಬಲೀ, ಸಹಸ್ರಬಾಹು, ಶತ್ರುಘ್ನ, ಕೆಂಪು ಬಟ್ಟೆಯನ್ನು ಧರಿಸಿರುವವನು, ಧನುರ್ಧಾರೀ, ಕೆಂಪುಗಂಧವನ್ನು ಹಚ್ಚಿಕೊಂಡಿರುವವನು, ಕೆಂಪುಬಣ್ಣದ ಪುಷ್ಪಮಾಲಿಕೆಯನ್ನು ಧರಿಸಿರುವವನು, ತನ್ನನ್ನು ಸ್ಮರಿಸುವವರಿಗೆ ಅಭೀಷ್ಟವನ್ನು ಕೊಡುವವನು, ರಾಜನು ಎಂಬುದಾಗಿ ಕಾರ್ತವೀರ್ಯನ ಹನ್ನೆರಡು ನಾಮಗಳನ್ನು ಪಾರಾಯಣ ಮಾಡುವವನಿಗೆ ಸಂಪತ್ತುಗಳೆಲ್ಲವೂ ಲಭಿಸುತ್ತವೆ. ಜನಗಳೂ ಸಹ ಅಂತಹವನ ಅಧೀನದಲ್ಲಿರುವರು.

೧೩೫-೧೩೬. ಬ್ರಾಹ್ಮಣನಾದ ನಾರದನೇ ! ಶ್ರೀಸುದರ್ಶನ ಚಕ್ರಾವತಾರನಾದ, ಕಾರ್ತವೀರ್ಯನನ್ನು ಸೇವಿಸುವವನಿಗೆ ಮಹಾತ್ಮನಾದ ವಿಷ್ಣುವಿನ ಚಕ್ರವು ಯಾವಾಗಲೂ ರಕ್ಷಣೆಯನ್ನು ಮಾಡುತ್ತದೆ.

ಶ್ರುತಂ ತುಭ್ಯಂ ನಿಗದಿತಂ ಧಾರಯಸ್ವಾಖಿಲೇಷ್ಟದಂ || ೧೩೭ ||

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ಕಾರ್ತವೀರ್ಯಕವಚ ಕಥನಂ ನಾಮ ಸಪ್ತಸಪ್ತತಿತಮೋಽಧ್ಯಾಯಃ

---

೧೩೬-೧೩೭. ಬ್ರಾಹ್ಮಣನೇ! ನಾನು ದತ್ತಾತ್ರೇಯ ಮುನೀಶ್ವರನಿಂದ ಶ್ರವಣಮಾಡಿದ ಈ ಕವಚವನ್ನು ನಿನಗೆ ಹೇಳಿರುವೆನು. ಇದು ಅಖಿಲೇಷ್ಟ ಪ್ರದವು. ಇದನ್ನು ಸರಿಯಾಗಿ ಧಾರಣೆ ಮಾಡಿಕೊಂಡು ಕೃತಾರ್ಥನಾಗು.

ಇಂತು ಶ್ರೀನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ಮೂರನೆಯ ಪಾದದಲ್ಲಿ ಕಾರ್ತವೀರ್ಯಕವಚ ಕಥನವೆಂಬ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

## ಕಥಾಸಂಗ್ರಹ

ನಾರದನು ಕೇಳಿದ ಕಾರ್ತವೀರ್ಯಾರ್ಜುನಕವಚವನ್ನು ನಿರೂಪಿಸಿ, ಅವನ ಅಷ್ಟೋತ್ತರಶತನಾಮಾವಳಿಗಳನ್ನು ಹೇಳಿ, ಅದರ ಮತ್ತು ಈ ಕವಚದ ಶ್ರವಣ ಪಠನಾದಿಗಳ ಫಲವನ್ನೂ ಸಹ ವಿಸ್ತಾರವಾಗಿ ನಿರೂಪಿಸಿದೆ.

---

# ಅಷ್ಟಸಪ್ತತಿತಮೋಽಧ್ಯಾಯಃ



ಕಾರ್ತವೀರ್ಯಸ್ಯ ಕವಚಂ ಕಥಿತಂ ತೇ ಮುನೀಶ್ವರ ।
ಮೋಹವಿಧ್ವಂಸನಂ ಜೈತ್ರಂ ಮಾರುತೇಃ ಕವಚಂ ಶೃಣು ॥ ೧ ॥

ಯಸ್ಯ ಸಂಧಾರಣಾತ್ಸದ್ಯಃ ಸರ್ವೇ ನಶ್ಯಂತ್ಯುಪದ್ರವಾಃ ।
ಭೂತಪ್ರೇತಾರಿಜಂ ದುಃಖಂ ನಾಶಮೇತಿ ನ ಸಂಶಯಃ ॥ ೨ ॥

ಏಕದ್ವಾಽಹಂ ಗತೋ ದ್ರಷ್ಟುಂ ರಾಮಂ ರಮಯತಾಂ ವರಂ ।
ಆನಂದವನಿಕಾಸಂಸ್ಥಂ ಧ್ಯಾಯಂತಂ ಸ್ವಾತ್ಮನಃ ಪದಂ ॥ ೩ ॥

ತತ್ರ ರಾಮಂ ರಮಾನಾಥಂ ಪೂಜಿತಂ ತ್ರಿದಶೇಶ್ವರೈಃ ।
ನಮಸ್ಕೃತ್ಯ ತದಾದಿಷ್ಟಮಾಸನಂ ಸ್ಥಿತವಾನ್ಪುರಃ ॥ ೪ ॥

## ಎಪ್ಪತ್ತೆಂಟನೆಯ ಅಧ್ಯಾಯವು

೧. ಸನತ್ಕುಮಾರನು ಹೇಳಿದನು :—ಮುನಿಶ್ರೇಷ್ಠನಾದ ನಾರದನೇ! ನಿನಗಾಗಿ ಕಾರ್ತವೀರ್ಯಕವಚವು ಹೇಳಲ್ಪಟ್ಟಿತು. ಅಜ್ಞಾನನಾಶಕವು, ಜಯಪ್ರದವೂ ಆದ ಹನುಮಂತನ ಕವಚವನ್ನು ಹೇಳುವೆನು ; ಕೇಳು.

೨. ಈ ಹನುಮತ್ಕವಚವನ್ನು ಧರಿಸಿದ ಕೂಡಲೇ ಸಕಲೋಪದ್ರವಗಳೂ ನಾಶವಾಗುವುವು. ಭೂತ, ಪ್ರೇತ, ಶತ್ರುಗಳಿಂದುಂಟಾದ ದುಃಖವೂ ಸಹ ನಾಶವಾಗುವುದು. ಸಂದೇಹವಿಲ್ಲ.

೩. ಆನಂದವನದಲ್ಲಿ ಆತ್ಮಸ್ವರೂಪವನ್ನು ಚಿಂತಿಸುತ್ತಿದ್ದ, ಸಂತೋಷಪಡಿಸುವವರಲ್ಲಿ ಉತ್ತಮನಾದ ಶ್ರೀರಾಮನನ್ನು ನೋಡಬೇಕೆಂದು ನಾನು ಒಂದು ದಿನ ಅಲ್ಲಿಗೆ ಹೋದೆನು.

೪. ದೇವೋತ್ತಮರಿಂದ ಪೂಜಿಸಲ್ಪಡುತ್ತಿದ್ದ, ಲಕ್ಷ್ಮೀಪತಿಯಾದ ಶ್ರೀರಾಮನನ್ನು ನಮಸ್ಕರಿಸಿ, ಅವನಿಂದ ಆಜ್ಞಾಪಿಸಲ್ಪಟ್ಟ ಆಸನದಲ್ಲಿ ಎದುರಿಗೆ ಕುಳಿತೆನು.

ತತ್ರ ಸರ್ವಂ ಮಯಾ ವೃತ್ತಂ ರಾವಣಸ್ಯ ವಧಾಂತಿಕಂ ।
ಪೃಷ್ಟಂ ಪ್ರೋವಾಚ ರಾಜೇಂದ್ರಃ ಶ್ರೀರಾಮಃ ಸ್ವಯಮಾದರಾತ್ ॥ ೫ ॥

ತತಃ ಕಥಾಂತೇ ಭಗವಾನ್ಮಾರುತೇಃ ಕವಚಂ ದದೌ ।
ಮಹ್ಯಂ ತತ್ತೇ ಪ್ರವಕ್ಷ್ಯಾಮಿ ನ ಪ್ರಕಾಶ್ಯಂ ಹಿ ಕುತ್ರಚಿತ್ ॥ ೬ ॥

ಭವಿಷ್ಯದೇತನ್ನಿರ್ದಿಷ್ಟಂ ಬಾಲಭಾವೇನ ನಾರದ ।
ಶ್ರೀರಾಮೇಣಾಂಜನಾಸೂನೋರ್ಭುಕ್ತಿಮುಕ್ತಿಪ್ರದಾಯಕಂ ॥ ೭ ॥

ಹನುಮಾನ್ ಪೂರ್ವತಃ ಪಾತು ದಕ್ಷಿಣೇ ಪವನಾತ್ಮಜಃ ।
ಪಾತು ಪ್ರತೀಚ್ಯಾಮಕ್ಷಘ್ನಃ ಸೌಮ್ಯೇ ಸಾಗರತಾರಕಃ ॥ ೮ ॥

ಊರ್ಧ್ವಂ ಪಾತು ಕಪಿಶ್ರೇಷ್ಠಃ ಕೇಸರಿಪ್ರಿಯನಂದಃ ।
ಅಧಸ್ತಾದ್ವಿಷ್ಣುಭಕ್ತಸ್ತು ಪಾತು ಮಧ್ಯೇ ಚ ಪಾವನಿಃ ॥ ೯ ॥

---

೫. ಆಗ ನಾನು ಕೇಳಿದ ರಾವಣನಸಂಹಾರಾಂತವಾದ ವೃತ್ತಾಂತವನ್ನು ರಾಜಶ್ರೇಷ್ಠನಾದ ಶ್ರೀರಾಮನೇ ಸಾಕ್ಷಾತ್ತಾಗಿ ನನಗೆ ಹೇಳಿದನು.

೬-೭. ಅನಂತರ ಕಥೆಯನ್ನು ಹೇಳಿದಮೇಲೆ ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀರಾಮನು ನನಗೆ ಮಾರುತಿಯ ಕವಚವನ್ನು ಉಪದೇಶಿಸಿದನು. ಅದನ್ನು ನಾನು ನಿನಗೆ ಹೇಳುವೆನು :—ಮುಂದೆ ಹೇಳುವ ಈ ಕವಚವನ್ನು ಬಾಲಭಾವದಿಂದ ಅಯೋಗ್ಯರಿಗೆ ಉಪದೇಶಿಸಬಾರದು ನಾರದನೇ! ಅದು ಐಹಿಕದಲ್ಲಿ ಭೋಗ, ಪರಲೋಕದಲ್ಲಿ ಮುಕ್ತಿಗಳನ್ನು ಕೊಡುವುದು ಎಂಬುದಾಗಿ ಶ್ರೀರಾಮನಿಂದ ನಿರ್ದೇಶಿಸಲ್ಪಟ್ಟಿದೆ.

೮. ಹನುಮಂತನು ಪೂರ್ವದಲ್ಲಿಯೂ, ವಾಯುಕುಮಾರನು ದಕ್ಷಿಣದಲ್ಲಿಯೂ ನನ್ನನ್ನು ರಕ್ಷಿಸಲಿ. ಅಕ್ಷಯಕುಮಾರಸಂಹಾರಕನು ಪಶ್ಚಿಮದಲ್ಲಿಯೂ, ಸಮುದ್ರವನ್ನು ದಾಟಿದವನು ಉತ್ತರದಲ್ಲಿಯೂ, ನನ್ನನ್ನು ರಕ್ಷಿಸಲಿ.

೯. ಕೇಸರಿಯ ಪುತ್ರನಾದ ಕಪಿಶ್ರೇಷ್ಠನು ಉರ್ಧ್ವದಿಕ್ಕಿನಲ್ಲಿಯೂ, ವಿಷ್ಣುಭಕ್ತನು ಅಧೋದಿಕ್ಕಿನಲ್ಲಿಯೂ, ವಾಯುಪುತ್ರನು ಮಧ್ಯದಲ್ಲಿಯೂ ನನ್ನನ್ನು ರಕ್ಷಿಸಲಿ.

ಲಂಕಾವಿದಾಹಕಃ ಪಾತು ಸರ್ವಾಪದ್ಭ್ಯೋ ನಿರಂತರಂ ।
ಸುಗ್ರೀವಸಚಿವಃ ಪಾತು ಮಸ್ತಕಂ ವಾಯುನಂದನಃ ॥ ೧೦ ॥

ಭಾಲಂ ಪಾತು ಮಹಾವೀರೋ ಭ್ರುವೋರ್ಮಧ್ಯೇ ನಿರಂತರಂ ।
ನೇತ್ರೇ ಛಾಯಾಪಹಾರೀ ಚ ಪಾತು ನಃ ಪ್ಲವಗೇಶ್ವರಃ ॥ ೧೧ ॥

ಕಪೋಲೌ ಕರ್ಣಮೂಲೇ ಚ ಪಾತು ಶ್ರೀರಾಮಕಿಂಕರಃ ।
ನಾಸಾಗ್ರಮಂಜನೀಸೂನುಃ ಪಾತು ವಕ್ತ್ರಂ ಹರೀಶ್ವರಃ ॥ ೧೨ ॥

ಪಾತು ಕಂಠೇ ತು ದೈತ್ಯಾರಿಃ ಸ್ಕಂಧೌ ಪಾತು ಸುರಾರಿಜಿತ್ ।
ಭುಜೌ ಪಾತು ಮಹಾತೇಜಾಃ ಕರೌ ಚ ಚರಣಾಯುಧಃ ॥ ೧೩ ॥

ನಖಾನ್ನಖಾಯುಧಃ ಪಾತು ಕುಕ್ಷೌ ಪಾತು ಕಪೀಶ್ವರಃ ।
ವಕ್ಷೋ ಮುದ್ರಾಪಹಾರೀ ಚ ಪಾತು ಪಾರ್ಶ್ವೇ ಭುಜಾಯುಧಃ ॥ ೧೪ ॥

---

೧೦. ಲಂಕಾದಹನಮಾಡಿದವನು ಯಾವಾಗಲೂ ಸಕಲ ಆಪತ್ತುಗಳ ದೆಸೆಯಿಂದಲೂ ನನ್ನನ್ನು ರಕ್ಷಿಸಲಿ. ಸುಗ್ರೀವಸಚಿವನು ಶಿರಸ್ಸನ್ನು ರಕ್ಷಿಸಲಿ.

೧೧. ವಾಯುಪುತ್ರನು ಹಣೆಯನ್ನೂ, ಮಹಾವೀರನು ಹುಬ್ಬುಗಳ ಮಧ್ಯದಲ್ಲಿಯೂ ಯಾವಾಗಲೂ ರಕ್ಷಿಸಲಿ. ಛಾಯಾಪಹಾರಿಯಾದ ಕಪೀಶ್ವರನು ನೇತ್ರಗಳನ್ನು ರಕ್ಷಿಸಲಿ.

೧೨. ಶ್ರೀರಾಮಸೇವಕನು ಕೆನ್ನೆ ಮತ್ತು ಕಿವಿಯ ಮೂಲಸ್ಥಾನಗಳನ್ನು ಸಲಹಲಿ. ಅಂಜನಾದೇವಿಯ ಪುತ್ರನು ಮೂಗಿನ ಕೊನೆಯಭಾಗವನ್ನೂ, ಕಪೀಶ್ವರನು ಬಾಯಿಯನ್ನೂ ರಕ್ಷಿಸಲಿ.

೧೩. ದೈತ್ಯ ವೈರಿಯು ಕಂಠವನ್ನೂ, ರಾಕ್ಷಸರನ್ನು ಜಯಿಸಿದವನು ಸ್ಕಂಧಗಳನ್ನೂ ರಕ್ಷಿಸಲಿ. ಮಹಾತೇಜಸ್ವಿಯು ಭುಜಗಳನ್ನೂ, ಪಾದವೇ ಆಯುಧವಾಗಿ ಉಳ್ಳವನು ಕೈಗಳನ್ನೂ ಕಾಪಾಡಲಿ.

೧೪. ನಖಾಯುಧನು ಉಗುರುಗಳನ್ನೂ ಕಪೀಶ್ವರನು ಹೊಟ್ಟೆಯನ್ನೂ ರಕ್ಷಿಸಲಿ. ಮುದ್ರೆಯನ್ನು ತಂದವನು ವಕ್ಷಸ್ಥಲವನ್ನೂ ಭುಜಾಯುಧನು ಪಾರ್ಶ್ವಗಳನ್ನೂ ಸಲಹಲಿ.

ಲಂಕಾನಿರ್ಭಂಜನಃ ಪಾತು ಪೃಷ್ಠದೇಶೇ ನಿರಂತರಂ ।
ನಾಭಿಂ ಶ್ರೀರಾಮಭಕ್ತಸ್ತು ಕಟಿಂ ಪಾತ್ವನಿಲಾತ್ಮಜಃ ॥ ೧೫ ॥

ಗುಹ್ಯಂ ಪಾತು ಮಹಾಪ್ರಾಜ್ಞಃ ಸಕ್ಥಿನೀ ಅತಿಥಿಪ್ರಿಯಃ ।
ಊರೂ ಚ ಜಾನುನೀ ಪಾತು ಲಂಕಾಪ್ರಾಸಾದಭಂಜನಃ ॥ ೧೬ ॥

ಜಂಘೇ ಪಾತು ಕಪಿಶ್ರೇಷ್ಠೋ ಗುಲ್ಫೌ ಪಾತು ಮಹಾಬಲಃ ।
ಅಚಲೋದ್ಧಾರಕಃ ಪಾತು ಪಾದೌ ಭಾಸ್ಕರಸನ್ನಿಭಃ ॥ ೧೭ ॥

ಅಂಗಾನಿ ಪಾತು ಸತ್ವಾಢ್ಯಃ ಪಾತು ಪಾದಾಂಗುಲೀಃ ಸದಾ ।
ಮುಖಾಂಗಾನಿ ಮಹಾಶೂರಃ ಪಾತು ರೋಮಾಣಿ ಚಾತ್ಮವಾನ್ ॥ ೧೮ ॥

ದಿವಾರಾತ್ರೌ ತ್ರಿಲೋಕೇಷು ಸದಾಗತಿಸುತೋಽವತು ।
ಸ್ಥಿತಂ ವ್ರಜಂತಮಾಸೀನಂ ಪಿಬಂತಂ ಜಕ್ಷತಂ ಕಪಿಂ ॥ ೧೯ ॥

---

೧೫. ಲಂಕೆಯನ್ನು ಹಾಳುಮಾಡಿದವನು ಯಾವಾಗಲೂ ಪೃಷ್ಠಪ್ರದೇಶದಲ್ಲಿ ಕಾಪಾಡಲಿ. ಶ್ರೀರಾಮಭಕ್ತನು ನಾಭಿಯನ್ನೂ, ಪವನಾತ್ಮಜನು ನಡುವನ್ನೂ ರಕ್ಷಿಸಲಿ.

೧೬. ಮಹಾಜ್ಞಾನಿಯು ಗುಹ್ಯಾವಯವವನ್ನೂ, ಅತಿಥಿಪ್ರಿಯನು ತೊಡೆಗಳನ್ನೂ, ಲಂಕೆಯ ಅರಮನೆಯನ್ನು ಮುರಿದವನು ತೊಡೆ, ಮೊಣಕಾಲುಗಳನ್ನೂ ರಕ್ಷಿಸಲಿ.

೧೭. ಕಪಿಶ್ರೇಷ್ಠನು ಕಣಕಾಲುಗಳನ್ನು ರಕ್ಷಿಸಲಿ. ಮಹಾಬಲನು ಗುಲ್ಫಗಳನ್ನು ಕಾಪಾಡಲಿ. ಸೂರ್ಯಸದೃಶನಾದ ಸಂಜೀವನಪರ್ವತೋದ್ಧಾರಕನು ಕಾಲುಗಳನ್ನು ರಕ್ಷಿಸಲಿ.

೧೮. ಸತ್ವಪೂರ್ಣನು ಅಂಗಗಳನ್ನು ಮತ್ತು ಕಾಲುಬೆರಳುಗಳನ್ನು ರಕ್ಷಿಸಲಿ. ಮಹಾಶೂರನು ಮುಖದಲ್ಲಿರುವ ಅಂಗಗಳನ್ನೂ, ಆತ್ಮವಂತನು ರೋಮಗಳನ್ನೂ ರಕ್ಷಿಸಲಿ.

೧೯. ವಾಯುಸುತನು ಮೂರುಲೋಕಗಳಲ್ಲಿಯೂ ಅಹೋರಾತ್ರಿ ರಕ್ಷಿಸಲಿ. ಕಪಿಯು ನಿಂತಿರುವ, ಹೋಗುತ್ತಿರುವ, ಕುಳಿತಿರುವ, ಕುಡಿಯುತ್ತಿರುವ ಮತ್ತು ತಿನ್ನುತ್ತಿರುವ ಸಮಯಗಳಲ್ಲೆಲ್ಲಾ ನನ್ನನ್ನು ಕಾಪಾಡಲಿ.

**ಲೋಕೋತ್ತರಗುಣಃ ಶ್ರೀಮಾನ್ ಪಾತು ತ್ರ್ಯಂಬಕಸಂಭವಃ |**
**ಪ್ರಮತ್ತಮಪ್ರಮತ್ತಂ ವಾ ಶಯಾನಂ ಗಹನೇಂಬುನಿ || ೨೦ ||**

**ಸ್ಥಲೇಂತರಿಕ್ಷೇ ಹ್ಯಗ್ನೌ ವಾ ಪರ್ವತೇ ಸಾಗರೇ ದ್ರುಮೇ |**
**ಸಂಗ್ರಾಮೇ ಸಂಕಟೇ ಘೋರೇ ವಿರಾಡ್ರೂಪಧರೋಽವತು || ೨೧ ||**

**ಡಾಕಿನೀಶಾಕಿನೀಮಾರೀಕಾಲರಾತ್ರಿಮರೀಚಿಕಾಃ |**
**ಶಯಾನಂ ಮಾಂ ವಿಭುಃ ಪಾತು ಪಿಶಾಚೋರಗರಾಕ್ಷಸೀಃ || ೨೨ ||**

**ದಿವ್ಯದೇಹಧರೋ ಧೀಮಾನ್ಸರ್ವಸತ್ವಭಯಂಕರಃ |**
**ಸಾಧಕೇಂದ್ರಾವನಃ ಶಶ್ವತ್ಪಾತು ಸರ್ವತ ಏವ ಮಾಂ || ೨೩ ||**

---

೨೦. ಲೋಕೋತ್ತರಗುಣವುಳ್ಳ, ಶ್ರೀಮಾನ್ ತ್ರ್ಯಂಬಕಸಂಭವನು ಮದಯುಕ್ತನಾಗಿರುವಾಗ ಮತ್ತು ಮದವಿಲ್ಲದಿರುವಾಗಲೂ, ಆಳವಾದ ನೀರಿನಲ್ಲಿ ಮುಳುಗಿರುವಾಗಲೂ ನನ್ನನ್ನು ರಕ್ಷಿಸಲಿ.

೨೧. ವಿರಾಡ್ರೂಪಧಾರಿಯಾದ ಹನುಮಂತನು ಭೂಮಿ, ಅಂತರಿಕ್ಷ, ಅಗ್ನಿ, ಬೆಟ್ಟ, ಸಮುದ್ರ, ವೃಕ್ಷ ಇವುಗಳ ದೆಸೆಯಿಂದಲೂ, ಯುದ್ಧ, ಭಯಂಕರ ವ್ಯಸನ ಈ ಸಂದರ್ಭಗಳಲ್ಲಿಯೂ ನನ್ನನ್ನು ರಕ್ಷಿಸಲಿ.

೨೨. ಸಮರ್ಥನಾದ ಹನುಮಂತನು ಮಲಗಿರುವ ನನ್ನನ್ನು ಡಾಕಿನೀ, ಶಾಕಿನೀ, ಮಾರೀ, ಕಾಲರಾತ್ರಿ, ಮರೀಚಿಕೆ, ಪಿಶಾಚ, ಸರ್ಪ ಮತ್ತು ರಾಕ್ಷಸ ಶಕ್ತಿ ಇವುಗಳ ದೆಸೆಯಿಂದ ರಕ್ಷಿಸಲಿ.

೨೩. ದಿವ್ಯದೇಹವನ್ನು ಧರಿಸಿರುವವನು, ಬುದ್ಧಿವಂತನು, ಸಕಲ ಪ್ರಾಣಿಭಯಂಕರನು ಮತ್ತು ಸಾಧಕವರ್ಗ್ಯರಕ್ಷಕನೂ ಆದ ಹನುಮಂತನು ನನ್ನನ್ನು ಎಲ್ಲಾಕಡೆಗಳಿಂದಲೂ ಕಾಪಾಡಲಿ.

ಯದ್ರೂಪಂ ಭೀಷಣಂ ದೃಷ್ಟ್ವಾ ಪಲಾಯಂತೇ ಭಯಾನಕಾಃ ।
ಸ ಸರ್ವರೂಪಃ ಸರ್ವಜ್ಞಃ ಸೃಷ್ಟಿಸ್ಥಿತಿಕರೋಽವತು ॥ ೨೪ ॥

ಸ್ವಯಂ ಬ್ರಹ್ಮಾ ಸ್ವಯಂ ವಿಷ್ಣುಃ ಸಾಕ್ಷಾದ್ದೇವೋ ಮಹೇಶ್ವರಃ ।
ಸೂರ್ಯಮಂಡಲಗಃ ಶ್ರೀದಃ ಪಾತು ಕಾಲತ್ರಯೇಽಪಿ ಮಾಂ ॥ ೨೫ ॥

ಯಸ್ಯ ಶಬ್ದಮುಪಾಕರ್ಣ್ಯ ದೈತ್ಯದಾನವರಾಕ್ಷಸಾಃ ।
ದೇವಾ ಮನುಷ್ಯಾಸ್ತಿರ್ಯಂಚಃ ಸ್ಥಾವರಾ ಜಂಗಮಾಸ್ತಥಾ ॥ ೨೬ ॥

ಸಭಯಾ ಭಯನಿರ್ಮುಕ್ತಾ ಭವಂತಿ ಸ್ವಕೃತಾನುಗಾಃ ।
ಯಸ್ಯಾನೇಕಕಥಾಃ ಪುಣ್ಯಾಃ ಶ್ರೂಯಂತೇ ಪ್ರತಿಕಲ್ಪಕೇ ॥ ೨೭ ॥

ಸೋಽವತಾತ್ಸಾಧಕಶ್ರೇಷ್ಠಂ ಸದಾ ರಾಮಪರಾಯಣಃ ।
ವೈಧಾತ್ರಧಾತೃಪ್ರಭೃತಿ ಯತ್ಕಿಂಚಿದ್ದೃಶ್ಯತೇ ತ್ವಲಂ ॥ ೨೮ ॥

---

೨೪. ಯಾರ ಭಯಂಕರ ರೂಪವನ್ನು ನೋಡಿ ಭಯಾನಕರೂ ಓಡಿ ಹೋಗುವರೋ, ಅಂತಹ, ಸರ್ವಜ್ಞನು, ಸರ್ವರೂಪನೂ, ಸೃಷ್ಟಿಸ್ಥಿತಿಕಾರಕನೂ ಆಗಿರುವ ದೇವನು ನನ್ನನ್ನು ರಕ್ಷಿಸಲಿ.

೨೫. ಸೂರ್ಯಮಂಡಲಸ್ಥಿತನಾಗಿ ತೇಜಃಪ್ರದನಾದ ದೇವನು ಬ್ರಹ್ಮ, ವಿಷ್ಣು, ಮಹೇಶ್ವರ ರೂಪಗಳಿಂದ ನನ್ನನ್ನು ಭೂತ, ಭವಿಷ್ಯದ್ವರ್ತಮಾನಕಾಲ ಗಳಲ್ಲಿ ರಕ್ಷಿಸಲಿ.

೨೬–೨೮. ಯಾರ ಶಬ್ದವನ್ನು ಕೇಳುವ ಮಾತ್ರದಿಂದಲೇ ದೈತ್ಯ, ದಾನವ, ರಾಕ್ಷಸ, ದೇವತೆ, ಮನುಷ್ಯ, ತಿರ್ಯಗ್ಜಂತು ಮತ್ತು ಸ್ಥಿರಚರಪ್ರಾಣಿಗಳೂ ಸಹ ಭಯಪಡುವರೋ, ಯಾರನ್ನು ಅನುಸರಿಸಿದವರು ಭಯರಹಿತರಾಗುವರೋ, ಯಾರ ಅನೇಕ ಪುಣ್ಯಕಥೆಗಳು ಪ್ರತಿಕಲ್ಪದಲ್ಲಿಯೂ ಶ್ರವಣಮಾಡಲ್ಪಡು ತ್ತವೆಯೋ ಅಂತಹ, ಸರ್ವದಾ ರಾಮಧ್ಯಾನಾಸಕ್ತನಾದ ಹನುಮಂತನು ಸಾಧಕವರ್ಯನನ್ನು ಕಾಪಾಡಲಿ.

೨೮-೨೯. ಪರಿದೃಶ್ಯಮಾನವಾದ ಪ್ರಜೇಶ್ವರ ಮತ್ತು ಅವನಿಂದ ಸೃಷ್ಟ ವಾದುದೆಲ್ಲವೂ ಕಪಿರೂಪಿಯೂ ನಿರ್ದೋಷಿಯೂ ಆದ ಆಂಜನೇಯನಿಂದ ವ್ಯಾಪ್ತ

**ವಿದ್ಧಿ ವ್ಯಾಪ್ತಂ ಯಥಾ ಕೀಶರೂಪೇಣಾನಂಜನೇನ ತತ್ ।**
**ಯೋ ವಿಭುಃ ಸೋಽಹಮೇಷೋಽಹಂ ಸ್ವೀಯಃ ಸ್ವಯಮಣುರ್ಬೃಹತ್ ॥೨೯॥**

**ಋಗ್ಯಜುಸ್ಸಾಮರೂಪಶ್ಚ ಪ್ರಣವಸ್ತ್ರಿವೃದಧ್ವರಃ ।**
**ತಸ್ಮೈ ಸ್ವಸ್ಮೈ ಚ ಸರ್ವಸ್ಮೈ ನತೋಽಸ್ಮ್ಯಾತ್ಮಸಮಾಧಿನಾ ॥ ೩೦ ॥**

**ಅನೇಕಾನಂತಬ್ರಹ್ಮಾಂಡಧೃತೇ ಬ್ರಹ್ಮಸ್ವರೂಪಿಣೇ ।**
**ಸಮೀರಣಾತ್ಮನೇ ತಸ್ಮೈ ನತೋಽಸ್ಮ್ಯಾತ್ಮಸ್ವರೂಪಿಣೇ ॥ ೩೧ ॥**

**ನಮೋ ಹನುಮತೇ ತಸ್ಮೈ ನಮೋ ಮಾರುತಸೂನವೇ ।**
**ನಮಃ ಶ್ರೀರಾಮಭಕ್ತಾಯ ಶ್ಯಾಮಾಯ ಮಹತೇ ನಮಃ ॥ ೩೨ ॥**

**ನಮೋ ವಾನರವೀರಾಯ ಸುಗ್ರೀವಸ್ನೇಹಕಾರಿಣೇ ।**
**ಲಂಕಾವಿದಾಹನಾಯಾಥ ಮಹಾಸಾಗರತಾರಿಣೇ ॥ ೩೩ ॥**

---

ವಾದುದೆಂದು ತಿಳಿ. ಹೀಗೆ ಅವನು ಸರ್ವವ್ಯಾಪಿಯಾಗಿರುವುದರಿಂದ ನಾನು, ಇವನು, ಸ್ವೀಯ ಎಂಬ ವಿವೇಚನೆಯಿಲ್ಲ ಎಂದರೆ ಎಲ್ಲರಲ್ಲಿಯೂ ಅವನು ವ್ಯಾಪ್ತನಾಗಿರುವನೆಂದು ಭಾವ. ಅವನು ಅಣುವಾಗಿಯೂ, ಮಹತ್ತಾಗಿಯೂ ಇರುವನು.

೩೦. ಮತ್ತು ಅವನು ಋಗ್ವೇದ, ಯಜುರ್ವೇದ, ಸಾಮವೇದ, ಅಕ್ಷರತ್ರಯಾತ್ಮಕವಾದ ಪ್ರಣವ ಇವುಗಳಿಂದ ಪ್ರತಿಪಾದ್ಯನಾಗಿರುವನು. ಸ್ವಾಂತರ್ಗತನು, ಸರ್ವಾಂತರ್ಯಾಮಿಯೂ ಆದ ಅವನಿಗೆ ಆತ್ಮಸಂಯಮಪೂರ್ವಕವಾಗಿ ನಮಸ್ಕಾರಮಾಡುವೆನು.

೩೧. ಅನೇಕಾನಂತ ಬ್ರಹ್ಮಾಂಡವನ್ನು ಧರಿಸಿರುವವನು, ಬ್ರಹ್ಮಸ್ವರೂಪಿಯು, ವಾಯ್ವವತಾರನು, ಪ್ರಾಣರೂಪಿಯೂ ಆದ ಆ ಹನುಮಂತನಿಗೆ ನಮಸ್ಕಾರಮಾಡುವೆನು.

೩೨. ಆ ಹನುಮಂತನಿಗೆ ನಮಸ್ಕಾರ, ವಾಯುಪುತ್ರನಿಗೆ ನಮಸ್ಕಾರ, ಶ್ರೀರಾಮಭಕ್ತನಿಗೆ ನಮಸ್ಕಾರ, ಶ್ಯಾಮವರ್ಣೋಪೇತನಾದ ಮಹಾತ್ಮನಿಗೆ ವಂದನೆ.

೩೩. ಕಪಿವೀರನು, ಸುಗ್ರೀವ ಸಖ್ಯವನ್ನು ಮಾಡಿಸಿದವನು, ಲಂಕೆಯನ್ನು ಸುಟ್ಟವನು, ಮಹಾಸಮುದ್ರವನ್ನು ದಾಟಿದವನೂ ಆದ ಹನಮಂತನಿಗೆ ನಮಸ್ಕಾರ.

ಸೀತಾಶೋಕವಿನಾಶಾಯ ರಾಮಮುದ್ರಾಧರಾಯ ಚ ।
ರಾವಣಾಂತನಿದಾನಾಯ ನಮಃ ಸರ್ವೋತ್ತರಾತ್ಮನೇ ॥ ೩೪ ॥

ಮೇಘನಾದಮಖಧ್ವಂಸಕಾರಣಾಯ ನಮೋನಮಃ ।
ಅಶೋಕವನವಿಧ್ವಂಸಕಾರಿಣೇ ಜಯದಾಯಿನೇ ॥ ೩೫ ॥

ವಾಯುಪುತ್ರಾಯ ವೀರಾಯ ಆಕಾಶೋದರಗಾಮಿನೇ ।
ವನಪಾಲಶಿರಶ್ಛೇತ್ರೇ ಲಂಕಾಪ್ರಾಸಾದಭಂಜಿನೇ ॥ ೩೬ ॥

ಜ್ವಲತ್ಕಾಂಚನವರ್ಣಾಯ ದೀರ್ಘಲಾಂಗೂಲಧಾರಿಣೇ ।
ಸೌಮಿತ್ರಿಜಯದಾತ್ರೇ ಚ ರಾಮದೂತಾಯ ತೇ ನಮಃ ॥ ೩೭ ॥

ಅಕ್ಷಸ್ಯ ವಧಕರ್ತ್ರೇ ಚ ಬ್ರಹ್ಮಶಸ್ತ್ರನಿವಾರಿಣೇ ।
ಲಕ್ಷ್ಮಣಾಂಗಮಹಾಶಕ್ತಿಜಾತಕ್ಷತವಿನಾಶಿನೇ ॥ ೩೮ ॥

---

೩೪. ಸೀತೆಯ ದುಃಖವನ್ನು ಪರಿಹರಿಸಿದವನು, ರಾಮಮುದ್ರೆಯನ್ನು ತೆಗೆದುಕೊಂಡು ಹೋದವನು, ರಾವಣನ ನಾಶಕ್ಕೆ ಕಾರಣನು, ಸಕಲಜೀವೋತ್ಕೃಷ್ಟಸ್ವರೂಪಿಯೂ ಆಗಿರುವ ಹನುಮಂತನಿಗೆ ನಮಸ್ಕಾರ.

೩೫. ಮೇಘನಾದನ ಯಜ್ಞಧ್ವಂಸಕ್ಕೆ ಕಾರಣನು, ಅಶೋಕವನ ವಿನಾಶಕಾರಿಯು, ಜಯಪ್ರದನೂ ಆದ ಹನುಮಂತನಿಗೆ ನಮಸ್ಕಾರ.

೩೬–೩೭. ವಾಯುಸುತನೂ, ಪರಾಕ್ರಮಿಯೂ, ಆಕಾಶಮಧ್ಯದಲ್ಲಿ ಸಂಚರಿಸುವವನೂ, ವನಪಾಲಕರ ಶಿರಸ್ಸನ್ನು ಕೊಯಿದವನೂ, ಲಂಕೆಯ ಅರಮನೆಯನ್ನು ಹಾಳುಮಾಡಿದವನೂ, ಕಾಯಿಸಿದ ಬಂಗಾರದಂತೆ ಹೊಳೆಯುತ್ತಿರುವ ರೂಪವುಳ್ಳವನೂ, ಉದ್ದವಾದ ಬಾಲವನ್ನು ಧರಿಸಿರುವವನೂ, ಸೌಮಿತ್ರಿ (ಲಕ್ಷ್ಮಣ) ಗೆ ಜಯವನ್ನುಂಟುಮಾಡಿದವನೂ, ರಾಮದೂತನೂ ಆದ ನಿನಗೆ ನಮಸ್ಕಾರ.

೩೮–೩೯. ಅಕ್ಷಯಕುಮಾರನ ಸಂಹಾರವನ್ನು ಮಾಡಿದ, ಬ್ರಹ್ಮಾಸ್ತ್ರವನ್ನು ತಡೆದ, ಲಕ್ಷ್ಮಣನ ಅಂಗದಲ್ಲಿ ಮಹಾಶಕ್ತಿಯಿಂದುಂಟಾದ ಗಾಯವನ್ನು

ರಕ್ಷೋಘ್ನಾಯ ರಿಪುಘ್ನಾಯ ಭೂತಘ್ನಾಯ ನಮೋನಮಃ ।
ಋಕ್ಷವಾನರವೀರೌಘಪ್ರಸಾದಾಯ ನಮೋನಮಃ ॥ ೩೯ ॥

ಪರಸೈನ್ಯಬಲಘ್ನಾಯ ಶಸ್ತ್ರಾಸ್ತ್ರಘ್ನಾಯ ತೇ ನಮಃ ।
ವಿಷಘ್ನಾಯ ದ್ವಿಷಘ್ನಾಯ ಭಯಘ್ನಾಯ ನಮೋನಮಃ ॥ ೪೦ ॥

ಮಹಾರಿಪುಭಯಘ್ನಾಯ ಭಕ್ತತ್ರಾಣೈಕಕಾರಿಣೇ ।
ಪರಪ್ರೇರಿತಮಂತ್ರಾಣಾಂ ಮಂತ್ರಾಣಾಂ ಸ್ತಂಭಕಾರಿಣೇ ॥ ೪೧ ॥

ಪಯಃಪಾಷಾಣತರಣಕಾರಣಾಯ ನಮೋನಮಃ ।
ಬಾಲಾರ್ಕಮಂಡಲಗ್ರಾಸಕಾರಿಣೇ ದುಃಖಹಾರಿಣೇ ॥ ೪೨ ॥

ನಖಾಯುಧಾಯ ಭೀಮಾಯ ದಂತಾಯುಧಧರಾಯ ಚ ।
ವಿಹಂಗಮಾಯ ಶೈವಾಯ ವಜ್ರದೇಹಾಯ ತೇ ನಮಃ ॥ ೪೩ ॥

---

ಹೋಗಲಾಡಿಸಿದ, ರಾಕ್ಷಸರನ್ನು ಸಂಹರಿಸಿದ, ಶತ್ರುಗಳನ್ನು ಕೊಂದ, ಭಯ ಪರಿಹಾರಕನಾದ ಆಂಜನೇಯನಿಗೆ ನಮಸ್ಕಾರ, ನಮಸ್ಕಾರ. ಜಾಂಬವಂತ ಮತ್ತು ಕಪಿವೀರರ ಸಮೂಹಕ್ಕೆ ಅನುಗ್ರಹಮಾಡಿದ ಹನುಮಂತನಿಗೆ ನಮಸ್ಕಾರ, ನಮಸ್ಕಾರ.

೪೦. ಶತ್ರುಸೈನ್ಯಶಕ್ತಿಯನ್ನು ನಾಶಪಡಿಸಿದ, ಶಸ್ತ್ರಾಸ್ತ್ರಪರಿಹಾರಕನಾದ ನಿನಗೆ ನಮಸ್ಕಾರ. ವಿಷ, ಶತ್ರು, ಭಯ ಇವುಗಳನ್ನು ನಾಶಪಡಿಸುವ ನಿನಗೆ ನಮಸ್ಕಾರ, ನಮಸ್ಕಾರ.

೪೧-೪೨. ದೊಡ್ಡಶತ್ರುಗಳ ಭಯವನ್ನು ಪರಿಹರಿಸುವ, ಭಕ್ತರ ರಕ್ಷಣೆಯನ್ನೇ ಪ್ರಧಾನವಾಗಿಮಾಡುವ, ಶತ್ರುಗಳು ಉಪಯೋಗಿಸಿದ ಮಂತ್ರಗಳನ್ನು ಪ್ರತಿಮಂತ್ರಗಳಿಂದ ಸ್ತಂಭನಮಾಡುವ, ಸಮುದ್ರಲಂಘನಕ್ಕೆ ಕಾರಣನಾದ, ಬಾಲಸೂರ್ಯಮಂಡಲಗ್ರಾಸಮಾಡಿದ, ದುಃಖಪರಿಹಾರಕನಾದ ಹನುಮಂತನಿಗೆ ನಮಸ್ಕಾರ.

೪೩. ಉಗುರೇ ಆಯುಧವಾಗಿ ಉಳ್ಳವನು, ಭಯಂಕರನು, ಹಲ್ಲುಗಳೆಂಬ ಆಯುಧವನ್ನು ಧರಿಸಿರುವವನು, ಪಕ್ಷಿರೂಪನು, ಶಿವಸಂಬಂಧಿಯು ಮತ್ತು ವಜ್ರದೇಹವುಳ್ಳವನೂ ಆದ ನಿನಗೆ ನಮಸ್ಕಾರ.

ಪ್ರತಿಗ್ರಾಮಸ್ಥಿತಾಯಾಥ ಭೂತಪ್ರೇತವಧಾರ್ಥಿನೇ |
ಕರಸ್ಥ ಶೈಲಶಸ್ತ್ರಾಯ ರಾಮಶಸ್ತ್ರಾಯ ತೇ ನಮಃ || ೪೪ ||

ಕೌಪೀನವಾಸಸೇ ತುಭ್ಯಂ ರಾಮಭಕ್ತಿರತಾಯ ಚ |
ದಕ್ಷಿಣಾಶಾಭಾಸ್ಕರಾಯ ಸತಾಂ ಚಂದ್ರೋದಯಾತ್ಮನೇ || ೪೫ ||

ಕೃತ್ಯಾಕ್ಷತವ್ಯಥಾಘ್ನಾಯ ಸರ್ವಕ್ಲೇಶಹರಾಯ ಚ |
ಸ್ವಾಮ್ಯಾಜ್ಞಾಪಾರ್ಥಸಂಗ್ರಾಮಸಖ್ಯಸಂಜಯಕಾರಿಣೇ || ೪೬ ||

ಭಕ್ತಾನಾಂ ದಿವ್ಯವಾದೇಷು ಸಂಗ್ರಾಮೇ ಜಯಕಾರಿಣೇ |
ಕಿಲ್ಕಿಲಾರವಕಾರಾಯ ಘೋರಶಬ್ದಕರಾಯ ಚ || ೪೭ ||

ಸರ್ವಾಗ್ನಿವ್ಯಾಧಿಸಂಸ್ತಂಭಕಾರಿಣೇ ಭಯಹಾರಿಣೇ |
ಸದಾ ವನಫಲಾಹಾರಸಂತೃಪ್ತಾಯ ವಿಶೇಷತಃ || ೪೮ ||

---

೪೪. ಪ್ರತಿಯೊಂದು ಹಳ್ಳಿಯಲ್ಲಿಯೂ ನೆಲೆಸಿರುವ, ಭೂತಪ್ರೇತ ಸಂಹಾರವನ್ನಪೇಕ್ಷಿಸುವ, ಪರ್ವತವೆಂಬ ಶಸ್ತ್ರವನ್ನು ಕೈಯ್ಯಲ್ಲಿಟ್ಟುಕೊಂಡಿರುವ, ಶ್ರೀರಾಮನ ಶಸ್ತ್ರಸ್ಥಾನೀಯನಾದ ನಿನಗೆ ನಮಸ್ಕಾರ.

೪೫–೪೯. ಕೌಪೀನವನ್ನು ಧರಿಸಿರುವವನು, ರಾಮಭಕ್ತಿನಿರತನು, ದಕ್ಷಿಣದಿಕ್ಕಿನ ಸೂರ್ಯನು, ಸಜ್ಜನರಿಗೆ ಚಂದ್ರೋದಯ ಸ್ವರೂಪನು, ಅಕ್ಷಯ ವ್ಯಥೆ ಮತ್ತು ಸರ್ವಕ್ಲೇಶಗಳನ್ನೂ ಪರಿಹರಿಸುವವನು, ಒಡೆಯನ ಅಪ್ಪಣೆಯಂತೆ ಪಾರ್ಥನಿಗೆ ಪ್ರೀತಿಯಿಂದ ಯುದ್ಧದಲ್ಲಿ ಜಯವನ್ನುಂಟುಮಾಡಿದವನು, ಭಕ್ತರಿಗೆ ದಿವ್ಯವಾದ ಮತ್ತು ಯುದ್ಧಗಳಲ್ಲಿ ಜಯಲಭಿಸುವಂತೆ ಮಾಡುವವನು, "ಕಿಲಿಕಿಲಿ" ಮುಂತಾದ ಶಬ್ದಮಾಡುತ್ತಿರುವ, ಸಕಲರೋಗ, ಬೆಂಕಿ ಇವುಗಳ ಸ್ತಂಭನವನ್ನು ಮಾಡುವ, ಭಯಪರಿಹಾರಕನು, ಯಾವಾಗಲೂ ಕಾಡಿನಲ್ಲಿ ಬೆಳೆಯುವ ಫಲಾಹಾರದಿಂದ ಸಂತುಷ್ಟನು ಮತ್ತು ವಿಶೇಷವಾಗಿ ಮಹಾಸಮುದ್ರದಲ್ಲಿ ಕಲ್ಲಿನಿಂದ ಸೇತುವೆಯನ್ನು ಕಟ್ಟಿದವನೂ ಆಗಿರುವ ನಿನಗೆ ನಮಸ್ಕಾರ. ಬ್ರಾಹ್ಮಣನಾದ

ಮಹಾರ್ಣವಶಿಲಾಬದ್ಧಸೇತುಬಂಧಾಯ ತೇ ನಮಃ ।
ಇತ್ಯೇತತ್ಕಥಿತಂ ವಿಪ್ರ ಮಾರುತೇಃ ಕವಚಂ ಶಿವಂ ॥ ೪೯ ॥

ಯಸ್ಮೈ ಕಸ್ಮೈ ನ ದಾತವ್ಯಂ ರಕ್ಷಣೀಯಂ ಪ್ರಯತ್ನತಃ ॥ ೫೦ ॥

ಅಷ್ಟಗಂಧೈರ್ವಿಲಿಖ್ಯಾಥ ಕವಚಂ ಧಾರಯೇತ್ತು ಯಃ ।
ಕಂಠೇ ವಾ ದಕ್ಷಿಣೇ ಬಾಹೌ ಜಯಸ್ತಸ್ಯ ಪದೇಪದೇ ॥ ೫೧ ॥

ಕಿಂ ಪುನರ್ಬಹುನೋಕ್ತೇನ ಸಾಧಿತಂ ಲಕ್ಷಮಾದರಾತ್ ।
ಪ್ರಜಪ್ತಮೇತತ್ಕವಚಮಸಾಧ್ಯಂ ಚಾಪಿ ಸಾಧಯೇತ್ ॥ ೫೨ ॥

ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ
ತೃತೀಯಭಾಗೇ ಹನುಮತ್ಕವಚನಿರೂಪಣಂ ನಾಮ
ಅಷ್ಟಸಪ್ತತಿತಮೋಽಧ್ಯಾಯಃ

---

ನಾರದನೇ! ಮಂಗಳಕರವಾದ ಈ ಹನುಮತ್ಕವಚವು ಈರೀತಿ ನಿನಗೆ ಹೇಳಲ್ಪಟ್ಟಿದೆ.

೫೦-೫೨. ಶೀಲಸ್ವಭಾವವನ್ನರಿಯದೆ ಯಾರಿಗೂ ಇದನ್ನು ಹೇಳಬಾರದು. ಪ್ರಯಾಸದಿಂದ ಗುಟ್ಟಾಗಿ ಕಾಪಾಡಿಕೊಳ್ಳಬೇಕು. ಅಷ್ಟಗಂಧಗಳಿಂದ ಕವಚವನ್ನು ಬರೆದು ಕುತ್ತಿಗೆ ಅಥವಾ ಬಲತೋಳಿನಲ್ಲಿ ಧರಿಸಿಕೊಳ್ಳುವವನಿಗೆ ಬಾರಿಬಾರಿಗೂ ಜಯವಾಗುವುದು. ಹೆಚ್ಚುಹೇಳಿದ್ದರಿಂದೇನು! ಆದರದಿಂದ ಈ ಕವಚವನ್ನು ಸಾಧಿಸಿ ಒಂದು ಲಕ್ಷಜಪಮಾಡಿದರೆ ಅಶಕ್ಯವಾದುದೆಲ್ಲವೂ ಸಿದ್ಧಿಸುವುದು.

ಇಂತು ಶ್ರೀನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನ
ವೆಂಬ ಮೂರನೆಯ ಪಾದದಲ್ಲಿ ಹನುಮತ್ಕವಚನಿರೂಪಣವೆಂಬ
ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

## ವಿಷಯ ಸಂಗ್ರಹ

ಹನುಮಂತನ ಕವಚ, ಅದರ ಪಠನ, ಧಾರಣ, ಫಲ ಮುಂತಾದುವು ಸಪರಿಕರವಾಗಿ ನಿರೂಪಿಸಲ್ಪಟ್ಟಿದೆ.

# ಏಕೋನಾಶೀತಿತಮೋಽಧ್ಯಾಯಃ

---

ಸನತ್ಕುಮಾರ ಉವಾಚ

**ಅಥಾಪರಂ ವಾಯುಸೂನೋಶ್ಚರಿತಂ ಪಾಪನಾಶನಂ ।**
**ಯದುಕ್ತಂ ಸ್ವಸ್ಯ ರಾಮೇಣ ಆನಂದವನವಾಸಿನಾ ॥ ೧ ॥**

**ಸದ್ಯೋಜಾತೇ ಮಹಾಕಲ್ಪೇ ಶ್ರುತವೀರ್ಯೇ ಹನೂಮತಿ ।**
**ಮಮ ಶ್ರೀರಾಮಚಂದ್ರಸ್ಯ ಭಕ್ತಿರಸ್ತು ಸದೈವ ಹಿ ॥ ೨ ॥**

**ಶೃಣುಷ್ವ ಗದತೋ ಮತ್ತಃ ಕುಮಾರಸ್ಯ ಕುಮಾರಕ ।**
**ಚರಿತಂ ಸರ್ವಪಾಪಘ್ನಂ ಶೃಣ್ವತಾಂ ಪಠತಾಂ ಸದಾ ॥ ೩ ॥**

---

## ಎಪ್ಪತ್ತೊಂಬತ್ತನೆಯ ಅಧ್ಯಾಯವು

ಸನತ್ಕುಮಾರನು ಹೇಳಿದನು:-ಆನಂದವನದಲ್ಲಿ ವಾಸವಾಗಿದ್ದ ರಾಮನು ನನಗೆ ಹೇಳಿದ ಪಾಪಪರಿಹಾರಕವಾದ, ವಾಯುಸುತನ ಚರಿತ್ರೆಯೊಂದನ್ನು ಹೇಳುವೆನು.

೨. ಶ್ರೀರಾಮನು ಹೇಳಿದುದೇನೆಂದರೆ :—ಸದ್ಯೋಜಾತ ಮಹಾಕಲ್ಪದಲ್ಲಿ ಪರಾಕ್ರಮಿಯೆಂದು ಶ್ರುತನಾದ ಹನುಮಂತನಲ್ಲಿ ಶ್ರೀರಾಮಚಂದ್ರನಾದ ನನ್ನ ಭಕ್ತಿಯು ಯಾವಾಗಲೂ ಸ್ಥಿರವಾಗಿರಲಿ.

೩. ಬ್ರಹ್ಮಪುತ್ರನಾದ ಸನತ್ಕುಮಾರನೇ ! ಯಾವಾಗಲೂ ಶ್ರವಣ ಪಠನ ಮಾಡುವವರ ಸಕಲ ಪಾಪಗಳನ್ನೂ ಪರಿಹರಿಸುವ ಕುಮಾರನ ಚರಿತ್ರೆಯನ್ನು ಹೇಳುವೆನು ಕೇಳು.

ವಾಂಛಾಮ್ಯಹಂ ಸದಾ ವಿಪ್ರ ಸಂಗಮಂ ಕೀಶರೂಪಿಣಾ ।
ರಹಸ್ಯಂ ರಹಸಿ ತ್ವಸ್ಯ ಮಮಾನಂದವನೋತ್ತಮೇ ॥ ೪ ॥

ಪುರಾ ತತ್ರ ಸಖಾಯೋ ಮೇ ಸಖ್ಯಶ್ಚ ವಿಗತಜ್ವರಾಃ ।
ಕ್ರೀಡಂತಿ ಸರ್ವದಾ ಚಾತ್ರ ಪ್ರಾಕಟ್ಯೇಪಿ ರಹಸ್ಯಪಿ ॥ ೫ ॥

ಕಸ್ಮಿಂಶ್ಚಿದವತಾರೇ ತು ಯದ್ವೃತ್ತಂ ಚ ರಹೋ ಮಮ ।
ತದತ್ರ ಪ್ರಕಟಂ ತುಭ್ಯಂ ಕರೋಮಿ ಪ್ರೀತಮಾನಸಃ ॥ ೬ ॥

ಆವಿರ್ಭೂತೋಽಸ್ಮ್ಯಹಂ ಪೂರ್ವಂ ರಾಜ್ಞೋ ದಶರಥಕ್ಷಯೇ ।
ಚತುರ್ವ್ಯೂಹಾತ್ಮಕಸ್ತತ್ರ ತಸ್ಯ ಭಾರ್ಯಾತ್ರಯೇ ಮುನೇ ॥ ೭ ॥

ತತಃ ಕತಿಪಯೈರಬ್ದೈರಾಗತೋ ದ್ವಿಜಪುಂಗವಃ ।
ವಿಶ್ವಾಮಿತ್ರೋಽರ್ಥಯಾಮಾಸ ಪಿತರಂ ಮಮ ಭೂಪತಿಂ ॥ ೮ ॥

---

೪. ಬ್ರಾಹ್ಮಣನೇ! ಉತ್ತಮವಾದ ಆನಂದವನದಲ್ಲಿ ಏಕಾಂತವಾಗಿರುವ ನನಗೆ ಕಪಿರೂಪಿಯಾದ ಹನುಮಂತನೊಡನೆ ರಹಸ್ಯವಾಗಿ ಸಹವಾಸವುಂಟಾಗಲೆಂದು ನಾನು ಅಪೇಕ್ಷಿಸುವೆನು.

೫. ಪೂರ್ವದಲ್ಲಿ ಅಸ್ಥಳದಲ್ಲಿ ನನ್ನ ಮಿತ್ರರು ಮತ್ತು ಗೆಳತಿಯರು ತಾಪವಿಲ್ಲದೆ ರಹಸ್ಯದಲ್ಲಿಯೂ, ಪ್ರಕಟವಾಗಿಯೂ ಸಹ ಯಾವಾಗಲೂ ಕ್ರೀಡಿಸುತ್ತಿದ್ದರು.

೬. ನನ್ನ ಒಂದು ಅವತಾರದಲ್ಲಿ ರಹಸ್ಯವಾಗಿ ನಡೆದ ವೃತ್ತಾಂತವನ್ನು ಸಂತುಷ್ಟಚಿತ್ತನಾದ ನಾನು ನಿನಗಾಗಿ ಪ್ರಕಟಮಾಡುವೆನು.

೭. ಮುನಿಯೇ! ಪೂರ್ವದಲ್ಲಿ ನಾನು ರಾಜನಾದ ದಶರಥನ ಕುಲದಲ್ಲಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎಂಬ ಚತುರ್ವ್ಯೂಹಾತ್ಮಕನಾಗಿ ಅವನ ಮೂರು ಮಂದಿ ಪತ್ನಿಯರಲ್ಲಿ ಆವಿರ್ಭೂತನಾದೆನು.

೮. ತರುವಾಯ ಕೆಲವು ವರ್ಷಗಳಾದಮೇಲೆ ದ್ವಿಜಶ್ರೇಷ್ಠನಾದ ವಿಶ್ವಾಮಿತ್ರನು ಬಂದು ನನ್ನ ತಂದೆಯಾದ ದಶರಥರಾಜನನ್ನು ಪ್ರಾರ್ಥಿಸಿದನು.

ಯಕ್ಷರಕ್ಷೋವಿಘಾತಾರ್ಥಂ ಲಕ್ಷ್ಮಣೇನ ಸಹೈವ ಮಾಂ ।
ಪ್ರೇಷಯಾಮಾಸ ಧರ್ಮಾತ್ಮಾ ಸಿದ್ಧಾಶ್ರಮಮರಣ್ಯಕಂ ॥ ೯ ॥

ತತ್ರ ಗತ್ವಾಶ್ರಮುನ್ಯಪೋದರ್ಷಯಂತೌ ನಿಶಾಚರೌ ।
ಧ್ವಸ್ತೌ ಸುಬಾಹುಮಾರೀಚೌ ಪ್ರಸನ್ನೋಭೂತ್ತದಾ ಮುನಿಃ ॥ ೧೦ ॥

ಅಸ್ತ್ರಗ್ರಾಮಂ ದದೌ ಮಹ್ಯಂ ಮಾಸಂ ಚಾವಾಸಯತ್ತಥಾ ।
ತತೋ ಗಾಧಿಸುತೋ ಧೀಮಾನ್ ಜ್ಞಾತ್ವಾ ಭಾವ್ಯರ್ಥಮಾದರಾತ್ ॥ ೧೧ ॥

ಮಿಥಿಲಾಮನಯತ್ತತ್ರ ರೌದ್ರಂ ಚಾದರ್ಶಯದ್ಧನುಃ ।
ತಸ್ಯ ಕನ್ಯಾಂ ಪಣೀಭೂತಾಂ ಸೀತಾಂ ಸುರಸುತೋಪಮಾಂ ೧೨ ॥

ಧನುರ್ವಿಭಜ್ಯ ಸಮಿತೌ ಲಬ್ಧವಾನ್ಮಾನಿನೋಸ್ಯ ಚ ।
ತತೋ ಮಾರ್ಗೇ ಭೃಗುಪತೇರ್ದರ್ಪಮೂಢಂ ಚಿರಂ ಸ್ಮರ್ಯ ॥ ೧೩ ॥

---

೯. ಧರ್ಮಿಷ್ಠನಾದ ನನ್ನ ತಂದೆಯು ಅವನ ಪ್ರಾರ್ಥನೆಯನ್ನು ಲಾಲಿಸಿ ಯಜ್ಞವಿಘಾತಕರಾದ ಯಕ್ಷ, ರಾಕ್ಷಸರನ್ನು ಸಂಹರಿಸುವುದಕ್ಕಾಗಿ ಅರಣ್ಯದಲ್ಲಿರುವ ಸಿದ್ಧಾಶ್ರಮಕ್ಕೆ ಲಕ್ಷ್ಮಣನೊಡನೆ ನನ್ನನ್ನು ಕಳುಹಿಸಿದನು.

೧೦. ನಾವು ವಿಶ್ವಾಮಿತ್ರಮುನಿಯ ಆಶ್ರಮಕ್ಕೆ ಹೋಗಿ ಯಜ್ಞಕ್ಕೆ ವಿಘ್ನಮಾಡುತ್ತಿದ್ದ ಸುಬಾಹುಮಾರೀಚರೆಂಬ ರಾಕ್ಷಸರನ್ನು ನಾಶಮಾಡಿದೆವು. ಅದರಿಂದ ಋಷಿಯು ಪ್ರಸನ್ನನಾದನು.

೧೧-೧೨. ಸಂತುಷ್ಟನಾದ ಮುನಿಯು ನನಗೆ ಅಸ್ತ್ರಸಮೂಹವನ್ನು ಕೊಟ್ಟನು. ಮತ್ತು ತಮ್ಮ ಆಶ್ರಮದಲ್ಲಿ ಒಂದುತಿಂಗಳು ಇಟ್ಟುಕೊಂಡಿದ್ದನು. ತರುವಾಯ ಜ್ಞಾನಿಯಾದ ವಿಶ್ವಾಮಿತ್ರನು ಮುಂದೆನಡೆಯುವುದನ್ನು ತಿಳಿದು ವಿಶ್ವಾಸದಿಂದ ನಮ್ಮನ್ನು ಮಿಥಿಲಾಪಟ್ಟಣಕ್ಕೆ ಕರೆದುಕೊಂಡು ಹೋಗಿ ಈಶ್ವರನ ಧನುಸ್ಸನ್ನು ತೋರಿಸಿದನು.

೧೨-೧೩. ಅಲ್ಲಿ ನೆರೆದಿದ್ದ ಸಭೆಯಲ್ಲಿ ನಾನು ಅದನ್ನು ಭೇದಿಸಿ ಅದಕ್ಕೆ ಪಣವಾಗಿಟ್ಟಿದ್ದ, ದೇವಸುತೆಗೆ ಸಮಾನಳಾದ ಸೀತೆಯೆಂಬ ಕನ್ಯಾಮಣಿಯನ್ನು ಪಡೆದೆನು.

ವ್ಯಸನೀಯಾಗಮಂ ಪಶ್ಚಾದಯೋಧ್ಯಾಂ ಸ್ವಪಿತುಃ ಪುರೀಂ ।
ತತೋ ರಾಜ್ಞಾಽಹಮಾಜ್ಞಾಯ ಪ್ರಜಾಶೀಲನಮಾನಸಃ ॥ ೧೪ ॥

ಯೌವರಾಜ್ಯೇ ಸ್ವಯಂ ಪ್ರೀತ್ಯಾ ಸಮ್ಮಂತ್ರ್ಯಾಪ್ತೈರ್ವಿಕಲ್ಪಿತಃ ।
ತಚ್ಛ್ರುತ್ವಾ ಸುಪ್ರಿಯಾ ಭಾರ್ಯಾ ಕೈಕೇಯೀ ಭೂಪತಿಂ ಮುನೇ ॥ ೧೫ ॥

ದೇವಕಾರ್ಯವಿಧಾನಾರ್ಥಂ ವಿದೂಷಿತಮತಿರ್ಜಗೌ ।
ಪುತ್ರೋ ಮೇ ಭರತೋ ನಾಮ ಯೌವರಾಜ್ಯೇಭಿಷಿಚ್ಯತಾಂ ॥ ೧೬ ॥

ರಾಮಶ್ಚತುರ್ದಶಸಮಾ ದಂಡಕಾನ್ಪ್ರವಿವಾಸ್ಯತಾಂ ।
ತದಾಕರ್ಣ್ಯಾಹಮುದ್ಯುಕ್ತೋಽರಣ್ಯಂ ಭಾರ್ಯಾನುಜಾನ್ವಿತಃ ॥ ೧೭ ॥

ಗಂತುಂ ನೃಪತಿನಾನುಕ್ತೋಪ್ಯಗಮಂ ಚಿತ್ರಕೂಟಕಂ ।
ತತ್ರ ನಿತ್ಯಂ ವನ್ಯಫಲೈರ್ಮಾಂಸೈಶ್ಚಾವರ್ತಿತಕ್ರಿಯಃ ॥ ೧೮ ॥

---

೧೩-೧೪. ಅನಂತರ ಬರುವ ದಾರಿಯಲ್ಲಿ ಭಾರ್ಗವರಾಮನ ಬಹು ದರ್ಪ ಮೋಹವನ್ನು ಅನಾಯಾಸವಾಗಿ ಅಡಗಿಸಿ ನನ್ನ ತಂದೆಯ ಪಟ್ಟಣವಾದ ಅಯೋಧ್ಯೆಗೆ ಬಂದೆನು.

೧೪-೧೫. ಅನಂತರ ನಮ್ಮ ತಂದೆಯು ತನ್ನ ಆಪ್ತರೊಡನೆ ಯೋಚಿಸಿ ಪ್ರಜಾನುರಾಗಿಯಾದ ನನ್ನನ್ನು ಕರೆಯಿಸಿಕೊಂಡು ಪ್ರೀತಿಯಿಂದ ಯುವರಾಜ ಪದವಿಯನ್ನು ವಹಿಸಬೇಕೆಂದು ಅಪ್ಪಣೆಮಾಡಿದನು.

೧೫-೧೭. ಮುನಿಯೇ! ಅದನ್ನು ಕೇಳಿ ರಾಜನಿಗೆ ಅತ್ಯಂತ ಪ್ರಿಯ ಪತ್ನಿಯಾದ ಕೈಕೇಯೀದೇವಿಯು, ದೇವತೆಗಳಿಗೆ ಅಭಿಮತಕಾರ್ಯವು ನಡೆಯ ಬೇಕಾಗಿದ್ದುದರಿಂದ ಬುದ್ಧಿಗೆಟ್ಟು ರಾಜನಾದ ದಶರಥನನ್ನು ಕುರಿತು 'ನನ್ನ ಮಗ ನಾದ ಭರತನು ಯೌವರಾಜ್ಯದಲ್ಲಿ ಅಭಿಷಿಕ್ತನಾಗಬೇಕು. ರಾಮನು ಹದಿನಾಲ್ಕು ವರ್ಷಗಳಕಾಲ ದಂಡಕಾರಣ್ಯದಲ್ಲಿ ವಾಸಮಾಡಬೇಕು' ಎಂದು ಹೇಳಿದಳು.

೧೭-೧೮. ಅದನ್ನು ಕೇಳಿ ದೊರೆಯು ಬಾಯಿಯಿಂದ ಹೇಳದಿದ್ದಾಗ್ಯೂ ನನ್ನ ಹೆಂಡತಿ ಮತ್ತು ತಮ್ಮನೊಡನೆ ನಾನು ಅರಣ್ಯಕ್ಕೆ ಹೋಗಲು ಚಿತ್ರಕೂಟ ಪರ್ವತಕ್ಕೆ ಬಂದೆನು.

ನಿವಸನ್ನೇವ ರಾಜ್ಞಸ್ತು ನಿಧನಂ ಚಾಪ್ಯವಾಗಮಂ ।
ತತೋ ಭರತಶತ್ರುಘ್ನೌ ಭ್ರಾತರೌ ಮಮ ಮಾನದೌ ॥ ೧೯ ॥

ಮಾತೃವರ್ಗಯುತೌ ದೀನೌ ಸಾಚಾರ್ಯಾಮಾತ್ಯನಾಗರೌ ।
ವ್ಯಜಿಜ್ಞಪತಾಮಾಗತ್ಯ ಪಂಚವಟ್ಯಾಂ ನಿಜಾಶ್ರಮಂ ॥ ೨೦ ॥

ಅಕಲ್ಪಯಂ ಭ್ರಾತೃಭಾರ್ಯಾಸಹಿತಶ್ಚಾರ್ಕವತ್ಸರಂ ।
ತತಸ್ತ್ರಯೋದಶೇ ವರ್ಷೇ ರಾವಣೋ ನಾಮ ರಾಕ್ಷಸಃ ॥ ೨೧ ॥

ಮಾಯಯಾ ಹೃತವಾನ್ಸೀತಾಂ ಪ್ರಿಯಾಂ ಮಮ ಪರೋಕ್ಷತಃ ।
ತತೋಽಹಂ ದೀನವದನ ಋಷ್ಯಮೂಕಂ ಹಿ ಪರ್ವತಂ ॥ ೨೨ ॥

ಭಾರ್ಯಾಮನ್ವೇಷಯನ್ಪ್ರಾಪ್ತಃ ಸಖ್ಯಂ ಹರ್ಯಧಿಪೇನ ಚ ।
ಅಥ ವಾಲಿನಮಾಹತ್ಯ ಸುಗ್ರೀವಸ್ತತ್ಪದೇ ಕೃತಃ ॥ ೨೩ ॥

---

೧೮-೧೯. ಅಲ್ಲಿ ಕಾಡಿನಲ್ಲಿ ಬೆಳೆದ ಫಲಮೂಲಾದಿಗಳನ್ನು ತಿಂದು ನಿತ್ಯ ಕ್ರಿಯೆಗಳನ್ನು ಮಾಡುತ್ತಾ ವಾಸವಾಗಿರುವಾಗಲೇ ರಾಜನ ಮರಣವಾರ್ತೆ ಯನ್ನು ತಿಳಿದೆನು.

೧೯-೨೦. ತಾಯಿಯರು, ಆಚಾರ್ಯರು, ಮಂತ್ರಿಗಳು, ನಗರವಾಸಿಗಳು ಇವರಿಂದ ಸಹಿತರಾಗಿ ನನ್ನ ತಮ್ಮಂದಿರಾದ ಭರತಶತ್ರುಘ್ನರು ದೀನರಾಗಿ ಬಂದು ಮರ್ಯಾದೆಪೂರ್ವಕವಾಗಿ ರಾಜನ ಮರಣವೃತ್ತಾಂತವನ್ನು ತಿಳಿಸಿದರು.

೨೧-೨೨. ಅನಂತರ ನಾನು ಪಂಚವಟಿಗೆ ಬಂದು ಅಲ್ಲಿ ಆಶ್ರಮವನ್ನು ಕಲ್ಪಿಸಿಕೊಂಡು ಲಕ್ಷ್ಮಣ ಸೀತೆಯರಿಂದ ಸಹಿತನಾಗಿ ವಾಸಮಾಡಿದೆನು. ಹೀಗೆ ಕಾಡಿನಲ್ಲಿ ಹನ್ನೆರಡು ವರ್ಷಗಳನ್ನು ಕಳೆದೆನು. ಬಳಿಕ ಹದಿಮೂರನೆಯ ವರ್ಷದಲ್ಲಿ ರಾವಣನೆಂಬ ರಾಕ್ಷಸನು ನಾನಿಲ್ಲದಿರುವಾಗ ನನ್ನ ಪ್ರಿಯಳಾದ ಸೀತೆ ಯನ್ನು ಮೋಸದಿಂದ ಅಪಹರಿಸಿಕೊಂಡು ಹೋದನು.

೨೨-೨೩. ತರುವಾಯ ದೀನವದನನಾಗಿ ಹೆಂಡತಿಯನ್ನು ಹುಡುಕುತ್ತಾ ಋಷ್ಯಮೂಕ ಪರ್ವತಕ್ಕೆ ಬಂದೆನು. ಅಲ್ಲಿ ಕಪೀಶ್ವರನಾದ ಸುಗ್ರೀವನ ಸಖ್ಯವು ಬೆಳೆಯಿತು. ಅನಂತರ ವಾಲಿಯನ್ನು ಕೊಂದು ಅವನ ಸ್ಥಾನದಲ್ಲಿ ಸುಗ್ರೀವ ನಿಗೆ ಪಟ್ಟಾಭಿಷೇಕವನ್ನು ಮಾಡಿಸಿದೆನು.

ಸಹ ವಾನರಯೂಥೈಶ್ಚ ಸಾಹಾಯ್ಯಂ ಕೃತವಾನ್ಮಮ ।
ವಿರುಧ್ಯ ರಾವಣೇನಾಲಂ ಮಮ ಭಕ್ತೋ ವಿಭೀಷಣಃ ॥ ೨೪ ॥

ಆಗತೋ ಹ್ಯಭಿಷಿಚ್ಯಾಶು ಲಂಕೇಶೋ ಹಿ ವಿಕಲ್ಪಿತಃ ।
ಹತ್ವಾ ತು ರಾವಣಂ ಸಂಖ್ಯೇ ಸಪುತ್ರಾಮಾತ್ಯಬಾಂಧವಂ ॥ ೨೫ ॥

ಸೀತಾಮಾದಾಯ ಸಂಶುದ್ಧಾಮಯೋಧ್ಯಾಂ ಸಮುಪಾಗತಃ ।
ತತಃ ಕಾಲಾಂತರೇ ವಿಪ್ರ ಸುಗ್ರೀವಶ್ಚ ವಿಭೀಷಣಃ ॥ ೨೬ ॥

ನಿಮಂತ್ರಿತೌ ಪಿತುಃ ಶ್ರಾದ್ಧೇ ಷಟ್ಕುಲಾಶ್ಚ ದ್ವಿಜೋತ್ತಮಾಃ ।
ಅಯೋಧ್ಯಾಯಾಂ ಸಮಾಜಗ್ಮುಸ್ತೇ ತು ಸರ್ವೇ ನಿಮಂತ್ರಿತಾಃ ॥ ೨೭ ॥

ಋತೇ ವಿಭೀಷಣಂ ತತ್ರ ಚಿಂತಯಾನೇ ರಘೂತ್ತಮೇ ।
ಶಂಭುಃ ಬ್ರಾಹ್ಮಣರೂಪೇಣ ಷಟ್ಕುಲೈಶ್ಚ ಸಹಾಗತಃ ॥ ೨೮ ॥

---

೨೪-೨೫. ಅವನು ಕಪಿಸೈನ್ಯಗಳೊಡನೆ ನನಗೆ ಸಿತಾನ್ವೇಷಣಕಾರ್ಯಕ್ಕೆ ಸಹಾಯುಮಾಡಿದನು. ಅಣ್ಣನಾದ ರಾವಣನನ್ನು ವಿರೋಧಿಸಿ ನನ್ನಲ್ಲಿಗೆ ಬಂದ ಭಕ್ತನಾದ ವಿಭೀಷಣನಿಗೆ ಕೂಡಲೇ ಪಟ್ಟಾಭಿಷೇಕಮಾಡಿ ಅವನನ್ನು ಲಂಕಾಧಿಪತಿಯನ್ನಾಗಿ ನಿಯಮಿಸಿದೆನು

೨೫ ೨೬. ಯುದ್ಧದಲ್ಲಿ ಪುತ್ರ, ಮಂತ್ರಿ, ಬಂಧುಗಳ ಸಹಿತವಾಗಿ ರಾವಣನನ್ನು ಸಂಹರಿಸಿ ಪರಿಶುದ್ಧಳಾದ ಸೀತಾದೇವಿಯನ್ನು ಕರೆದುಕೊಂಡು ಆಯೋಧ್ಯಾಪಟ್ಟಣಕ್ಕೆ ಬಂದೆನು.

೨೬-೨೯. ಕೆಲವುಕಾಲ ಕಳೆದಮೇಲೆ ತಂದೆಯ ಶ್ರಾದ್ಧಕ್ಕಾಗಿ ಸುಗ್ರೀವ ವಿಭೀಷಣರನ್ನು ಅಯೋಧ್ಯೆಗೆ ಬರುವಂತೆ ಹೇಳಿಕಳುಹಿಸಿದೆನು. ಆ ಸಮಯಕ್ಕೆ ಸರಿಯಾಗಿ ಅಕಸ್ಮಾತ್ತಾಗಿ ಷಟ್ಕುಲರಾದ ಬ್ರಾಹ್ಮಣೋತ್ತಮರು ಅಲ್ಲಿಗೆ ಬಂದುದನ್ನು ಕಂಡು ಅವರೆಲ್ಲರಿಗೂ ನಿಮಂತ್ರಣ ಕೊಟ್ಟೆನು. ಆ ಬ್ರಾಹ್ಮಣರೊಡನೆ ಶಂಭುವೂ ಬ್ರಾಹ್ಮಣವೇಷದಿಂದ ಬಂದಿದ್ದನು. ಆಗ ಅಲ್ಲಿ ವಿಭೀಷಣನು

ಅಥ ಪೃಷ್ಟೋ ಮಯಾ ಶಂಭುಃ ವಿಭೀಷಣಸಮಾಗಮೇ ।
ನೀತ್ವಾ ಮಾಂ ದ್ರವಿಡೇ ದೇಶೇ ಮೋಚಯ ದ್ವಿಜಬಂಧನಾತ್ ॥ ೨೯ ॥

ಮಯಾ ನಿಮಂತ್ರಿತಾಃ ಶ್ರಾದ್ಧೇ ಹ್ಯಗಸ್ತ್ಯಾದ್ಯಾ ಮುನೀಶ್ವರಾಃ ।
ಸಂಭೋಜಿತಾಸ್ತು ಪ್ರಯಯುಃ ಸ್ವಸ್ವಮಾಶ್ರಮಮಂಡಲಂ ॥ ೩೦ ॥

ತತಃ ಕಾಲಾಂತರೇ ವಿಪ್ರಾ ದೇವಾ ದೈತ್ಯಾ ನರೇಶ್ವರಾಃ ।
ಗೌತಮೇನ ಸಮಾಹೂತಾಃ ಸರ್ವೇ ಯಜ್ಞಸಭಾಜಿತಾಃ ॥ ೩೧ ॥

ತೇ ಸರ್ವೇ ಸ್ಫಾಟಿಕಂ ಲಿಂಗಂ ತ್ರ್ಯಂಬಕಾದ್ರೌ ನಿವೇಶಿತಂ ।
ಸಂಪೂಜ್ಯ ನ್ಯವಸಂಸ್ತತ್ರ ದೇವದೈತ್ಯನೃಪದ್ವಿಜಾಃ ॥ ೩೨ ॥

ತಸ್ಮಿನ್ಸಮಾಜೇ ವಿತತೇ ಸರ್ವೈರ್ಲಿಂಗೇ ಸಮರ್ಚಿತೇ ।
ಗೌತಮೋಽಪ್ಯಥ ಮಧ್ಯಾಹ್ನೇ ಪೂಜಯಾಮಾಸ ಶಂಕರಂ ॥ ೩೩ ॥

---

ಕಾಣದಿರಲು" ಚಿಂತಾಕ್ರಾಂತನಾಗಿ ವಿಭೀಷಣನಿರುವ ದ್ರವಿಡದೇಶಕ್ಕೆ ನನ್ನನ್ನು ಕರೆದುಕೊಂಡು ಹೋಗಿ ಅಲ್ಲಿ ಬ್ರಾಹ್ಮಣರಿಂದ ಬಂಧಿತನಾಗಿರುವ ಅವನನ್ನು ಬಿಡುಗಡೆಮಾಡುವುದಕ್ಕೆ ಅನುಕೂಲಪಡಿಸು '' ಎಂಬುದಾಗಿ ಶಂಭುವನ್ನು ಕೇಳಿದೆನು.

೩೦. ನನ್ನಿಂದ ಶ್ರಾದ್ಧಕ್ಕಾಗಿ ಆಹ್ವಾನಿತರಾದ ಅಗಸ್ತ್ಯ ಮುಂತಾದ ಮುನೀಶ್ವರರು ಭೋಜನಮಾಡಿ ಅವರವರ ಆಶ್ರಮಕ್ಕೆ ತೆರಳಿದರು.

೩೧. ಬಳಿಕ ಕೆಲವುದಿನಗಳು ಕಳೆದಮೇಲೆ ಬ್ರಾಹ್ಮಣರು, ದೇವತೆಗಳು, ದೈತ್ಯರು, ದೊರೆಗಳು, ಗೌತಮರಿಂದ ಕರೆಯಸಿಕೊಳ್ಳಲ್ಪಟ್ಟು ಯಜ್ಞದಲ್ಲಿ ಎಲ್ಲರೂ ಸತ್ಕೃತರಾದರು.

೩೨. ಅವರೆಲ್ಲರೂ ತ್ರ್ಯಂಬಕಾದ್ರಿಯಲ್ಲಿ ಸ್ಥಾಪಿತವಾದ ಸ್ಫಟಿಕಲಿಂಗ ವನ್ನು ಚೆನ್ನಾಗಿ ಪೂಜಿಸಿ ಆ ದೈತ್ಯನೃಪ ದ್ವಿಜರು ಅಲ್ಲಿಯೇ ಉಳಿದುಕೊಂಡರು.

೩೩. ಆ ವಿಶಾಲವಾದ ಸಂಘದಲ್ಲಿ ಎಲ್ಲರೂ ಲಿಂಗವನ್ನು ಪೂಜಿಸುತ್ತಿರಲು ಗೌತಮನೂ ಸಹ ಮಧ್ಯಾಹ್ನಸಮಯದಲ್ಲಿ ಶಂಕರನನ್ನು ಪೂಜಿಸಿದನು.

ಸರ್ವೇ ಶುಕ್ಲಾಂಬರಧರಾಃ ಭಸ್ಮೋದ್ಧೂಲಿತವಿಗ್ರಹಾಃ ।
ಸಿತೇನ ಭಸ್ಮನಾ ಕೃತ್ವಾ ಸರ್ವಸ್ಥಾನೇ ತ್ರಿಪುಂಡ್ರಕಂ ॥ ೩೪ ॥

ನತ್ವಾ ತು ಭಾರ್ಗವಂ ಸರ್ವೇ ಭೂತಶುದ್ಧಿಂ ಪ್ರಚಕ್ರಮುಃ ।
ಹೃತ್ಪದ್ಮಮಧ್ಯೇ ಸುಷಿರಂ ತತ್ರೈವ ಭೂತಪಂಚಕಂ ॥ ೩೫ ॥

ತೇಷಾಂ ಮಧ್ಯೇ ಮಹಾಕಾಶಮಾಕಾಶೇ ನಿರ್ಮಲಾಮಲಂ ।
ತನ್ಮಧ್ಯೇ ಚ ಮಹೇಶಾನಂ ಧ್ಯಾಯೇದ್ದೀಪ್ತಿಮಯಂ ಶುಭಂ ॥ ೩೬ ॥

ಅಜ್ಞಾನಸಂಯುತಂ ಭೂತಂ ಸಮಲಂ ಕರ್ಮಸಂಗತಃ ।
ತಂ ದೇಹಮಾಕಾಶದೀಪೇ ಪ್ರದಹೇತ್ ಜ್ಞಾನವಹ್ನಿನಾ ॥ ೩೭ ॥

ಆಕಾಶಸ್ಯಾವೃತಿಂ ಚಾಹಂ ದಗ್ಧ್ವಾऽऽಕಾಶಮಥೋ ದಹೇತ್ ।
ದಗ್ಧ್ವಾऽऽಕಾಶಮಥೋ ವಾಯುಮಗ್ನಿಭೂತಂ ತಥಾ ದಹೇತ್ ॥ ೩೮ ॥

---

೩೪-೩೫. ಸರ್ವರೂ ಬಿಳಿಯ ಬಟ್ಟೆಯನ್ನುಟ್ಟುಕೊಂಡು ಮೈಗೆಲ್ಲಾ ಬೂದಿಯನ್ನು ಬಳಿದು, ಬಿಳಿಯ ಭಸ್ಮದಿಂದ ಎಲ್ಲಾ ಕಡೆಗಳಲ್ಲಿಯೂ ತ್ರಿಪುಂಡ್ರವನ್ನು ಗುರ್ತಿಸಿ, ಗೌತಮನನ್ನು ನಮಸ್ಕರಿಸಿ, ಎಲ್ಲರೂ ಭೂತಶುದ್ಧಿಯನ್ನು ಮಾಡಲಾರಂಭಿಸಿದರು.

೩೫-೩೬. ಹೃದಯಕಮಲಮಧ್ಯಭಾಗದಲ್ಲಿ ರಂಧ್ರವಿದೆ. ಅದರಲ್ಲಿ ಪಂಚಭೂತಗಳೂ ಅವುಗಳ ಮಧ್ಯದಲ್ಲಿ ಮಹಾಕಾಶವೂ ಇದೆ. ಅದರಮಧ್ಯದಲ್ಲಿ ಪರಿಶುದ್ಧವೂ, ದೋಷರಹಿತವೂ, ತೇಜೋಮಯವೂ, ಮಂಗಳಕರವೂ ಆಗಿರುವ ಮಹೇಶ್ವರರೂಪವನ್ನು ಧ್ಯಾನಿಸಬೇಕು.

೩೭. ಅಜ್ಞಾನದಿಂದ ಭೂತವು ದೋಷವುಳ್ಳದಾಗಿ ಕರ್ಮಸಂಗತ ದೇಹವಾಗುವುದು. ಆ ದೇಹವನ್ನು ಜ್ಞಾನವೆಂಬ ಬೆಂಕಿಯಿಂದ ಆಕಾಶವೆಂಬ ದೀಪದಲ್ಲಿ ಸುಡಬೇಕು.

೩೮. ಆಕಾಶದ ಆವರಣವನ್ನು ಸುಟ್ಟು. ಅನಂತರ ಆಕಾಶವನ್ನೂ ಸುಡಬೇಕು. ಆಕಾಶವನ್ನು ಸುಟ್ಟಮೇಲೆ ವಾಯುವನ್ನೂ ಹಾಗೆಯೇ ಅಗ್ನಿಯೆಂಬ ಭೂತವನ್ನೂ ಸುಡಬೇಕು.

ಆಬ್ಭೂತಂ ಚ ತತೋ ದಗ್ಧ್ವಾ ಪೃಥಿವೀಭೂತಮೇವ ಚ ।
ತದಾಶ್ರಿತಾನ್ಗುಣಾನ್ದಗ್ಧ್ವಾ ತತೋ ದೇಹಂ ಪ್ರದಾಹಯೇತ್ ॥ ೩೯ ॥

ಏವಂ ಪ್ರದಗ್ಧ್ವಾ ಭೂತಾದಿಂ ದೇಹೀ ತದ್ ಜ್ಞಾನವಹ್ನಿನಾ ।
ಶಿಖಾಮಧ್ಯಸ್ಥಿತಂ ವಿಷ್ಣುಮಾನಂದರಸನಿರ್ಭರಂ ॥ ೪೦ ॥

ನಿಷ್ಪನ್ನಚಂದ್ರಕಿರಣಸಂಕಾಶಕಿರಣಂ ಶಿವಂ ।
ಶಿವಾಂಗೋತ್ಪನ್ನಕಿರಣೈರಮೃತದ್ರವಸಂಯುತೈಃ ॥ ೪೧ ॥

ಸುಶೀತಲಾ ತತೋ ಜ್ವಾಲಾ ಪ್ರಶಾಂತಾ ಚಂದ್ರರಶ್ಮಿವತ್ ।
ಪ್ರಸಾರಿತಸುಧಾರುಗ್ಭಿಃ ಸಾಂದ್ರೀಭೂತಶ್ಚ ಸಂಪ್ಲವಃ ।
ಅನೇನ ಪ್ಲಾವಿತಂ ಭೂತಗ್ರಾಮಂ ಸಂಚಿಂತಯೇತ್ಪರಂ ॥ ೪೨ ॥

---

೩೯. ಬಳಿಕ ಜಲಾಖ್ಯಭೂತವನ್ನು ದಹಿಸಿ ಪೃಥಿವಿಯೆಂಬ ಭೂತವನ್ನು ದಹಿಸಬೇಕು. ತರುವಾಯ ಆ ಪಂಚಭೂತಗಳನ್ನಾಶ್ರಯಿಸಿರುವ ಗುಣಗಳನ್ನು ಸುಟ್ಟು, ಅನಂತರ ಗುಣಾತ್ಮಕ ದೇಹವನ್ನು ಸುಡಬೇಕು.

೪೦-೪೧. ಈ ಪ್ರಕಾರವಾಗಿ ದೇಹಿಯಾದ ಆತ್ಮನು ಭೂತಾದಿಯನ್ನು ಜ್ಞಾನವೆಂಬ ಬೆಂಕಿಯಿಂದ ದಹನಮಾಡಿ ಶಿಖೆಯ ಮಧ್ಯದಲ್ಲಿರುವ ಉತ್ಕೃಷ್ಟಾನಂದಪೂರ್ಣನಾದ ವಿಷ್ಣುವನ್ನೂ, ಅಮೃತಬಿಂದುಯುಕ್ತವಾದ ಶಿವನ ಅವಯವಗಳಿಂದ ಆವಿರ್ಭೂತವಾದ ಕಿರಣಗಳಿಂದ ನಿಷ್ಪನ್ನವು, ಚಂದ್ರಕಿರಣಸಮಾನವೂ ಆದ ಕಿರಣವುಳ್ಳ ಶಿವನನ್ನೂ ಸಹ ಧ್ಯಾನಿಸಬೇಕು.

೪೨. ಅದರಿಂದ ಜ್ವಾಲೆಯು ಚಂದ್ರಕಿರಣದಂತೆ ಅತ್ಯಂತ ಶೀತಲವಾಗಿ ಶಾಂತವಾಗುವುದು. ಬೀರಿದ ಅಮೃತಪ್ರಭೆಗಳಿಂದ ಭೂತಸಂಘವು ನಿಬಿಡವಾಗಿ ವ್ಯಾಪ್ತವಾಗುವುದು. ಹೀಗೆ ಅಮೃತದಲ್ಲಿ ಮುಳುಗಿ ಭೂತಗ್ರಾಮವು ಉತ್ಕೃಷ್ಟವಾಗುವುದೆಂದು ಚಿಂತಿಸಬೇಕು.

ಇತ್ಥಂ ಕೃತ್ವಾ ಭೂತಶುದ್ಧಿಂ ಕ್ರಿಯಾರ್ಹೋ ।
ಮರ್ತ್ಯಃ ಶುದ್ಧೋ ಜಾಯತೇ ಹ್ಯೇವ ಸದ್ಯಃ ।
ಪೂಜಾಂ ಕರ್ತುಂ ಜಪ್ಯಕರ್ಮಾಪಿ ಪಶ್ಚಾತ್ ।
ಏವಂ ಧ್ಯಾಯೇದ್ಬ್ರಹ್ಮಹತ್ಯಾದಿ ಶುದ್ಧ್ಯೈ　　　　॥ ೪೩ ॥

ಏವಂ ಧ್ಯಾತ್ವಾ ಚಂದ್ರದೀಪ್ತಿಪ್ರಕಾಶಂ ।
ಧ್ಯಾನೇನಾರೋಪ್ಯಾಶು ಲಿಂಗೇ ಶಿವಸ್ಯ ।
ಸದಾಶಿವಂ ದೀಪಮಧ್ಯೇ ವಿಚಿಂತ್ಯ ।
ಪಂಚಾಕ್ಷರೇಣಾರ್ಚನಮವ್ಯಯಂ ತು　　　　॥ ೪೪ ॥

ಆವಾಹನಾದೀನುಪಚಾರಾಂಸ್ತಥಾಪಿ
ಕೃತ್ವಾ ಸ್ನಾನಂ ಪೂರ್ವವಚ್ಛಂಕರಸ್ಯ
ಔದುಂಬರಂ ರಾಜತಂ ಸ್ವರ್ಣಪೀಠಂ ।
ವಸ್ತ್ರಾದಿಛನ್ನಂ ಸರ್ವಮೇವೇಹ ಪೀಠಂ　　　　॥ ೪೫ ॥

---

೪೩. ಈ ರೀತಿ ಭೂತಶುದ್ಧಿಯನ್ನು ಮಾಡಿ ಪರಿಶುದ್ಧನಾದ ಮನುಷ್ಯನೇ ಪೂಜೆ, ಜಪ ಮುಂತಾದ ಕರ್ಮಗಳನ್ನಾಚರಿಸಲರ್ಹನಾಗುವನು. ಅನಂತರ ಬ್ರಹ್ಮಹತ್ಯೆ ಮುಂತಾದ ಉತ್ಕಟಪಾಪಗಳನ್ನು ಪರಿಹರಿಸಿಕೊಳ್ಳಲು ಈ ಪ್ರಕಾರ ಧ್ಯಾನಮಾಡಬೇಕು.

೪೪. ಈ ರೀತಿಯಾಗಿ ಚಂದ್ರಪ್ರಕಾಶದಂತೆ ಹೊಳೆಯುತ್ತಿರುವ ಶಿವನನ್ನು ಶೀಘ್ರವಾಗಿ ಧ್ಯಾನದಿಂದ ಅಂಗದಲ್ಲಿ ಆರೋಪಿಸಿ, ದೀಪಮಧ್ಯದಲ್ಲಿ ಸದಾಶಿವನನ್ನು ಚಿಂತಿಸಿ ಪಂಚಾಕ್ಷರಮಂತ್ರದಿಂದ ನಾಶರಹಿತನಾದ ಈಶ್ವರನನ್ನು ಪೂಜಿಸಬೇಕು.

೪೫. ಪೂಜೆಯ ವಿಧಾನ:—ಆವಾಹನೆ ಮುಂತಾದ ಉಪಚಾರಗಳನ್ನು ಮಾಡಿ ಪೂರ್ವೋಕ್ತಪ್ರಕಾರ ಶಂಕರನಿಗೆ ಸ್ನಾನಮಾಡಿಸಿ, ಅತ್ತಿಮರ, ಬೆಳ್ಳಿ, ಬಂಗಾರಗಳಿಂದ ನಿರ್ಮಿತವಾದ ಪೀಠಗಳನ್ನು ಕಲ್ಪಿಸಿ ಅದರಮೇಲೆ ಬಟ್ಟೆಯನ್ನು ಹೊದಿಸಬೇಕು.

ಅಂತೇ ಕೃತ್ವಾ ಬುದ್ಬುದಾನಾಂ ಚ ವೃಷ್ಟಿಂ
ಪೀಠೇ ಪೀಠೇ ನಾಗಮೇಕಂ ಪುರಸ್ತಾತ್ ।
ಕುರ್ಯಾತ್ಪೀಠೇ ಚೋರ್ಧ್ವಕೇ ನಾಗಯುಗ್ಮಂ
ದೇವಾಭ್ಯಾಶೇ ದಕ್ಷಿಣೇ ವಾಮತಶ್ಚ ॥ ೪೬ ॥

ಜಪಾಪುಷ್ಪಂ ನಾಗಮಧ್ಯೇ ನಿಧಾಯ
ಮಧ್ಯೇ ವಸ್ತ್ರಂ ಡ್ವಾದಶಸ್ವಾತಿಗುಣ್ಯೇ ।
ಸುಶ್ವೇತೇನ ತಸ್ಯ ಮಧ್ಯೇ ಮಹೇಶಂ ।
ಲಿಂಗಾಕಾರಂ ಪೀಠಯುಕ್ತಂ ಪ್ರಪೂಜ್ಯಂ ॥ ೪೭ ॥

ಏವಂ ಕೃತ್ವಾ ಸಾಧಕಾಸ್ತೇತು ಸರ್ವೇ
ದತ್ವಾ ದತ್ವಾ ಪಂಚಗಂಧಾಷ್ಟಗಂಧಂ ।
ಪುಷ್ಪೈಃ ಪತ್ರೈಃ ಶೀತಲೈರಕ್ಷತೈಶ್ಚ
ತಿಲೋನ್ಮಿಶ್ರೈಃ ಕೇವಲೈಶ್ಚ ಪ್ರಪೂಜ್ಯ ॥ ೪೮ ॥

---

೪೬. ಅಲ್ಲಿ ಶಂಕರನನ್ನು ಸ್ಥಾಪಿಸಿ ಮೇಲಿನಿಂದ ಜಲಬಿಂದುಗಳು ಬೀಳುವಂತೆ ಮಾಡಿ ಪ್ರತಿಯೊಂದು ಪೀಠದ ಮುಂಭಾಗದಲ್ಲಿಯೂ ಒಂದೊಂದು ಸರ್ಪವನ್ನು ರಚಿಸಬೇಕು. ಮೇಲಿನಪೀಠದಲ್ಲಿ ದೇವರಿಗೆ ಸಮೀಪವಾಗಿ ಬಲ ಎಡ ಪಾರ್ಶ್ವಗಳಲ್ಲಿ ಒಂದೊಂದರಂತೆ ಎರಡು ಸರ್ಪಗಳನ್ನು ರಚಿಸಬೇಕು.

೪೭. ಆ ಸರ್ಪಗಳ ಮಧ್ಯದಲ್ಲಿ ಕೆಂಪುದಾಸವಾಳದ ಹೂವನ್ನಿಟ್ಟು ಅದರ ಮಧ್ಯದಲ್ಲಿ ಹನ್ನೆರಡು ಪದರ ಮಡಿಸಿದ ಶುಕ್ಲವಸ್ತ್ರವನ್ನು ಸ್ಥಾಪಿಸಿ ಅದರ ಮಧ್ಯದಲ್ಲಿ ಲಿಂಗಾಕಾರನಾದ ಮಹೇಶ್ವರನನ್ನು ಪೀಠಸಹಿತವಾಗಿ ಪೂಜಿಸಬೇಕು.

೪೮. ಈ ರೀತಿ ಪೂಜೆಮಾಡಿ ಸಾಧಕರೆಲ್ಲರೂ ಪಂಚಗಂಧ, ಅಷ್ಟಗಂಧಗಳನ್ನು ಸಮರ್ಪಿಸಿ ಪುಷ್ಪ, ಪತ್ರೆ, ಅಕ್ಷತೆ, ಪುಷ್ಪಮಿಶ್ರಿತವಾದ ಅಕ್ಷತೆ ಇವುಗಳಿಂದ ಪೂಜಿಸಿದರು.

ಧೂಪಂ ದತ್ವಾ ವಿಧಿವತ್ಸಂಪ್ರಯುಕ್ತಂ
ದೀಪಂ ದತ್ವಾ ಚೋಕ್ತಮೇವೋಪಹಾರಂ ।
ಪೂಜಾಶೇಷಂ ತೇ ಸಮಾಪ್ಯಾಥ ಸರ್ವೇ
ಗೀತಂ ನೃತ್ಯಂ ತತ್ರ ತತ್ರಾಪಿ ಚಕ್ರುಃ ॥ ೪೯ ॥

ಕಾಲೇ ಚಾಸ್ಮಿನ್ ಸುವ್ರತೇ ಗೌತಮಸ್ಯ ।
ಶಿಷ್ಯಃ ಪ್ರಾಪ್ತಃ ಶಂಕರಾತ್ಮೇತಿ ನಾಮ್ನಾ ॥ ೫೦ ॥

ಉನ್ಮತ್ತವೇಶೋ ದಿಗ್ವಾಸಾ ಅನೇಕಾಂ ವೃತ್ತಿಮಾಸ್ಥಿತಃ ।
ಕ್ವಚಿದ್ದ್ವಿಜಾತಿಪ್ರವರಃ ಕ್ವಚಿಚ್ಚಂಡಾಲಸನ್ನಿಭಃ ॥ ೫೧ ॥

ಕ್ವಚಿಚ್ಛೂದ್ರಸಮೋ ಯೋಗೀ ತಾಪಸಃ ಕ್ವಚಿದಪ್ಯುತ ।
ಗರ್ಜಯತ್ಯುತ್ಪತತೇ ಚೈವ ನೃತ್ಯತಿ ಸ್ತೌತಿ ಗಾಯತಿ ॥ ೫೨ ॥

---

೪೯. ಧೂಪಾರತಿ ಮಾಡಿ, ವಿಧಾನೋಕ್ತಪ್ರಕಾರ ದೀಪವನ್ನರ್ಪಿಸಿ, ಹಿಂದೆ ಹೇಳಿದ ನೈವೇದ್ಯವನ್ನೂ ಸಮರ್ಪಿಸಿ, ಉಳಿದ ಪೂಜಾವಿಧಾನವನ್ನು ಮುಗಿಸಿಕೊಂಡು ಅನಂತರ ಎಲ್ಲರೂ ಗಾನ ನೃತ್ಯಗಳನ್ನು ಮಾಡಿದರು.

೫೦. ಗೌತಮನ ಸಮೀಚೀನವಾದ ಈ ವ್ರತವು ನಡೆಯುತ್ತಿರುವ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಶಂಕರಾತ್ಮನೆಂದು ಹೆಸರುಳ್ಳ ಗೌತಮನ ಶಿಷ್ಯನು ಬಂದನು.

೫೧. ಅವನು ಹುಚ್ಚನಂತೆ ವೇಷಧಾರಿಯು, ದಿಗಂಬರನೂ ಆಗಿ ಅನೇಕ ವ್ಯಾಪಾರಗಳನ್ನು ಮಾಡುತ್ತಿದ್ದನು. ಕೆಲವು ಸ್ಥಳಗಳಲ್ಲಿ ದ್ವಿಜಶ್ರೇಷ್ಠನಂತೆಯೂ ಇತರ ಕೆಲವೆಡೆಗಳಲ್ಲಿ ಚಂಡಾಲನಿಗೆ ಸಮಾನನಾಗಿಯೂ ವರ್ತಿಸುತ್ತಿದ್ದನು.

೫೨. ಕೆಲವು ಕಡೆ ಶೂದ್ರನಂತೆಯೂ, ಇನ್ನು ಕೆಲವು ಸ್ಥಳಗಳಲ್ಲಿ ತಪೋನಿಷ್ಠನಾದ ಯೋಗಿಯಂತೆಯೂ ವರ್ತಿಸುತ್ತಾ ಕೆಲವು ವೇಳೆಯಲ್ಲಿ ಕೂಗುತ್ತಾ ಇನ್ನೊಂದು ವೇಳೆಯಲ್ಲಿ ಕುಣಿಯುತ್ತಾ. ನೆಗೆಯುತ್ತಾ, ಸ್ತುತಿಸುತ್ತಾ ಗಾನಮಾಡುತ್ತಿದ್ದನು.

ರೋದಿತಿ ಶೃಣುತೇ ವ್ಯಕ್ತಂ ಪತತ್ಯುತ್ತಿಷ್ಠತಿ ಕ್ವಚಿತ್ ।
ಶಿವಜ್ಞಾನೈಕಸಂಪನ್ನಃ ಪರಮಾನಂದನಿರ್ಭರಃ ॥ ೫೩ ॥

ಸಂಪ್ರಾಪ್ತೋ ಭೋಜ್ಯವೇಲಾಯಾಂ ಗೌತಮಸ್ಯಾಂತಿಕಂ ಯಯೌ ।
ಬುಭುಜೇ ಗುರುಣಾ ಸಾಕಂ ಕ್ವಚಿದುಚ್ಛಿಷ್ಟಮೇವ ಚ ॥ ೫೪ ॥

ಕ್ವಚಿಲ್ಲಿಹತಿ ತತ್ಪಾತ್ರಂ ತೂಷ್ಣೀಮೇವಾಭ್ಯಗಾತ್ ಕ್ವಚಿತ್ ।
ಹಸ್ತಂ ಗೃಹೀತ್ವೈವ ಗುರೋಃ ಸ್ವಯಮೇವಾಭುನಕ್ಕ್ವಚಿತ್ ॥ ೫೫ ॥

ಕ್ವಚಿದ್ಗೃಹಾಂತರೇ ಮೂತ್ರಂ ಕ್ವಚಿತ್ಕರ್ದಮಲೇಪನಂ ।
ಸರ್ವದಾ ತಂ ಗುರುರ್ದೃಷ್ಟ್ವಾ ಕರಮಾಲಂಬ್ಯ ಮಂದಿರಂ ॥ ೫೬ ॥

ಪ್ರವಿಶ್ಯ ಸ್ವೀಯಪೀಠೇ ತಮುಪವೇಶ್ಯಾಪ್ಯಭೋಜಯತ್ ।
ಸ್ವಯಂ ಚ ತಸ್ಯ ಪಾತ್ರೇಣ ಬುಭುಜೇ ಗೌತಮೋ ಮುನಿಃ ॥ ೫೭ ॥

---

೫೩. ಹೀಗೆಯೇ ಅಳುವುದು, ಕೇಳುವುದು, ಬಹಿರಂಗವಾಗಿ ಬೀಳುವುದು, ಏಳುವುದು ಮುಂತಾಗಿ ವಿಧವಿಧವಾಗಿ ಆಚರಿಸುತ್ತಾ ಪರಮೇಶ್ವರಜ್ಞಾನಮಾತ್ರನಿಷ್ಠೆಯಿಂದ ಪರಮಾನಂದಭರಿತನಾಗಿದ್ದನು.

೫೪. ಅವನು ಊಟದಹೊತ್ತಿಗೆ ಗೌತಮನ ಸಮೀಪಕ್ಕೆ ಬಂದು ಗುರುಗಳೊಡನೆ ಭೋಜನಮಾಡುತ್ತಿದ್ದನು. ಕೆಲವು ಸಂದರ್ಭಗಳಲ್ಲಿ ಎಂಜಲನ್ನು ತಿನ್ನುತ್ತಿದ್ದನು.

೫೫. ಕೆಲವು ಸಾರಿ ಎಂಜಲೆಲೆಯನ್ನು ನೆಕ್ಕುತ್ತಿದ್ದನು. ಕೆಲವು ವೇಳೆ ಸುಮ್ಮನೆ ಹೊರಟುಹೋಗುತ್ತಿದ್ದನು. ಕೆಲವು ಸಂದರ್ಭದಲ್ಲಿ ಗುರುಗಳಕೈಯನ್ನು ಹಿಡಿದು ನಿಲ್ಲಿಸಿ ತಾನೇ ಭೋಜನಮಾಡುತ್ತಿದ್ದನು.

೫೬-೫೭. ಕೆಲವು ಸಮಯಗಳಲ್ಲಿ ಮನೆಯೊಳಗೇ ಮೂತ್ರವಿಸರ್ಜನೆ ಮಾಡುತ್ತಿದ್ದನು. ಮೈಗೆ ಕೆಸರನ್ನು ಬಳಿದುಕೊಳ್ಳುವನು. ಗುರುವು ಅವನನ್ನು ನೋಡಿದಾಗಲೆಲ್ಲಾ ಕೈಹಿಡಿದು ಮನೆಯೊಳಕ್ಕೆ ಕರೆತಂದು ತನ್ನ ಪೀಠದಲ್ಲಿ ಕುಳ್ಳಿರಿಸಿ ಭೋಜನಮಾಡಿಸುತ್ತಿದ್ದನು. ಗೌತಮಮುನಿಯು ಅವನ ಎಲೆಯಲ್ಲಿಯೇ ಊಟಮಾಡುತ್ತಿದ್ದನು.

ತಸ್ಯ ಚಿತ್ತಂ ಪರಿಜ್ಞಾತುಂ ಕದಾಚಿದಥ ಸುಂದರೀ
ಅಹಲ್ಯಾ ಶಿಷ್ಯಮಾಹೂಯ ಭುಂಕ್ಷ್ವೇತಿ ಪ್ರಾಹ ತಂ ಮುದಾ ।
ನಿರ್ದಿಷ್ಟೋ ಗುರುಪತ್ನ್ಯಾ ತು ಬುಭುಜೇ ಸೋಽವಿಶೇಷತಃ　　॥ ೫೮ ॥

ಯಥಾ ಪಾಪೌ ಹಿ ಪಾನೀಯಂ ತಥಾ ವಹ್ನಿಮಪಿ ದ್ವಿಜಃ ।
ಕಂಟಕಾನನ್ನವದ್ಭುಕ್ತ್ವಾ ಯಥಾ ಪೂರ್ವಮತಿಷ್ಠತ　　॥ ೫೯ ॥

ಪುರಾಹಿ ಮುನಿಕನ್ಯಾಭಿರಾಹೂತೋ ಭೋಜನಾಯ ಚ ।
ದಿನೇ ದಿನೇ ತತ್ಪ್ರದತ್ತಂ ಲೋಷ್ಟಮಂಬು ಚ ಗೋಮಯಂ　　॥ ೬೦ ॥

ಕರ್ದಮಂ ಕಾಷ್ಠದಂಡಂ ಚ ಭುಕ್ತ್ವಾ ಪೀತ್ವಾಥ ಹರ್ಷಿತಃ ।
ಏತಾದೃಶೋ ಮುನಿರಸೌ ಚಂಡಾಲಸದೃಶಾಕೃತಿಃ　　॥ ೬೧ ॥

---

೫೮. ಅವನ ಮನಸ್ಸನ್ನು ತಿಳಿಯಬೇಕೆಂದು ಒಂದಾನೊಂದು ದಿನ ಸುಂದರಿಯಾದ ಅಹಲ್ಯೆಯು ಶಿಷ್ಯನನ್ನು ಕರೆದು ಭೋಜನಮಾಡೆಂದು ಸಂತೋಷದಿಂದ ಹೇಳಿದಳು. ಗುರುಪತ್ನಿಯಿಂದ ಹೇಳಿಸಿಕೊಳ್ಳಲ್ಪಟ್ಟ ಆ ಶಿಷ್ಯನು ಎಂದಿನಂತೆ ಊಟಮಾಡಿದನು.

೫೯. ಆಗ ನೀರನ್ನು ಕುಡಿದಂತೆ ಬೆಂಕಿಯನ್ನೂ ಸಹ ಪಾನಮಾಡಿದನು. ಮುಳ್ಳುಗಳನ್ನೂ ಅನ್ನದಂತೆ ತಿಂದನು. ಆದರೂ ಅವನು ಒಂದೇ ವಿಧವಾಗಿದ್ದನು.

೬೦–೬೧. ಅವನು ಪೂರ್ವದಲ್ಲಿ ಮುನಿಕನ್ಯೆಯರಿಂದ ಭೋಜನಕ್ಕೋಸ್ಕರ ಆಹೂತನಾಗಿ ದಿನದಿನದಲ್ಲಿಯೂ ಅವರು ಕೊಟ್ಟ ಕಟ್ಟಿಗೆ, ನೀರು, ಸಗಣಿ, ಕೆಸರು ಮತ್ತು ಕಾಷ್ಠದಂಡಗಳನ್ನು ತಿಂದು ಕುಡಿದು ಸಂತೋಷವಾಗಿಯೇ ಇರುತ್ತಿದ್ದನು.

ಸುಜೀರ್ಣೋಪಾನಹೌ ಹಸ್ತೇ ಗೃಹೀತ್ವಾ ಪ್ರಲಪನ್ಹಸನ್ ।
ಅಂತ್ಯಜೋಚಿತಭಾಷಾಭಿರ್ವೃಷಪರ್ವಾಣಮಭ್ಯಗಾತ್ ॥ ೬೨ ॥

ವೃಷಪರ್ವೇಶಯೋರ್ಮಧ್ಯೇ ದಿಗ್ವಾಸಾಃ ಸಮತಿಷ್ಠತ ।
ವೃಷಪರ್ವಾ ತಮಜ್ಞಾತ್ವಾ ಪೀಡಯಿತ್ವಾ ಶಿರೋಚ್ಛಿನತ್ ॥ ೬೩ ॥

ಹತೇ ತಸ್ಮಿನ್ದ್ವಿಜಶ್ರೇಷ್ಠೇ ಜಗದೇತಚ್ಚರಾಚರಂ ।
ಅತೀವ ಕಲುಷಂ ಹ್ಯಾಸೀತ್ತತ್ರಸ್ಥಾ ಮುನಯಸ್ತಥಾ ॥ ೬೪ ॥

ಗೌತಮಸ್ಯ ಮಹಾಶೋಕಃ ಸಂಜಾತಃ ಸುಮಹಾತ್ಮನಃ ।
ನಿರ್ಯಯೌ ಚಕ್ಷುಷೋ ವಾರಿ ಶೋಕಂ ಸಂದರ್ಶಯನ್ನಿವ ॥ ೬೫ ॥

ಗೌತಮಃ ಸರ್ವದೈತ್ಯಾನಾಂ ಸನ್ನಿಧೌ ವಾಕ್ಯಮುಕ್ತವಾನ್ ।
ಕಿಮನೇನ ಕೃತಂ ಪಾಪಂ ಯೇನ ಛಿನ್ನಮಿದಂ ಶಿರಃ ॥ ೬೬ ॥

---

೬೧-೬೨. ಇಂತಹ ಈ ಮುನಿಯು ಚಂಡಾಲನಂತೆ ವೇಷವನ್ನು ಧರಿಸಿ ಹಳೆಯ ಎಕ್ಕಡಗಳನ್ನು ಕೈಯಲ್ಲಿ ಹಿಡಿದುಕೊಂಡು ಪ್ರಲಾಪಹಾಸಗಳನ್ನು ಮಾಡುತ್ತಾ ಅಂತ್ಯಜರಂತೆ ಮಾತನಾಡುತ್ತಾ ವೃಷಪರ್ವನ ಹತ್ತಿರಕ್ಕೆ ಬಂದನು.

೬೩. ವೃಷಪರ್ವ ಮತ್ತು ಈಶ್ವರರ ಮಧ್ಯದಲ್ಲಿ ದಿಗಂಬರನಾಗಿ ನಿಂತುಕೊಂಡನು. ವೃಷಪರ್ವನು ತಿಳಿಯದೆ ಅವನನ್ನು ಹಿಂಸಿಸಿ, ತಲೆಯನ್ನು ಕತ್ತರಿಸಿದನು.

೬೪. ಆ ದ್ವಿಜವರ್ಯನು ಸಾಯಲು ಚರಾಚರಾತ್ಮಕ ಪ್ರಪಂಚವು ಮತ್ತು ಅಲ್ಲಿದ್ದ ಮುನಿಗಳೂ ಸಹ ಅತ್ಯಂತ ದುಃಖಿತರಾದರು.

೬೫. ದೊಡ್ಡ ಮಹಾತ್ಮನಾದ ಗೌತಮನಿಗೆ ಮಹಾದುಃಖವಾಯಿತು. ದುಃಖವನ್ನು ತೋರಿಸುವವನಂತೆ ಕಣ್ಣಿನಿಂದ ನೀರು ಸುರಿಸಿದನು.

೬೬-೬೭. ಗೌತಮನು ಸಕಲ ದೈತ್ಯರ ಎದುರಿಗೆ ಹೀಗೆ ಹೇಳಿದನು:— ಈ ವೃಷಪರ್ವನು ನನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿದ್ದ ಸರ್ವದಾ ಶಿವಧ್ಯಾನ

ಮಮ ಪ್ರಾಣಾಧಿಕಸ್ಯೇಹ ಸರ್ವದಾ ಶಿವಯೋಗಿನಃ |
ಮಮಾಪಿ ಮರಣಂ ಸತ್ಯಂ ಶಿಷ್ಯಚ್ಛೇದ್ಯಾ ಯತೋ ಗುರುಃ || ೬೭ ||

ಶೈವಾನಾಂ ಧರ್ಮಯುಕ್ತಾನಾಂ ಸರ್ವದಾ ಶಿವವರ್ತಿನಾಂ |
ಮರಣಂ ಯತ್ರ ದೃಷ್ಟಂ ಸ್ಯಾತ್ತತ್ರ ನೋ ಮರಣಂ ಧ್ರುವಂ || ೬೮ ||

ತಚ್ಛ್ರುತ್ವಾ ಹ್ಯಸುರಾಚಾರ್ಯಃ ಶುಕ್ರಃ ಪ್ರಾಹ ವಿದಾಂವರಃ |
ಏನಂ ಸಂಜೀವಯಿಷ್ಯಾಮಿ ಭಾರ್ಗವಂ ಶಂಕರಪ್ರಿಯಂ || ೬೯ ||

ಕಿಮರ್ಥಂ ಮ್ರಿಯತೇ ಬ್ರಹ್ಮನ್ಪಶ್ಯ ಮೇ ತಪಸೋ ಬಲಂ |
ಇತಿ ವಾದಿನಿ ವಿಪ್ರೇಂದ್ರೇ ಗೌತಮೋಽಪಿ ಮಮಾರ ಹ || ೭೦ ||

ತಸ್ಮಿನ್ಮೃತೇಽಥ ಶುಕ್ರೋಽಪಿ ಪ್ರಾಣಾಂಸ್ತತ್ಯಾಜ ಯೋಗತಃ |
ತಸ್ಯೈವಂ ಹತಿಮಾಜ್ಞಾಯ ಪ್ರಹ್ಲಾದಾದ್ಯಾ ದಿತೀಶ್ವರಾಃ || ೭೧ ||

---

ನಿರತನಾದ ಶಂಕರಾತ್ಮಮುನಿಯ ತಲೆಯನ್ನು ಕತ್ತರಿಸಿ ಎಂತಹ ಪಾಪಕೃತ್ಯವನ್ನು ಮಾಡಿರುವನು! ಗುರುವು ಶಿಷ್ಯರೂಪದಿಂದಿರುವನು. ಆದುದರಿಂದ ಶಿಷ್ಯನು ಸತ್ತಮೇಲೆ ಗುರುವಾದ ನನಗೂ ಮರಣವು ನಿಯತವು.

೬೮. ಸರ್ವದಾ ಶಿವನಿಷ್ಠರು, ಧಾರ್ಮಿಕರೂ ಆದ ಶಿವಭಕ್ತರ ಮರಣವು ಕಂಡಲ್ಲಿ ನಮಗೂ ಮರಣವು ನಿಶ್ಚಿತವು.

೬೯–೭೦. ದೈತ್ಯಗುರುವು, ಜ್ಞಾನಿವರ್ಯನೂ ಆದ ಶುಕ್ರಾಚಾರ್ಯನು ಅದನ್ನು ಕೇಳಿ "ಶಂಕರಪ್ರಿಯನಾದ, ಭೃಗುಕುಲದಲ್ಲಿ ಹುಟ್ಟಿದ ಈ ಮುನಿಯನ್ನು ಬದುಕಿಸುವೆನು. ಬ್ರಾಹ್ಮಣನೇತಕ್ಕೆ ಸಾಯುವೆ? ನನ್ನ ತಪಶ್ಶಕ್ತಿಯನ್ನು ನೋಡು" ಎಂದು ಹೇಳಿದನು. ಹೀಗೆ ಶುಕ್ರಾಚಾರ್ಯನು ಹೇಳುತ್ತಿರುವಾಗಲೇ ಗೌತಮನೂ ಸಹ ಸತ್ತನು.

೭೧-೭೨. ಅವನು ಸಾಯಲು ಕೂಡಲೇ ಶುಕ್ರನೂ ಸಹ ಯೋಗಶಕ್ತಿಯಿಂದ ಪ್ರಾಣಗಳನ್ನು ಬಿಟ್ಟನು. ಈ ರೀತಿಯಾಗಿ ಅವನು ಸತ್ತುದನ್ನು

ದೇವಾ ನೃಪಾ ದ್ವಿಜಾಃ ಸರ್ವೇ ಮೃತಾ ಆಸಂಸ್ತದದ್ಭುತಂ ।
ಮೃತಮಾಸೀದಥ ಬಲಂ ತಸ್ಯ ಬಾಣಸ್ಯ ಧೀಮತಃ ॥ ೭೨ ॥

ಅಹಲ್ಯಾ ಶೋಕಸಂತಪ್ತಾ ರುರೋದೋಚ್ಚೈಃ ಪುನಃ ಪುನಃ ।
ಗೌತಮೇನ ಮಹೇಶಸ್ಯ ಪೂಜಯಾ ಪೂಜಿತೋ ವಿಭುಃ ॥ ೭೩ ॥

ವೀರಭದ್ರೋ ಮಹಾಯೋಗೀ ಸರ್ವಂ ದೃಷ್ಟ್ವಾ ಚುಕೋಪ ಹ ।
ಅಹೋ ಕಷ್ಟಮಹೋ ಕಷ್ಟಂ ಮಾಹೇಶಾ ಬಹವೋ ಹತಾಃ ॥ ೭೪ ॥

ಶಿವಂ ವಿಜ್ಞಾಪಯಿಷ್ಯಾಮಿ ತೇನೋಕ್ತಂ ಕರವಾಣ್ಯಥ ।
ಇತಿ ನಿಶ್ಚಿತ್ಯ ಗತವಾನ್ಮಂದರಾಚಲಮವ್ಯಯಂ ॥ ೭೫ ॥

ನಮಸ್ಕೃತ್ವಾ ವಿರೂಪಾಕ್ಷಂ ವೃತ್ತಂ ಸರ್ವಮಥೋಕ್ತವಾನ್ ।
ಬ್ರಹ್ಮಾಣಂ ಚ ಹರಿಂ ತತ್ರ ಸ್ಥಿತೌ ಪ್ರಾಹ ಶಿವೋ ವಚಃ ॥ ೭೬ ॥

---

ತಿಳಿದು ಪ್ರಹ್ಲಾದ ಮುಂತಾದರಾಜರು, ದೇವತೆಗಳು, ನೃಪರು, ದ್ವಿಜರು ಮುಂತಾಗಿ ಎಲ್ಲರೂ ಸತ್ತರು. ಅದು ಆಶ್ಚರ್ಯಕರ! ಅನಂತರ ಬುದ್ಧಿವಂತ ನಾದ ಬಾಣನ ಸೈನ್ಯವು ಹಾಳಾಯಿತು.

೭೩-೭೪. ಅಹಲ್ಯೆಯು ದುಃಖದಿಂದ ತಪಿಸುತ್ತಾ ಪುನಃ ಪುನಃ ಗಟ್ಟಿ ಯಾಗಿ ಅತ್ತಳು. ಮಹೇಶ್ವರನ ಪೂಜೆಮಾಡಿ ಗೌತಮನಿಂದ ಸತ್ಕೃತನಾದ ಸಮರ್ಥನಾದ ವೀರಭದ್ರಮಹಾಯೋಗಿಯು ಇವೆಲ್ಲವನ್ನೂ ನೋಡಿ ಕುಪಿತ ನಾದನು. ಅಯ್ಯೋ ಕಷ್ಟ! ಅಯ್ಯೋ ಕಷ್ಟ! ಮಹೇಶ್ವರನ ಭಕ್ತರಾದ ಬಹು ಜನರು ಸತ್ತರು.

೭೫. ಈಶ್ವರನಿಗೆ ಇದನ್ನು ವಿಜ್ಞಾಪಿಸುವೆನು. ಅನಂತರ ಅವನು ಹೇಳಿದಂತೆ ಮಾಡುವೆನು ಎಂಬುದಾಗಿ ನಿಶ್ಚಯಿಸಿ ಅವ್ಯಯವಾದ ಮಂದರಾ ಚಲಕ್ಕೆ ಹೋದನು.

೭೬. ಅಲ್ಲಿ ವಿರೂಪಾಕ್ಷನನ್ನು ನಮಸ್ಕರಿಸಿ ನಡೆದ ವೃತ್ತಾಂತವನ್ನೆಲ್ಲಾ ಹೇಳಿದನು. ಆಗ ಶಿವನು ಅಲ್ಲಿದ್ದ ಬ್ರಹ್ಮ, ವಿಷ್ಣುಗಳನ್ನು ಕುರಿತು ಹೀಗೆ ಹೇಳಿದನು.

ಮದ್ಭಕ್ತೈಃ ಸಾಹಸಂ ಕರ್ಮ ಕೃತಂ ಜ್ಞಾತ್ವಾ ವರಪ್ರದಂ ।
ಗತ್ವಾ ಪಶ್ಯಾಮಹೇ ವಿಷ್ಣೋ ಸರ್ವಂ ತತ್ಕೃತಸಾಹಸಂ　　　　॥ ೭೭ ॥

ಇತ್ಯುಕ್ತ್ವಾ ವೃಷಮಾರುಹ್ಯ ವಾಯುನಾ ಧೂತಚಾಮರಃ ।
ನಂದಿಕೇನ ಸುವೇಷೇಣ ಧೃತೇ ಛತ್ರೇऽತಿಶೋಭನೇ　　　　॥ ೭೮ ॥

ಸುಶ್ವೇತೇ ಹೇಮದಂಡೇ ಚ ನಾನ್ಯಯೋಗ್ಯೇ ಧೃತೇ ವಿಭೋಃ ।
ಮಹೇಶಾನುಮತಿಂ ಲಬ್ಧ್ವಾ ಹರಿರ್ನಾಗಾಂತಕೇ ಸ್ಥಿತಃ　　　　॥ ೭೯ ॥

ಆರಕ್ತನೀಲಛತ್ರಾಭ್ಯಾಂ ಶುಶುಭೇ ಲಕ್ಷ್ಮಕೌಸ್ತುಭಃ ।
ಶಿವಾನುಮತ್ಯಾ ಬ್ರಹ್ಮಾಪಿ ಹಂಸಾರೂಢೋऽಭವತ್ತದಾ　　　　॥ ೮೦ ॥

---

೭೭. "ವಿಷ್ಣುವೇ ! ನನ್ನ ಭಕ್ತರು ಮಾಡಿರುವ ಸಾಹಸಕೃತ್ಯವನ್ನು ನೋಡಿದೆಯಾ ? ನಾವೆಲ್ಲರೂ ಅಲ್ಲಿಗೆ ಹೋಗಿ ಆ ಸಾಹಸಕೃತ್ಯವನ್ನೆಲ್ಲಾ ನೋಡಿ ಅದು ವರಯೋಗ್ಯವಾಗಿದ್ದಲ್ಲಿ ಅನುಗ್ರಹಿಸೋಣ" ಎಂದು ಈಶ್ವರನು ಹೇಳಿದನು.

೭೮-೭೯. ಹೀಗೆ ಹೇಳಿ ಶಿವನು ವೃಷಭದಮೇಲೆ ಕುಳಿತು ಹೊರಟನು. ಮರುತ್ತು ಚಾಮರವನ್ನು ಹಿಡಿದು ಹಿಂಬಾಲಿಸಿದನು. ಒಳ್ಳೆಯ ವೇಷವನ್ನು ಧರಿಸಿದ ನಂದಿಕೇಶ್ವರನು ಇತರರಿಗೆ ಯೋಗ್ಯವಲ್ಲದ, ಬಂಗಾರದ ದಂಡವುಳ್ಳ ಅತ್ಯಂತ ಮಂಗಳಪ್ರದವಾದ ಶ್ವೇತಛತ್ರಗಳನ್ನು ಹಿಡಿದು ಹೊರಟನು.

೭೯-೮೦. ವಿಷ್ಣುವೂ ಸಹ ಮಹೇಶನ ಅಪೇಕ್ಷೆಯಂತೆ ಗರುಡಾರೂಢನಾಗಿ ಕೆಂಪು ನೀಲ ಛತ್ರಿಗಳಿಂದಲೂ, ಕೌಸ್ತುಭಮಣಿಯಿಂದಲೂ ಅಲಂಕೃತನಾಗಿ ಹೊರಟನು.

೮೦-೮೧. ಶಿವನು ಹೇಳಿದಂತೆ ಬ್ರಹ್ಮನೂ ಸಹ ಹಂಸಾರೂಢನಾಗಿ ಸಿದ್ಧನಾದನು. ಅವನು ಇಂದ್ರನೀಲಮಣಿ ಮತ್ತು ಚಂದ್ರನಂತಿರುವ ಛತ್ರ

ಇಂದ್ರಗೋಪಪ್ರಭಾಕಾರಛತ್ರಾಭ್ಯಾಂ ಶುಶುಭೇ ವಿಧಿಃ ।
ಇಂದ್ರಾದಿ ಸರ್ವದೇವಾಶ್ಚ ಸ್ವಸ್ವವಾಹನಸಂಯುತಾಃ ॥ ೮೧ ॥

ಅಥ ತೇ ನಿರ್ಯಯುಃ ಸರ್ವೇ ನಾನಾವಾದ್ಯಾನುನೋದಿತಾಃ ।
ಕೋಟಿಕೋಟಿಗಣಾಕೀರ್ಣಾಃ ಗೌತಮಸ್ಯಾಶ್ರಮಂ ಗತಾಃ ॥ ೮೨ ॥

ಬ್ರಹ್ಮವಿಷ್ಣುಮಹೇಶಾನಾ ದೃಷ್ಟ್ವಾ ತತ್ಪರಮಾದ್ಭುತಂ ।
ಸ್ವಭಕ್ತಂ ಜೀವಯಾಮಾಸ ವಾಮಕೋಣನಿರೀಕ್ಷಣಾತ್ ॥ ೮೩ ॥

ಶಂಕರೋ ಗೌತಮಂ ಪ್ರಾಹ ತುಷ್ಟೋಽಹಂ ತೇ ವರಂ ವೃಣು ।
ತದಾಕರ್ಣ್ಯ ವಚಸ್ತಸ್ಯ ಗೌತಮಃ ಪ್ರಾಹ ಸಾದರಂ ॥ ೮೪ ॥

---

ಗಳಿಂದ ಶೋಭಿಸುತ್ತಿದ್ದನು. ಇಂದ್ರಾದಿ ಸಕಲ ದೇವತೆಗಳೂ ತಮ್ಮ ತಮ್ಮ ವಾಹನಾರೂಢರಾಗಿ ಹೊರಟರು.

೮೨. ಹೀಗೆ ಅವರೆಲ್ಲರೂ ನಾನಾವಾದ್ಯಗಳನ್ನು ಮಾಡಿಸಿಕೊಂಡು ಕೋಟ್ಯಂತರ ಪರಿವಾರಗಣಯುಕ್ತರಾಗಿ ಹೊರಟು ಗೌತಮರ ಆಶ್ರಮಕ್ಕೆ ಬಂದರು.

೮೩. ಬ್ರಹ್ಮ ವಿಷ್ಣು ಮಹೇಶ್ವರರು ಆ ಪರಮಾದ್ಭುತವನ್ನು ನೋಡಿದರು. ಶಂಕರನು ಎಡಗಡೆಯ ಮೂಲೆಯಲ್ಲಿ ದೃಷ್ಟಿಪ್ರಸಾರಮಾಡಿ ತನ್ನ ಭಕ್ತನನ್ನು ಬದುಕಿಸಿದನು.

೮೪. ಶಂಕರನು "ನಾನು ನಿನಗೆ ಪ್ರಸನ್ನನಾಗಿರುವೆನು; ವರವನ್ನು ಕೇಳು" ಎಂದು ಗೌತಮನಿಗೆ ಹೇಳಿದನು. ಆ ಮಾತನ್ನು ಕೇಳಿ ಗೌತಮನು ಭಕ್ತಿಯಿಂದ ಹೀಗೆ ಹೇಳಿದನು.

ಯದಿ ಪ್ರಸನ್ನೋ ದೇವೇಶ ಯದಿ ದೇಯೋ ವರೋ ಮಮ ।
ತ್ವಲ್ಲಿಂಗಾರ್ಚನಸಾಮರ್ಥ್ಯಂ ನಿತ್ಯಮಸ್ತು ಮಮೇಶ್ವರ ॥ ೮೫ ॥

ವೃತಮೇತನ್ಮಯಾ ದೇವ ತ್ರಿನೇತ್ರ ಶೃಣು ಚಾಪರಂ ।
ಶಿಷ್ಯೋಯಂ ಮೇ ಮಹಾಭಾಗೋ ಹೇಯಾಽಹೇಯಾದಿವರ್ಜಿತಃ ॥ ೮೬ ॥

ಪ್ರೇಕ್ಷಣೀಯಂ ಮಮತ್ವೇನ ನ ಚ ಪಶ್ಯತಿ ಚಕ್ಷುಷಾ ।
ನಘ್ರಾಣಗ್ರಾಹ್ಯಂ ದೇವೇಶ ನ ಪಾತವ್ಯಂ ನ ಚೇತರತ್ ॥ ೮೭ ॥

ಇತಿ ಬುದ್ಧ್ಯಾ ತಥಾ ಕುರ್ವನ್ಸ ಹಿ ಯೋಗೀ ಮಹಾಯಶಾಃ ।
ಉನ್ಮತ್ತವಿಕೃತಾಕಾರಃ ಶಂಕರಾತ್ಮೇತಿ ಕೀರ್ತಿತಃ ॥ ೮೮ ॥

ನ ಕಶ್ಚಿತ್ತಂ ಪ್ರತಿ ದ್ವಿಷ್ಯಾನ್ನ ಚ ತಂ ಹಿಂಸಯೇದಪಿ ।
ಏತನ್ಮೇ ದೀಯತಾಂ ದೇವ ಮೃತಾನಾಮಮೃತಿಸ್ತಥಾ ॥ ೮೯ ॥

---

೮೫. ದೇವೇಶ್ವರನೇ! ನೀನು ಪ್ರಸನ್ನನಾಗಿ ವರವನ್ನು ಕೊಡುವುದೇ ಆದರೆ ನನಗೆ ಯಾವಾಗಲೂ ನಿನ್ನ ಲಿಂಗವನ್ನು ಪೂಜಿಸುವ ಸಾಮರ್ಥ್ಯವನ್ನು ದಯಪಾಲಿಸು.

೮೬-೮೭. ಇದೇ ನಾನು ಕೇಳಿಕೊಳ್ಳುವ ವರವು. ತ್ರಿನೇತ್ರನಾದ ದೇವನೇ! ಇನ್ನೊಂದನ್ನು ಕೇಳುವೆನು. ಧನ್ಯನಾದ ಇವನು ನನ್ನ ಶಿಷ್ಯನು, ಹೇಯ ಅಹೇಯವೆಂಬ ವಿಭಾಗವರ್ಜಿತನು, ಪ್ರೇಕ್ಷಣೀಯ ವಸ್ತುವನ್ನು ಮಮತೆಯಿಂದ ಕಣ್ತೆರದು ನೋಡುವುದಿಲ್ಲ, ಸುಗಂಧದ್ರವ್ಯವನ್ನು ಆಘ್ರಾಣಿಸುವುದಿಲ್ಲ, ಪೇಯವಸ್ತುವನ್ನು ಪಾನಮಾಡುವುದಿಲ್ಲ, ಇತರ ವಿಷಯಗಳನ್ನೂ ಭೋಗಿಸುವುದಿಲ್ಲ.

೮೮. ಹೀಗೆ ಇವನು ಬುದ್ಧಿಪೂರ್ವಕವಾಗಿ ವಿಷಯ ರಾಗವನ್ನು ಬಿಟ್ಟು ಯೋಗಿಯಾಗಿರುವನು. ಮಹಾಯಶಸ್ವಿಯು, ಉನ್ಮತ್ತನಂತೆ ವಿಕೃತಾಕಾರವುಳ್ಳವನು. ಶಂಕರಾತ್ಮ ಎಂದು ಇವನ ಹೆಸರು.

೮೯. ದೇವನೇ! ಅವನನ್ನು ಯಾರೂ ದ್ವೇಷಿಸಬಾರದು, ಯಾರೂ

ತತಚ್ಛ್ರುತ್ವೋಮಾಪತಿಃ ಪ್ರೀತೋ ನಿರೀಕ್ಷ್ಯ ಹರಿಮವ್ಯಯಃ ।
ಸ್ವಾಂಶೇನ ವಾಯುನಾ ದೇಹಮಾವಿಶಜ್ಜಗದೀಶ್ವರಃ ॥ ೯೦ ॥

ಹರಿರೂಪಃ ಶಂಕರಾತ್ಮಾ ಮಾರುತಿಃ ಕಪಿಸತ್ತಮಃ ।
ಪರ್ಯ್ಯಾಯೈರುಚ್ಯತೇ ಧೀಶಃ ಸಾಕ್ಷಾದ್ವಿಷ್ಣುಃ ಶಿವಃ ಪರಃ ॥ ೯೧ ॥

ಆಕಲ್ಪಮೇಷ ಪ್ರತ್ಯೇಕಂ ಕಾಮರೂಪಮುಪಾಶ್ರಿತಃ ।
ಮಮಾಜ್ಞಾಕಾರಕೋ ರಾಮಭಕ್ತಃ ಪೂಜಿತವಿಗ್ರಹಃ ॥ ೯೨ ॥

ಆಕಲ್ಪಮೇತೇ ಜೀವಂತು ತತೋಮುಕ್ತಿಂ ಭಜಂತು ಚ ।
ತ್ವಯಾ ಕೃತಮಿದಂ ವೇಶ್ಮ ವಿಸ್ತೃತಂ ಸುಪ್ರತಿಷ್ಠಿತಂ ॥ ೯೩ ॥

---

ಹಿಂಸಿಸಬಾರದು ಎಂಬುದೇ ನನ್ನ ಇನ್ನೊಂದು ವರವು. ಇದನ್ನು ನನಗೆ ದಯಪಾಲಿಸು ಮತ್ತು ಇಲ್ಲಿ ಸತ್ತಿರುವವರನ್ನೆಲ್ಲಾ ಬದುಕಿಸು ಎಂಬುದಾಗಿ ವರಗಳನ್ನು ಕೇಳಿಕೊಂಡನು.

೯೦. ಅದನ್ನು ಕೇಳಿ ನಾಶರಹಿತನು, ಜಗದೀಶ್ವರನೂ ಆದ ಉಮಾಪತಿಯು ಸಂತುಷ್ಟನಾಗಿ ಹರಿಯನ್ನು ನೋಡಿ ವಾಯ್ವಂಶದಿಂದ ದೇಹವನ್ನು ಪ್ರವೇಶಿಸಿದನು.

೯೧. ಶಂಕರಾತ್ಮನಾದ ಹರಿರೂಪವೇ ಮಾರುತಿ, ಕಪಿಸತ್ತಮ, ಧೀಶ, ವಿಷ್ಣು, ಶಿವ, ಪರ ಎಂಬ ಪರ್ಯಾಯ ಶಬ್ದಗಳಿಂದ ಸಾಕ್ಷಾತ್ತಾಗಿ ಉಕ್ತವಾಗುವುದು.

೯೨-೯೩. ಇವನು ಕಲ್ಪಮುಗಿಯುವವರೆಗೂ ತನಗೆ ಇಷ್ಟವಾದ ಬೇರೆ ಬೇರೆ ರೂಪವನ್ನು ತೆಗೆದುಕೊಂಡು ನನ್ನ ಅಪ್ಪಣೆಯಂತೆ ನಡಿಯುತ್ತಾ ವಿಗ್ರಹ ಪೂಜೆಯನ್ನು ಸ್ವೀಕರಿಸುತ್ತಾ ರಾಮಭಕ್ತನಾಗಿರಲಿ. ಇವರೂಕೂಡ ಕಲ್ಪಾವಸಾನದ ವರೆಗೂ ಬದುಕಿರಲಿ. ಬಳಿಕ ಮುಕ್ತಿಯನ್ನು ಹೊಂದಲಿ

ನಿತ್ಯಂ ವೈ ಸರ್ವರೂಪೇಣ ತಿಷ್ಠಾಮಃ ಕ್ಷಣಮಾದರಾತ್ |
ಸಮರ್ಚಿತಾಃ ಪ್ರಯಾಸ್ಯಾಮಃ ಸ್ವಸ್ವವಾಸಂ ತತಃ ಪರಂ ॥ ೯೪ ॥

ಅಥಾಬಭಾಷೇ ವಿಶ್ವೇಶಂ ಗೌತಮೋ ಮುನಿಪುಂಗವಃ |
ಅಯೋಗ್ಯಂ ಪ್ರಾರ್ಥಯಾಮೀಶ ಹ್ಯರ್ಥೀ ದೋಷಂ ನ ಪಶ್ಯತಿ ॥ ೯೫ ॥

ಬ್ರಹ್ಮಾದ್ಯಲಭ್ಯಂ ದೇವೇಶ ದೀಯತಾಂ ಯದಿ ರೋಚತೇ |
ಅಥೇಶೋ ವಿಷ್ಣುಮಾಲೋಕ್ಯ ಗೃಹೀತ್ವಾ ತತ್ಕರಂ ಕರೇ ॥ ೯೬ ॥

ಪ್ರಹಸನ್ನಂಬುಜಾಭಾಕ್ಷಮಿತ್ಯುವಾಚ ಸದಾಶಿವಃ |
ಕ್ಷುಧಾತೋಽಸಿ ಗೋವಿಂದ ದೇಯಂ ತೇ ಭೋಜನಂ ಕಿಮು ॥ ೯೭ ॥

ಸ್ವಯಂ ಪ್ರವಿಶ್ಯ ಯದಿ ವಾ ಸ್ವಯಂ ಭುಂಕ್ಷ್ವ ಸ್ವಗೇಹವತ್ |
ಗಚ್ಛ ವಾ ಪಾರ್ವತೀಗೇಹಂ ಯಾ ಕುಕ್ಷಿಂ ಪೂರಯಿಷ್ಯತಿ ॥ ೯೮ ॥

---

೯೩-೯೪. ಈ ವಿಶಾಲವಾದ, ಸುಪ್ರತಿಷ್ಠಿತಗೃಹವು ನಿನ್ನಿಂದ ನಿರ್ಮಿಸಲ್ಪಟ್ಟಿದೆ. ನಾವು ಪ್ರತಿ ದಿನವೂ ಒಂದು ಕ್ಷಣಕಾಲ ಪೂರ್ಣರೂಪದಿಂದ ಇಲ್ಲಿದ್ದು ಆದರದಿಂದ ನೀನು ಮಾಡುವ ಪೂಜೆಯನ್ನು ಸ್ವೀಕರಿಸಿ ನಮ್ಮ ನಮ್ಮ ಸ್ಥಾನಕ್ಕೆ ಹೋಗುವೆವು ಎಂದು ಹೇಳಿದನು.

೯೫-೯೬. ಅನಂತರ ಗೌತಮ ಮುನಿವರ್ಯನು ವಿಶ್ವೇಶನನ್ನು ಕುರಿತು “ಈಶ್ವರನೇ ಅರ್ಥಿಯು ದೋಷವನ್ನು ಲೆಕ್ಕಿಸುವುದಿಲ್ಲ, ಅಯೋಗ್ಯವಾದುದನ್ನು ಪ್ರಾರ್ಥಿಸುವೆನು. ದೇವೇಶನೇ! ನೀನು ಪ್ರೀತನಾಗಿದ್ದರೆ ಬ್ರಹ್ಮಾದಿಗಳಿಗೂ ಅಲಭ್ಯವಾದುದನ್ನು ನನಗೆ ಕೊಡು” ಎಂದು ಕೇಳಿದನು.

೯೬-೯೭. ಅನಂತರ ಈಶ್ವರನು ವಿಷ್ಣುವನ್ನು ನೋಡಿ ಅವನ ಕೈಯನ್ನು ತನ್ನ ಕೈಮೇಲಿಟ್ಟು ನಗುತ್ತಾ, ಕಮಲದಂತೆ ಕಣ್ಣುಗಳುಳ್ಳ ವಿಷ್ಣುವನ್ನು ಕುರಿತು ಆ ಸದಾಶಿವನು ಮಾತನಾಡಿದನು.

೯೭-೯೮. ಗೋವಿಂದನೇ! ನಿನ್ನ ಹೊಟ್ಟೆಯು ಹಸಿದುಕೊಂಡಿದೆ. ನಿನಗೆ

ಇತ್ಯುಕ್ತ್ವಾ ತತ್ಕರಾಲಂಬೀ ಹ್ಯೇಕಾಂತಮಗಮದ್ವಿಭುಃ ।
ಆದಿಶ್ಯ ನಂದಿನಂ ದೇವೋ ದ್ವಾರಾಧ್ಯಕ್ಷಂ ಯಥೋಕ್ತವತ್ ॥ ೯೯ ॥

ಸ ಗತ್ವಾ ಗೌತಮಂ ವಾಥ ಹ್ಯುಕ್ತ್ವಾರ್ತಾಂ ವಿಷ್ಣುಭಾಷಣಂ ।
ಸಂಪಾದಯಾನ್ನಂ ದೇವೇಶಾ ಭೋಕ್ತುಕಾಮಾ ವಯಂ ಮುನೇ ॥ ೧೦೦ ॥

ಇತ್ಯುಕ್ತ್ವೈಕಾಂತಮಗಮದ್ವಾಸುದೇವೇನ ಶಂಕರಃ ।
ಮೃದುಶಯ್ಯಾಂ ಸಮಾರುಹ್ಯ ಶಯಿತೌ ದೇವತೋತ್ತಮೌ ॥ ೧೦೧ ॥

ಅನ್ಯೋನ್ಯಂ ಭಾಷಣಂ ಕೃತ್ವಾ ಪ್ರೋತ್ತಸ್ಥತುರುಭಾವಪಿ ।
ಗತ್ವಾ ತಡಾಗಂ ಗಂಭೀರಂ ಸ್ನಾಸ್ಯಂತೌ ದೇವಸತ್ತಮೌ ॥ ೧೦೨ ॥

---

ಊಟಮಾಡಿಸಲೇ ಏನು? ನೀನೇ ಹೋಗಿ ಸ್ವಗೃಹದಂತೆ ಭಾವಿಸಿ ನೀನೇ ಊಟಮಾಡು, ಇಲ್ಲವೇ ಪಾರ್ವತಿಯ ಮನೆಗೆ ಹೋಗು, ಅವಳು ಹೊಟ್ಟೆಯನ್ನು ತುಂಬಿಸುವಳು.

೯೯. ಹೀಗೆ ಹೇಳಿ ವಿಷ್ಣುವಿನ ಕೈಹಿಡಿದುಕೊಂಡು ಸ್ವಾಮಿಯು ದ್ವಾರಾಧ್ಯಕ್ಷನನ್ನಾಗಿ ನಂದಿಯನ್ನು ನಿಯಮಿಸಿ ಏಕಾಂತಸ್ಥಾನಕ್ಕೆ ಹೊರಟುಹೋದನು.

೧೦೦-೧೦೧. ಬಳಿಕ ಶಂಕರನು ಗೌತಮನ ಬಳಿಗೆ ಬಂದು "ಮುನಿಯೇ! ದೇವೇಶರಾದ ನಾವು ಭೋಜನಮಾಡಲಿಚ್ಛಿಸುವೆವು. ಅನ್ನವನ್ನು ಸಿದ್ಧಪಡಿಸು" ಎಂಬ ವಿಷ್ಣುವಿನ ಮನೋಗತವನ್ನು ಹೇಳಿ ವಾಸುದೇವನೊಡನೆ ಏಕಾಂತ ಸ್ಥಾನಕ್ಕೆ ಹೋದನು.

೧೦೧-೧೦೨. ಅಲ್ಲಿ ದೇವೋತ್ತಮರಾದ ಅವರಿಬ್ಬರೂ ಮೃದುವಾದ ಹಾಸಿಗೆಯ ಮೇಲೆ ಮಲಗಿ, ಪರಸ್ಪರ ಸಂಭಾಷಣೆಯನ್ನು ನಡೆಯಿಸಿ ಇಬ್ಬರೂ ಎದ್ದರು.

ಕರಾಂಬುಪಾತಮನ್ಯೋನ್ಯಂ ಪೃಥಕ್ಕೃತ್ವೋಭಯತ್ರ ಚ ।
ಮುನಯೋ ರಾಕ್ಷಸಾಶ್ಚೈವ ಜಲಕ್ರೀಡಾಂ ಪ್ರಚಕ್ರಿರೇ ॥ ೧೦೩ ॥

ಅಥ ವಿಷ್ಣುರ್ಮಹೇಶಶ್ಚ ಜಲಪಾತಾನಿ ಶೀಘ್ರತಃ ।
ಚಕ್ರತುಃ ಶಂಕರಃ ಪದ್ಮಕಿಂಜಲ್ಕಾಂಜಲಿನಾ ಹರೇಃ ॥ ೧೦೪ ॥

ಅವಾಕಿರನ್ಮುಖೇ ತಸ್ಯ ಪದ್ಮೋತ್ಫುಲ್ಲವಿಲೋಚನೇ ।
ನೇತ್ರೇ ಕೇಸರಸಂಪಾತಾತ್ಪ್ರಮೀಲಯತ ಕೇಶವಃ ॥ ೧೦೫ ॥

ಅತ್ರಾಂತರೇ ಹರೇಃ ಸ್ಕಂಧಮಾರುರೋಹ ಮಹೇಶ್ವರಃ ।
ಹರ್ಯುರ್ತ್ತಮಾಂಗಂ ಬಾಹುಭ್ಯಾಂ ಗೃಹೀತ್ವಾ ಸಂನ್ಯಮಜ್ಜಯತ್ ॥

ಉನ್ಮಜ್ಜಯಿತ್ವಾ ಚ ಪುನಃ ಪುನಶ್ಚಾಪಿ ಪುನಃ ಪುನಃ ।
ಪೀಡಿತಃ ಸ ಹರಿಃ ಸೂಕ್ಷ್ಮಂ ಪಾತಯಾಮಾಸ ಶಂಕರಂ ॥ ೧೦೭ ॥

---

೧೦೨-೧೦೩. ಬಳಿಕ ಆಳವಾದ ಕೆರೆಗೆ ಹೋಗಿ ದೇವಶ್ರೇಷ್ಠರಿಬ್ಬರೂ ಸ್ನಾನಮಾಡುತ್ತಾ ಒಬ್ಬರಿಗೊಬ್ಬರು ಮತ್ತು ಪ್ರತ್ಯೇಕವಾಗಿಯೂ ಕೈಗಳಿಂದ ನೀರೆರಚುತ್ತಾ ವಿಹರಿಸುತ್ತಿದ್ದರು ಅಲ್ಲಿ ಮುನಿಗಳು ಮತ್ತು ರಾಕ್ಷಸರೂ ಸಹ ಜಲಕ್ರೀಡೆಯನ್ನಾಡಿದರು.

೧೦೪-೧೦೫. ಬಳಿಕ ಹರಿಹರರಿಬ್ಬರು ನೀರನ್ನು ಬೇಗಬೇಗ ಎರಚ ತೊಡಗಿದರು. ಶಂಕರನು ಬೊಗಸೆಯಿಂದ ತಾವರೆಯ ಕುಸುರುಗಳನ್ನು ಪದ್ಮದಂತೆ ವಿಕಸಿತವಾದ ವಿಷ್ಣುವಿನ ನೇತ್ರಗಳಿಗೆ ಎಸೆದನು. ಆಗ ಹರಿಯು ಆ ಕುಸುರುಗಳು ಕಣ್ಣಿನಲ್ಲಿ ಬಿದ್ದುದರಿಂದ ಕಣ್ಣುಗಳನ್ನು ಮುಚ್ಚಿಕೊಂಡನು.

೧೦೬. ಈ ಸಮಯದಲ್ಲಿ ಈಶ್ವರನು ಹರಿಯ ಭುಜವನ್ನು ಹತ್ತಿ ಅವನ ಶಿರಸ್ಸನ್ನು ಬಾಹುಗಳಿಂದ ಹಿಡಿದುಕೊಂಡು ನೀರಿನಲ್ಲಿ ಮುಳುಗಿಸಿದನು.

೧೦೭. ಹಾಗೆಯೇ ಅನೇಕಾವರ್ತಿ ಮುಳುಗಿಸಿ ಹಿಂಸಿಸಲ್ಪಟ್ಟ ಹರಿಯು ಶಂಕರನನ್ನು ಸೂಕ್ಷ್ಮವಾಗಿ ಕೆಳಕ್ಕೆ ಕೆಡವಿದನು.

ಅಥ ಪಾದೌ ಗೃಹೀತ್ವಾ ತಂ ಭ್ರಾಮಯನ್ನಿಚಕರ್ಷ ಹ ।
ಅತಾಡಯದ್ಧರೇಃ ವಕ್ಷಃ ಪಾತಯಾಮಾಸ ಚಾಚ್ಯುತಂ ॥ ೧೦೮ ॥

ಅಥೋತ್ಥಿತೋ ಹರಿಸ್ತೋಯಮಾದಾಯಾಂಜಲಿನಾ ತತಃ ।
ಶೀರ್ಷೇ ಚೈವಾಕಿರಚ್ಛಂಭೋರಥ ಶಂಭುರಥೋ ಹರಿಃ ॥ ೧೦೯ ॥

ಜಲಕ್ರೀಡೈವಮಭವದಥ ಚರ್ಷಿಗಣಾಂತರೇ ।
ಜಲಕ್ರೀಡಾಸಂಭ್ರಮೇಣ ವಿಸ್ರಸ್ತಜಟಬಂಧನಾಃ ॥ ೧೧೦ ॥

ಅಥ ಸಂಭ್ರಮತಾಂ ತೇಷಾಮನ್ಯೋನ್ಯಜಟಬಂಧನಂ ।
ಇತರೇತರಬದ್ಧಾಸು ಜಟಾಸು ಚ ಮುನೀಶ್ವರಾಃ ॥ ೧೧೧ ॥

ಶಕ್ತಿಮಂತೋऽಶಕ್ತಿಮತಃ ಆಕರ್ಷಂತಿ ಚ ಸವ್ಯಥಂ ।
ಪಾತಯಂತೋऽನ್ಯತಶ್ಚಾಪಿ ಕ್ರೋಶಂತೋ ರುದತಸ್ತಥಾ ॥ ೧೧೨ ॥

---

೧೦೮. ಅನಂತರ ಈಶ್ವರನು ಪಾದಗಳನ್ನು ಹಿಡಿದು ಅವನನ್ನು ತಿರುಗಿಸಿ, ಎಸೆದು ಅವನ ವಕ್ಷಸ್ಥಳವನ್ನು ಗುದ್ದಿ ಅಚ್ಯುತನನ್ನು ಬೀಳಿಸಿದನು.

೧೦೯. ಕೂಡಲೇ ಹರಿಯು ಎದ್ದು ಬೊಗಸೆಯಿಂದ ನೀರನ್ನು ತೆಗೆದುಕೊಂಡು ಈಶ್ವರನ ತಲೆಯಮೇಲೆ ಎರಚಿದನು. ಬಳಿಕ ಈಶ್ವರನು ಹರಿಯ ಮೇಲೂ, ಪುನಃ ಹರಿಯು ಈಶ್ವರನಮೇಲೂ ಎರಚುತ್ತಾ ಆಟವಾಡುತ್ತಿದ್ದರು.

೧೧೦. ಈ ರೀತಿಯಾಗಿ ಜಲಕ್ರೀಡೆಯು ನಡೆಯಿತು. ತರುವಾಯ ಋಷಿಗಣದ ಮಧ್ಯದಲ್ಲಿ ಜಲಕ್ರೀಡೆಯ ಸಂಭ್ರಮದಿಂದ ಅನೇಕರ ಜಡೆಯು ಬಿಚ್ಚಿಹೋಯಿತು.

೧೧೧-೧೧೨. ಹಾಗೆಯೇ ತಿರುಗುತ್ತಿದ್ದ ಅವರ ಜಡೆಗಳು ಒಂದಕ್ಕೊಂದು ಗಂಟುಹಾಕಿಕೊಂಡವು. ಜಟೆಗಳು ಒಂದಕ್ಕೊಂದು ಗಂಟುಹಾಕಿಕೊಳ್ಳಲು ಸಮರ್ಥರಾದವರು ಅಶಕ್ತರನ್ನು ಸೆಳೆಯುತ್ತಾ ಪೆಟ್ಟುತಗಲುವಂತೆ ಬೀಳಿಸುತ್ತಲೂ ಇದ್ದರು. ಅದರಿಂದಲೂ ಇತರವಿಧ ಹಿಂಸೆಯಿಂದಲೂ ಅವರು ಕೂಗುತ್ತಾ ಅಳುತ್ತಿದ್ದರು.

ಏವಂ ಪ್ರವೃತ್ತೇ ತುಮುಲೇ ಸಂಭೂತೇ ತೋಯಕರ್ಮಣಿ ।
ಆಕಾಶೇ ವಾನರೇಶಸ್ತು ನನರ್ತ ಚ ನನಾದ ಚ ॥ ೧೧೩ ॥

ವಿಪಂಚೀಂ ವಾದಯನ್ವಾದ್ಯಂ ಲಲಿತಾಂ ಗೀತಿಮುಜ್ಜಗೌ ।
ಸುಗೀತ್ಯಾ ಲಲಿತಾಯಾಸ್ತು ಆಗಾಯತ ವಿಧಾ ದಶ ॥ ೧೧೪ ॥

ಶುಶ್ರಾವ ಗೀತಿಂ ಮಧುರಾಂ ಶಂಕರೋ ಲೋಕಭಾವತಃ ।
ಸ್ವಯಂ ಗಾತುಂ ಹಿ ಲಲಿತಂ ಮಂದಂ ಮಂದಂ ಪ್ರಚಕ್ರಮೇ ॥ ೧೧೫ ॥

ಸ್ವಯಂ ಗಾಯತಿ ದೇವೇಶೇ ವಿಶ್ರಾಮಂ ಗಲದೇಶಿಕಂ ।
ಸ್ವರಂ ಧ್ರುವಂ ಸಮಾದಾಯ ಸರ್ವಲಕ್ಷಣಸಂಯುತಂ ॥ ೧೧೬ ॥

ಸ್ವಧಾರಾಮೃತಸಂಯುಕ್ತಂ ಗಾನೇನೈವಮಥೋನ್ನಯನ್ ।
ವಾಸುದೇವೋ ಮರ್ದಲಂ ಚ ಕರಾಭ್ಯಾಮಪ್ಯವಾದಯತ್ ॥ ೧೧೭ ॥

---

೧೧೩. ಈ ರೀತಿ ದೊಂಬಿಯಾಗಿ ಜಲಕ್ರೀಡೆಯು ನಡೆಯುತ್ತಿರಲು ಅಂತರಿಕ್ಷದಲ್ಲಿ ಕಪೀಶ್ವರನು ವಾದ್ಯವನ್ನು ಬಾರಿಸುತ್ತಾ ಕುಣಿಯುತ್ತಿದ್ದನು.

೧೧೪. ಮತ್ತು ಅವನು ವೀಣೆಯೆಂಬ ವಾದ್ಯವನ್ನು ಬಾರಿಸುತ್ತಾ ಮನೋಹರ ಗೀತೆಯನ್ನು ಹಾಡುವವನಾಗಿ ಅದರ ಹತ್ತುವಿಧಗಳನ್ನು ಮನೋಹರವಾಗಿ ಹಾಡಿದನು.

೧೧೫. ಶಂಕರನು ಆ ಮಧುರ ಗೀತೆಯನ್ನು ಕೇಳಿ ಅವನೂ ಲೋಕಭಾವದಿಂದ ತಾನೂ ಮೆಲ್ಲಮೆಲ್ಲಗೆ ಲಲಿತವಾಗಿ ಗಾನಮಾಡಲುಪಕ್ರಮಿಸಿದನು.

೧೧೬-೧೧೭. ದೇವೇಶನು ಗಲ ಮುಂತಾದ ದೇಶಿಕ ವಿಶ್ರಾಮ, ಸ್ವರ, ಧ್ರುವ ಇವುಗಳನ್ನು ಅನುಸರಿಸಿ ಸಕಲಲಕ್ಷಣೋಪೇತವಾಗಿ ತಾನೂ ಹಾಡುತ್ತಿರಲು, ಆಗ ವಾಸುದೇವನು ಗಾನದಿಂದ ತನ್ನ ಧಾರಾಮೃತವನ್ನು ಮೇಲನ ಮಾಡಿ ತೋರಿಸುತ್ತಾ ಕೈಗಳಿಂದ ಮೃದಂಗವನ್ನೂ ಬಾರಿಸಿದನು.

ಅವಗಾಹಂಶ್ಚ ತುರ್ವಕ್ತ್ರಸ್ತುಂಬುರುರ್ಮುಖರೋ ಬಭೌ ।
ತಾನಕಾ ಗೌತಮಾದ್ಯಾಸ್ತು ಗಾಯಕೋ ವಾಯುಜೋऽಭವತ್ ॥ ೧೧೮ ॥

ಗಾಯಕೇ ಮಧುರಂ ಗೀತಂ ಹನೂಮತಿ ಕಪೀಶ್ವರೇ ।
ಮ್ಲಾನಮಮ್ಲಾನಮಭವತ್ಕೃಶಾಃ ಪುಷ್ಟಾಸ್ತದಾऽಭವನ್ ॥ ೧೧೯ ॥

ಸ್ವಾಂ ಸ್ವಾಂ ಗೀತಿಮತಃ ಸರ್ವೇ ತಿರಸ್ಕೃತ್ಯೈವ ಮೂರ್ಛಿತಾಃ ।
ತೂಷ್ಣೀಂಭೂತಂ ಸಮಭವದ್ದೇವರ್ಷಿಗಣದಾನವಂ ॥ ೧೨೦ ॥

ಏಕಃ ಸ ಹನುಮಾನ್ ಗಾತಾ ಶ್ರೋತಾರಃ ಸರ್ವ ಏವ ತೇ ।
ಮಧ್ಯಾಹ್ನಕಾಲೇ ವಿತತೇ ಗಾಯಮಾನೇ ಹನೂಮತಿ ।
ಸ್ವಸ್ವವಾಹನಮಾರುಹ್ಯ ನಿರ್ಗತಾಃ ಸರ್ವದೇವತಾಃ ॥ ೧೨೧ ॥

---

೧೧೮. ಚತುರ್ಮುಖ ಬ್ರಹ್ಮನು ಅವರೊಡನೆ ಸೇರಿ ಗಾನಮಾಡಿದನು. ತುಂಬುರುವು ಮುಖವೀಣೆಯನ್ನು ಬಾರಿಸಿದನು. ಗೌತಮಾದಿಗಳು ಅಲಾಪನೆ ಗಾರರಾದರು. ವಾಯುಪುತ್ರನು ಗಾಯಕನಾದನು.

೧೧೯. ಕಪೀಶ್ವರನಾದ ಹನುಮಂತನು ಗೀತೆಯನ್ನು ಮಧುರವಾಗಿ ಗಾನಮಾಡುತ್ತಿರುವಾಗ ಬಾಡಿದ ಪಲ್ಲವಪುಷ್ಪಾದಿಗಳು ಚೆನ್ನಾಗಿ ವಿಕಸಿತವಾದವು. ಕೃಶರಾಗಿದ್ದವರು ಪುಷ್ಟರಾದರು.

೧೨೦. ಸರ್ವರೂ ಆಗ ತಮ್ಮ ತಮ್ಮ ಗಾನವನ್ನು ಬಿಟ್ಟು ಮೂರ್ಛೆ ಯನ್ನು ಹೊಂದಿದರು. ದೇವತೆ, ಋಷಿಗಣ ಮತ್ತು ದಾನವರು ಬೆರಗಾಗಿ ಸುಮ್ಮನೆ ನಿಂತರು.

೧೨೧. ಹನುಮಂತನೊಬ್ಬನೇ ಗಾನಮಾಡುವವನಾದನು. ಅಲ್ಲಿ ಸೇರಿ ದ್ದವರೆಲ್ಲರೂ ಶ್ರೋತೃಗಳೇ ಆದರು. ಹನುಮಂತನು ಗಾನಮಾಡುತ್ತಿರಲು ಮಧ್ಯಾಹ್ನಕಾಲವು ಪ್ರಾಪ್ತವಾಯಿತು. ಆಗ ದೇವತೆಗಳೆಲ್ಲಾ ತಮ್ಮ ತಮ್ಮ ವಾಹನವನ್ನು ಹತ್ತಿಕೊಂಡು ಹೊರಟರು.

ಗಾನಪ್ರಿಯೋ ಮಹೇಶಸ್ತು ಜಗಾದ ಪ್ಲವಗೇಶ್ವರಂ ।
ಪ್ಲವಗ ತ್ವಂ ಮಯಾಜ್ಞಪ್ತೋ ನಿಶ್ಶಂಕೋ ವೃಷಮಾರುಹ ॥ ೧೨೨ ॥

ಮಮ ಚಾಭಿಮುಖೋ ಭೂತ್ವಾ ಗಾಯಸ್ವಾಶೇಷಗಾಯನಂ ।
ಅಥಾಹ ಕಪಿಶಾರ್ದೂಲೋ ಭಗವಂತಂ ಮಹೇಶ್ವರಂ ॥ ೧೨೩ ॥

ವೃಷಭಾರೋಹಸಾಮರ್ಥ್ಯಂ ತವ ನಾನ್ಯಸ್ಯ ವಿದ್ಯತೇ ।
ತವ ವಾಹನಮಾರುಹ್ಯ ಪಾತಕೀ ಸ್ಯಾಮಹಂ ವಿಭೋ ॥ ೧೨೪ ॥

ಮಾಮೇವಾರುಹ ದೇವೇಶ ವಿಹಂಗಃ ಶಿವಧಾರಣಃ ।
ತವ ಚಾಭಿಮುಖಂ ಗಾನಂ ಕರಿಷ್ಯಾಮಿ ವಿಲೋಕಯ ॥ ೧೨೫ ॥

ಅಥೇಶ್ವರೋ ಹನೂಮಂತಮಾರುರೋಹ ಯಥಾ ವೃಷಂ ।
ಆರೂಢೇ ಶಂಕರೇ ದೇವೇ ಹನೂಮಾನ್ಕಂಧರಾಂ ಶಿರಃ ॥ ೧೨೬ ॥

---

೧೨೨-೧೨೩. ಗಾನಪ್ರಿಯನಾದ ಮಹೇಶನಾದರೋ ಕಪೀಶ್ವರನನ್ನು ನಿಲ್ಲಸಿಕೊಂಡು "ವಾನರನೇ! ನಾನು ಅಪ್ಪಣೆಯನ್ನು ಕೊಟ್ಟಿರುವೆನು. ನೀನು ಸಂಕೋಚಪಡದೆ ನನ್ನ ವಾಹನವಾದ ವೃಷಭದ ಮೇಲೆ ಹತ್ತಿ ನನಗೆ ಇದಿರಾಗಿ ಕುಳಿತುಕೊಂಡು ಎಲ್ಲಾ ಹಾಡುಗಳನ್ನೂ ಗಾನಮಾಡು" ಎಂದು ಹೇಳಿದನು.

೧೨೩-೧೨೪. ಅನಂತರ ಕಪಿಶ್ರೇಷ್ಠನು ಮಹೇಶ್ವರ ಭಗವಂತನನ್ನು ಕುರಿತು ವೃಷಭದ ಮೇಲೆ ಕೂಡುವ ಯೋಗ್ಯತೆಯು ನಿನಗೆ ಹೊರತು ಇನ್ನಾರಿಗೂ ಇಲ್ಲ. ಸ್ವಾಮಿಯೇ! ನಾನು ನಿನ್ನ ವಾಹನದ ಮೇಲೆ ಕುಳಿತರೆ ಪಾಪಿಯಾಗುವೆನು.

೧೨೫. ಆದುದರಿಂದ ದೇವೇಶಾ! ನನ್ನ ಮೇಲೆಯೇ ನೀನು ಕುಳಿತುಕೋ, ನಿನ್ನನ್ನು ಹೊತ್ತುಕೊಂಡು ಆಕಾಶಮಾರ್ಗದಲ್ಲಿ ಹೋಗುತ್ತಾ ನಿನ್ನೆದುರಿಗೆ ಮುಖವನ್ನು ಮಾಡಿಕೊಂಡು ಗಾನಮಾಡುವೆನು ಎಂದು ಹೇಳಿದನು.

೧೨೬-೧೨೭. ತರುವಾಯ ಈಶ್ವರನು ವೃಷಭವನ್ನೇರುವಂತೆ ಹನುಮಂತನ ಮೇಲೆ ಹತ್ತಿ ಕುಳಿತನು. ಶಂಕರದೇವನು ಮೇಲೆ ಕುಳಿತ ಬಳಿಕ ಹನುಮಂತನು ಕುತ್ತಿಗೆಯ ಚರ್ಮವನ್ನು ಕತ್ತರಿಸಿಕೊಂಡು ಮುಖವನ್ನು

ಛಿತ್ವಾ ತ್ವಚಂ ಪರಾವೃತ್ಯಂ ಸುಖಂ ಗಾಯತಿ ಪೂರ್ವವತ್ ।
ಶೃಣ್ವನ್ಗೀತಿಸುಧಾಂ ಶಂಭುರ್ಗೌತಮಸ್ಯ ಗೃಹಂ ಗತಃ ॥ ೧೨೭ ॥

ಸರ್ವೇ ಚಾಪ್ಯಾಗತಾಸ್ತತ್ರ ದೇವರ್ಷಿಗಣದಾನವಾಃ ।
ಪೂಜಿತಾ ಗೌತಮೇನಾಥ ಭೋಜನಾವಸತೀ ಸತಿ ॥ ೧೨೮ ॥

ಯಚ್ಛುಷ್ಕದಾರುಸಂಭೂತಂ ಗೃಹೋಪಕಾರಣಾದಿಕಂ ।
ಪ್ರರೂಢಮಭವತ್ಸರ್ವಂ ಗಾಯಮಾನೇ ಹನೂಮತಿ ॥ ೧೨೯ ॥

ತಸ್ಮಿನ್ಗಾನೇ ಸಮಸ್ತಾನಾಂ ಚಿತ್ರಂ ದೃಷ್ಟಿರತಿಷ್ಠತ ॥ ೧೩೦ ॥

ದ್ವಿಬಾಹುರೀಶಸ್ಯ ಪದಾಂಭಿವಂದನಃ
ಸಮಸ್ತಗಾತ್ರಾಭರಣೋಪಪನ್ನಃ ।
ಪ್ರಸನ್ನಮೂರ್ತಿಸ್ತರುಣಃ ಸುಮಧ್ಯೇ
ವಿನ್ಯಸ್ತಮೂರ್ಧಾಂಜಲಿಭಿಃ ಸುರೇಭಿಃ ॥ ೧೩೧ ॥

---

ಈಶ್ವರನ ಕಡೆಗೆ ತಿರುಗಿಸಿ ಹಿಂದಿನಂತೆಯೇ ಗಾನಮಾಡಿದನು. ಈಶ್ವರನು ಗಾನವನ್ನು ಕೇಳುತ್ತಾ ಗೌತಮರ ಮನೆಗೆ ಬಂದನು.

೧೨೮. ಉಳಿದ ದೇವತೆ, ಋಷಿಗಣ ಮತ್ತು ದಾನವರೆಲ್ಲರೂ ಅಲ್ಲಿಗೆ ಬಂದರು. ಅನಂತರ ಗೌತಮನು ಎಲ್ಲರಿಗೂ ಭೋಜನಮಾಡಿಸಿ ಸತ್ಕಾರ ಮಾಡಿದನು.

೧೨೯. ಹನುಮಂತನು ಗಾನಮಾಡುತ್ತಿರುವಾಗ ಮನೆಗೆ ಹಾಕಿದ್ದ ಕಂಬ ಮುಂತಾದ ಒಣಗಿದ ಮರಗಳೆಲ್ಲವೂ ಚಿಗುರಲಾರಂಭಿಸಿದುವು.

೧೩೦. ಅಲ್ಲಿ ನೆರೆದಿದ್ದವರಿಗೆಲ್ಲಾ ಆಶ್ಚರ್ಯಕರವಾದ ಭಾವನೆಯು ಬಂದು ಅವರ ಮನಸ್ಸೆಲ್ಲಾ ಆ ಗಾನದಲ್ಲಿಯೇ ನಿಂತಿತು.

೧೩೧. ಹನುಮಂತನು ತನ್ನ ಎರಡು ಬಾಹುಗಳಿಂದಲೂ ಈಶ್ವರನ ಪಾದಗಳಿಗೆ ವಂದಿಸುವಂತೆ ಹಿಡಿದುಕೊಂಡಿದ್ದನು. ಅವನು ಮೈಮೇಲೆಲ್ಲಾ ಆಭರಣಗಳನ್ನು ಧರಿಸಿದ್ದನು. ತಲೆಯಮೇಲೆ ಕೈಗಳನ್ನು ಮುಗಿದುಕೊಂಡು ನಿಂತಿದ್ದ ಸುರರ ವ್ಯೂಹದಲ್ಲಿ ತರುಣನಾದ ಹನುಮಂತನು ಪ್ರಸನ್ನಮೂರ್ತಿಯಾಗಿ ವಿರಾಜಿಸುತ್ತಿದ್ದನು.

ಶಿರಃ ಕರಾಭ್ಯಾಂ ಪರಿಗೃಹ್ಯ ಶಂಕರೋ
ಹನೂಮತಃ ಪೂರ್ವಮುಖಂ ಚಕಾರ ।
ಪದ್ಮಾಸನಾಸೀನಹನೂಮತೋಽಂಜಲೌ
ನಿಧಾಯ ಪಾದಂ ತ್ವಪರಂ ಮುಖೇ ಚ ॥ ೧೩೨ ॥

ಪಾದಾಂಗುಲೀಭ್ಯಾಮಥ ನಾಸಿಕಾಂ ವಿಭುಃ
ಸ್ನೇಹೇನ ಜಗ್ರಾಹ ಚ ಮಂದಮಂದಂ ।
ಸ್ಕಂಧೇ ಮುಖೇ ತ್ವಂಸತಲೇ ಚ ಕಂಠೇ
ವಕ್ಷಸ್ಥಲೇ ಚ ಸ್ತನಮಧ್ಯಮೇ ಹೃದಿ ॥ ೧೩೩ ॥

ತತಶ್ಚ ಕುಕ್ಷಾವಥ ನಾಭಿಮಂಡಲೇ
ಪಾದಂ ದ್ವಿತೀಯಂ ವಿದಧಾತಿ ಚಾಂಜಲೌ ।
ಶಿರೋ ಗೃಹೀತ್ವಾಽವನಮಯ್ಯ ಶಂಕರಃ
ಪಸ್ಪರ್ಶ ಪೃಷ್ಠಂ ಚುಬುಕಸ್ಯ ಸದ್ಮನಿಃ ॥ ೧೩೪ ||

ಹಾರಂ ಚ ಮುಕ್ತಾಪರಿಕಲ್ಪಿತಂ ಶಿವೋ
ಹನೂಮತಃ ಕಂಠಗತಂ ಚಕಾರ ॥ ೧೩೫ ॥

---

೧೩೨. ಶಂಕರನು ಹನುಮಂತನ ಶಿರಸ್ಸನ್ನು ಕೈಗಳಿಂದ ಹಿಡಿದು ತಿರುಗಿಸಿ ಹಿಂದಿನಂತೆ ಮುಖವನ್ನು ಮಾಡಿದನು. ಬಳಿಕ ಸ್ವಾಮಿಯು ಪದ್ಮಾಸನ ಹಾಕಿಕೊಂಡು ಕುಳಿತಿರುವ ಹನುಮಂತನ ಬೊಗಸೆಯಲ್ಲಿ ಒಂದು ಪಾದವನ್ನಿಟ್ಟು ಇನ್ನೊಂದನ್ನು ಮುಖದ ಮೇಲಿಟ್ಟನು.

೧೩೩-೧೩೪. ಬಳಿಕ ಆ ಕಾಲಿನ ಬೆರಳುಗಳಿಂದ ಮೆಲ್ಲಮೆಲ್ಲಗೆ ಮೂಗನ್ನು ಹಿಡಿದುಕೊಂಡನು. ಅನಂತರ ವಿಶ್ವಾಸದಿಂದ ಆ ಪಾದವನ್ನು ಮುಖ, ಕೊರಳು, ಭುಜದ ಮೂಲಭಾಗ, ವಕ್ಷಸ್ಥಳ, ಸ್ತನಮಧ್ಯಭಾಗದ ಹೃದಯ ಅನಂತರ ಹೊಟ್ಟೆ, ಹೊಕ್ಕಳು ಇವುಗಳಲ್ಲಿ ಕ್ರಮವಾಗಿ ಪ್ರಸರಿಸಿ ಕೊನೆಗೆ ಅಂಜಲಿಯಲ್ಲಿ ಇಟ್ಟನು.

೧೩೪-೧೩೫. ಅನಂತರ ಶಂಕರನು ಕೂಗುತ್ತಾ ತಲೆಯನ್ನು ಹಿಡಿದುಕೊಂಡು ಬಗ್ಗಿ ಗಡ್ಡದ ಹಿಂಭಾಗವನ್ನು ಸ್ಪರ್ಶಮಾಡಿ ಮುತ್ತುಗಳಿಂದ ನಿರ್ಮಿತವಾದ ಹಾರವನ್ನು ಹನುಮಂತನ ಕುತ್ತಿಗೆಗೆ ಹಾಕಿದನು.

ಅಥ ವಿಷ್ಣುರ್ಮಹೇಶಾನಮಿದಂ ವಚನಮುಕ್ತವಾನ್ ।
ಹನೂಮತಾ ಸಮೋ ನಾಸ್ತಿ ಕೃತ್ಸ್ನಬ್ರಹ್ಮಾಂಡಮಂಡಲೇ ॥ ೧೩೬ ॥

ಶ್ರುತಿದೇವಾದ್ಯಗಮ್ಯಂ ಹಿ ಪದಂ ತವ ಕಪಿಸ್ಥಿತಂ ।
ಸರ್ವೋಪನಿಷದವ್ಯಕ್ತಂ ತ್ವತ್ಪದಂ ಕಪಿಸರ್ವಯುಕ್ ॥ ೧೩೭ ॥

ಯಮಾದಿಸಾಧನೈರ್ಯೋಗೈರ್ನಕ್ಷಣಂ ತೇ ಪದಂ ಸ್ಥಿರಂ ।
ಮಹಾಯೋಗಿಹೃದಾಂಭೋಜೇ ಪರಂ ಸ್ವಸ್ಥಂ ಹನೂಮತಿ ॥ ೧೩೮ ॥

ವರ್ಷಕೋಟಿಸಹಸ್ರಂ ತು ಸಹಸ್ರಾಬ್ದೈಸ್ತಥಾನ್ವಹಂ ।
ಭಕ್ತ್ಯಾ ಸಂಪೂಜಿತೋಪೀಶಪಾದೋ ನೋ ದರ್ಶಿತಸ್ತ್ವಯಾ ॥ ೧೩೯ ॥

ಲೋಕೇ ವಾದೋ ಹಿ ಸುಮಹಾನ್ ಶಂಭುರ್ನಾರಾಯಣಪ್ರಿಯಃ ।
ಹರಿಪ್ರಿಯಸ್ತಥಾ ಶಂಭುರ್ನ ತಾದೃಗ್ಭಾಗ್ಯಮಸ್ತಿ ಮೇ ॥ ೧೪೦ ॥

---

೧೩೬. ತರುವಾಯ ಹರಿಯು ಮಹೇಶನನ್ನು ಕುರಿತು ಹೀಗೆ ಹೇಳಿದನು:—ಇಡೀ ಬ್ರಹ್ಮಾಂಡದಲ್ಲಿ ಹನುಮಂತನಿಗೆ ಸಮರಿಲ್ಲ.

೧೩೭. ನಿನ್ನ ಕಪಿಸ್ಥಿತರೂಪವು ಶ್ರುತಿ ಮತ್ತು ದೇವತೆಗಳಿಗೆ ಅಗೋಚರವು. ಕಪಿಯ ಸರ್ವಾಂಗಗಳನ್ನೂ ಸ್ಪರ್ಶಮಾಡಿದ ನಿನ್ನ ಪಾದವು ಉಪನಿಷತ್ತುಗಳಿಂದಲೂ ವ್ಯಕ್ತವಾಗುವುದಿಲ್ಲ.

೧೩೮. ಯಮಾದಿ ಸಾಧನಸಹಿತವಾದ ಯೋಗಗಳಿಂದಲೂ ಸಹ ಮಹಾಯೋಗಿಗಳ ಹೃದಯಕಮಲದಲ್ಲಿ ಕ್ಷಣಮಾತ್ರವೂ ನೀನು ಸ್ಥಿರವಾಗಿ ನಿಲ್ಲುವವನಲ್ಲ. ಅಂತಹ ನೀನು ಹನುಮಂತನಲ್ಲಿ ಸ್ಥಿರವಾಗಿ ನಿಂತಿರುವೆ.

೧೩೯. ಸಾವಿರಾರು ಕೋಟಿ ವರ್ಷಗಳಿಂದ ಪ್ರತಿದಿನವೂ ಭಕ್ತಿಯಿಂದ ಪೂಜಿಸಿದಾಗ್ಯೂ ನಿನ್ನ ಪಾದದರ್ಶನವಾಗುವುದಿಲ್ಲ.

೧೪೦. ಲೋಕದಲ್ಲಿ "ಈಶ್ವರನು ನಾರಾಯಣಪ್ರಿಯನು. ಹಾಗೆಯೇ ಶಂಭುವಿಗೆ ಹರಿಯು ಪ್ರಿಯನು" ಎಂಬುದಾಗಿ ದೊಡ್ಡ ವದಂತಿ ಇದೆ. ಆದರೆ ನನಗೆ ಅಂತಹ ಭಾಗ್ಯವಿಲ್ಲ ಎಂಬುದಾಗಿ ಹೇಳಿದನು.

ತಚ್ಛ್ರುತ್ವಾ ವಚನಂ ಶಂಭುರ್ವಿಷ್ಣೋಃ ಪ್ರಾಹ ಮುದಾನ್ವಿತಃ ।
ನ ತ್ವಯಾ ಸದೃಶೋ ಮಹ್ಯಂ ಪ್ರಿಯೋಽನ್ಯೋಽಸ್ತಿ ಹರೇ ಕ್ವಚಿತ್ ॥

ಪಾರ್ವತೀ ವಾ ತ್ವಯಾ ತುಲ್ಯಾ ವರ್ತತೇ ನೈವ ವಿದ್ಯತೇ ।
ಅಥ ದೇವಾಯ ಮಹತೇ ಗೌತಮಃ ಪ್ರಣಿಪತ್ಯ ಚ　　　　॥ ೧೪೨ ॥

ವ್ಯಜಿಜ್ಞಪದಮೇಯಾತ್ಮನ್ದೇವೈರ್ಹ ಕರುಣಾನಿಧೇ ।
ಮಧ್ಯಾಹ್ನೋಽಯಂ ವ್ಯತಿಕ್ರಾಂತೋ ಭುಕ್ತಿವೇಲಾಽಖಿಲಸ್ಯ ಚ　　॥ ೧೪೩ ॥

ಅಥಾಚಮ್ಯ ಮಹಾದೇವೋ ವಿಷ್ಣುನಾ ಸಹಿತೋ ವಿಭುಃ ।
ಪ್ರವಿಶ್ಯ ಗೌತಮಗೃಹಂ ಭೋಜನಾಯೋಪಚಕ್ರಮೇ　　　　॥ ೧೪೪ ॥

ರತ್ನಾಂಗುಲೀಯೈರಥ ನೂಪುರಾಭ್ಯಾಂ
ದುಕೂಲಬಂಧೇನ ತಡಿತ್ಸುಕಾಂಚ್ಯಾ ।
ಹಾರೈರನೇಕೈರಥ ಕಂಠನಿಷ್ಕ
ಯಜ್ಞೋಪವಿತೋತ್ತರವಾಸಸೀ ಚ　　　　　　॥ ೧೪೫ ॥

---

೧೪೧-೧೪೨. ಹರಿಯ ಮಾತನ್ನು ಕೇಳಿ ಈಶ್ವರನು ಸಂತೋಷದಿಂದ "ಹರಿಯೇ ! ಯಾವ ದೇಶ ಕಾಲಗಳಲ್ಲಿಯೂ ನನಗೆ ನಿನ್ನಂತೆ ಪ್ರೀತಿಪಾತ್ರನು ಬೇರೆಯಿಲ್ಲ. ಅಥವಾ ನಿನ್ನ ಹಾಗೆ ಪ್ರೀತಿಪಾತ್ರಳೆಂದರೆ ಪಾರ್ವತಿಯೊಬ್ಬಳೇ ಮತ್ತಾರೂ ಇಲ್ಲ" ಎಂದು ಹರಿಗೆ ಹೇಳಿದನು.

೧೪೨-೧೪೩. ತರುವಾಯ ಗೌತಮನು ಮಹಾದೇವನಿಗೆ ನಮಸ್ಕಾರ ಮಾಡಿ, ಅಪ್ರಮೇಯಸ್ವರೂಪನಾದ ದಯಾನಿಧಿಯೇ ! ದೇವತೆಗಳಿಂದ ಸಹಿತ ನಾದ ನಿನಗೆ ಮತ್ತು ಸರ್ವರಿಗೂ ಮಧ್ಯಾಹ್ನದ ಊಟದ ಸಮಯವು ಮೀರಿತು ಎಂದು ವಿಜ್ಞಾಪಿಸಿದನು.

೧೪೪. ಅನಂತರ ಮಹಾದೇವಸ್ವಾಮಿಯು ಆಚಮನವಮಾಡಿ ವಿಷ್ಣುವಿನಿಂದ ಸಹಿತನಾಗಿ ಗೌತಮರ ಮನೆಗೆ ಹೋಗಿ ಊಟಮಾಡಲು ಪ್ರಾರಂಭಿಸಿದನು.

೧೪೫. ಶಿವನು ರತ್ನಖಚಿತವಾದ ಉಂಗುರ ಮತ್ತು ಪಾದಾಭರಣಗಳನ್ನು ಧರಿಸಿ, ರೇಷ್ಮೆಯ ವಸ್ತ್ರವನ್ನುಟ್ಟು ಅದರ ಮೇಲೆ ಮಿಂಚುತ್ತಿರುವ ಉತ್ಕೃಷ್ಟವಾದ ನಡುಕಟ್ಟನ್ನು ಬಿಗಿದು ಅನೇಕ ಹಾರಗಳನ್ನು ಹಾಕಿಕೊಂಡು

ವಿಲಂಬಿಚಂಚನ್ಮಣಿಕುಂಡಲೇನ
ಸುಪುಷ್ಪಧಮ್ಮಿಲ್ಲವರೇಣ ಚೈವ ।
ಪಂಚಾಂಗಗಂಧಸ್ಯ ವಿಲೇಪನೇನ
ಬಾಹ್ವಂಗದೈಃ ಕಂಕಣಕಾಂಗುಲೀಯೈಃ ॥ ೧೪೬ ॥

ಅಥೋ ವಿಭೂಷಿತಃ ಶಿವೋ
ನಿವಿಷ್ಟ ಉತ್ತಮಾಸನೇ ।
ಸ್ವಯಂಭುವಂ ಹರಿಂ ತಥಾ
ನ್ಯವೇಶಯದ್ವರಾಸನೇ ॥ ೧೪೭ ॥

ದೇವ ಶ್ರೇಷ್ಠೌ ಹರೀಶೌ ತಾವನ್ಯೋನ್ಯಾಭಿಮುಖಸ್ಥಿತೌ ।
ಸುವರ್ಣಭಾಜನಸ್ಥಾನ್ನಂ ದದೌ ಭಕ್ತ್ಯಾ ಸ ಗೌತಮಃ ॥ ೧೪೮ ॥

ತ್ರಿಂಶತ್ಪ್ರಭೇದಾನ್ಭಕ್ಷ್ಯಾಂಸ್ತು ಪಾಯಸಂ ಚ ಚತುರ್ವಿಧಂ ।
ಸುಪಕ್ವಂ ಪಾಕಜಾತಂ ಚ ಕಲ್ಪಿತಂ ಯಚ್ಛತದ್ವಯಂ ॥ ೧೪೯ ॥

---

ಕುತ್ತಿಗೆಯಲ್ಲಿ ಬಂಗಾರದ ಯಜ್ಞೋಪವೀತವನ್ನು ಹಾಕಿಕೊಂಡು ಮೇಲೆ ವಸ್ತ್ರವನ್ನು ಹೊದ್ದಿದ್ದನು.

೧೪೬. ಮತ್ತು ತೂಗಾಡುತ್ತಿರುವ ವಜ್ರದ ಕಡಕು, ಸುಗಂಧಪುಷ್ಪಯುಕ್ತವಾದ ಕೂದಲಗಂಟು, ಪಂಚಾಂಗಸಹಿತವಾದ ಗಂಧಲೇಪನ, ಬಾಹ್ವಾಭರಣ, ಬಳೆ ಮತ್ತು ಉಂಗುರ ಇವುಗಳಿಂದಲೂ ಅಲಂಕೃತನಾಗಿದ್ದನು.

೧೪೭. ಹೀಗೆ ಅಲಂಕೃತನಾದ ಈಶ್ವರನು ಉತ್ತಮವಾದ ಆಸನದಲ್ಲಿ ಕುಳಿತನು. ಹಾಗೆಯೇ ಉತ್ತಮಾಸನದಲ್ಲಿ ತನ್ನೆದುರಿಗೆ ಬ್ರಹ್ಮ ಮತ್ತು ವಿಷ್ಣುವನ್ನೂ ಕೂಡಿಸಿದನು.

೧೪೮. ದೇವೋತ್ತಮರಾದ ಹರಿ ಮತ್ತು ಈಶ್ವರರು ಪರಸ್ಪರ ಇದಿರುಬದರಾಗಿ ಕುಳಿತರು. ಅವರಿಗೆ ಗೌತಮನು ಭಕ್ತಿಯಿಂದ ಬಂಗಾರದ ಬಾಳೆಲೆಯನ್ನು ಹಾಕಿ ಅನ್ನವನ್ನು ಬಡಿಸಿದನು.

೧೪೯-೧೫೩. ಮೂವತ್ತು ಬಗೆಯ ಭಕ್ಷ್ಯಗಳು, ನಾಲ್ಕು ವಿಧವಾದ ಪಾಯಸ, ಚೆನ್ನಾಗಿ ಬೇಯಿಸಿ ಮಾಡಿದ ಇನ್ನೂರು ಪದಾರ್ಥಗಳು, ಪಕ್ವ

ಅಪಕ್ವಂ ಮಿಶ್ರಕಂ ತದ್ವತ್ತ್ರಿಶತಂ ಪರಿಕಲ್ಪಿತಂ ।
ಶತಂ ಶತಂ ಸುಕಂದಾನಾಂ ಶಾಕಾನಾಂ ಚ ಪ್ರಕಲ್ಪಿತಂ ॥ ೧೫೦ ॥

ಪಂಚವಿಂಶತಿಧಾ ಸರ್ಪಿಃ ಸಂಸ್ಕೃತಂ ವ್ಯಂಜನಂ ತಥಾ ।
ಶರ್ಕರಾದ್ಯಂ ತಥಾ ಚೂತನೋಚಾಖರ್ಜೂರದಾಡಿಮಂ ॥ ೧೫೧ ॥

ದ್ರಾಕ್ಷೇಕ್ಷುನಾಗರಂಗಂ ಚ ಮಿಷ್ಟಂ ಪಕ್ವಂ ಫಲೋತ್ಕರಂ ।
ಪ್ರಿಯಾಲಕಂ ಜಂಬುಫಲಂ ವಿಕಂತಕಫಲಂ ತಥಾ ॥ ೧೫೨ ॥

ಏವಮಾದೀನಿ ಚಾನ್ಯಾನಿ ದ್ರವ್ಯಾಣೀಶೇ ಸಮರ್ಪ್ಯ ಚ ।
ದತ್ವಾಽಽಪೋಶನಕಂ ವಿಪ್ರೋ ಭುಂಜಧ್ವಮಿತಿ ಚಾಬ್ರವೀತ್ ॥ ೧೫೩ ॥

ಭುಂಜಾನೇಷು ಚ ಸರ್ವೇಷು ವ್ಯಜನಂ ಸೂಕ್ಷ್ಮವಿಸ್ತೃತಂ ।
ಗೌತಮಃ ಸ್ವಯಮಾದಾಯ ಶಿವವಿಷ್ಣೂ ಅವೀಜಯತ್ ॥ ೧೫೪ ॥

ಪರಿಹಾಸಮಥೋ ಕರ್ತುಮಿಯೇಷ ಪರಮೇಶ್ವರಃ ।
ಪಶ್ಯ ವಿಷ್ಣೋ ಹನೂಮಂತಂ ಕಥಂ ಭುಂಕ್ತೇ ಸವಾನರಃ ॥ ೧೫೫ ॥

---

ಮಾಡದೆ ಹಸಿಯ ಪದಾರ್ಥಗಳ ಸಂಯೋಜನೆಯಿಂದ ರಚಿಸಿದ ಮುನ್ನೂರು ಪದಾರ್ಥಗಳು, ಗೆಡ್ಡೆ ಮತ್ತು ಶಾಕಗಳ ನೂರು ನೂರು ಪಲ್ಯಗಳು. ಇಪ್ಪತ್ತೈದು, ವಿಧವಾದ ತುಪ್ಪ, ಚೆನ್ನಾಗಿ ಮಾಡಿದ ಸಾರು, ಹುಳಿ ಮುಂತಾದ ವ್ಯಂಜನಗಳು ಸಕ್ಕರೆ ಮುಂತಾದುವು ಮತ್ತು ಮಾವು, ಬಾಳೆ, ಖರ್ಜೂರ, ದಾಳಿಂಬರೆ, ದ್ರಾಕ್ಷಿ ಕಬ್ಬು ಕಿತ್ತಳೆ, ಮೊರಟೆ, ಜಂಬೂಫಲ, ಬೇಲ ಮುಂತಾದ ಹಣ್ಣುಗಳ ರಾಶಿ ಇವೇ ಮುಂತಾದ ಬೇರೆ ಬೇರೆ ಪದಾರ್ಥಗಳನ್ನು ಬಡಿಸಿ ಗೌತಮನು ಆಪೋಶನ ಹಾಕಿ ಭೋಜನಮಾಡಬೇಕೆಂದು ಬಿನ್ನೈಸಿದನು.

೧೫೪. ಎಲ್ಲರೂ ಊಟಮಾಡುತ್ತಿರಲು ಗೌತಮನು ತಾನೇ ಬೀಸಣಿಗೆಯನ್ನು ತೆಗೆದುಕೊಂಡು ಶಿವ ಮತ್ತು ವಿಷ್ಣು ಇವರಿಬ್ಬರಿಗೆ ಬೀಸಿದನು.

೧೫೫. ಬಳಿಕ ಪರಮೇಶ್ವರನು ಹಾಸ್ಯಮಾಡಬೇಕೆಂದು ಬಯಸಿ ವಿಷ್ಣುವೇ ! ಹನುಮಂತನನ್ನು ನೋಡು, ಆ ಕಪಿಯು ಹೇಗೆ ಊಟಮಾಡುತ್ತಿರುವನು ! ನೋಡೆಂದನು.

ವಾನರಂ ಪಶ್ಯತಿ ಹರೌ ಮಂಡಕಂ ವಿಷ್ಣುಭಾಜನೇ ।
ಚಿಕ್ಷೇಪ ಮುನಿಸಂಘೇಷು ಪಶ್ಯತ್ಸ್ವಪಿ ಮಹೇಶ್ವರಃ ॥ ೧೫೬ ॥

ಹನೂಮತೇ ದತ್ತವಾಂಶ್ಚ ಸ್ವೋಚ್ಛಿಷ್ಟಂ ಪಾಯಸಾದಿಕಂ ।
ತ್ವದುಚ್ಛಿಷ್ಟಮಭೋಜ್ಯಂ ತು ತವೈವ ವಚನಾದ್ವಿಭೋ ॥ ೧೫೭ ॥

ಅನರ್ಹಂ ಮಮ ನೈವೇದ್ಯಂ ಪತ್ರಂ ಪುಷ್ಪಂ ಫಲಾದಿಕಂ ।
ಮಹ್ಯಂ ನಿವೇದ್ಯ ಸಕಲಂ ಕೂಪ ಏವ ವಿನಿಕ್ಷಿಪೇತ್ ॥ ೧೫೮ ॥

ಅಭುಕ್ತೇ ತ್ವದ್ವಚೋ ನ್ಯೂನಂ ಭುಕ್ತೇ ಚಾಪಿ ಕೃಪಾ ತವ ।
ಬಾಣಲಿಂಗೇ ಸ್ವಯಂಭೂತೇ ಚಂದ್ರಕಾಂತೇ ಹೃದಿ ಸ್ಥಿತೇ ॥ ೧೫೯ ॥

ಚಾಂದ್ರಾಯಣಸಮಂ ಜ್ಞೇಯಂ ಶಂಭೋರ್ನೈವೇದ್ಯಭಕ್ಷಣಂ ।
ಭುಕ್ತಿವೇಲೇಯಮಧುನಾ ತದ್ವೈರಸ್ಯಂ ಕಥಾಂತರಾತ್ ॥ ೧೬೦ ॥

---

೧೫೬. ಹರಿಯು ಕಪಿಯನ್ನು ನೋಡುತ್ತಿರಲು ಅವನ ಎಲೆಯಲ್ಲಿ ಮಹೇಶ್ವರನು ಮುನಿಗಳು ನೋಡುತ್ತಿರುವ ಹಾಗೆಯೇ ಮಂಡಿಗೆಯನ್ನು ಹಾಕಿದನು.

೧೫೭. ಆ ಹನುಮಂತನಿಗೆ ತನ್ನ ಎಂಜಲು ಪಾಯಸಾದಿಗಳನ್ನು ಕೊಟ್ಟನು. ಆಗ ಹನುಮಂತನು ಸ್ವಾಮಿಯೇ! ನಿನ್ನ ಉಚ್ಛಿಷ್ಟವನ್ನು ತಿನ್ನ ಬಾರದೆಂದು ನೀನೇ ಹೇಳಿರುವುದರಿಂದ ಇದು ಅಭೋಜ್ಯವಲ್ಲವೆ?

೧೫೮-೧೫೯. "ನನ್ನ ನೈವೇದ್ಯವು ತಿನ್ನಲು ಯೋಗ್ಯವಲ್ಲ. ನನಗೆ ನೈವೇದ್ಯಮಾಡಿದಪತ್ರ, ಪುಷ್ಪ, ಫಲಾದಿಗಳೆಲ್ಲವನ್ನೂ ಬಾವಿಯಲ್ಲಿ ಹಾಕಬೇಕು" ಎಂಬ ನಿನ್ನವಚನವು ಇದನ್ನು ತಿನ್ನದಿದ್ದರೆ ಸಾರ್ಥಕವಾಗುವುದು. ತಿಂದರೆ ನಿನ್ನದಯೆಯುಂಟಾಗುವುದು. ಆದುದರಿಂದ ಏನುಮಾಡಬೇಕೆಂದು ಕೇಳಿದನು.

೧೫೯-೧೬೧. "ಚಂದ್ರನಂತೆ ಕಾಂತಿಯುಕ್ತವಾದ ಸ್ವಯಂಭು ಪಂಚಲಿಂಗವು ಹೃದಯದಲ್ಲಿರುವಾಗ ಈಶ್ವರನ ನೈವೇದ್ಯ ಭಕ್ಷಣವು ಚಾಂದ್ರಾಯಣವ್ರತಕ್ಕೆ ಸಮಾನವಾಗುವುದು. ಇದು ಊಟದ ಸಮಯ, ಬೇರೆವಿಷಯಗಳನ್ನು ಹೇಳುವುದರಿಂದ ವಿರಸವಾಗಬಹುದು. ಊಟವಾದಮೇಲೆ ಹೇಳುವೆನು, ಶಂಕೆಯಿಲ್ಲ

ಭುಕ್ತ್ವಾ ತು ಕಥಯಿಷ್ಯಾಮಿ ನಿರ್ವಿಶಂಕಂ ವಿಭುಂಕ್ಷ್ವ ತತ್ ।
ಅಥಾಸೌ ಜಲಸಂಸ್ಕಾರಂ ಕೃತವಾನ್ ಗೌತಮೋ ಮುನಿಃ ॥ ೧೬೧ ॥

ಆರಕ್ತಸುಸ್ನಿಗ್ಧಸುಸೂಕ್ಷ್ಮಗಾತ್ರಾ-
ನನೇಕಧಾ ಧೌತಸುಶೋಭಿತಾಂಗಾನ್ ।
ತಡಾಗತೋಯೈಃ ಕತಬೀಜಧರ್ಷಿತೈ
ರ್ವಿಶೋಧಿತೈಸ್ತೈಃ ಕರಕಾನಪೂರಯತ್ ॥ ೧೬೨ ॥

ನದ್ಯಾಃ ಸೈಕತವೇದಿಕಾಂ ನವತರಾಂ ಸಂಛಾದ್ಯ ಸೂಕ್ಷ್ಮಾಂಬರೈಃ ।
ಶುದ್ಧೈಶ್ಶ್ವೇತತರೈರಥೋಪರಿ ಘಟಾಂಸ್ತೋಯೇನ ಪೂರ್ಣಾನ್ ಕ್ಷಿಪೇತ್
ಕ್ಷಿಪ್ತ್ವಾ ನಾಲಕಜಾತಿಮಾಸ್ತ್ರಪುಟಕಂ ತಕ್ಕೋಲಕಸ್ತೂರಿಕಾ
ಚೂರ್ಣಂ ಚಂದನಚಂದ್ರರಶ್ಮಿವಿಶದಾಂ ಮಾಲಾಂ ಪುಟಾಂತಾಂ ಕ್ಷಿಪೇತ್೧೬೩

---

ದಂತೆ ಅದನ್ನು ತಿನ್ನು'' ಎಂದು ಈಶ್ವರನು ಹೇಳಿದನು. ಅನಂತರ ಈ ಗೌತಮ ಮುನಿಯು ಕುಡಿಯುವುದಕ್ಕೆ ಯೋಗ್ಯವಾಗುವಂತೆ ನೀರನ್ನು ಶುದ್ಧಿಮಾಡಿದನು.

೧೬೨. ಅವನು ಕೆರೆಯ ನೀರನ್ನು ತಂದು ಅದರಲ್ಲಿ ಚಿಲ್ಲದ ಬೀಜವನ್ನು ಹಾಕಿ ಶುದ್ಧಿಮಾಡಿ, ಆ ನೀರನ್ನು ಸ್ವಲ್ಪಕೆಂಪುಬಣ್ಣದಿಂದ ಕೂಡಿರುವ, ನುಣು ಪಾಗಿ ತೆಳ್ಳಗಿರುವ, ಅನೇಕಬಾರಿ ತೊಳೆದು ಒರೆಸಿ ಚೊಕ್ಕಟವಾಗಿ ಮಾಡಿದ ಕುಂಭಗಳಲ್ಲಿ ತುಂಬಿದನು.

೧೬೩. ಬಳಿಕ ನದಿಯಮರಳಿನಿಂದ ಹೊಸದಾಗಿ ಜಗುಲಿಯೊಂದನ್ನು ಮಾಡಿ ಅದರಮೇಲೆ ನೀರುತುಂಬಿದ್ದ ಆ ಕುಂಭಗಳನ್ನಿರಿಸಿ ಅದರಮೇಲೆ ತೆಳ್ಳಗಿರುವ, ಬಿಳುಪಾದ, ಕೊಳೆಯಿಲ್ಲದಿರುವ ವಸ್ತ್ರಗಳನ್ನು ಹೊದಿಸಬೇಕು. ಆ ನೀರಿನೊಳಗೆ ಲಾಮಂಚದ ಕಂತೆ, ಏಲಕ್ಕಿಪುಡಿ, ಕಸ್ತೂರಿ, ಸುಗಂಧವೂ, ಚಂದ್ರನ ಕಿರಣದಂತೆ ಶೀತಳವೂ ಆದ ದೇವೀಲತೆ (ಸುಂಕೇಬೇರು) ಇವುಗಳನ್ನು ಹಾಕಬೇಕು.

ಯಾಮುಸ್ಥಾಪಿ ಪುನಶ್ಚ ವಾರಿವಸನೇನಾಶೋಧ್ಯ ಕುಂಭೇ ಕ್ಷಿಪೇತ್ ।
ಚಂದ್ರಗ್ರಂಥಿಮಥೋ ನಿಧಾಯ ವಕುಲಂ ಕ್ಷಿಪ್ತ್ವಾ ತಥಾ ಪಾಟಲಂ ೧೬೪

ಶೇಫಾಲೀಸ್ತಬಕಮಥೋ ಜಲೇ ಚ ತತ್ರ
ವಿನ್ಯಸ್ಯ ಪ್ರಥಮತ ಏವ ತೋಯಶುದ್ಧಿಂ
ಕೃತ್ವಾಽಥೋ ಮೃದುತರ ಸೂಕ್ಷ್ಮವಸ್ತ್ರ ಖಂಡೇ-
ನಾವೇಷ್ಟ್ಯೇತ್ಸೃಣಿಕಮುಖಂ ಚ ಸೂಕ್ಷ್ಮಚಂದ್ರಂ ॥ ೧೬೫ ॥

ಅನಾತಪಪ್ರದೇಶೇ ತು ನಿಧಾಯ ಕರಕಾನಥ ।
ಮಂದವಾತಸಮೋಪೇತೇ ಸೂಕ್ಷ್ಮವ್ಯಜನ ವೀಜಿತೇ ॥ ೧೬೬ ॥

ಸಿಂಚೇಚ್ಛೀತೈರ್ಜಲೈಶ್ಚಾಪಿ ವಾಸಿತೈಃ ಸೃಣಿಕಾಮಪಿ ।
ಸಂಸ್ಕೃತಾಃ ಸ್ವಾಯತಾಸ್ತತ್ರ ನರಾ ನಾರ್ಯೋಽಥವಾ ದ್ವಿಜ ॥ ೧೬೭ ॥

---

೧೬೪. ಅದನ್ನು ಒಂದು ಜಾವ (ಮೂರುಗಂಟೆಗಳು) ದವರೆಗೆ ಹಾಗೆಯೇ ಇಟ್ಟಿದ್ದು, ಬಳಿಕ ಆ ನೀರನ್ನು ವಸ್ತ್ರದಿಂದ ಶೋಧಿಸಿ ಪುನಃ ಕುಂಭದಲ್ಲಿ ತುಂಬಬೇಕು. ಅನಂತರ ಅದರಲ್ಲಿ ಪಚ್ಚಕರ್ಪೂರದ ಹಳಿಗಳನ್ನು ಹಾಕಿ ಪಗಡೆ ಪಾದರಿಗಳ ಹೂವನ್ನು ಸೇರಿಸಬೇಕು.

೧೬೫. ಆಮೇಲೆ ಕಾಡುಮಲ್ಲಿಗೆಯ ಗೊಂಚಲನ್ನು ಆ ನೀರಿನಲ್ಲಿಟ್ಟು, ಮೊದಲೇ ಶೋಧಿಸಿದ್ಧ ಆ ನೀರನ್ನು ಸಣ್ಣಕಣ್ಣುಗಳುಳ್ಳ ಜರಡಿಗೆ ತೆಳ್ಳಗೆ ಮೃದುವಾಗಿರುವ ಬಟ್ಟೆಯನ್ನು ಕಟ್ಟಿ, ಅದರಲ್ಲಿ ಪುನಃ ಶೋಧಿಸಬೇಕು.

೧೬೬. ಅನಂತರ ಬಿಸಲಿಲ್ಲದ ಸ್ಥಳದಲ್ಲಿ ಮಂದಮಾರುತವು ಬೀಸುತಿರುವಾಗ ಆ ಕಲಶಗಳನ್ನಿಟ್ಟು ಬೀಸಣಿಗೆಯಿಂದ ಬೀಸಬೇಕು.

೧೬೭-೧೬೯. ಬಳಿಕ ಶೀತಳವೂ ಸುಗಂಧವೂ ಆದ ನೀರನ್ನು ಕಲಶಗಳ ಮೇಲೆ ಚುಮುಕಿಸಬೇಕು. ತರುವಾಯ ಪುರುಷರು ಸ್ತ್ರೀಯರು ಅಥವಾ ಕನ್ಯೆಯರು ಮೈತೊಳೆದುಕೊಂಡು ಶುದ್ಧರಾಗಿ ಒಗೆದು ಮಡಿಮಾಡಿದ ಬಟ್ಟೆಯನು

ನ

ತತ್ಕನ್ಯಾನಾ ಕ್ಷಾಲಿತಾಂಗಾಃ ಧೌತವಮಂದಾಸ್ಸುವಾಸಸಃ ।
ಮಧುಪಿಂಗಮನಿರ್ಯಾಸಮಸಾಂದ್ರಮಗುರೂದ್ಭವಂ ॥ ೧೬೮ ॥

ಬಾಹುಮೂಲೇ ಚ ಕಂಠೇ ಚ ವಿಲಿಪ್ಯಾಸಾಂದ್ರಮೇವ ಚ ।
ಮಸ್ತಕೇ ಚಾಪಕಂ ನ್ಯಸ್ಯ ಪಂಚಗಂಧವಿಲೇಪನಂ ॥ ೧೬೯ ||

ಪುಷ್ಪನದ್ಧಸುಕೇಶಾಸ್ತು ತಾಃ ಶುಭಾಃ ಸ್ಯುಃ ಸುನಿರ್ಮಲಾಃ ।
ಏವಮೇವಾರ್ಚಿತಾ ನಾರ್ಯ ಆತ್ತಕುಂಕುಮವಿಗ್ರಹಾಃ ॥ ೧೭೦ ॥

ಯುವತ್ಯಶ್ಚಾರುಸರ್ವಾಂಗ್ಯೋ ನಿತರಾಂ ಭೂಷಣೈರಪಿ ।
ಏತಾದೃಗ್ವನಿತಾಭಿರ್ವಾ ನರೈರ್ವಾ ದಾಪಯೇಜ್ಜಲಂ ॥ ೧೭೧ ॥

ತೇಽಪಿ ಪ್ರದಾನಸಮಯೇ ಸೂಕ್ಷ್ಮವಸ್ತ್ರಾಲ್ಪವೇಷ್ಟನಂ ।
ಅಥ ವಾಮಕರೇ ನ್ಯಸ್ಯ ಕರಕಂ ಪ್ರೇಕ್ಷ್ಯ ತತ್ರ ಹಿ ॥ ೧೭೨ ॥

---

ಟ್ಟುಕೊಂಡು, ಮನೋಹರವಾದ, ಕೇಸರೀ ಬಣ್ಣದನುಣುಪಾದ ಅಗುರುವಿನಗಂಧವನ್ನು ಕಂಕಳು ಮತ್ತು ಕೊರಳುಗಳಲ್ಲಿ ತೆಳ್ಳಗೆ ಹಚ್ಚಿಕೊಂಡು, ತಲೆಗೆ ಸುವಾಸನೆಯ ತೈಲವನ್ನು ಲೇಪಿಸಿಕೊಂಡು ಪಂಚಗಂಧವನ್ನು ಮೈಗೆ ಲೇಪಿಸಿಕೊಳ್ಳಬೇಕು.

೧೭೦. ಅವರು ಜುಟ್ಟಿನಲ್ಲಿ ಹೂವನ್ನು ಮುಡಿಯಬೇಕು. ಹೀಗೆ ಚೆನ್ನಾಗಿ ಪರಿಶುದ್ಧರಾದವರು ನೀರು ಬಡಿಸಲು ಅರ್ಹರಾಗುವರು. ಈ ರೀತಿಯಾಗಿ ಅಲಂಕೃತರಾದವರು ಹೆಂಗಸರಾದರೆ ಅವರು ಕುಂಕುಮವನ್ನು ಹಚ್ಚಿಕೊಂಡಿರಬೇಕು.

೧೭೧. ಅಂತಹ ಯುವತಿಯರು ಸರ್ವಾಂಗಗಳಲ್ಲಿಯೂ ಆಭರಣಗಳನ್ನು ಧರಿಸಿ ಮನೋಹರರಾಗಿ ಕಂಗೊಳಿಸಬೇಕು. ಈ ರೀತಿಯಾಗಿ ಸ್ತ್ರೀಯರಾಗಲಿ ಅಥವಾ ಪುರುಷರಾಗಲಿ ನೀರನ್ನು ಬಡಿಸಬೇಕು.

೧೭೨-೧೭೩. ಅವರೂ ಸಹ ನೀರನ್ನು ಬಡಿಸುವಾಗ ಚಿಕ್ಕದಾದ ನವಿರು ಬಟ್ಟೆಯನ್ನು ಸುತ್ತಿಕೊಂಡು ಎಡಗೈಯಲ್ಲಿ ಕಲಶವನ್ನು ಇಟ್ಟುಕೊಂಡು ಅಲ್ಲಿಯೇ

ದೋರಿಕಾನ್ಯಸ್ತಮುನ್ಮೃಚ್ಯ ತತಸ್ತೋಯಂ ಪ್ರದಾಪಯೇತ್ ।
ಏವಂ ಸ ಕಾರಯಾಮಾಸ ಗೌತಮೋ ಭಗವಾನ್ಮುನಿಃ ೧೭೩ ॥

ಮಹೇಶಾದಿಷು ಸರ್ವೇಷು ಭುಕ್ತವತ್ಸು ಮಹಾತ್ಮಸು ।
ಪ್ರಕ್ಷಾಲಿತಾಂಘ್ರಿಹಸ್ತೇಷು ಗಂಧೋದ್ವರ್ತಿತಪಾಣಿಷು ॥ ೧೭೪ ॥

ಉಚ್ಚಾಸನಸಮಾಸೀನೇ ದೇವದೇವೇ ಮಹೇಶ್ವರೇ ।
ಅಥ ನೀಚಸಮಾಸೀನಾ ದೇವಾಃ ಸರ್ಷಿಗಣಾಸ್ತಥಾ ॥ ೧೭೫ ॥

ಮಣಿಪಾತ್ರೇಷು ಸಂವೇಷ್ಟ್ಯ ಪೂಗಖಂಡಾನ್ಸುಧೂಪಿತಾನ್ ।
ಅಕೋಣಾನ್ವರ್ತುಲಾನ್ಸ್ಥೂಲಾನ್ ಸೂಕ್ಷ್ಮಾನಕೃಶಾನಪಿ ॥ ೧೭೬ ॥

ಶ್ವೇತಪತ್ರಾಣಿ ಸಂಶೋಧ್ಯ ಕ್ಷಿಪ್ತ್ವಾ ಕರ್ಪೂರಖಂಡಕಂ ।
ಚೂರ್ಣಂ ಚ ಶಂಕರಾಯಾಥ ನಿವೇದಯತಿ ಗೌತಮೋ ॥ ೧೭೭ ॥

---

ದೃಷ್ಟಿಯಿಟ್ಟು ಕಲಶದಮುಚ್ಚಳವನ್ನು ತೆಗೆದು ನೀರನ್ನು ಬಡಿಸಬೇಕು. ಇದೇ ಕುಡಿಯುವನೀರನ್ನು ಸಂಸ್ಕರಿಸಿ ಬಡಿಸುವ ಕ್ರಮವು. ಪೂಜ್ಯನಾದ ಗೌತಮ ಮುನಿಯು ಇದೇ ರೀತಿಯಾಗಿ ಮಾಡಿದನು.

೧೭೪. ಮಹೇಶ್ವರ ಮುಂತಾದ ಸಕಲ ಮಹಾತ್ಮರೂ ಭೋಜನಮಾಡಿ ಕೈಕಾಲುಗಳನ್ನು ತೊಳೆದುಕೊಂಡು ಕೈಗಳಲ್ಲಿ ಗಂಧವನ್ನುಸವರಿ ಹಚ್ಚಿಕೊಂಡರು.

೧೭೫. ಅನಂತರ ದೇವದೇವನಾದ ಮಹೇಶ್ವರನು ಎತ್ತರವಾದ ಆಸನದಲ್ಲಿಯೂ, ಋಷಿಗಣಸಹಿತರಾದ ದೇವತೆಗಳು ಕೆಳಗಿನ ಪೀಠದಲ್ಲಿಯೂ ಕುಳಿತರು.

೧೭೬-೧೭೭. ಬಳಿಕ ಗೌತಮಮುನಿಯು ಶೋಧಿಸಿದ ಬೆಳ್ಳಗಿರುವ ವೀಳೆಯದೆಲೆಗಳನ್ನೂ, ನುಣ್ಣಗಿರುವಂತೆಯೂ, ಬಹುದಪ್ಪವಾಗಿಲ್ಲದಂತೆಯೂ, ಗುಂಡಗೆ ಕತ್ತರಿಸಿದ ಸುಗಂಧಯುಕ್ತವಾದ ಮತ್ತು ಪಚ್ಚಕರ್ಪೂರಮಿಶ್ರವಾದ ಅಡಿಕೆಯ ಪುಡಿಯನ್ನೂ ಮತ್ತು ಸುಣ್ಣವನ್ನೂ ಸಹ ರತ್ನಖಚಿತ ತಟ್ಟೆಗಳಲ್ಲಿ ಶಂಕರನಿಗೆ ಸಮರ್ಪಿಸಿದನು.

ಗೃಹಾಣ ದೇವ ತಾಂಬೂಲಮಿತ್ಯುಕ್ತವಚನೇ ಮುನೌ ।
ಕಪೇ ಗೃಹಾಣ ತಾಂಬೂಲಂ ಪ್ರಯಚ್ಛ ಮಮ ಖಂಡಕಾನ್ ॥ ೧೭೮ ॥

ಉವಾಚ ವಾನರೋ ನಾಸ್ತಿ ಮಮ ಶುದ್ಧಿರ್ಮಹೇಶ್ವರ ।
ಅನೇಕಫಲಭೋಕ್ತೃತ್ವಾದ್ವಾನರಸ್ತು ಕಥಂ ಶುಚಿಃ ॥ ೧೭೯ ॥

ತಚ್ಛ್ರುತ್ವಾ ತು ವಿರೂಪಾಕ್ಷಃ ಪ್ರಾಹ ವಾನರಸತ್ತಮಂ ।
ಮದ್ವಾಕ್ಯಾದಖಿಲಂ ಶುದ್ಧ್ಯೇನ್ಮದ್ವಾಕ್ಯಾದಮೃತಂ ವಿಷಂ ॥ ೧೮೦ ॥

ಮದ್ವಾಕ್ಯಾದಖಿಲಾ ವೇದಾ ಮದ್ವಾಕ್ಯಾದ್ದೇವತಾದಯಃ ।
ಮದ್ವಾಕ್ಯಾದ್ಧರ್ಮವಿಜ್ಞಾನಂ ಮದ್ವಾಕ್ಯಾನ್ಮೋಕ್ಷ ಉಚ್ಯತೇ ॥ ೧೮೧ ॥

---

೧೭೮. ಸ್ವಾಮಿಯೇ! ತಾಂಬೂಲವನ್ನು ಸ್ವೀಕರಿಸೆಂದು ಗೌತಮ ಮುನಿಯು ಹೇಳಿದನು. ಆಗ ಕಪಿಯೇ! ನೀನು ತಾಂಬೂಲವನ್ನು ತೆಗೆದು ಕೊಂಡು ಅಡಿಕೆಯನ್ನು ಕೊಟ್ಟು ವೀಳೆಯದೆಲೆಯನ್ನು ಸುಣ್ಣಹಚ್ಚಿ ನನಗೆಕೊಡು ಎಂದು ಹನುಮಂತನಿಗೆ ಹೇಳಿದನು.

೧೭೯. ಮಹೇಶ್ವರನೇ! ನಾನು ಶುದ್ಧನಾಗಿಲ್ಲ. ಅನೇಕ ಫಲಗಳನ್ನು ತಿನ್ನುತ್ತಿರುವ ವಾನರನುಃಹೇಗೆ ಶುದ್ಧನಾಗಿರುವನು? ಆದುದರಿಂದ ನಾನು ಇದನ್ನು ಮುಟ್ಟಲಾರೆನು ಎಂದು ಹನುಮಂತನು ಹೇಳಿದನು.

೧೮೦–೧೮೨. ವಿರೂಪಾಕ್ಷನು ಅದನ್ನು ಕೇಳಿ ಕಪಿಶ್ರೇಷ್ಠನಾದ ಹನು ಮಂತನನ್ನು ಕುರಿತು ಹನುಮಂತನೇ! ನನ್ನ ವಚನದಿಂದ ಎಲ್ಲವೂ ಶುದ್ಧಿಯಾ ಗುವುದು. ನನ್ನ ವಾಕ್ಯದಿಂದ ವಿಷವು ಅಮೃತವಾಗುವುದು. ಸಮಸ್ತವೇದಗಳೂ ನನ್ನ ವಾಕ್ಯಗಳೇ ಆಗಿವೆ. ನಾನು ದೇವತೆಯೆಂದು ಹೇಳಿದರೆ ಯಾರೇಆಗಲಿ ಅವರು ದೇವತೆಗಳಾಗುವರು. ನನ್ನವಚನದಿಂದಲೇ ಧರ್ಮವು ನಿರ್ಣಯವಾಗು ವುದು. ಅದರಿಂದಲೇ ಮೋಕ್ಷವುಂಟಾಗುವುದು. ಪುರಾಣ, ಆಗಮ, ಸ್ಮೃತಿ ಇವೆ ಲ್ಲವೂ ನನ್ನವಾಕ್ಯಗಳೇ ಆಗಿವೆ. ಆದುದರಿಂದ ನಾನು ಹೇಳಿರುವೆನು ನೀನುಶುದ್ಧನು

ಪುರಾಣಾನ್ಯಾಗಮಾಶ್ಚೈವ ಸ್ಮೃತಯೋ ಮಮ ವಾಕ್ಯತಃ ।
ಅತೋ ಗೃಹಾಣ ತಾಂಬೂಲಂ ಮಮ ದೇಹಿ ಸುಖಂಡಕಾನ್ ॥ ೧೮೨ ॥

ಹರಿರ್ವಾಮಕರೇಣಾಧಾತ್ತಾಂಬೂಲಂ ಪೂಗಖಂಡಕಂ ।
ತತಃ ಪತ್ರಾಣಿ ಸಂಗೃಹ್ಯ ತಸ್ಮೈ ಖಂಡಾನ್ಸಮರ್ಪಯತ್ ॥ ೧೮೩ ॥

ಕರ್ಪೂರಮಗ್ರತೋ ದತ್ತಂ ಗೃಹೀತ್ವಾsಭಕ್ಷಯಚ್ಛಿವಃ ।
ದೇವೇ ತು ಕೃತತಾಂಬೂಲೇ ಪಾರ್ವತೀ ಮಂದರಾಚಲಾತ್ ॥ ೧೮೪ ॥

ಜಯಾವಿಜಯಯೋರ್ಹಸ್ತಂ ಗೃಹೀತ್ವಾಯಾನ್ಮುನೇರ್ಗೃಹಂ ।
ದೇವಪಾದೌ ತತೋ ನತ್ವಾ ವಿನಮ್ರವದನಾsಭವತ್ ॥ ೧೮೫ ॥

ಉನ್ನಮಯ್ಯ ಮುಖಂ ತಸ್ಯಾ ಇದಮಾಹ ತ್ರಿಲೋಚನಃ ।
ತ್ವದರ್ಥಂ ದೇವದೇವೇಶಿ ಅಪರಾಧಃ ಕೃತೋ ಮಯಾ ॥ ೧೮೬ ॥

---

ತಾಂಬೂಲವನ್ನು ತೆಗೆದುಕೊಂಡು ಅಡಿಕೆಪುಡಿಯನ್ನು ಕೊಟ್ಟು ವೀಳೆಯದೆಲೆಯನ್ನು ನನಗೆ ಕೊಡು ಎಂದು ಹೇಳಿದನು.

೧೮೩. ಕಪಿಯು ಎಡಗೈಯಲ್ಲಿ ತಾಂಬೂಲವನಿಟ್ಟುಕೊಂಡು ಎಲೆಯನ್ನು ಮಡಿಸಿ ಅಡಕೆಯ ಪುಡಿಯನ್ನು ಈಶ್ವರನಿಗೆ ಕೊಟ್ಟನು.

೧೮೪-೧೮೫. ಮೊದಲು ಪಚ್ಚಕರ್ಪೂರಸಹಿತವಾದ ಅಡಿಕೆಯನ್ನು ಕೊಟ್ಟು ಬಳಿಕ ಮಡಿಸಿದ ವೀಳೆಯದೆಲೆಯನ್ನು ಕೊಟ್ಟನು. ಅದನ್ನು ಈಶ್ವರನು ತಿಂದನು. ಹೀಗೆ ಮಹೇಶ್ವರನು ತಾಂಬೂಲವನ್ನು ಸ್ವೀಕಾರಮಾಡಿದ ಮೇಲೆ ಪಾರ್ವತಿಯು ಮಂದರಾಚಲದಿಂದ ಜಯೆ, ವಿಜಯೆಗಳ ಕೈಹಿಡಿದುಕೊಂಡು ಗೌತಮಮುನಿಯ ಮನೆಗೆ ಬಂದಳು. ಬಳಿಕ ಆ ಪಾರ್ವತಿಯು ಮಹದೇವನ ಪಾದಗಳಿಗೆ ನಮಸ್ಕಾರಮಾಡಿ ಮುಖವನ್ನು ತಗ್ಗಿಸಿಕೊಂಡು ನಿಂತಳು.

೧೮೬-೧೮೮. ತ್ರಿಲೋಚನನು ಆಕೆಯ ಮುಖವನ್ನೆತ್ತಿ " ದೇವಿಯೇ! ನಿನ್ನ ವಿಷಯದಲ್ಲಿ ನಾನು ತಪ್ಪುಮಾಡಿರುವೆನು. ನಿನ್ನನ್ನು ಬಿಟ್ಟು ಭೋಜನ ಮಾಡಿದೆ, ಹಾಗೆಯೇ ಇನ್ನೊಂದು ತಪ್ಪುಮಾಡಿರುವೆನು; ಸುಂದರಿಯೇ! ಕೇಳು ನಿನ್ನನ್ನು ನಮ್ಮ ಮನೆಯಲ್ಲಿಯೇ ಬಿಟ್ಟು ಇಲ್ಲಿಗೆ ನಾನು ಬಂದುದು ಮಹಾಪ

ಯತ್ವಾಂ ವಿಹಾಯ ಭುಕ್ತಂ ಹಿ ತಥಾನ್ಯಚ್ಛೃಣು ಸುಂದರಿ ।
ಯತ್ತ್ವಾಂ ಸ್ವಮಂದಿರೇ ತ್ಯಕ್ತ್ವಾ ಮಹದೇನೋ ಮಯಾ ಕೃತಂ ॥

ಕ್ಷಂತುಮರ್ಹಸಿ ದೇವೇಶಿ ತ್ಯಕ್ತ್ವಕೋಪಾ ವಿಲೋಕಯ ।
ನ ಬಭಾಷೇಸ್ಯೇವಮುಕ್ತಾ ಸಾಽರುಂಧತ್ಯಾ ವಿನಿರ್ಯಯೌ ॥ ೧೮೮ ॥

ನಿರ್ಗಚ್ಛಂತೀಂ ಮುನಿಜ್ಞಾತ್ವಾ ದಂಡವತ್ಪ್ರಣನಾಮ ಹ ।
ಅಥೋವಾಚ ಶಿವಾ ತಂ ಚ ಗೌತಮ ತ್ವಂ ಕಿಮಿಚ್ಛಸಿ ॥ ೧೮೯ ॥

ಅಥಾಹ ಗೌತಮೋ ದೇವೀಂ ಪಾರ್ವತೀಂ ಪ್ರೇಕ್ಷ್ಯ ಸಸ್ಮಿತಾಂ ।
ಕೃತಕೃತ್ಯೋ ಭವೇಯಂ ವೈ ಭುಕ್ತ್ವಾಯಾಂ ಮದ್ಗೃಹೇ ತ್ವಯಿ ॥ ೧೯೦ ॥

ತತಃ ಪ್ರಾಹ ಶಿವಾ ವಿಪ್ರಂ ಗೌತಮಂ ರಚಿತಾಂಜಲಿಂ ।
ಭೋಕ್ಷ್ಯಾಮಿ ತ್ವದ್ಗೃಹೇ ವಿಪ್ರ ಶಂಕರಾನುಮತೇನ ವೈ ॥ ೧೯೧ ॥

---

ರಾಧವು. ದೇವೇಶ್ವರಿಯೇ! ಇವನ್ನು ನೀನು ಕ್ಷಮಿಸುವಿಯೆಂದು ನಂಬಿರುವೆನು, ಕೋಪವನ್ನು ಬಿಟ್ಟು ನನ್ನನ್ನು ನೋಡು" ಎಂದು ಹೇಳಿದನು. ಆಗ ಪಾರ್ವತಿಯು ಮಾತನಾಡುವುದಿಲ್ಲವೆಂದು ಹೇಳಿ ಅರುಂಧತಿಯೊಡನೆ ಹೊರಟು ಹೋದಳು.

೧೮೯. ಗೌತಮನು ಪಾರ್ವತಿಯು ಹೋಗುತ್ತಿರುವುದನ್ನು ನೋಡಿ ದೇವಿಗೆ ಸಾಷ್ಟಾಂಗ ನಮಸ್ಕಾರಮಾಡಿದನು. ಕೂಡಲೇ ಪಾರ್ವತಿಯು ಗೌತಮನೇ! ನೀನು ಏನನ್ನು ಅಪೇಕ್ಷಿಸುವೆ? ಎಂದು ಕೇಳಿದಳು.

೧೯೦. ಅನಂತರ ಗೌತಮನು ಮಂದಹಾಸಯುಕ್ತಳಾಗಿದ್ದ ಪಾರ್ವತೀ ದೇವಿಯನ್ನು ನೋಡಿ ದೇವಿಯೇ! ನೀನು ನಮ್ಮ ಮನೆಯಲ್ಲಿ ಭೋಜನಮಾಡಿದರೆ ನಾನು ಕೃತಾರ್ಥನಾಗುವೆನು ಎಂದು ಹೇಳಿದನು.

೧೯೧. ತರುವಾಯ ಪಾರ್ವತಿಯು ಕೈಮುಗಿದು ನಿಂತಿದ್ದ ಗೌತಮ ಬ್ರಾಹ್ಮಣನನ್ನು ಕುರಿತು ಈಶ್ವರನ ಆಜ್ಞೆಯಾದರೆ ನಿನ್ನ ಮನೆಯಲ್ಲಿ ಭೋಜನ ಮಾಡುವೆನೆಂದು ಹೇಳಿದಳು.

ಅಥ ಗತ್ವಾ ಶಿವಂ ವಿಪ್ರೋ ಲಬ್ಧಾನುಜ್ಞಸ್ತ್ವರಾಗತಃ ।
ಭೋಜಯಾಮಾಸ ಗಿರಿಜಾಂ ದೇವೀಂ ಚಾರುಂಧತೀಂ ತಥಾ ॥ ೧೯೨ ॥

ಭುಕ್ತ್ವಾ ತು ಪಾರ್ವತೀ ಸರ್ವಗಂಧಪುಷ್ಪಾದ್ಯಲಂಕೃತಾ ।
ಸಹಾಸುಚರಕನ್ಯಾಭಿಃ ಸಹಸ್ರಾಭಿರ್ಹರಂ ಯಯೌ ॥ ೧೯೩ ॥

ಅಥಾಹ ಶಂಕರೋ ದೇವೀಂ ಗಚ್ಛ ಗೌತಮಮಂದಿರಂ ।
ಸಂಧ್ಯೋಪಾಸ್ತಿಮಹಂ ಕೃತ್ವಾ ಹ್ಯಾಗಮಿಷ್ಯೇ ತವಾಂತಿಕಂ ॥ ೧೯೪ ॥

ಇತ್ಯುಕ್ತ್ವಾ ಪ್ರಯಯೌ ದೇವೀ ಗೌತಮಸ್ಯೈವ ಮಂದಿರಂ ।
ಸಂಧ್ಯಾವಂದನಕಾಮಾಸ್ತು ಸರ್ವ ಏವ ವಿನಿರ್ಗತಾಃ ॥ ೧೯೫ ॥

ಕೃತಸಂಧ್ಯಾಸ್ತಡಾಗೇ ತು ಮಹೇಶಾದ್ಯಾಶ್ಚ ಕೃತ್ಸ್ನಶಃ ।
ಅಥೋತ್ತರಮುಖಶ್ಶಂಭುರ್ನ್ಯಾಸಂ ಕೃತ್ವಾ ಜಜಾಪ ಹ ॥ ೧೯೬ ॥

---

೧೯೨. ಕೂಡಲೇ ಬ್ರಾಹ್ಮಣನು ಈಶ್ವರನ ಬಳಿಗೆ ಹೋಗಿ ಅವನ ಅಪ್ಪಣೆಯನ್ನು ಪಡೆದು ಶೀಘ್ರವಾಗಿ ಬಂದು ಗಿರಿಜಾದೇವಿ ಮತ್ತು ಅರುಂಧತೀ ದೇವಿಯರಿಗೆ ಭೋಜನಮಾಡಿಸಿದನು.

೧೯೩. ಪಾರ್ವತಿಯು ಊಟಮಾಡಿ ಸಕಲ ಗಂಧಪುಷ್ಪಗಳಿಂದಲಂಕೃತಳಾಗಿ ತನ್ನ ಜೊತೆಗಾತಿಯರಾದ ಸಾವಿರಾರು ಮಂದಿಕನ್ಯೆಯರೊಡನೆ ಈಶ್ವರನ ಬಳಿಗೆ ಬಂದಳು.

೧೯೪. ಆಗ ಶಂಕರನು ದೇವಿಗೆ ಗೌತಮಮಂದಿರಕ್ಕೆ ಹೋಗು; ನಾನು ಸಂಧ್ಯೋಪಾಸನೆಯನ್ನು ಮಾಡಿಕೊಂಡು ನಿನ್ನ ಬಳಿಗೆ ಬರುವೆನು ಎಂದು ಹೇಳಿದನು.

೧೯೫. ಅದನ್ನು ಕೇಳಿ ದೇವಿಯು ಗೌತಮನ ಮನೆಗೆ ಹೋದಳು. ಸಂಧ್ಯಾವಂದನೆಯನ್ನು ಮಾಡಲು ಸರ್ವರೂ ಅಲ್ಲಿಂದ ತೆರಳಿದರು.

೧೯೬. ಮಹೇಶ್ವರಾದಿಗಳೆಲ್ಲರೂ ಕೆರೆಯಲ್ಲಿ ಸಂಧ್ಯಾವಂದನೆಯನ್ನು ಮಾಡಿದರು. ಅನಂತರ ಈಶ್ವರನು ಉತ್ತರಾಭಿಮುಖವಾಗಿ ಕುಳಿತು ನ್ಯಾಸ ಮಾಡಿ ಜಪಿಸಿದನು.

**ಅಥ ವಿಷ್ಣುರ್ಮಹಾತೇಜಾ ಮಹೇಶಮಿದಮಬ್ರವೀತ್ |**
**ಸರ್ವೈರ್ನಮಸ್ಯತೇ ಯಸ್ತು ಸರ್ವೈರೇವ ಸಮರ್ಚ್ಯತೇ || ೧೯೭ ||**

**ಹೂಯತೇ ಸರ್ವಯಜ್ಞೇಷು ಸ ಭವಾನ್ಕಿಂ ಜಪಿಷ್ಯತಿ |**
**ರಚಿತಾಂಜಲಯಃ ಸರ್ವೇ ತ್ವಾಮೇವೈಕಮುಪಾಸತೇ**
**ಸ ಭವಾನ್ದೇವದೇವೇಶ ಕಸ್ಮೈ ವಿರಚಿತಾಂಜಲಿಃ || ೧೯೮ ||**

**ನಮಸ್ಕಾರಾದಿ ಪುಣ್ಯಾನಾಂ ಫಲದಸ್ತ್ವಂ ಮಹೇಶ್ವರ |**
**ತವ ಕಃ ಫಲದೋ ವಂದ್ಯಃ ಕೋ ವಾ ತ್ವತ್ತೋಽಧಿಕೋ ವದ || ೧೯೯ ||**

**ತಚ್ಛ್ರುತ್ವಾ ಶಂಕರಃ ಪ್ರಾಹ ದೇವದೇವಂ ಜನಾರ್ದನಂ |**
**ಧ್ಯಾಯೇ ನ ಕಿಂಚಿದ್ಗೋವಿಂದ ನಮಸ್ಯೇ ಹ ನ ಕಿಂಚನ |**
**ಕಿಂತು ನಾಸ್ತಿಕಜಂತೂನಾಂ ಪ್ರವೃತ್ತ್ಯರ್ಥಮಿದಂ ಮಯಾ || ೨೦೦ ||**

---

೧೯೭-೧೯೮. ಆಗ ಮಹಾತೇಜಸ್ವಿಯಾದ ಹರಿಯು ಮಹೇಶನನ್ನು " ಈಶ್ವರನೇ ! ಸರ್ವವಂದ್ಯನೂ, ಸರ್ವಪೂಜ್ಯನೂ, ಸಕಲಯಜ್ಞಗಳಲ್ಲಿಯೂ ಪೂಜೆಗಾಗಿ ಆಹ್ವಾನಿಸಲ್ಪಡುವವನೂ ಆಗಿರುವ ನೀನು ಏತಕ್ಕೋಸ್ಕರ ಏನನ್ನು ಜಪಿಸುತ್ತಿರುವೆ ? ಎಲ್ಲರೂ ಕೈಮುಗಿದುಕೊಂಡು ನಿನ್ನನ್ನೇ ಉಪಾಸನೆಮಾಡುತ್ತಿರಲಾಗಿ ಅಂತಹ ದೇವದೇವೇಶನಾದ ನೀನು ಯಾರಿಗೆ ಕೈಮುಗಿಯುತ್ತಿರುವೆ ?

೧೯೯. ಮಹೇಶ್ವರನೇ ! ನಮಸ್ಕಾರಾದಿ ಪುಣ್ಯಕರ್ಮಗಳಿಗೆ ನೀನು ಫಲದಾತೃವು. ಅಂತಹ ನಿನಗೆ ಫಲಕೊಡುವವರಾರು ? ನಿನಗಿಂತ ಅಧಿಕನಾರು ಹೇಳು " ಎಂಬುದಾಗಿ ಕೇಳಿದನು.

೨೦೦-೨೦೧. ಅದನ್ನು ಕೇಳಿ ಶಂಕರನು " ಗೋವಿಂದನೇ! ನಾನು ಯಾರನ್ನೂ ಧ್ಯಾನಮಾಡುವುದಿಲ್ಲ. ನಮಸ್ಕರಿಸುವುದಿಲ್ಲ. ಆದರೆ ನಾಸ್ತಿಕ ಪ್ರಾಣಿಗಳಿಗೆ ಕರ್ಮಮಾರ್ಗದಲ್ಲಿ ಪ್ರವೃತ್ತ್ಯರ್ಥವಾಗಿ ಈ ರೀತಿ ತೋರಿಸುವೆನು. ಹೀಗೆ ನಾನು ಮಾಡದಿದ್ದರೆ ಎಲ್ಲರೂ ಕರ್ಮಮಾಡದೆ ಪಾಪಿಗಳಾಗುವರು. ಆದ

ದರ್ಶನೀಯಂ ಹರೇ ಚೈತದನ್ಯಥಾ ಪಾಪಕಾರಿಣಃ ।
ತಸ್ಮಾಲ್ಲೋಕೋಪಕಾರಾರ್ಥಮಿದಂ ಸರ್ವಂ ಕೃತಂ ಮಯಾ ॥ ೨೦೧ ॥

ಓಮಿತ್ಯುಕ್ತ್ವಾ ಹರಿರಥ ತಂ ನತ್ವಾ ಸಮುಪಾವಿಶತ ।
ಅಥ ತೇ ಗೌತಮಗೃಹಂ ಪ್ರಾಪ್ತಾ ದೇವರ್ಷಯಸ್ತದಾ ॥ ೨೦೨ ॥

ಸರ್ವೇ ಪೂಜಾಮಥೋ ಚಕ್ರುರ್ದೇವದೇವಾಯ ಶೂಲಿನೇ ।
ದೇವೋ ಹನೂಮತಾ ಸಾರ್ಧಂ ಗಾಯನ್ನಾಸ್ತೇ ಮುನೀಶ್ವರ ॥ ೨೦೩ ॥

ಪಂಚಾಕ್ಷರೀಂ ಮಹಾವಿದ್ಯಾಂ ಸರ್ವ ಏವ ತದಾ ಜಪನ್ ।
ಹನುಮತ್ಕರಮಾಲಂಬ್ಯ ದೇವ್ಯಭ್ಯಾಶಂ ಗತೋ ಹರಃ ॥ ೨೦೪ ॥

ಏಕಶಯ್ಯಾಸಮಾಸೀನೌ ತಾವುಭೌ ದೇವದಂಪತೀ ।
ಗಾಯನ್ನಾಸ್ತೇ ಚ ಹನುಮಾಂಸ್ತುಂಬುರುಪ್ರಮುಖೈಸ್ತಥಾ ॥ ೨೦೫ ॥

---

ಕಾರಣ ಲೋಕೋಪಕಾರಕ್ಕಾಗಿ ಇವೆಲ್ಲವನ್ನೂ ನಾನು ಮಾಡುತ್ತಿರುವೆನು" ಎಂದು ಹೇಳಿದನು.

೨೦೨. ಹರಿಯು, ಸರಿ ಎಂಬುದಾಗಿ ಹೇಳಿ ಅವನನ್ನು ವಂದಿಸಿ ಕುಳಿತನು. ಬಳಿಕ ಆ ದೇವತೆಗಳೂ ಋಷಿಗಳೂ ಗೌತಮರ ಮನೆಗೆ ಬಂದರು.

೨೦೩. ಆ ದೇವ ಋಷಿಗಳೆಲ್ಲರೂ ದೇವದೇವನಾದ ಈಶ್ವರನಿಗೆ ಪೂಜೆಯನ್ನು ಮಾಡಿದರು. ಮುನೀಶ್ವರನೇ! ಮಹದೇವನೂ ಸಹ ಹನುಮಂತನೊಡನೆ ಗಾನಮಾಡುತ್ತಿದ್ದನು.

೨೦೪. ಆಗ ಸರ್ವರೂ ಪಂಚಾಕ್ಷರಿಯೆಂಬ ಮಹಾವಿದ್ಯೆಯನ್ನು ಜಪಿಸಿದರು. ಈಶ್ವರನು ಹನುಮಂತನ ಕೈಹಿಡಿದುಕೊಂಡು ಪಾರ್ವತಿಯ ಬಳಿಗೆ ಹೋದನು.

೨೦೫-೨೦೬. ದೇವದಂಪತಿಗಳಾದ ಪಾರ್ವತೀಪರಮೇಶ್ವರರಿಬ್ಬರೂ ಒಂದೇ ಹಾಸಿಗೆಯಲ್ಲಿ ಕುಳಿತರು. ಹನುಮಂತನು ತುಂಬುರು ಮೊದಲಾದವ

ನಾನಾವಿಧವಿಲಾಸಾಂಶ್ಚ ಚಕಾರ ಪರಮೇಶ್ವರಃ ।
ಆಹೂಯ ಪಾರ್ವತೀಮೀಶ ಇದಂ ವಾಕ್ಯಮುವಾಚ ಹ    ॥ ೨೦೬ ॥

ರಚಯಿಷ್ಯಾಮಿ ಧಮ್ಮಿಲ್ಲಮೇಹಿ ಮತ್ಪುರತಃ ಶುಭೇ ।
ದೇವ್ಯಾಹ ನ ಚ ಯುಕ್ತಂ ತದ್ಭರ್ತ್ರಾ ಶುಶ್ರೂಷಣಂ ಸ್ತ್ರಿಯಃ    ॥ ೨೦೭ ॥

ಕೇಶಪ್ರಸಾಧನಕೃತಾವನರ್ಥಾಂತರಮಾಪತೇತ್ ।
ಕೇಶಪ್ರಸಾಧನೇ ದೇವ ತತ್ಸ್ವಂ ಸರ್ವಂ ನ ಚೇಪ್ಸಿತಂ    ॥ ೨೦೮ ॥

ಅಥ ಬಂಧೇ ಕೃತೇ ಪಶ್ಚಾದಂಸಪ್ರಾಂತಪ್ರಮಾರ್ಜನಂ ।
ತತಶ್ಚರಮಸಂಲಗ್ನಕೇಶಪುಷ್ಪಾದಿಮಾರ್ಜನಂ    ॥ ೨೦೯ ॥

ಏತಸ್ಮಿನ್ವರ್ತಮಾನೇ ತು ಮಹಾತ್ಮಾನೋ ಯದ್ಯಾಽಗರ್ಮ ।
ತದಾ ಕಿಮುತ್ತರಂ ವಾಚ್ಯಂ ತವ ದೇವಾದಿವಂದಿತ    ॥ ೨೧೦ ॥

---

ರಿಂದ ಸಹಿತನಾಗಿ ಹಾಡುತ್ತಿದ್ದನು. ಆಗ ಪರಮೇಶ್ವರನು ಪಾರ್ವತಿಯೊಡನೆ ನಾನಾವಿಧ ವಿಲಾಸಗಳನ್ನು ಮಾಡಿದನು.

೨೦೬-೨೦೮. ಈಶ್ವರನು ಪಾರ್ವತಿಯನ್ನು ಕರೆದು 'ಶೋಭನಾಂಗಿಯೇ! ನನ್ನೆದುರಿಗೆ ಬಾ! ಜಡೆಯನ್ನು ಹಾಕುವೆನು' ಎಂದು ಹೇಳಿದನು. ಅದನ್ನು ಕೇಳಿ ದೇವಿಯು ಹೀಗೆ ಹೇಳಿದಳು :—ಗಂಡನು ಹೆಂಡತಿಯ ಸೇವೆಯನ್ನು ಮಾಡುವುದು ಯುಕ್ತವಲ್ಲ. ಕೂದಲನ್ನು ಬಾಚುವುದರಲ್ಲಿ ಬೇರೆ ಅನರ್ಥ ವುಂಟಾಗಬಹುದು. ದೇವನೇ! ಕೂದಲನ್ನು ಬಾಚಿ ಜಡೆಹಾಕುವಮಾತ್ರದಿಂದ ಇಷ್ಟವಾದುದೆಲ್ಲವನ್ನೂ ಮಾಡಿದಂತಾಗುವುದಿಲ್ಲ.

೨೦೯. ಜಡೆಯನ್ನು ಹಾಕಿದಮೇಲೆ ಭುಜದವರೆಗೂ ಶುದ್ಧಿಮಾಡುವುದು ಹಿಂಭಾಗದಲ್ಲಿ ಅಂಟಿಕೊಂಡಿರುವ ಕೇಶಪುಷ್ಪಾದಿಗಳನ್ನು ತೆಗೆಯುವುದು ಇವೆಲ್ಲ ವನ್ನೂ ಮಾಡಬೇಕಾಗುತ್ತದೆ.

೨೧೦. ಇವೆಲ್ಲವನ್ನೂ ಮಾಡುತ್ತಿರುವಾಗ ಯಾರಾದರೂ ಮಹಾತ್ಮರು ಬಂದರೆ ಆಗ ದೇವಾದಿವಂದಿತನಾದ ನೀನು ಏನು ಉತ್ತರ ಹೇಳುವೆ?

ನಾಯಾಂತಿ ಚೇದಥ ವಿಭೋ ಭೀತಿರ್ನಾಶಮುಪೇಷ್ಯತಿ |
ಏವಂ ಹಿ ಭಾಷಮಾಣಾಂ ತಾಂ ಕರೇಣಾಕೃಷ್ಯ ಶಂಕರಃ || ೨೧೧ ||

ಸ್ವೋರ್ವೋಃಸ್ತಾಂ ಸ್ಥಾಪಯಿತ್ವೈವ ವಿಸ್ರಸ್ಯ ಕಚಬಂಧನಂ |
ವಿಭಜ್ಯ ಚ ಕರಾಭ್ಯಾಂ ಸ ಪ್ರಸಸಾರ ನಖೈರಪಿ || ೨೧೨ ||

ವಿಷ್ಣುದತ್ತಾಂ ಪಾರಿಜಾತಸ್ರಜಂ ಕಚಗತಾಮಪಿ |
ಕೃತ್ವಾ ಧಮ್ಮಿಲ್ಲಮಕರೋದಥ ಮಾಲಾಂ ಕರಂ ಗತಾಂ || ೨೧೩ ||

ಮಲ್ಲಿಕಾಸ್ರಜಮಾದಾಯ ಬಬಂಧ ಕಚಬಂಧನೇ |
ಕಲ್ಪಪ್ರಸೂನಮಾಲಾಂ ಚ ಬ್ರಹ್ಮದತ್ತಾಂ ಮಹೇಶ್ವರಃ || ೨೧೪ ||

ಪಾರ್ವತೀವಸನೇ ಗೂಢಗಂಧಾಢ್ಯೇ ಚ ಸಮಾದಧಾತ್ |
ಅಥಾಂಸಪೃಷ್ಠಸಂಲಗ್ನಮಾರ್ಜನಂ ಕೃತವಾನ್ ವಿಭುಃ || ೨೧೫ ||

---

೨೧೧-೨೧೨. ಸ್ವಾಮಿಯೇ! ಯಾರೂ ಬರದಿದ್ದರೆ ಭಯಪರಿಹಾರವಾಗುವುದು. ಹೀಗೆ ಹೇಳುತ್ತಿದ್ದ ಆ ಪಾರ್ವತಿಯನ್ನು ಶಂಕರನು ಕೈಯಿಂದ ಸೆಳೆದು ತನ್ನ ತೊಡೆಗಳ ಮೇಲೆ ಕೂಡಿಸಿಕೊಂಡು ಜಡೆಯನ್ನು ಬಿಚ್ಚಿ, ಕೈಗಳಿಂದ ವಿಂಗಡಿಸಿ, ಉಗುರುಗಳಿಂದ ಹರಡಿ ಸರಿಮಾಡಿದನು.

೨೧೩-೨೧೪. ವಿಷ್ಣುವಿನಿಂದ ಕೊಡಲ್ಪಟ್ಟ ಪಾರಿಜಾತಪುಷ್ಪಮಾಲಿಕೆಯನ್ನು ಹೆರಳಿನಲ್ಲಿ ಸೇರಿಸಿ ಜಡೆಯನ್ನು ರಚಿಸಿದನು. ಅನಂತರ ತನ್ನ ಹಸ್ತಗತವಾಗಿದ್ದ ಮಲ್ಲಿಗೆಯ ಹೂವಿನ ದಂಡೆಯನ್ನು ತುರುಬಿನ ಮೇಲೆ ಮುಡಿಸಿದನು.

೨೧೪-೨೧೫. ಬಳಿಕ ಮಹೇಶ್ವರನು ಬ್ರಹ್ಮನಿಂದ ಕೊಡಲ್ಪಟ್ಟ ಕಲ್ಪಪುಷ್ಪಮಾಲಿಕೆಯನ್ನು ಸುವಾಸನೆಯಿಂದ ಕೂಡಿದ ಪಾರ್ವತಿಯ ವಸ್ತ್ರದಲ್ಲಿ ಸೇರಿಸಿದನು. ತರುವಾಯ ಸ್ವಾಮಿಯು ಬುಜದ ಹಿಂಭಾಗದಲ್ಲಿ ಅಂಟಿಕೊಂಡಿದ್ದ ಕೇಶಗಳನ್ನು ತೆಗೆದುಹಾಕಿದನು.

ಶ್ಲಥನ್ನೀವೇರಧೋ ದೇವ್ಯಾ ವಸ್ತ್ರವೇಷ್ಟಾದಧೋಗತಃ |
ಕಿಮಿದಂ ದೇವಿ ಚೇತ್ಯುಕ್ತ್ವಾ ನೀವೀಬಂಧಂ ಚಕಾರ ಹ || ೨೧೬ ||

ನಾಸಾಭೂಷಣಮೇತತ್ತೇ ಸತ್ಯಮೇವ ವದಾಮಿ ತೇ |
ತತಃ ಪ್ರಾಹ ಶಿವಾ ಶಂಭುಂ ಸ್ಮಿತ್ವಾ ಪರ್ವತನಂದಿನೀ || ೨೧೭ ||

ಅಹೋ ತ್ವನ್ಮಂದಿರಂ ಶಂಭೋ ಸರ್ವವಸ್ತುಸಮೃದ್ಧಿಮತ್ |
ಪೂರ್ವಮೇವ ಮಯಾ ಸರ್ವಂ ಜ್ಞಾತಪ್ರಾಯಮಭೂತ್ಕಿಲ || ೨೧೮ ||

ಸರ್ವದ್ರವಿಣಸಂಪತ್ತಿರ್ಭೂಷಣೈರವಗಮ್ಯತೇ |
ಶಿರೋ ವಿಭೂಷಿತಂ ದೇವ ಬ್ರಹ್ಮಶೀರ್ಷಸ್ಯ ಮಾಲಯಾ || ೨೧೯ ||

ನರಕಸ್ಯ ತಥಾ ಮಾಲಾ ವಕ್ಷಸ್ಥಲವಿಭೂಷಣಂ |
ಶೇಷಶ್ಚ ವಾಸುಕಿಶ್ಚೈವ ಸವಿಷೌ ತವ ಕಂಕಣೇ || ೨೨೦ ||

---

೨೧೬. ದೇವಿಯು ನಡುವಿನಲ್ಲಿ ಕಟ್ಟಿದ್ದ ಗಂಟಿನಿಂದ ನೆರಿಗೆಯು ಸಡಿಲವಾಗಿ ಜಾರಿಹೋಗುತ್ತಿದ್ದುದನ್ನು ಶಿವನು ಕಂಡು ದೇವಿಯೇ! ಇದೇನೆಂದು ಕೇಳಿ ನಡುಕಟ್ಟನ್ನು ಭದ್ರಪಡಿಸಿ ನೆರಿಗೆಯನ್ನು ಅದರಲ್ಲಿ ಸಿಕ್ಕಿಸಿದನು.

೨೧೭. ದೇವಿಯೇ! ಇದು ನಿನಗೆ ಮೂಗುತಿಯಲ್ಲವೇ? ಆಹಾ! ಹೌದು! ನಿನ್ನ ಮೂಗುತಿಯೇ ಸರಿ. ಧೈರ್ಯವಾಗಿ ಹೇಳುವೆನು ಎಂದು ಶಿವನು ಹೇಳಲು ಪಾರ್ವತಿಯು ನಕ್ಕು ಈಶ್ವರನನ್ನು ಕುರಿತು ಹೀಗೆ ಮಾತನಾಡಿದಳು.

೨೧೮. ಈಶ್ವರನೇ! ಆಶ್ಚರ್ಯ! ನಿನ್ನ ಮನೆಯು ಅಮೂಲ್ಯವಾದ ಸಕಲ ವಸ್ತುಗಳಿಂದ ಪರಿಪೂರ್ಣವಾದುದೆಂಬುದನ್ನು ಹಿಂದೆಯೇ ನಾನು ತಿಳಿದೇ ಇರುವೆನು.

೨೧೯. ದೇವ! ನಿನ್ನ ಆಭರಣಗಳಿಂದಲೇ ಸಕಲ ದ್ರವ್ಯ ಸಮೃದ್ಧಿಯು ತಿಳಿಯಬರುತ್ತದೆ. ಬ್ರಹ್ಮಕಪಾಲದ ಮಾಲಿಕೆಯಿಂದ ಶಿರಸ್ಸು ಅಲಂಕೃತವಾಗಿದೆ.

೨೨೦. ರುಂಡಗಳ ಮಾಲಿಕೆಯೇ ವಕ್ಷಸ್ಥಳದ ಆಭರಣವಾಗಿದೆ. ವಿಷಯುಕ್ತರಾದ ಶೇಷವಾಸುಕಿಗಳು ನಿನ್ನ ಹಸ್ತಾಭರಣಗಳು.

ದಿಶೋಂಬರಂ ಜಟಾ ಕೇಶಾ ಭಸಿತಂ ಚಾಂಗರಾಗಕಂ ।
ಮಹೋಕ್ಷೋ ವಾಹನಂ ಗೋತ್ರಂ ಕುಲಂ ಚಾಜ್ಞಾತಮೇವ ಚ ॥ ೨೨೧ ॥

ಜ್ಞಾಯೇತೇ ಪಿತರೌ ನೈವ ವಿರೂಪಾಕ್ಷಂ ತಥಾ ವಪುಃ ।
ಏವಂ ವದಂತೀಂ ಗಿರಿಜಾಂ ವಿಷ್ಣುಃ ಪ್ರಾಹಾತಿಕೋಪನಃ ॥ ೨೨೨ ॥

ಕಿಮರ್ಥಂ ನಿಂದಸೇ ದೇವಿ ದೇವದೇವಂ ಜಗತ್ಪತಿಂ ।
ದುಷ್ಪ್ರಾಪ್ಯಾ ನ ಪ್ರಿಯಾ ಭದ್ರೇ ತವ ನೂನಮಸಂಯಮಾತ್ ॥ ೨೨೩ ॥

ಯತ್ರೇಶನಿಂದನಂ ಭದ್ರೇ ತತ್ರ ನೋ ಮರಣಂ ವ್ರತಂ ।
ಇತ್ಯುಕ್ತ್ವಾಥ ನಖಾಭ್ಯಾಂ ಹಿ ಹರಿಶ್ಛೇತ್ತುಂ ಶಿರೋ ಗತಃ ॥ ೨೨೪ ॥

---

೨೨೧. ದಿಕ್ಕುಗಳೇ ನಿನ್ನ ವಸ್ತ್ರ, ಕೂದಲುಗಳೇ ಜಟೆ, ಭಸ್ಮವೇ ಅಂಗರಾಗ. ದೊಡ್ಡ ಎತ್ತೇ ವಾಹನ. ಗೋತ್ರಕುಲಗಳೂ ಅಜ್ಞಾತವೇ ಆಗಿವೆ.

೨೨೨. ತಾಯಿತಂದೆಗಳಾರೆಂಬುದೂ ತಿಳಿಯದು, ಶರೀರವೋ ವಿರೂಪಾಕ್ಷ ಎಂಬುದಾಗಿ ಹೇಳುತ್ತಿರುವ ಪಾರ್ವತಿಯನ್ನು ಕುರಿತು ಅತ್ಯಂತವಾಗಿ ಕುಪಿತನಾದ ವಿಷ್ಣುವು ಹೇಳಿದನು.

೨೨೩. ಮಂಗಳದೇವಿಯೇ! ಜಗದೊಡೆಯನಾದ ದೇವದೇವನನ್ನು ಏಕೆ ನಿಂದಿಸುವೆ? ಅಂತಹ ಆಭರಣಗಳನ್ನು ಧರಿಸಿ ತಡೆದುಕೊಳ್ಳುವ ಶಕ್ತಿಯಿಲ್ಲದಿರುವುದರಿಂದಲೇ ನಿನಗೆ ಹೀಗೆ ಅವು ದುಃಖಕರವಾಗಿ ತೋರುವುವು. ನಿಜ. ಆದುದರಿಂದಲೇ ಅವು ನಿನಗೆ ಪ್ರಿಯವಾಗಿ ತೋರುವುದಿಲ್ಲ.

೨೨೪. ಮಂಗಳಕರಳೇ! ಈಶ್ವರನಿಂದೆಯನ್ನು ಕೇಳಿದರೆ ನಮಗೆ ಮರಣವುಂಟಾಗುವುದೆಂದು ಹೇಳಿ ಹರಿಯು ಉಗುರುಗಳಿಂದ ತನ್ನ ತಲೆಯನ್ನು ಕತ್ತರಿಸಲುದ್ಯುಕ್ತನಾದನು.

ಮಹೇಶಸ್ತತ್ಕರಂ ಗೃಹ್ಯ ಪ್ರಾಹ ಮಾ ಸಾಹಸಂ ಕೃಥಾಃ |
ಪಾರ್ವತೀವಚನಂ ಸರ್ವಂ ಪ್ರಿಯಂ ಮಮ ನ ಚಾಪ್ರಿಯಂ || ೨೨೫ ||

ಮಮಾಪ್ರಿಯಂ ಹೃಷೀಕೇಶ ಕರ್ತುಂ ಯತ್ಕಿಂಚಿದಿಷ್ಯತೇ |
ಓಂಮಿತ್ಯುಕ್ತ್ವಾಽಥ ಭಗವಾಂಸ್ತೂಷ್ಣೀಭೂತೋಽಭವದ್ಧರಿಃ || ೨೨೬ ||

ಹನುಮಾನಥ ದೇವಾಯ ವ್ಯಜ್ಞಾಪಯದಿದಂ ವಚಃ |
ಅರ್ಥಯಾಮಿ ವಿನಿಷ್ಕಾಮಂ ಮಮಪೂಜಾವ್ರತಂ ತಥಾ || ೨೨೭ ||

ಪೂಜಾರ್ಥಮಸ್ಯಹಂ ಗಚ್ಛೇ ಮಮಾನುಜ್ಞಾತುಮರ್ಹಸಿ |
ತಚ್ಛ್ರುತ್ವಾ ಶಂಕರೋ ದೇವಃ ಸ್ಮಿತ್ವಾ ಪ್ರಾಹ ಕಪೀಶ್ವರಂ || ೨೨೮ ||

ಕಸ್ಯ ಪೂಜಾ ಕ್ವವಾ ಪೂಜಾ ಕಿಂಪುಷ್ಪಂ ಕಿಂ ದಲಂ ವದ |
ಕೋ ಗುರುಃ ಕಶ್ಚ ಮಂತ್ರಸ್ತೇ ಕೀದೃಶಂ ಪೂಜನಂ ತಥಾ || ೨೨೯ ||

---

೨೨೫. ಮಹೇಶನು ಅವನ ಕೈಯನ್ನು ಹಿಡಿದುಕೊಂಡು ಸಾಹಸಕೃತ್ಯವನ್ನು ಮಾಡಬೇಡ, ಪಾರ್ವತಿಯು ಹೇಳಿದುದೆಲ್ಲವೂ ನನಗೆ ಪ್ರಿಯವಾದುದು ಅನಿಷ್ಟವಲ್ಲ.

೨೨೬. ಹೃಷೀಕೇಶನೇ! ನೀನು ನನಗೆ ಅನಿಷ್ಟವಾದ ಶಿರಶ್ಛೇದನವನ್ನು ಮಾಡಿಕೊಳ್ಳಲು ತೊಡಗಿರುವೆ ಎಂದು ಹೇಳಿ ಅವನನ್ನು ತಡೆದನು. ಅನಂತರ ಷಡ್ಗುಣೈಶ್ವರ್ಯಸಂಪನ್ನನಾದ ಹರಿಯು ಹಾಗೆಯೇ ಆಗಲೆಂದು ಹೇಳಿ ಸುಮ್ಮನಾದನು.

೨೨೭-೨೨೮. ಅನಂತರ ಹನುಮಂತನು ಈಶ್ವರನಿಗೆ ಹೀಗೆ ವಿಜ್ಞಾಪಿಸಿದನು. ದೇವನೇ! ಫಲಾಸೆಯಿಲ್ಲದೆ ಪೂಜಾವ್ರತವನ್ನು ಮಾಡಬೇಕೆಂದು ಪ್ರಾರ್ಥಿಸುವೆನು. ಮತ್ತು ಪೂಜೆಮಾಡುವುದಕ್ಕಾಗಿ ನಾನು ಹೋಗುವೆನು; ನನಗೆ ಅಪ್ಪಣೆ ಕೊಡು ಎಂದು ಹೇಳಿದನು. ಅದನ್ನು ಕೇಳಿ ಶಂಕರದೇವನು; ನಕ್ಕು ಕಪೀಶ್ವರನಿಗೆ ಹೀಗೆ ಹೇಳಿದನು.

೨೨೯-೨೩೦. ಯಾರ ಪೂಜೆ? ಎಲ್ಲಿ ಪೂಜಿಸುವೆ? ಪುಷ್ಪವಾವುದು?

ಏವಂ ವದತಿ ದೇವೇಶೇ ಹನೂಮಾನ್ನೀತಿಸಂಯುತಃ
ವೇಪಮಾನಸಮಸ್ತಾಂಗೋ ಸ್ತೋತುಮೇವಂ ಪ್ರಚಕ್ರಮೇ || ೨೩೦ ||

ನಮೋ ದೇವಾಯ ಮಹತೇ ಶಂಕರಾಯಾಮಿತಾತ್ಮನೇ |
ಯೋಗಿನೇ ಯೋಗಧಾತ್ರೇ ಚ ಯೋಗಿನಾಂ ಗುರವೇ ನಮಃ || ೨೩೧ ||

ಯೋಗಗಮ್ಯಾಯ ದೇವಾಯ ಜ್ಞಾನಿನಾಂ ಪತಯೇ ನಮಃ |
ವೇದಾನಾಂ ಪತಯೇ ತುಭ್ಯಂ ದೇವಾನಾಂ ಪತಯೇ ನಮಃ || ೨೩೨ ||

ಧ್ಯಾನಾಯ ಧ್ಯಾನಗಮ್ಯಾಯ ಧ್ಯಾತ್ರ್ಕಾಣಾಂ ಗುರವೇ ನಮಃ |
ಅಷ್ಟಮೂರ್ತೇ ನಮಸ್ತುಭ್ಯಂ ಪಶೂನಾಂ ಪತಯೇ ನಮಃ || ೨೩೩ ||

---

ದಳವಾವುದು ? ಗುರುವು ಯಾರು ? ಪೂಜಾಂಗಮಂತ್ರವಾವುದು ? ಪೂಜೆ ಯೆಂತಹುದು ? ಎಂದು ಈಶ್ವರನು ಕೇಳಲು ನೀತಿಯುಕ್ತನಾದ ಹನುಮಂತನು ದೇಹವನ್ನೆಲ್ಲಾ ನಡಗಿಸುತ್ತಾ ಸ್ತೋತ್ರಮಾಡಲುಪಕ್ರಮಿಸಿದನು.

೨೩೧. ಎಂತೆಂದರೆ :—ಅಪರಿಮಿತಸ್ವರೂಪನಾದ ಶಂಕರಮಹಾದೇವನಿಗೆ ನಮಸ್ಕಾರ. ಯೋಗಿಧಾರಕನು, ಯೋಗಿಗುರುವೂ ಆದ ಯೋಗೀಶ್ವರನಿಗೆ ನಮಸ್ಕಾರ.

೨೩೨. ಯೋಗಾಭ್ಯಾಸದಿಂದ ಗಮ್ಯನು, ಜ್ಞಾನಿಗಳೊಡೆಯನೂ ಆದ ದೇವನಿಗೆ ನಮಸ್ಕಾರ. ವೇದಪತಿ ಮತ್ತು ದೇವಸ್ವಾಮಿಯಾದ ನಿನಗೆ ನಮಸ್ಕಾರ.

೨೩೩. ಧ್ಯಾನರೂಪನು, ಧ್ಯಾನಗೋಚರನು, ಧಾತೃಗುರುವೂ ಆಗಿರುವವನಿಗೆ ನಮಸ್ಕಾರ. ಎಂಟು ಮೂರ್ತಿಗಳುಳ್ಳ ಈಶ್ವರನೇ ! ನಿನಗೆ ನಮಸ್ಕಾರ. ಪಶುಪತಿಗೆ ನಮಸ್ಕಾರ.

ತ್ರ್ಯಂಬಕಾಯ ತ್ರಿನೇತ್ರಾಯ ಸೋಮಸೂರ್ಯಾಗ್ನಿ ಚಕ್ಷುಷೇ ।
ಸುಭೃಂಗರಾಜದತ್ತೂರದ್ರೋಣಪುಷ್ಪಪ್ರಿಯಸ್ಯ ತೇ ॥ ೨೩೪ ॥

ಬೃಹತೀಪೂಗಪುನ್ನಾಗಚಂಪಕಾದಿಪ್ರಿಯಾಯ ಚ ।
ನಮಸ್ತೇಽಸ್ತು ನಮಸ್ತೇಽಸ್ತು ಭೂಯ ಏವ ನಮೋನಮಃ ॥ ೨೩೫ ॥

ಶಿವೋ ಹರಿಮಥ ಪ್ರಾಹ ಮಾಭೈಷೀರ್ವದ ಮೇಽಖಿಲಂ ।
ತತಸ್ತ್ಯಕ್ತ್ವಾ ಭಯಂ ಪ್ರಾಹ ಹನೂಮಾನ್ ವಾಕ್ಯಕೋವಿದಃ ॥ ೨೩೬ ॥

ಶಿವಲಿಂಗಾರ್ಚನಂ ಕಾರ್ಯಂ ಭಸ್ಮೋದ್ಧೂಲಿತದೇಹಿನಾ ।
ದಿವಾಸಂಪಾದಿತೈಸ್ತೋಯೈಃ ಪುಷ್ಪಾದ್ಯೈರಪಿ ತಾದೃಶೈಃ ॥ ೨೩೭ ॥

---

೨೩೪. ತ್ರ್ಯಂಬಕನು, ಚಂದ್ರ, ಸೂರ್ಯ, ಅಗ್ನಿಗಳೆಂಬ ಮೂರು ನೇತ್ರಗಳುಳ್ಳವನು, ಸಮೀಚೀನವಾದ ಭೃಂಗರಾಜ, ದತ್ತೂರಿ, ತುಂಬೆ ಪುಷ್ಪಗಳನ್ನು ಪ್ರೀತಿಸುವವನೂ ಆದ ನಿನಗೆ ನಮಸ್ಕಾರ.

೨೩೫. ಬೃಹತೀ, ಪೂಗ, ಸುರಹೊನ್ನೆ, ಸಂಪಿಗೆ ಮುಂತಾದ ಪುಷ್ಪಗಳನ್ನು ಪ್ರೀತಿಸುವ ನಿನಗೆ ನಮಸ್ಕಾರ. ನಿನಗೆ ಪುನಃ ಪುನಃ ನಮಸ್ಕಾರ ಮಾಡುವೆನು. ನಮಸ್ಕಾರ, ನಮಸ್ಕಾರ.

೨೩೬. ತರುವಾಯ ಶಿವನು ಭಯಪಡಬೇಡ. ನನಗೆ ಎಲ್ಲವನ್ನೂ ಧೈರ್ಯವಾಗಿ ಹೇಳು ಎಂದು ಕಪಿಗೆ ಹೇಳಿದನು. ಬಳಿಕ ಭಯವನ್ನು ಬಿಟ್ಟು ವಾಕ್ಯಕುಶಲನಾದ ಹನುಮಂತನು ಹೇಳಿದನು.

೨೩೭. ಮೈಗೆಲ್ಲಾ ಭಸ್ಮವನ್ನು ಹಚ್ಚಿಕೊಂಡು ಹಗಲಲ್ಲಿ ಸಂಗ್ರಹಿಸಲ್ಪಟ್ಟ ಉದಕ, ಹೂವು ಮುಂತಾದ ಪೂಜಾದ್ರವ್ಯಗಳಿಂದ ಶಿವಲಿಂಗಾರ್ಚನೆಯನ್ನು ಮಾಡಬೇಕು.

ದೇವ ವಿಜ್ಞಾಪಯಿಷ್ಯಾಮಿ ಶಿವಪೂಜಾವಿಧಿಂ ಶುಭಂ |
ಸಾಯಂಕಾಲೇ ತು ಸಂಪ್ರಾಪ್ತೇ ಅಶಿರಸ್ನಾನಮಾಚರೇತ್ || ೨೩೮ ||

ಕ್ಷಾಲಿತಂ ವಸನಂ ಶುಷ್ಕಂ ಧೃತ್ವಾಚಮ್ಯ ದ್ವಿರಗ್ರಧೀಃ |
ಅಥ ಭಸ್ಮ ಸಮಾದಾಯ ಆಗ್ನೇಯಂ ಸ್ನಾನಮಾಚರೇತ್ || ೨೩೯ ||

ಪ್ರಣವೇನ ಸಮಾಮಂತ್ರ್ಯ ಸ್ಯಷ್ಟವಾರಮಥಾಪಿ ವಾ |
ಪಂಚಾಕ್ಷರೇಣ ಮಂತ್ರೇಣ ನಾಮ್ನಾ ವಾ ಯೇನ ಕೇನಚಿತ್ || ೨೪೦ ||

ಸಪ್ತಾಭಿಮಂತ್ರಿತಂ ಭಸ್ಮ ದರ್ಭಪಾಣಿಃ ಸಮಾಹರೇತ್ |
ಈಶಾನಃ ಸರ್ವವಿದ್ಯಾನಾಮುಕ್ತ್ವಾ ಶಿರಸಿ ಪಾತಯೇತ್ || ೨೪೧ ||

ತತ್ಪುರುಷಾಯ ವಿದ್ಮಹೇ ಮುಖೇ ಭಸ್ಮ ಪ್ರಸೇಚಯೇತ್ |
ಅಘೋರೇಭ್ಯೋಽಥಘೋರೇಭ್ಯೋ ಭಸ್ಮ ವಕ್ಷಸಿ ನಿಕ್ಷಿಪೇತ್ || ೨೪೨ ||

---

೨೩೮. ದೇವನೇ! ಶ್ರೇಯಸ್ಕರವಾದ ಶಿವಪೂಜೆಯ ವಿಧಾನವನ್ನು ವಿಜ್ಞಾಪಿಸುವೆನು—ಸಾಯಂಕಾಲದಲ್ಲಿ ಕಂಠಸ್ನಾನಮಾಡಬೇಕು.

೨೩೯. ಒಗೆದು ಒಣಗಿಸಿದ ಬಟ್ಟೆಯನ್ನುಟ್ಟು ಎರಡಾವರ್ತಿ ಆಚಮನ ಮಾಡಿ, ಅನಂತರ ಭಸ್ಮವನ್ನು ತೆಗೆದುಕೊಂಡು ಆಗ್ನೇಯಸ್ನಾನ ಮಾಡಬೇಕು. ಎಂದರೆ ಮೈಗೆಲ್ಲಾ ಭಸ್ಮಧಾರಣೆಮಾಡಬೇಕೆಂದು ಭಾವ.

೨೪೦. ಪವಿತ್ರಪಾಣಿಯಾಗಿ ಭಸ್ಮವನ್ನು ತಂದು ಅದನ್ನು ಪ್ರಣವ ಮಂತ್ರದಿಂದ ಎಂಟು ಬಾರಿ ಅಥವಾ ಪಂಚಾಕ್ಷರಮಂತ್ರದಿಂದ ಇಲ್ಲವೇ ಶಿವನ ಯಾವುದಾದರೊಂದು ನಾಮವನ್ನು ಹೇಳಿಯಾದರೂ ಅಭಿಮಂತ್ರಿಸಬೇಕು.

೨೪೧. ಹೀಗೆ ಏಳುಸಾರಿ ಅಭಿಮಂತ್ರಿಸಿದ ಆ ಭಸ್ಮವನ್ನು "ಈಶಾನಃ ಸರ್ವವಿದ್ಯಾನಾಂ" ಇತ್ಯಾತಿ ಮಂತ್ರವನ್ನು ಹೇಳಿ ತಲೆಯಲ್ಲಿ ಧರಿಸಬೇಕು.

೨೪೨. "ತತ್ಪುರುಷಾಯವಿದ್ಮಹೇ" ಇತ್ಯಾದಿ ಮಂತ್ರದಿಂದ ಮುಖದಲ್ಲಿಯೂ "ಅಘೋರೇಭ್ಯೋಽಥಘೋರೇಭ್ಯೋ" ಇತ್ಯಾದಿ ಮಂತ್ರದಿಂದ ವಕ್ಷಸ್ಥಳದಲ್ಲಿಯೂ ಭಸ್ಮವನ್ನು ಹಚ್ಚಬೇಕು.

ವಾಮದೇವಾಯ ನಮಃ ಇತಿ ಗುಹ್ಯಸ್ಥಾನೇ ವಿನಿಕ್ಷಿಪೇತ್ ।
ಸದ್ಯೋಜಾತಂ ಪ್ರಪದ್ಯಾಮಿ ನಿಕ್ಷಿಪೇದಥ ಪಾದಯೋಃ ॥ ೨೪೩ ॥

ಉದ್ಧೂಲಯೇತ್ಸಮಸ್ತಾಂಗಂ ಪ್ರಣವೇನ ವಿಚಕ್ಷಣಃ ।
ತ್ರೈವರ್ಣಿಕಾನಾಮುದಿತಃ ಸ್ನಾನಾದಿವಿಧಿರುತ್ತಮಃ ॥ ೨೪೪ ॥

ಶೂದ್ರಾದೀನಾಂ ಪ್ರವಕ್ಷ್ಯಾಮಿ ಯದುಕ್ತಂ ಗುರುಣಾ ತಥಾ ।
ಶಿವೇತಿಪದಮುಚ್ಚಾರ್ಯ ಭಸ್ಮ ಸಂಮಂತ್ರಯೇತ್ಸುಧೀಃ ॥ ೨೪೫ ॥

ಸಪ್ತವಾರಮಥಾದಾಯ ಶಿವಾಯೇತಿ ಶಿರಃ ಕ್ಷಿಪೇತ್ ।
ಶಂಕರಾಯ ಮುಖೇ ಪ್ರೋಕ್ತಂ ಸರ್ವಜ್ಞಾಯ ಹೃದಿ ಕ್ಷಿಪೇತ್ ॥ ೨೪೬ ॥

---

೨೪೩. "ವಾಮದೇವಾಯ ನಮಃ" ಎಂಬುದರಿಂದ ಗುಹ್ಯಸ್ಥಾನದಲ್ಲಿ ಭಸ್ಮವನ್ನು ಧರಿಸಬೇಕು. ಬಳಿಕ "ಸದ್ಯೋಜಾತಂ ಪ್ರಪದ್ಯಾಮಿ" ಎಂಬ ಮಂತ್ರದಿಂದ ಭಸ್ಮವನ್ನು ಪಾದಗಳಲ್ಲಿ ಲೇಪನಮಾಡಬೇಕು.

೧೪೪. ಪ್ರಣವಮಂತ್ರದಿಂದ ಭಸ್ಮವನ್ನು ವಿವೇಕಿಯು ಸಕಲಾವಯವಗಳಲ್ಲಿಯೂ ಲೇಪನಮಾಡಬೇಕು. ಈ ಪ್ರಕಾರ ಉತ್ತಮವಾದ ಸ್ನಾನವಿಧಾನವು ತ್ರೈವರ್ಣಿಕರಿಗೆ ಹೇಳಲ್ಪಟ್ಟಿದೆ.

೨೪೫. ಗುರುಗಳು ಉಪದೇಶಿಸಿರುವಂತೆ ಶೂದ್ರಾದಿಗಳ ಭಸ್ಮಲೇಪನೆಯ ವಿಧಾನವನ್ನು ಹೇಳುವೆನು—ಜ್ಞಾನಿಯು 'ಶಿವ' ಎಂಬ ನಾಮವನ್ನು ಏಳಾವರ್ತಿ ಹೇಳಿ ಭಸ್ಮವನ್ನಭಿಮಂತ್ರಿಸಬೇಕು.

೨೪೬. ಬಳಿಕ ಅದನ್ನು ತೆಗೆದುಕೊಂಡು 'ಶಿವಾಯ' ಎಂದು ಹೇಳಿ ಶಿರಸ್ಸಿನಲ್ಲಿಯೂ, ತರುವಾಯ 'ಶಂಕರಾಯ' ಎಂದು ಮುಖದಲ್ಲಿಯೂ, 'ಸರ್ವಜ್ಞಾಯ' ಎಂದು ಹೃದಯದಲ್ಲಿಯೂ ಭಸ್ಮವನ್ನು ಹಚ್ಚಿಕೊಳ್ಳಬೇಕು.

**ಸ್ಥಾಣವೇ ನಮ ಇತ್ಯುಕ್ತ್ವಾ ಮುಖೇ ಚಾಪಿ ಸ್ವಯಂಭವೇ ।**
**ಉಚ್ಚಾರ್ಯ ಪಾದಯೋಃ ಕ್ಷಿಪ್ತ್ವಾ ಭಸ್ಮಶುದ್ಧಮತಃ ಪರಂ ॥ ೨೪೭ ॥**

**ನಮಃ ಶಿವಾಯೇತ್ಯುಚ್ಚಾರ್ಯ ಸರ್ವಾಂಗೋದ್ಧೂಲನಂ ಸ್ಮೃತಂ ।**
**ಪ್ರಕ್ಷಾಳ್ಯ ಹಸ್ತಾವಾಚಮ್ಯ ದರ್ಭಪಾಣಿಃ ಸಮಾಹಿತಃ ॥ ೨೪೮ ॥**

**ದರ್ಭಾಭಾವೇ ಸುವರ್ಣಂ ಸ್ಯಾತ್ತದಭಾವೇ ಗವಾಲುಕಾಃ ।**
**ತದಭಾವೇ ತು ದೂರ್ವಾಃ ಸ್ಯುಸ್ತದಭಾವೇ ತು ರಾಜಿತಂ ॥ ೨೪೯ ॥**

**ಸಂಧ್ಯೋಪಾಸ್ತಿಂ ಜಪಂ ದೇವ್ಯಾಃ ಕೃತ್ವಾ ದೇವಗೃಹಂ ವ್ರಜೇತ್ ।**
**ದೇವವೇದಿಮಥೋ ವಾಪಿ ಕಲ್ಪಿತಂ ಸ್ಥಂಡಿಲಂ ತು ವಾ ॥ ೨೫೦ ॥**

---

೨೪೭. 'ಸ್ಥಾಣವೇ ನಮಃ' ಎಂದು ಹೇಳಿ ಗುಹ್ಯದಲ್ಲಿಯೂ, 'ಸ್ವಯಂಭವೇ' ಎಂದು ಹೇಳಿ ಪಾದಗಳಲ್ಲಿಯೂ ಶುದ್ಧವಾದ ಭಸ್ಮವನ್ನು ಹಚ್ಚಿಕೊಳ್ಳಬೇಕು.

೨೪೮. ಅನಂತರ 'ನಮಃ ಶಿವಾಯ' ಎಂದು ಹೇಳಿ ಸರ್ವಾಂಗಗಳಲ್ಲಿಯೂ ಭಸ್ಮಧಾರಣೆ ಮಾಡಬೇಕೆಂದು ಉಕ್ತವಾಗಿದೆ. ಈ ರೀತಿ ಭಸ್ಮಧಾರಣೆ ಮಾಡಿದ ಬಳಿಕ ಕೈಗಳನ್ನು ತೊಳೆದುಕೊಂಡು ಆಚಮನ ಮಾಡಿ, ಕೈಯಲ್ಲಿ ದರ್ಭೆಯ ಪವಿತ್ರವನ್ನು ಧರಿಸಬೇಕು.

೨೪೯. ದರ್ಭೆಯಿಲ್ಲದಿದ್ದರೆ ಬಂಗಾರದ ಪವಿತ್ರದ ಉಂಗುರ, ಅದಿಲ್ಲದಿದ್ದರೆ ಪಂಚಲೋಹದ ಪವಿತ್ರ, ಅದೂ ಇಲ್ಲದಿದ್ದರೆ ಹುಲ್ಲಿನ ಪವಿತ್ರ, ಅದೂ ಸಿಕ್ಕದಿದ್ದರೆ ಬೆಳ್ಳಿಯ ಪವಿತ್ರದುಂಗುರವನ್ನು ಧರಿಸಬೇಕು.

೨೫೦. ಇವುಗಳಲ್ಲಾವುದಾದರೊಂದನ್ನು ಹಸ್ತದಲ್ಲಿ ಧರಿಸಿ ಸಮಾಧಾನ ಮನಸ್ಕನಾಗಿ ಸಂಧ್ಯೋಪಾಸನೆಯನ್ನು ಮಾಡಿ, ಗಾಯತ್ರೀ ಜಪವನ್ನೂ ಮಾಡಿ ದೇವರಮನೆಗೆ ಹೋಗಬೇಕು. ಅಲ್ಲಿ ಅಕ್ಕಿಹಿಟ್ಟು ಅಥವಾ ಮಣ್ಣಿನಿಂದ ನಿರ್ಮಿತವಾದ ದೇವರಜಗಲಿಯನ್ನಲಂಕರಿಸಬೇಕು.

ಮೃಣ್ಮಯಂ ಕಲ್ಪಿತಂ ಶುದ್ಧಂ ಪದ್ಮಾದಿರಚನಾಯುತಂ ।
ಚಾತುರ್ವರ್ಣಕರಂಗೈಶ್ಚ ಶ್ವೇತೇನೈಕೇನ ವಾ ಪುನಃ || ೨೫೧ ||

ವಿಚಿತ್ರಾಣಿ ಚ ಪದ್ಮಾನಿ ಸ್ವಸ್ತಿಕಾದಿ ತಥೈವ ಚ ।
ಉತ್ಪಲಾದಿಗದಾಶಂಖತ್ರಿಶೂಲಡಮರೂಂಸ್ತಥಾ || ೨೫೨ ||

ಶರೋಕ್ತಪಂಚಪ್ರಾಸಾದಂ ಶಿವಲಿಂಗಮಥೈವ ಚ ।
ಸರ್ವಕಾಮಫಲಂ ವೃಕ್ಷಂ ಕುಲಕಂ ಕೋಲಕಂ ತಥಾ || ೨೫೩ ||

ಷಟ್ಕೋಣಂ ಚ ತ್ರಿಕೋಣಂ ಚ ನವಕೋಣಮಥಾಪಿ ವಾ ।
ಕೋಣದ್ವಾದಶಕಾಂದೋಲಾಪಾದುಕಾವ್ಯಜನಾನಿ ಚ || ೨೫೪ ||

ಚಾಮರಛತ್ರಯುಗಲಂ ವಿಷ್ಣುಬ್ರಹ್ಮಾದಿಕಂ ತಥಾ ।
ಚೂರ್ಣೈರ್ವಿರಚಯೇದ್ವೇದ್ಯಾಂ ಧೀಮಾನ್ದೇವಾಲಯೇಽಪಿ ವಾ || ೨೫೫ ||

ಯತ್ರಾಪಿ ದೇವಪೂಜಾ ಸ್ಯಾತ್ ತತ್ರೈವಂ ಕಲ್ಪಯೇದ್ಬುಧಃ ।
ಸ್ವಹಸ್ತಚರಿತಂ ಮುಖ್ಯಂ ಕ್ರೀತಂ ಚೈವ ತು ಮಧ್ಯಮಂ || ೨೫೬ ||

---

೨೫೧-೨೫೩. ಹೇಗೆಂದರೆ—ಆ ಜಗುಲಿಯನ್ನು ಶುದ್ಧಿಗೊಳಿಸಿ ನಾಲ್ಕು ಬಣ್ಣದ ರಂಗವಲ್ಲಿಗಳು ಇಲ್ಲವೇ ಬಿಳಿಯ ರಂಗವಲಿಯಿಂದಲಾದರೂ ವಿಚಿತ್ರಗಳಾದ ಪದ್ಮಗಳು, ಸ್ವಸ್ತಿಕಾದಿ ಚಿತ್ರಗಳು, ಪದ್ಮ, ಗದೆ, ಶಂಖ, ತ್ರಿಶೂಲ, ಡಮರುಗ, ಧನುಸ್ಸು, ಪಂಚಪ್ರಾಸಾದ, ಶಿವಲಿಂಗ, ಕಲ್ಪವೃಕ್ಷ, ಸರ್ಪವಿಶೇಷ, ಮೆಣಸಿನ ಆಕಾರದ ಚುಕ್ಕೆಗಳು ಇವುಗಳನ್ನು ದೇವರ ಮುಂಭಾಗದಲ್ಲಿ ಬರೆಯಬೇಕು.

೨೫೪-೨೫೫. ಆರು ಮೂಲೆ, ತ್ರಿಕೋಣ ಅಥವಾ ಒಂಬತ್ತು ಕೋಣ ಇಲ್ಲವೇ ಹನ್ನೆರಡು ಕೋಣ ಇವುಗಳುಳ್ಳ ತೊಟ್ಟಿಲು, ಪಾದುಕೆ, ಬೀಸಣಿಗೆ ಚಾಮರ, ಛತ್ರದ್ವಯ ಮತ್ತು ವಿಷ್ಣು ಬ್ರಹ್ಮ ಮುಂತಾದ ವಿಗ್ರಹ ಇವುಗಳನ್ನು ವೇದಿಕೆಯಲ್ಲಿ ಅಥವಾ ದೇವಾಲಯದಲ್ಲಿಯಾದರೂ ಬರೆಯಬೇಕು.

೨೫೬. ಜ್ಞಾನಿಯು ದೇವರಪೂಜೆಯಾಗುವ ಸ್ಥಳದಲ್ಲಿಯೂ ಈ ರೀತಿ ಮಾಡಬೇಕು. ಇವುಗಳನ್ನು ತನ್ನ ಕೈಯಿಂದಲೇ ಮಾಡುವುದು ಮುಖ್ಯ. ಕೂಲಿಯನ್ನು ಕೊಟ್ಟು ಮಾಡಿಸುವುದು ಮಧ್ಯಮ.

ಯೋಚಿತಂ ತು ಕನಿಷ್ಠಂ ಸ್ಯಾದ್ಬಲಾತ್ಕಾರಮಥೋಽಧಮಂ ।
ಅರ್ಹೇಷು ಯತ್ತ್ವನರ್ಹೇಷು ಬಲಾತ್ಕಾರಾತ್ತು ನಿಷ್ಫಲಂ ॥ ೨೫೭ ॥

ರಕ್ತಶಾಲಿಜಪಾಶಾಣಕಲಮಾಸಿತೆರಕ್ತಕೈಃ ।
ತಂಡುಲೈರ್ವ್ರೀಹಿಮಾತ್ರೋತ್ಥೈಃ ಕಣೈಶ್ಚೈವ ಯಥಾಕ್ರಮಂ ॥ ೨೫೮ ॥

ಉತ್ತಮೈರ್ಮಧ್ಯಮೈಶ್ಚೈವ ಕನಿಷ್ಠೈರಧಮೈಸ್ತಥಾ ।
ಪದ್ಮಾದಿಸ್ಥಾಪನೈರೇವ ತತ್ಸಮ್ಯಗ್ಯಾಗಮಾಚರೇತ್ ॥ ೨೫೯ ॥

ಪ್ರಾಗುತ್ತರಮುಖೋ ವಾಪಿ ಯದಿ ವಾ ಪ್ರಾಙ್ಮುಖೋ ಭವೇತ್ ।
ಆಸನಂ ಚ ಪ್ರವಕ್ಷ್ಯಾಮಿ ಯಥಾದೃಷ್ಟಂ ಯಥಾಶ್ರುತಂ ॥ ೨೬೦ ॥

ಕೌಶಂ ಚಾರ್ಮಂ ಚೈಲತಲ್ಪೇ ದಾರವಂ ತಾಲಪತ್ರಕಂ ।
ಕಾಂಬಲಂ ಕಾಂಚನಂ ಚೈವ ರಾಜತಂ ತಾಮ್ರಮೇವ ಚ ॥ ೨೬೧ ॥

---

೨೫೭. ಬಿಕ್ಷೆಬೇಡಿದುದು ಕನಿಷ್ಠ, ಬಲಾತ್ಕರಿಸಿ ತರುವುದು ಅಧಮ, ಯೋಗ್ಯರು ಅಥವಾ ಅಯೋಗ್ಯರಲ್ಲಿ ಬಲಾತ್ಕಾರದಿಂದ ತೆಗೆದುಕೊಳ್ಳುವುದು ನಿಷ್ಫಲವು.

೨೫೮-೨೫೯. ಕೆಂಪಕ್ಕಿ, ಕರವೀರಪುಷ್ಪ, ಸಾವೆ, ಕಲಮಧಾನ್ಯ ಮುಂತಾದುವುಗಳಿಂದಲೂ, ಬತ್ತವನ್ನು ಕುಟ್ಟಿ ಮಾಡಿದ ಅಕ್ಕಿ ಮತ್ತು ಧಾನ್ಯಾಂಶ ಇವುಗಳಿಂದ ಕ್ರಮವಾಗಿ ಉತ್ತಮ, ಮಧ್ಯಮ, ಕನಿಷ್ಠ ಅಧಮಗಳಾದ ಪದ್ಮಾದಿಗಳನ್ನು ಸ್ಥಾಪಿಸಿ ಚೆನ್ನಾಗಿ ಯಾಗಮಾಡಬೇಕು.

೨೬೦. ಆಗ ಕರ್ತೃವು ಪೂರ್ವೋತ್ತರ ದಿಕ್ಕುಗಳಿಗಭಿಮುಖವಾಗಿ ಅಥವಾ ಪೂರ್ವದಿಕ್ಕಿಗಭಿಮುಖವಾಗಿರಬೇಕು. ನಾನು ಕೇಳಿ ನೋಡಿರುವ ಪ್ರಕಾರ ಆಸನವನ್ನು ಹೇಳುವೆನು.

೨೬೧-೨೬೨. ಕಾಚೀಹುಲ್ಲು, ಚರ್ಮ, ವಸ್ತ್ರ, ಹತ್ತಿ, ಮರ, ತಾಳಪತ್ರ,

ಗೋಕರೀಷಾರ್ಕಜೈರ್ವಾಪಿ ಹ್ಯಾಸನಂ ಪರಿಕಲ್ಪಯೇತ್ |
ವೈಯಾಘ್ರ್ಯಂ ರೌರವಂ ಚೈವ ಹಾರಿಣಂ ಮಾರ್ಗಮೇವ ಚ || ೨೬೨ ||

ಚಾರ್ಮ್ಯಂ ಚತುರ್ವಿಧಂ ಜ್ಞೇಯಮಥ ಬಂಧುರಮೇವ ಚ |
ಯಥಾಸಂಭವಮೇತೇಷು ಹ್ಯಾಸನಂ ಪರಿಕಲ್ಪಯೇತ್ || ೨೬೩ ||

ಕೃತಪದ್ಮಾಸನೋ ವಾಪಿ ಸ್ವಸ್ತಿಕಾಸನ ಏವ ಚ |
ದರ್ಭಭಸ್ಮಸಮಾಸೀನಃ ಪ್ರಾಣಾನಾಯಮ್ಯ ವಾಗ್ಯತಃ || ೨೬೪ ||

ತಾವತ್ಸ ದೇವತಾರೂಪೋ ಧ್ಯಾನಂ ಚಾಂತಃ ಸಮಾಚರೇತ್ |
ಶಿಖಾಂತೇ ದ್ವಾದಶಾಂಗುಲ್ಯೇ ಸ್ಥಿತಂ ಸೂಕ್ಷ್ಮತನುಂ ಶಿವಂ || ೨೬೫ ||

ಅಂತಶ್ಚರಂತಂ ಭೂತೇಷು ಗುಹಾಯಾಂ ವಿಶ್ವತೋಮುಖಂ |
ಸರ್ವಾಭರಣಸಂಯುಕ್ತಮಣಿಮಾದಿಗುಣಾನ್ವಿತಂ || ೨೬೬ ||

---

ಕಂಬಳಿ, ಬಂಗಾರ, ಬೆಳ್ಳಿ, ತಾಮ್ರ ಒಣಗಿದ ಹಸುವಿನ ಸಗಣಿ ಮತ್ತು ಸ್ಫಟಿಕಶಿಲೆ ಇವುಗಳಲ್ಲಾವುದಾದರೊಂದರಿಂದ ಆಸನವನ್ನು ರಚಿಸಬೇಕು.

೨೬೨-೨೬೩. ಚರ್ಮಾಸನವು, ಹುಲಿಯ ಚರ್ಮದಿಂದ ನಿರ್ಮಿತವಾದುದು, ರುರು, ಹರಿಣ, ಮೃಗ ಎಂಬ ಜಿಂಕೆಯ ಪ್ರಭೇದಗಳ ಚರ್ಮಗಳಿಂದ ನಿರ್ಮಿತವಾದುದು ಎಂಬುದಾಗಿ ನಾಲ್ಕು ವಿಧವು. ಸಂದರ್ಭಾನುಸಾರವಾಗಿ ಇವುಗಳಲ್ಲಿ ದೊರೆತ ವಸ್ತುವಿನಿಂದ ಮನೋಹರವಾಗಿ ಆಸನವನ್ನು ನಿರ್ಮಾಣಮಾಡಬೇಕು.

೨೬೪. ದರ್ಭೆ ಅಥವಾ ಭಸ್ಮಗಳಮೇಲೆ ಪದ್ಮಾಸನ ಅಥವಾ ಸ್ವಸ್ತಿಕಾಸನದಿಂದ ಕುಳಿತು ಮೌನವಾಗಿ ಪ್ರಾಣಾಯಾಮಮಾಡಬೇಕು.

೨೬೫. ದೇವತೆಯ ರೂಪವು ಇದಿರಿಗೆ ಬಂದು ನಿಲ್ಲುವವರೆಗೂ ಮನಸ್ಸಿನಲ್ಲಿ ಧ್ಯಾನಮಾಡಬೇಕು. ಹನ್ನೆರಡು ಅಂಗುಲವಿರುವ ಜ್ವಾಲೆಯ ಅಂತ್ಯಭಾಗದಲ್ಲಿರುವ, ಸೂಕ್ಷ್ಮಶರೀರನಾದ, ಪ್ರಾಣಿಗಳ ಹೃದಯಗುಹೆಯ ಒಳಗಿರುವ, ವ್ಯಾಪ್ತನಾದ, ಸರ್ವಾಭರಣಗಳನ್ನು ಧರಿಸಿರುವ ಮತ್ತು ಅಣಿಮಾದಿ ಶಕ್ತಿಗಳುಳ್ಳ

ಧ್ಯಾತ್ವಾ ತಂ ಧಾರಯೇಚ್ಚಿತ್ತೇ ತದ್ದೀಪ್ತ್ಯಾ ಪೂರಯೇತ್ತನುಂ ।
ತಯಾ ದೀಪ್ತ್ಯಾ ಶರೀರಸ್ಥಂ ಪಾಪಂ ನಾಶಮುಪಾಗತಂ ॥ ೨೬೭ ॥

ಸ್ವರ್ಣಪಾರದಸಂಪರ್ಕಾದ್ರಕ್ತಂ ಶ್ವೇತಂ ಯಥಾ ಭವೇತ್ ।
ತದ್ದ್ವಾದಶದಲಾವೃತ್ತಮಷ್ಟ ಪಂಚ ತ್ರಿರೇವ ವಾ ॥ ೨೬೮ ॥

ಪರಿಕಲ್ಪ್ಯಾಸನಂ ಶುದ್ಧಂ ತತ್ರ ಲಿಂಗಂ ನಿಧಾಯ ಚ ।
ಗುಹಾಸ್ಥಿತಂ ಮಹೇಶಾನಂ ಲಿಂಗೇಶಂ ಚಿಂತಯೇತ್ತಥಾ ॥ ೨೬೯ ॥

ಶೋಧಿತೇ ಕಲಶೇ ತೋಯಂ ಶೋಧಿತಂ ಗಂಧವಾಸಿತಂ ।
ಸುಗಂಧಪುಷ್ಪಂ ನಿಕ್ಷಿಪ್ಯ ಪ್ರಣವೇನಾಭಿಮಂತ್ರಿತಂ ॥ ೨೭೦ ॥

ಪ್ರಾಣಾಯಾಮಶ್ಚ ಪ್ರಣವಃ ಶೂದ್ರೇಷು ನ ವಿಧೀಯತೇ ।
ಪ್ರಾಣಾಯಾಮಪದೇ ಧ್ಯಾನಂ ಶಿವೇತ್ಯೋಂಕಾರಮಂತ್ರಿತಂ ॥ ೨೭೧ ॥

---

ಈಶ್ವರನನ್ನು ಧ್ಯಾನಿಸಿ ಚಿತ್ತದಲ್ಲಿ ಅವನನ್ನು ಧರಿಸಬೇಕು. ಅವನ ಪ್ರಕಾಶದಿಂದ ಶರೀರವನ್ನು ತುಂಬಬೇಕು. ಅದರಿಂದ ಶರೀರದಲ್ಲಿರುವ ಪಾಪವು ನಷ್ಟವಾಗುತ್ತದೆ.

೨೬೮-೨೬೯. ಚಿನ್ನ ಮತ್ತು ಪಾದರಸಗಳನ್ನು ಸೇರಿಸಿ ಕೆಂಪು ಅಥವಾ ಬೆಳ್ಳಗೆ ಆಗುವಂತೆ ಹನ್ನೆರಡು, ಎಂಟು, ಐದು ಅಥವಾ ಮೂರುದಳಗಳಿಂದ ಯುಕ್ತವಾದ, ಗುಂಡಗಿರುವ ನಿರ್ಮಲವಾದ ಆಸನವನ್ನು ರಚಿಸಿ ಅಲ್ಲಿ ಲಿಂಗವನ್ನಿಡಬೇಕು. ಅದರಲ್ಲಿ ಹೃದಯಗುಹೆಯಲ್ಲಿರುವ ಮಹೇಶ್ವರನನ್ನು ಧ್ಯಾನಿಸಬೇಕು.

೨೭೦. ತೊಳೆದ ತಂಬಿಗೆಯಲ್ಲಿ ಶೋಧಿಸಿದ, ಸುಗಂಧಯುಕ್ತವಾದ ನೀರನ್ನು ತುಂಬಿ ಸುಗಂಧಪುಷ್ಪಗಳನ್ನೂ ಸಹ ಅದರಮೇಲಿಟ್ಟು ಪ್ರಣವಮಂತ್ರದಿಂದ ಅಭಿಮಂತ್ರಿಸಬೇಕು.

೨೭೧. ಶೂದ್ರರಿಗೆ ಪ್ರಾಣಾಯಾಮವೂ ಮತ್ತು ಪ್ರಣವವೂ ವಿಹಿತವಲ್ಲ. ಅವರಿಗೆ ಪ್ರಾಣಾಯಾಮಕ್ಕೆ ಬದಲಾಗಿ ಧ್ಯಾನವೂ, ಪ್ರಣವಮಂತ್ರಕ್ಕೆ ಪ್ರತಿನಿಧಿಯಾಗಿ ' ಶಿವ ' ಎಂಬ ನಾಮವೂ ವಿಹಿತವಾಗಿದೆ.

**ಗಂಧಪುಷ್ಪಾಕ್ಷತಾದೀನಿ ಪೂಜಾದ್ರವ್ಯಾಣಿ ಯಾನಿ ಚ ।**
**ತಾನಿ ಸ್ಥಾಪ್ಯ ಸಮೀಪೇ ತು ತತಃ ಸಂಕಲ್ಪಮಾಚರೇತ್ ॥ ೨೭೨ ॥**

**ಶಿವಪೂಜಾಂ ಕರಿಷ್ಯಾಮಿ ಶಿವತುಷ್ಟ್ಯರ್ಥಮೇವ ಚ ।**
**ಇತಿ ಸಂಕಲ್ಪಯಿತ್ವಾ ತು ತತ ಆವಾಹನಾದಿಕಂ ॥ ೨೭೩ ॥**

**ಕೃತ್ವಾ ತು ಸ್ನಾನಪರ್ಯಂತಂ ತತಃ ಸ್ನಾನಂ ಪ್ರಕಲ್ಪಯೇತ್ ।**
**ನಮಸ್ತೇತ್ಯಾದಿ ಮಂತ್ರೇಣ ಶತರುದ್ರವಿಧಾನತಃ ॥ ೨೭೪ ॥**

**ಅವಿಚ್ಛಿನ್ನಾ ತು ಯಾ ಧಾರಾ ಮುಕ್ತಧಾರೇತಿ ಕೀರ್ತಿತಾ ।**
**ತಯಾ ಯಃ ಸ್ನಾಪಯೇನ್ಮಾಸಂ ಜಪನ್ರುದ್ರಮುಖಾಂಶ್ಚ ವಾ ॥ ೨೭೫ ॥**

**ಏಕವಾರಂ ತ್ರಿವಾರಂ ಚ ಪಂಚ ಸಪ್ತ ನವಾಪಿ ವಾ ।**
**ಏಕಾದಶಮಥೋ ವಾರಮಥೈಕಾದಶಧಾನ್ವಿತಂ ॥ ೨೭೬ ॥**

---

೨೭೨. ಆ ಕಲಶದ ಸಮೀಪದಲ್ಲಿ ಗಂಧ, ಹೂವು, ಅಕ್ಷತೆ ಮುಂತಾದ ಪೂಜೆಗೆ ಬೇಕಾದ ಸಾಮಾನುಗಳನ್ನಿಟ್ಟು ಅನಂತರ ಸಂಕಲ್ಪಮಾಡಬೇಕು.

೨೭೩. ಶಿವಪ್ರೀತ್ಯರ್ಥವಾಗಿ ಶಿವಪೂಜೆಯನ್ನು ಮಾಡುವೆನು ಎಂದು ಸಂಕಲ್ಪಿಸಿ ಬಳಿಕ ಆವಾಹನಾದಿಗಳನ್ನು ಮಾಡಬೇಕು.

೨೭೪. ಸ್ನಾನದ ವರೆಗಿನ ಉಪಚಾರಗಳನ್ನು ಸಮರ್ಪಿಸಿ ಅನಂತರ ಶತರುದ್ರೀಯ ಮುಂತಾದ ವಿಧಾನಪೂರ್ವಕವಾಗಿ 'ನಮಸ್ತೇ' ಇತ್ಯಾದಿ ಮಂತ್ರದಿಂದ ಅಭಿಷೇಕಮಾಡಬೇಕು.

೨೭೫-೨೭೭. ಅಭಿಷೇಕಮಾಡುವಾಗ ಜಲಧಾರೆಯು ಒಂದೇಸಮನಾಗಿ ನಿಲ್ಲದೆ ಬೀಳುತ್ತಿದ್ದರೆ ಅದು ಮುಕ್ತಧಾರೆಯೆನಿಸುವುದು. ಅಂತಹ ಮುಕ್ತಧಾರೆಯಿಂದ ಒಂದುತಿಂಗಳು ರುದ್ರ ಮುಂತಾದ ಮಂತ್ರಗಳನ್ನು ಜಪಿಸುತ್ತ ಒಂದು, ಮೂರು, ಐದು, ಏಳು, ಒಂಬತ್ತು, ಹನ್ನೊಂದು ಅಥವಾ ನೂರು ಹನ್ನೊಂದುಸಾರಿ ಅಭಿಷೇಕಮಾಡಬೇಕು. ಹಾಗೆ ಮಾಡಿಸುವ ಸ್ನಾನವನ್ನು

ಮುಕ್ತಿಸ್ನಾನಮಿದಂ ಜ್ಞೇಯಂ ಮಾಸಂ ಮೋಕ್ಷಪ್ರದಾಯಕಂ ।
ಶೈವಯಾ ವಿದ್ಯಯಾ ಸ್ನಾನಂ ಕೇವಲಂ ಪ್ರಣವೇನ ವಾ ॥ ೨೭೭ ॥

ಮೃಣ್ಮಯೈರ್ನಾರಿಕೇರಸ್ಯ ಶಕಲೈಶ್ಚೋರ್ಮಿಭಿಸ್ತಥಾ ।
ಕಾಂಸ್ಯೇನ ಮುಕ್ತಾಶುಕ್ತ್ಯಾ ಚ ಪುಷ್ಪಾದಿಕೇಸರೇಣ ವಾ ॥ ೨೭೮ ॥

ಸ್ನಾಪಯೇದ್ದೇವದೇವೇಶಂ ಯಥಾಸಂಭವಮೀರಿತೈಃ ।
ಶೃಂಗಸ್ಯ ಚ ವಿಧಿಂ ವಕ್ಷ್ಯೇ ಸ್ನಾನಯೋಗ್ಯಂ ಯಥಾ ಭವೇತ್ ॥ ೨೭೯ ॥

ಪೂರ್ವಮಂತಸ್ತು ಸಂಶೋಧ್ಯ ಬಹಿರಂತಸ್ತು ಶೋಧಯೇತ್ ।
ಸುಸ್ನಿಗ್ಧಂ ಲಘು ಕೃತ್ವಾಥ ನಾಗಂ ಛಿಂದ್ಯಾತ್ಕಥಂಚನ ॥ ೨೮೦ ॥

ನೀಚೈಕದೇಶವಿನ್ಯಸ್ತದ್ವಾರದ್ರೋಣ್ಯಾ ಸುವೃತ್ತಯಾ ।
ಕುಶಾನುಯುತಯಾ ಸ್ನಾನಂ ದೇವಾಯ ಪರಿಕಲ್ಪಯೇತ್ ॥ ೨೮೧ ॥

---

ಮುಕ್ತಿಸ್ನಾನವೆಂದು ತಿಳಿಯಬೇಕು. ಶೈವಮಂತ್ರ ಅಥವಾ ಕೇವಲ ಪ್ರಣವ ಮಂತ್ರದಿಂದಲಾದರೂ ಒಂದುತಿಂಗಳು ಅಭಿಷೇಕಮಾಡಿದರೆ ಮುಕ್ತಿಯು ಲಭಿಸುತ್ತದೆ.

೨೭೮-೨೭೯. ಸಂದರ್ಭಾನುಗುಣವಾಗಿ ವಿಧಿಸಿರುವ ಪ್ರಕಾರ ಮಣ್ಣಿನ ಪಾತ್ರೆ (ಗಡಿಗೆ), ತೆಂಗಿನಕಾಯಿಚಿಪ್ಪು, ಕಂಚಿನಪಾತ್ರೆ, ಕಪ್ಪೇಚಿಪ್ಪು ಅಥವಾ ಹೂವಿನಕೊಳವೆ ಇವುಗಳಿಂದ ದೇವದೇವೇಶ್ವರನಿಗೆ ಸ್ನಾನಮಾಡಿಸಬೇಕು. ಕೊಂಬಿನಿಂದ ಅಭಿಷೇಕಮಾಡುವ ವಿಧಾನವನ್ನು ಹೇಳುವೆನು.

೨೮೦. ಮೊದಲು ಕೊಂಬಿನ ಒಳಗಿರುವ ಕಶ್ಮಲವನ್ನು ತೆಗೆದು ಒಳಗೆ ಟೊಳ್ಳುಮಾಡಿಕೊಳ್ಳಬೇಕು. ಬಳಿಕ ಹೊರಗೆ ಒಳಗೂ ಸಹ ಚೆನ್ನಾಗಿ ಶೋಧಿಸಿ ನುಣುಪಾಗಿರುವಂತೆಯೂ, ಹಗುರವಾಗಿರುವಂತೆಯೂ ಮಾಡಿಕೊಳ್ಳಬೇಕು. ಆಮೇಲೆ ಸೂಕ್ಷ್ಮವಾಗಿ ತುದಿಯಕಡೆಯಲ್ಲಿ ರಂಧ್ರವನ್ನು ಮಾಡಬೇಕು.

೨೮೧. ಗುಂಡಗಿರುವಂತೆ ಮಾಡಿದ ಆ ರಂಧ್ರವು ಕೆಳಗೆ ಬರುವಂತೆ ಮಾಡಿ ಅದರಲ್ಲಿ ದರ್ಭೆಯನ್ನು ಸಿಕ್ಕಿಸಬೇಕು. ಅದರಿಂದ ಶ್ರೀರುದ್ರದೇವರಿಗೆ ಅಭಿಷೇಕಮಾಡಿಸಬೇಕು.

ಏವಂ ಗವಯಶೃಂಗಸ್ಯ ಜಲಪೂರ್ತಿರಥೋಚ್ಯತೇ ।
ದ್ವಾರೇ ನಿಷಿದ್ಧಲೋಹಾರ್ಧಸಂಧಿದ್ವಾರಸಮನ್ವಿತೇ ॥ ೨೮೨ ॥

ಯೋಗವಕ್ತ್ರಂ ನಾಗದಂಡಂ ನಾಗಾಕಾರಂ ಪ್ರಕಲ್ಪಯೇತ್ ।
ಫಲಸ್ಥಾನೇ ತು ಚಷಕಂ ದಂಡೇನ ಸಮರಂಧ್ರಕಂ ॥ ೨೮೩ ॥

ತತ್ರೈವ ಪಾತಯೇತ್ತೋಯಂ ಮೂರ್ಧಯಂತ್ರಘಟೇ ಸ್ಥಿತಂ ।
ಪಾತಯೇದಥ ಚಾನ್ಯೇನ ವಾಮೇನೈವ ಕರೇಣ ವಾ ॥ ೨೮೪ ॥

---

೨೮೨. ಕಾಡಿನಲ್ಲಿರುವ ಗೋವಿನ ಆಕಾರದ ಗವಯವೆಂಬ ಪಶುವಿನ ಕೊಂಬನ್ನು ತಂದು ಈರೀತಿ ರಚಿಸಿ ಅದರಲ್ಲಿ ನೀರನ್ನು ತುಂಬಿ ಅಭಿಷೇಕಮಾಡಬೇಕು. ಆ ಕೊಂಬಿನ ಮುಂದುಗಡೆ ಅರ್ಧದವರೆಗೂ ಬಂಗಾರ ಅಥವಾ ಬೆಳ್ಳಿಯ ಕಟ್ಟನ್ನು ಹಾಕಿರಬೇಕು. ಅದಕ್ಕೂ ರಂಧ್ರವನ್ನು ಮಾಡಿರಬೇಕು.

೨೮೩. ಯೋಗದಂಡದಮುಖದಂತೆ ಮುಖವುಳ್ಳ ಕಾಲುಮಣೆಯೊಂದನ್ನು ಮಾಡಬೇಕು. ಅದರಮೇಲೆ ಜಲಪಾತ್ರೆಯನ್ನು ಇಡಬೇಕು. ಅದರ ತಳದಲ್ಲಿ ಒಂದು ತೂತುಮಾಡಿ ಅದಕ್ಕೆ ಬಿದಿರು ಅಥವಾ ಮರದ ಕೊಳವೆಯನ್ನು ಸಿಕ್ಕಿಸಬೇಕು. ಅದರ ಇನ್ನೊಂದು ತುದಿಗೆ ಒಂದು ಸಣ್ಣ ಪಾತ್ರೆಯನ್ನು ಸೇರಿಸಿ ಅದಕ್ಕೆ ಮೇಲಿನ ಪಾತ್ರೆಯಿಂದ ಕೊಳವೆಯಮೂಲಕವಾಗಿ ನೀರು ಬರುವಂತೆ ಮಾಡಬೇಕು.

೨೮೪. ಹೀಗೆ ಮೇಲ್ಭಾಗದಲ್ಲಿ ಸ್ಥಾಪಿತವಾದ ಪಾತ್ರೆಯ ನೀರು ಮೇಲೆ ಹೇಳಿದಂತೆ ಶುದ್ಧಿಮಾಡಿದ ಕೊಂಬಿನೊಳಕ್ಕೆ ಬೀಳುವಂತೆ ಮಾಡಿ ಅದರಿಂದ ಅಭಿಷೇಕಮಾಡಬೇಕು. ಅದಿಲ್ಲದಿದ್ದರೆ ಬೇರೆ ರೀತಿಯಾಗಿ ನೀರು ಬೀಳುವಂತೆ ಮಾಡಿಕೊಂಡಾದರೂ ಅಭಿಷೇಕಮಾಡಬಹುದು. ಅದೂ ಸಾಧ್ಯವಾಗದಿದ್ದಲ್ಲಿ ಎಡಗೈಯಿಂದಲೇ ಆ ಕೊಂಬಿಗೆ ನೀರನ್ನು ಹಾಕಿಕೊಳ್ಳುತ್ತ ಬಲಗೈಯಿಂದ ಅಭಿಷೇಕಮಾಡಬೇಕು.

ಮುಕ್ತಿಧಾರಾ ಕೃತಾ ತೇನ ಪವಿತ್ರಂ ಪಾಪನಾಶನಂ ।
ಏವಂ ಸಂಸ್ನಾಪ್ಯ ದೇವೇಶಂ ಪಂಚಗವ್ಯೈಸ್ತಥೈವ ಚ ॥ ೨೮೫ ॥

ಪಂಚಾಮೃತೈರಥ ಸ್ನಾಪ್ಯ ಮಧುರತ್ರಿತಯೇನ ಚ ।
ವಿಭೂಷ್ಯ ಭೂಷಣೈರ್ದೇವಂ ಪುನಃ ಸ್ನಾಪ್ಯ ಮಹೇಶ್ವರಂ ॥ ೨೮೬ ॥

ಶೀತೋಪಚಾರಂ ಕೃತ್ವಾಥ ತತ ಆಚಮನಾದಿಕಂ ।
ವಸ್ತ್ರಂ ತಥೋಪವೀತಂ ಚ ಪಂಚಗಂಧಕಮೇವ ಚ
ಕರ್ಪೂರಮಗುರುಂ ಚಾಪಿ ಪಟೀರಮಥವಾ ಭವೇತ್ ॥ ೨೮೭ ॥

ಉಭಯಂಮಿಶ್ರಿತಂ ಚಾಪಿ ಶಿವಲಿಂಗಂ ಪ್ರಪೂಜಯೇತ್ ।
ಕೃತ್ಸ್ನಂ ಪೀಠಂ ಗಂಧಪೂರ್ಣಂ ಯದ್ವಾ ವಿಭವಸಾರತಃ ।
ತೂಷ್ಣೀಮಥೋಪಚಾರಂ ವಾ ಕಾಲೀಯಂ ಪುಷ್ಪಮರ್ಚಯೇತ್ ॥

ಶ್ರೀಪತ್ರಂ ಮರುಚಿತ್ವಾಜ್ಯಂ ಯಥಾ ಶಕ್ತ್ಯಾಖಿಲಂ ಯಥಾ ।
ಅನೇಕದ್ರವ್ಯಧೂಪಂ ಚ ಗುಗ್ಗುಲಂ ಕೇವಲಂ ತಥಾ ॥ ೨೮೯ ॥

---

೨೮೫-೨೮೮. ಈ ರೀತಿಯಾಗಿ ಮಾಡುವ ಮುಕ್ತಿಧಾರಾಭಿಷೇಕವು ಪವಿತ್ರವು ಮತ್ತು ಪಾಪನಾಶಕವೂ ಆಗಿರುವುದು. ಹೀಗೆ ದೇವೇಶನನ್ನು ಸ್ನಾಪಿಸಿ ಪಂಚಗವ್ಯಗಳಿಂದಲೂ, ಪಂಚಾಮೃತದಿಂದಲೂ ಅಥವಾ ಸಕ್ಕರೆ, ತುಪ್ಪ, ಜೇನು ತುಪ್ಪಗಳಿಂದಲಾದರೂ ಅಭಿಷೇಕಮಾಡಿ ದೇವರಿಗೆ ಆಭರಣಾಲಂಕಾರಮಾಡಿ ಪುನಃ ಶಿವನಿಗೆ ಸ್ನಾನಮಾಡಿಸಿ ಶೈತ್ಯೋಪಚಾರಮಾಡಿ ಅನಂತರ ಆಚಮನಾದಿಗಳನ್ನೂ, ವಸ್ತ್ರ, ಯಜ್ಞೋಪವೀತ, ಪಂಚಗಂಧ, ಪಚ್ಚಕರ್ಪೂರ, ಅಗುರು, ಮತ್ತು ಪಟಿಕಅಥವಾ ಉಭಯಮಿಶ್ರಿತವಾದುದು ಇವುಗಳನ್ನರ್ಪಿಸಿ ಶಿವಲಿಂಗವನ್ನು ಪೂಜಿಸಬೇಕು.

೨೮೮. ಪೀಠಕ್ಕೆ ಸಮಗ್ರವಾಗಿ ಗಂಧವನ್ನು ಲೇಪಿಸಬೇಕು. ಅಥವಾ ವಿಭವಾನುಸಾರವಾಗಿ ಗಂಧ ಹಚ್ಚಬೇಕು. ಬಳಿಕ ಸುಮ್ಮನೆ ಉಪಚಾರಪೂಜೆ ಮಾಡಿ ಆಯಾ ಕಾಲಗಳಲ್ಲಿ ಸಿಕ್ಕುವ ಹೂವುಗಳನ್ನು ಪೂಜಿಸಬೇಕು.

೨೮೯. ಬಿಲ್ವಪತ್ರೆ ಮರುಗ ಮುಂತಾದುವನ್ನು ಸಮರ್ಪಿಸಿ, ತನ್ನ ಶಕ್ತ್ಯನುಸಾರವಾಗಿ ಖಿಲವಾಗದಂತೆ ಘೃತಮಿಶ್ರವಾದ ಅನೇಕ ದ್ರವ್ಯಧೂಪವನ್ನೂ ಆದಿಲ್ಲದಿದ್ದರೆ ಕೇವಲ ಗುಗ್ಗುಲು ಧೂಪವನ್ನಾದರೂ ಅರ್ಪಿಸಬೇಕು.

ಕಪಿಲಾಘೃತಸಂಯುಕ್ತಂ ಶರ್ವಧೂಪಾಯ ಶಸ್ಯತೇ ।
ಧೂಪಂ ದತ್ವಾ ಯಥಾಶಕ್ತಿ ಕಪಿಲಾಘೃತದೀಪಕಾನ್ ॥ ೨೯೦ ॥

ಅಥವಾ ಆಜ್ಯಮಾತ್ರೇಣ ದೀಪಾನ್ದತ್ವೋಪಹಾರಕಂ ।
ನೈವೇದ್ಯಮುಪಪನ್ನಂ ಚ ದತ್ವಾ ಪುಷ್ಪಸಮನ್ವಿತಂ ॥ ೨೯೧ ॥

ಮುಖಶುದ್ಧಿಂ ತತಃ ಕೃತ್ವಾ ದತ್ವಾ ತಾಂಬೂಲಮಾದರಾತ್ ।
ಪ್ರದಕ್ಷಿಣನಮಸ್ಕಾರೌ ಪೂಜೈವಂ ಹಿ ಸಮಾಪ್ಯತೇ ॥ ೨೯೨ ॥

ಗೀತ್ಯಂಗಪಂಚಕಂ ಪಶ್ಚಾತ್ತಾನಿ ವಿಜ್ಞಾಪಯಾಮಿ ತೇ ।
ಗೀತಿರ್ವಾದ್ಯಂ ಪುರಾಣಂ ಚ ನೃತ್ಯಂ ಹಾಸ್ಯೋಕ್ತಿರೇವ ಚ ॥ ೨೯೩ ॥

ನೀರಾಜನಂ ಚ ಪುಷ್ಪಾಣಾಮಂಜಲಿಶ್ಚಾಖಿಲಾರ್ಪಣಂ ।
ಕ್ಷಮಾಪನಂ ಚೋದ್ವಸನಂ ಪ್ರೋಕ್ತಂ ಪಂಚೋಪಚಾರಕಂ ॥ ೨೯೪ ॥

---

೨೯೦. ಕಪಿಲಗೋವಿನ ತುಪ್ಪದಿಂದ ಸಹಿತವಾದ ಧೂಪವು ಶಿವನಿಗೆ ಪ್ರಶಸ್ತವು. ಹೀಗೆ ಧೂಪವನ್ನು ಸಮರ್ಪಿಸಿ, ಕಪಿಲಘೃತ ದೀಪಗಳನ್ನೂ ಸಮರ್ಪಿಸಬೇಕು.

೨೯೧. ಅಥವಾ ಯಾವುದಾದರೊಂದು ತುಪ್ಪದಿಂದ ದೀಪಗಳನ್ನು ಹಚ್ಚಿ ಯುಕ್ತವಾದ ಉಪಹಾರ ಸಾಮಗ್ರಿಯನ್ನು ಪುಷ್ಪಸಹಿತವಾಗಿ ನಿವೇದನೆ ಮಾಡಬೇಕು.

೨೯೨. ಬಳಿಕ ಬಾಯಿತೊಳೆಸಿ, ಭಕ್ತಿಯಿಂದ ತಾಂಬೂಲವನ್ನರ್ಪಿಸಿ ಪ್ರದಕ್ಷಿಣೆನಮಸ್ಕಾರಗಳನ್ನು ಮಾಡಬೇಕು. ಈರೀತಿಯಾಗಿ ಆಚರಿಸಿ ಪೂಜೆಯನ್ನು ಪೂರೈಸಬೇಕು.

೨೯೩. ತರುವಾಯ ಗೀತಿಯ ಐದು ಅಂಗಗಳನ್ನು ಸಮರ್ಪಿಸಬೇಕು. ಆ ಐದು ಅಂಗಗಳನ್ನು ನಿನಗೆ ತಿಳಿಸುವೆನು. ಗಾನ, ವಾದ್ಯ, ಪುರಾಣ, ನರ್ತನ ಮತ್ತು ಹಾಸ್ಯವಚನ ಇವೇ ಗೀತಿಯ ಪಂಚಾಂಗಗಳು.

೨೯೪. ಮಂಗಳಾರತಿ, ಪುಷ್ಪಾಂಜಲಿಸಮರ್ಪಣೆ, ಸರ್ವಸಮರ್ಪಣೆ, ಕ್ಷಮಾಪಣೆ, ಪ್ರಾರ್ಥನೆ ಮತ್ತು ಉದ್ವಾಸನೆ ಇವು ಪಂಚೋಪಚಾರಗಳೆಂದು ಉಕ್ತವಾಗಿವೆ.

ಭೂಷಣಂ ಚ ತಥಾ ಛತ್ರಂ ಚಾಮರವ್ಯಜನೇ ಅಪಿ ।
ಉಪವೀತಂ ಚ ಕೈಂಕರ್ಯಂ ಷೋಡಶಾನುಪಚಾರಕಾ ॥ ೨೯೫ ॥

ದ್ವಾತ್ರಿಂಶದುಪಚಾರೈಸ್ತು ಯಃ ಸಮಾರಾಧಯೇಚ್ಛಿವಂ ।
ಏಕೇನಾಹ್ನಾ ಸಮಸ್ತಾನಾಂ ಪಾತಕಾನಾಂ ಕ್ಷಯೋ ಭವೇತ್ ॥ ೨೯೬ ॥

ಏತಚ್ಛ್ರುತ್ವಾ ಹನುಮತೋ ವಚನಂ ಪ್ರಾಹ ಶಂಕರಃ ।
ಏವಮೇತತ್ಕಪಿಶ್ರೇಷ್ಠ ಯದುಕ್ತಂ ಪೂಜನಂ ಮಮ ॥ ೨೯೭ ॥

ಸಾರಭೂತಮಹಂ ತುಭ್ಯಮುಪದೇಕ್ಷ್ಯಾಮಿ ಸಾಂಪ್ರತಂ ।
ಆರಾಧನಂ ಯಥಾ ಲಿಂಗೇ ವಿಸ್ತರೇಣ ತ್ವಯೋದಿತಂ ೨೯೮ ॥

ಮತ್ಪಾದಯುಗಲಂ ಪ್ರಾರ್ಚ್ಯ ಪೂಜಾಫಲಮವಾಪ್ನುಹಿ ।
ತತಃ ಪ್ರಾಹ ಕಪಿಶ್ರೇಷ್ಠೋ ದೇವದೇವಮುಮಾಪತಿಂ ॥ ೨೯೯ ॥

---

೨೯೫. ಗೀತ್ಯಂಗಪಂಚಕ, ಪಂಚೋಪಚಾರಗಳು ಮತ್ತು ಭೂಷಣ, ಛತ್ರ, ಚಾಮರ, ವ್ಯಜನ, ಉಪವೀತ, ಕೈಂಕರ್ಯಗಳೆಂಬ ಆರೂ ಸೇರಿ ಷೋಡಶೋಪಚಾರಗಳಾಗುವುವು. ಅವೆಲ್ಲವನ್ನೂ ಈಶ್ವರನಿಗೆ ಸಮರ್ಪಿಸಬೇಕು.

೨೯೬. ಮೂವತ್ತೆರಡು ಉಪಚಾರಗಳಿಂದ ಈಶ್ವರನನ್ನು ಆರಾಧಿಸಿದರೆ ಅವನ ಸಕಲ ಪಾಪಗಳೂ ಒಂದೇ ದಿವಸದಲ್ಲಿ ನಾಶವಾಗುವುವು.

೨೯೭. ಹನುಮಂತನ ಈ ಮಾತನ್ನು ಕೇಳಿ ಶಂಕರನು ಹನುಮಂತನೇ ! ನೀನು ಹೇಳಿದ ನನ್ನ ಪೂಜೆಯ ವಿಧಾನವು ಸರಿಯಾದುದು.

೨೯೮. ಈಗ ನಾನು ಅದರ ಸಾರಾಂಶವನ್ನು ನಿನಗೆ ಉಪದೇಶಿಸುವೆನು. ಲಿಂಗದಲ್ಲಿ ಆರಾಧನೆಮಾಡುವ ವಿಧಾನವು ವಿಸ್ತಾರವಾಗಿ ನಿನ್ನಿಂದ ಹೇಳಲ್ಪಟ್ಟಿತು.

೨೯೯. ನನ್ನ ಎರಡು ಪಾದಗಳನ್ನು ಚೆನ್ನಾಗಿ ಪೂಜಿಸಿ ಪೂಜೆಯ ಫಲವನ್ನು ಹೊಂದು ಎಂದು ಶಂಕರನು ಹೇಳಲು ಬಳಿಕ ಕಪಿಶ್ರೇಷ್ಠನು ದೇವದೇವನಾದ ಪಾರ್ವತೀಪತಿಯನ್ನು ಕುರಿತು ಹೀಗೆ ಹೇಳಿದನು.

ಗುರುಣಾ ಲಿಂಗಪೂಜೈವ ನಿಯುತಾ ಪರಿಕಲ್ಪಿತಾ ।
ತಾಂ ಕರೋಮಿ ಪುರಾ ದೇವ ಪಶ್ಚಾತ್ತ್ವತ್ಪಾದಪೂಜನಂ ॥ ೩೦೦ ॥

ಇತ್ಯುಕ್ತ್ವೇಶಂ ನಮಸ್ಕೃತ್ಯ ಶಿವಲಿಂಗಾರ್ಚನಾಯ ಚ ।
ಸರಸಸ್ತೀರಮಾಗತ್ಯ ಕೃತ್ವಾ ಸೈಕತವೇದಿಕಾಂ ॥ ೩೦೧ ॥

ತಾಲಪತ್ರೈರ್ವಿರಚಿತಮಾಸನಂ ಪರ್ಯಕಲ್ಪಯತ್ ।
ಪ್ರಕ್ಷಾಲ್ಯ ಪಾದೌ ಹಸ್ತೌ ಚ ಸಮಾಚಮ್ಯ ಸಮಾಹಿತಃ ॥ ೩೦೨ ॥

ಭಸ್ಮಸ್ನಾನಮುಖೋ ಚಕ್ರೇ ಪುನರಾಚಮ್ಯ ವಾಗ್ಯತಃ ।
ದೇವವೇದ್ಯಾಮುಖೋ ಚಕ್ರೇ ಪದ್ಮಂ ಚ ಸುಮನೋಹರಂ ॥ ೩೦೩ ॥

ಅನಂತರಂ ತಾಲಪತ್ರೇ ಪದ್ಮಾಸನಗತಃ ಕಪಿಃ ।
ಪ್ರಾಣಾಯಾಮಮಪಿ ಸಂನ್ಯಸ್ಯ ಶುಕ್ಲಧ್ಯಾನಸಮನ್ವಿತಃ ॥ ೩೦೪ ॥

---

೩೦೦. ದೇವನೇ! ಗುರುಗಳಿಂದ ಲಿಂಗಪೂಜೆಯೇ ನಿಯಮಿಸಲ್ಪಟ್ಟಿದೆ. ಅದನ್ನು ಮೊದಲು ಮಾಡುವೆನು. ತರುವಾಯ ನಿನ್ನ ಪಾದಪೂಜೆಯನ್ನು ಮಾಡುವೆನು.

೩೦೧. ಹೀಗೆ ಹೇಳಿ ಈಶ್ವರನನ್ನು ನಮಸ್ಕರಿಸಿ, ಶಿವಲಿಂಗಪೂಜೆಗಾಗಿ ಸರೋವರದ ತೀರಕ್ಕೆ ಬಂದು ಮರಳಿನ ವೇದಿಕೆ (ಜಗುಲಿ) ಯನ್ನು ಮಾಡಿದನು.

೩೦೨-೩೦೩. ಅಲ್ಲಿ ತಾಳಪತ್ರಗಳಿಂದ ಆಸನವನ್ನು ರಚಿಸಿದನು. ಅನಂತರ ಕೈಕಾಲುಗಳನ್ನು ತೊಳೆದುಕೊಂಡು ಆಚಮನ ಮಾಡಿ ಸಮಾಧಾನಮನಸ್ಕನಾಗಿ ಭಸ್ಮಸ್ನಾನಮಾಡಿದನು. ಬಳಿಕ ಪುನಃ ಆಚಮನ ಮಾಡಿ ಮೌನದಿಂದ ದೇವ ವೇದಿಕೆಯಲ್ಲಿ ಅತ್ಯಂತ ಮನೋಹರವಾದ ಪದ್ಮವನ್ನು ಬರೆದನು.

೩೦೪-೩೦೫. ಅನಂತರ ತಾಲಪತ್ರಾಸನದಲ್ಲಿ ಪದ್ಮಾಸನವನ್ನು ಹಾಕಿಕೊಂಡು ಕುಳಿತಿರುವ ಕಪಿಯು ಪ್ರಾಣಾಯಾಮಮಾಡಿ ಈಶ್ವರನಲ್ಲಿಯೇ ಮನಸ್ಸಿಟ್ಟು ಶುಕ್ಲಧ್ಯಾನಮಾಡುತ್ತಾ ಗುರುವಾದ ಈಶ್ವರನನ್ನು ನಮಸ್ಕರಿಸಿ ಜಪ

ಪ್ರಣಮ್ಯ ಗುರುಮೀಶಾನಂ ಜಪನ್ನಾಸೀದತಃ ಪರಂ ।
ಅಥ ದೇವಾರ್ಚನಂ ಕರ್ತುಂ ಯತ್ನಮಾಸ್ಥಿತವಾನ್ಕಪಿಃ ॥ ೩೦೫ ॥

ಪಲಾಶಪತ್ರಪುಟಕದ್ವಯಾನೀತಜಲಂ ಶುಚಿ ।
ಶಿರಃ ಕಮಂಡಲುಗತಂ ನಿಧಾಯಾಗ್ನಿನಿಮಂತ್ರಿತಂ ॥ ೩೦೬ ॥

ಆವಾಹನಾದಿ ಕೃತ್ವಾಥ ಸ್ನಾನಪರ್ಯಂತಮೇವ ಚ ।
ಅಥ ಸ್ನಾಪಯಿತುಂ ದೇವಮಾದಾಯ ಕರಸಂಪುಟೇ ॥ ೩೦೭ ॥

ಕೃತ್ವಾ ನಿರೀಕ್ಷಣಂ ದೇವಂ ಪೀಠಂ ನೋ ದೃಷ್ಟವಾನ್ಕಪಿಃ ।
ಲಿಂಗಮಾತ್ರಂ ಕರಗತಂ ದೃಷ್ಟ್ವಾ ಭೀತಿಸಮನ್ವಿತಃ ॥ ೩೦೮ ॥

ಇದಮಾಹ ಮಹಾಯೋಗೀ ಕಿಂ ವಾ ಪಾಪಂ ಮಯಾ ಕೃತಂ ।
ಯದೇತತ್ಪೀಠರಹಿತಂ ಶಿವಲಿಂಗಂ ಕರಸ್ಥಿತಂ ॥ ೩೦೯ ॥

---

ಮಾಡುತ್ತಿದ್ದನು. ಅನಂತರ ಕಪಿಯು ದೇವರ ಪೂಜೆಯನ್ನು ಮಾಡಲು ಪ್ರಯತ್ನಮಾಡಿದನು.

೩೦೬. ಮುತ್ತುಗದೆಲೆಯ ದೊನ್ನೆಯಲ್ಲಿ ತಂದ, ನಿರ್ಮಲವಾದ ಅಗ್ನಿ ಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ನೀರನ್ನು ಶಿರಸ್ಸಿನಮೇಲಿರುವ ಕಮಂಡಲುವಿನಲ್ಲಿರಿಸಿದನು.

೩೦೭. ಆವಾಹನೆಯಾದಿಯಾಗಿ ಸ್ನಾನದವರೆಗಿನ ಉಪಚಾರಗಳನ್ನು ಮಾಡಿ ಬಳಿಕ ಸ್ನಾನಮಾಡಿಸಲು ದೇವನನ್ನು ಕೈಯಲ್ಲಿ ತೆಗೆದುಕೊಂಡನು.

೩೦೮. ಆಗ ಕಪಿಯು ಪೀಠವಿಲ್ಲದೆ ಲಿಂಗಮಾತ್ರವೇ ಕೈಯಲ್ಲಿದ್ದುದನ್ನು ನೋಡಿ ಭಯಗೊಂಡನು.

೩೦೯. ಮಹಾಯೋಗಿಯಾದ ಕಪಿಯು ಹೀಗೆ ಹೇಳಿದನು—ನಾನು ಏನು ಪಾಪಮಾಡಿರುವೆನು? ಏತಕ್ಕೆ ಶಿವಲಿಂಗವು ಪೀಠರಹಿತವಾಗಿ ಕೈಗೆ ಬಂದಿತು?

ಮಮಾದ್ಯ ಮರಣಂ ಸಿದ್ಧಂ ನ ಪೀಠಂ ಚಾಗಮಿಷ್ಯತಿ ।
ಅಥ ರುದ್ರಂ ಜಪಿಷ್ಯಾಮಿ ತದಾಯಾತಿ ಮಹೇಶ್ವರಃ ॥ ೩೧೦ ॥

ಇತಿ ನಿಶ್ಚಿತ್ಯ ಮನಸಾ ಜಜಾಪ ಶತರುದ್ರಿಯಂ ।
ಯದಾ ತು ನ ಸಮಾಯಾತೋ ಮಹೇಶೋಥ ಕಪೀಶ್ವರಃ ॥ ೩೧೧ ॥

ರುದ್ರಂ ನ್ಯಪಾತಯದ್ಭೂಮೌ ವೀರಭದ್ರಃ ಸಮಾಗತಃ ।
ಕಿಮರ್ಥಂ ರುದ್ಯತೇ ಭದ್ರ ರುದಿತೇ ಕಾರಣಂ ವದ ॥ ೩೧೨ ॥

ತಚ್ಛ್ರುತ್ವಾ ಪ್ರಾಹ ಹನುಮಾನ್ವೀರಭದ್ರಂ ಮನೋಗತಂ ।
ಪೀಠಹೀನಮಿದಂ ಲಿಂಗಂ ಪಶ್ಯ ಮೇ ಪಾಪಸಂಚಯಂ ॥ ೩೧೩ ॥

ವೀರಭದ್ರಸ್ತತಃ ಪ್ರಾಹ ಶ್ರುತ್ವಾ ಕಪೀಸಮೀರಿತಂ ।
ಯದಿ ನಾಯಾತಿ ಪೀಠಂ ತೇ ಲಿಂಗೇ ಮಾ ಸಾಹಸಂ ಕುರು ॥ ೩೧೪ ॥

---

೩೧೦. ಪೀಠವು ಬರದಿದ್ದರೆ ನನಗೆ ಈಗ ಮರಣವು ಸಿದ್ಧ, ಆದಕ್ಕಾಗಿ ರುದ್ರವನ್ನು ಜಪಿಸುವೆನು. ಆಗ ಮಹೇಶ್ವರನು ಬರುವನು.

೩೧೧–೩೧೨. ಹೀಗೆ ಮನಸ್ಸಿನಲ್ಲಿ ನಿಶ್ಚಯಿಸಿ ಶತರುದ್ರೀಯವನ್ನು ಜಪಿಸಿದನು. ಆಗಲೂ ಮಹೇಶ್ವರನು ಬರದಿರಲು ಕಪೀಶ್ವರನು ಲಿಂಗವನ್ನು ನೆಲಕ್ಕೆ ಕೆಡಹಿದನು. ಆಗ ವೀರಭದ್ರನು ಬಂದು ಮಂಗಳಕರನಾದ ಕಪೀಶ್ವರನೇ! ಏತಕ್ಕಾಗಿ ಅಳುತ್ತಿರುವೆ? ಅಳುವುದಕ್ಕೆ ಕಾರಣವನ್ನು ಹೇಳು ಎಂದನು.

೩೧೩. ಅದನ್ನು ಕೇಳಿ ಹನುಮಂತನು ವೀರಭದ್ರನಿಗೆ ನನ್ನ ಪಾಪ ಸಂಚಯದ ಫಲವಾಗಿ ಈ ಲಿಂಗವು ಪೀಠವಿಲ್ಲದೇ ಬಂದಿರುವುದನ್ನು ನೋಡು ಎಂಬುದಾಗಿ ತನ್ನ ಮನೋಗತವನ್ನು ತಿಳಿಸಿದನು.

೩೧೪–೩೧೫. ತರುವಾಯ ಕಪಿಯು ಹೇಳಿದುದನ್ನು ಕೇಳಿ ವೀರ ಭದ್ರನು ಹನುಮಂತನೇ! ನಿನಗೆ ಪೀಠವು ಬರದಿದ್ದರೆ ಲಿಂಗದ ಮೇಲೆ ಸಾಹಸ ಮಾಡಬೇಡ. ಪೀಠವು ಬರದಿದ್ದರೆ ನಾನು ಲೋಕಗಳನ್ನೆಲ್ಲಾ ಸುಟ್ಟುಬಿಡುವೆನು.

ದಾಹಯಿಷ್ಯಾಮ್ಯಹಂ ಲೋಕಾನ್ಯದಿ ನಾಯಾತಿ ಪೀಠಕಂ ।
ಪಶ್ಯ ದರ್ಶಯ ಮೇ ಲಿಂಗಂ ಪೀಠಂ ಚಾತ್ರ ಗತಂ ನ ವಾ ॥ ೩೧೫ ॥

ಅಥ ದೃಷ್ಟ್ವಾ ವೀರಭದ್ರೋ ಲಿಂಗೇ ಪೀಠಮನಾಗತಂ ।
ದಗ್ಧುಕಾಮೋಽಖಿಲಾನ್ ಲೋಕಾನ್ವೀರಭದ್ರಃ ಪ್ರತಾಪವಾನ್ ॥ ೩೧೬ ॥

ಅನಲಂ ಭುವಿ ಚಿಕ್ಷೇಪ ಕ್ಷಣಾದ್ದಗ್ಧಾ ಮಹೀ ತದಾ ।
ಅಥ ಸಪ್ತತಲಾನ್ದಗ್ಧ್ವಾ ಪುನರೂರ್ಧ್ವಮವರ್ತತ ॥ ೩೧೭ ॥

ಪಂಚೋರ್ಧ್ವಲೋಕಾನದಹಜ್ಜನಲೋಕನಿವಾಸಿನಃ ।
ಲಲಾಟನೇತ್ರಸಂಭೂತಂ ನಖೇನಾದಾಯ ಚಾನಲಂ ॥ ೩೧೮ ॥

ಜಂಬೀರಫಲಸಂಕಾಶಂ ಕೃತ್ವಾ ಕರತಲೇ ವಿಭುಃ ।
ತಪಃ ಸತ್ಯಂ ಚ ಸಂದಗ್ಧುಮುದ್ಯತೋಽಭೂನ್ಮುನೀಶ್ವರಃ ॥ ೩೧೯ ॥

---

ನನಗೆ ಲಿಂಗವನ್ನು ತೋರಿಸು. ಪೀಠವು ಬಂದಿದೆಯೋ ಅಥವಾ ಇಲ್ಲವೋ ನೋಡೋಣ ಎಂದು ಹೇಳಿದನು.

೩೧೬-೩೧೭. ಬಳಿಕ ಪ್ರತಾಪಶಾಲಿಯಾದ ವೀರಭದ್ರನು ಲಿಂಗದಲ್ಲಿ ಪೀಠವು ಬರದಿದ್ದುದನ್ನು ನೋಡಿ ಸಮಸ್ತಲೋಕಗಳನ್ನೂ ಸುಡಬೇಕೆಂದು ಬಯಸಿ ಭೂಮಿಗೆ ಬೆಂಕಿಯನ್ನು ಹಾಕಿದನು.

೩೧೭-೩೧೮. ಆಗ ಕ್ಷಣಮಾತ್ರದಲ್ಲಿ ಭೂಮಿಯು ಸುಟ್ಟುಹೋಯಿತು. ಬಳಿಕ ಏಳು ಅಧೋಲೋಕಗಳನ್ನೂ ಸುಟ್ಟು ಸಮರ್ಥನಾದ ವೀರಭದ್ರನು ಊರ್ಧ್ವಲೋಕದಲ್ಲಿದ್ದುಕೊಂಡು ಐದು ಊರ್ಧ್ವಲೋಕಗಳನ್ನೂ ಸುಟ್ಟನು.

೩೧೮-೩೧೯. ಜನಲೋಕನಿವಾಸಿಯಾದ ಈಶ್ವರನ ಫಾಲನೇತ್ರದಲ್ಲಿ ಹುಟ್ಟಿದ ಅಗ್ನಿಯನ್ನು ನಿಂಬೆಹಣ್ಣಿಗೆ ಸಮವಾಗಿ ಭಾವಿಸಿ ಅದನ್ನು ಉಗುರಿನಿಂದ ತೆಗೆದು ಅಂಗೈಯಲ್ಲಿಟ್ಟುಕೊಂಡು ತಪೋಲೋಕ ಸತ್ಯಲೋಕಗಳನ್ನೂ ಸುಡಲು ದ್ಯುಕ್ತನಾದನು.

ತತಸ್ತು ಮುನಯೋ ದೃಷ್ಟ್ವಾ ತಪೋಲೋಕನಿವಾಸಿನಃ ।
ದಗ್ಧುಕಾಮಂ ವೀರಭದ್ರಂ ಗೌತಮಾಶ್ರಮಮಾಗತಾಃ || ೩೨೦ ||

ನ ದೃಷ್ಟ್ವಾ ತತ್ರ ದೇವೇಶಂ ಶಂಕರಂ ಸ್ವಾತ್ಮನಿ ಸ್ಥಿತಂ ।
ಅಸ್ತುವದ್ಭಕ್ತಿಸಂಯುಕ್ತಾಃ ಸ್ತೋತ್ರೈರ್ವೇದಸಮುದ್ಭವೈಃ || ೩೨೧ ||

ಓಂ ವೇದವೇದ್ಯಾಯ ದೇವಾಯ ತಸ್ಮೈ ।
ಶುದ್ಧಪ್ರಭಾಚಿಂತ್ಯರೂಪಾಯ ತಸ್ಮೈ ।
ಬ್ರಹ್ಮಾದ್ಯಧೀಶಾಯ ಸೃಷ್ಟ್ಯಾದಿ ಕರ್ತ್ರೇ
ವಿಷ್ಣುಪ್ರಿಯಾರ್ತಿಹಂತ್ರೇಽಥ ಕರ್ತ್ರೇ || ೩೨೨ ||

ನಮಸ್ತೇಽಖಿಲಾಧೀಶ್ವರಾಯಾಂಬರಾಯ
ನಮಸ್ತೇ ಚರಸ್ಥಾವರವ್ಯಾಪಕಾಯ ।
ನಮೋ ವೇದಗುಹ್ಯಾಯ ಭಕ್ತಪ್ರಿಯಾಯ
ನಮಃ ಪಾಕಭೋಕ್ತ್ರೇ ಮಖೇಶಾಯ ತುಭ್ಯಂ || ೩೨೩ ||

---

೩೨೦. ತರುವಾಯ ತಪೋಲೋಕದಲ್ಲಿರುವ ಮುನಿಗಳು ಸುಡಬೇಕೆಂದು ಬಯಸುತ್ತಿರುವ ವೀರಭದ್ರನನ್ನು ನೋಡಿ ಗೌತಮ ಮುನಿಗಳ ಆಶ್ರಮಕ್ಕೆ ಬಂದರು.

೩೨೧. ಅಲ್ಲಿ ತಮ್ಮ ಹೃದಯಸ್ಥಿತನಾದ ಶಂಕರದೇವನನ್ನು ಕಾಣದೇ ವೇದೋಕ್ತಸ್ತೋತ್ರಗಳಿಂದ ಭಕ್ತಿಸಂಪನ್ನರಾಗಿ ಸ್ತುತಿಸಿದರು.

೩೨೨. ವೇದಪ್ರತಿಪಾದ್ಯನು, ಪರಿಶುದ್ಧಕಾಂತಿಯುತವಾದ ಅಚಿಂತ್ಯ ರೂಪವುಳ್ಳವನು, ಬ್ರಹ್ಮಾದ್ಯಧೀಶನು, ಸೃಷ್ಟ್ಯಾದಿಕರ್ತೃವು, ವಿಷ್ಣುಭಕ್ತರ ಮನೋವ್ಯಥೆಯನ್ನು ಪರಿಹರಿಸುವವನೂ ಆಗಿರುವ ನಿನಗೆ ನಮಸ್ಕಾರ.

೩೨೩. ಅಖಿಲಾಧೀಶ್ವರನೂ, ದಿಗಂಬರನೂ, ಚರಸ್ಥಿರವಸ್ತುಗಳಲ್ಲಿ ವ್ಯಾಪಿಸಿರುವವನೂ ಆದ ನಿನಗೆ ನಮಸ್ಕಾರ. ವೇದವೇದ್ಯಗುಹ್ಯಸ್ವರೂಪನು, ಭಕ್ತಪ್ರಿಯನು, ಪಾಕಭೋಕ್ತೃವು ಮತ್ತು ಯಜ್ಞೇಶ್ವರನೂ ಆದ ನಿನಗೆ ನಮಸ್ಕಾರ.

ನಮಸ್ತೇ ಶಿವಾಯಾದಿದೇವಾಯ ಕುರ್ಮೋ ।
ನಮೋ ವ್ಯಾಲಯಜ್ಞೋಪವೀತಪ್ರಧರ್ತ್ರೇ ।
ನಮಸ್ತೇ ಸುರಾಬಿಂದುವರ್ಷಾಪನಾಯ ।
ತ್ರಯೀ ಮೂರ್ತಯೇ ಕಾಲಕಾಲೀಯನಾಥ ॥ ೩೨೪

ಧರಿತ್ರೀಮರುದ್ವ್ಯೋಮತೋಯೇಂದುವಹ್ನಿ
ಪ್ರಭಾಮಂಡಲಾತ್ಮಾಷ್ಟಧಾಮೂರ್ತಿಧರ್ತ್ರೇ ।
ಶಿವಾಯಾಶಿವಘ್ನಾಯ ವೀರಾಯ ಭೂಯಾತ್
ಸದಾ ನಃ ಪ್ರಸನ್ನೋ ಜಗನ್ನಾಥಕೇಜ್ಯಃ ॥ ೩೨೫

ಕಲಾನಾಥಭಾಲೋ ಯ ಆತ್ಮಾ ಮಹಾತ್ಮಾ
ಮನೋಹ್ಯಗ್ರಯಾನೋ ನಿರೂಪ್ಯೋ ನ ವಾಗ್ಭಿಃ ।
ಜಗಜ್ಜಾಡ್ಯವಿಧ್ವಂಸನೋ ಭುಕ್ತಿಮುಕ್ತಿ
ಪ್ರದಃ ಸ್ಯಾತ್ಪ್ರಸನ್ನಃ ಸದಾ ಶುದ್ಧಕೀರ್ತಿಃ ॥ ೩೨೬ ।

---

೩೨೪. ಆದಿದೇವನಾದ ಶಿವನೇ! ನಿನಗೆ ನಮಸ್ಕಾರ. ಯಜ್ಞೋಪವೀತದಂತೆ ಸರ್ಪವನ್ನು ಧರಿಸಿರುವ ಶಿವನಿಗೆ ನಮಸ್ಕಾರಮಾಡುವೆವು. ಸುರಾಬಿಂದುಗಳನ್ನು ಮಳೆಗರೆಸಿದ, ವೇದಮೂರ್ತಿಯಾದ, ಕಾಲಕ್ಕೂ ಕಾಲರೂಪಿಯಾದ ಸ್ವಾಮಿಯೇ! ನಿನಗೆ ನಮಸ್ಕಾರ.

೩೨೫. ಮಹೀ, ವಾಯು, ಆಕಾಶ, ಜಲ, ಇಂದು, ಅಗ್ನಿ, ಸೂರ್ಯ, ದೀಕ್ಷಿತಬ್ರಾಹ್ಮಣ ಎಂಬುದಾಗಿ ಎಂಟು ಪ್ರತಿಮೆಗಳುಳ್ಳ, ಅಮಂಗಳಪರಿಹಾರಕನು, ವೀರನೂ ಆದ ಈಶ್ವರನಿಗೆ ನಮಸ್ಕಾರ. ಜಗನ್ನಾಥನು ಮತ್ತು ಬ್ರಹ್ಮಸ್ತುತ್ಯನೂ ಆದ ಈಶ್ವರನು ಯಾವಾಗಲೂ ನಮಗೆ ಪ್ರಸನ್ನನಾಗಲಿ.

೩೨೬. ಫಾಲಚಂದ್ರನು, ಶುದ್ಧಾತ್ಮನು, ಮಹಾಮಹಿಮನು, ಮನಸ್ಸು ವಾಕ್ಕುಗಳಿಂದ ನಿರೂಪಿಸಲಶಕ್ಯಸ್ವರೂಪನು, ಲೋಕದ ಅಜ್ಞಾನನಾಶಕನು, ಭೋಗ ಮೋಕ್ಷಪ್ರದನು, ಪರಿಶುದ್ಧಕೀರ್ತಿಯುಳ್ಳವನೂ ಆಗಿರುವ ಈಶ್ವರನು ಅನವರತವೂ ನಮಗೆ ಪ್ರಸನ್ನನಾಗಲಿ.

ಯತಃ ಸಂಪ್ರಸೂತಂ ಜಗಜ್ಜಾತಮೀಶಾ
ತ್ಸ್ಥಿತಂ ಯೇನ ರಕ್ಷಾವತಾ ಭಾವಿತಂ ಚ ।
ಲಯಂ ಯಾಸ್ಯತೇ ಯತ್ರ ವಾಚಾಂ ವಿದೂರೇ
ಸ ವೈ ನಃ ಪ್ರಸನ್ನೋಽಸ್ತು ಕಾಲತ್ರಯಾತ್ಮಾ ॥ ೩೨೭ ॥

ಯದಾದಿಂ ಚ ಮಧ್ಯಂ ತಥಾಂತಂ ನ ಕೇಽಪಿ
ವಿಜಾನಂತಿ ವಿಜ್ಞಾ ಅಪಿ ಸ್ವಾನುಮಾನಾಃ ।
ಸ ವೈ ಸರ್ವಮೂರ್ತಿಃ ಸದಾ ನೋ ವಿಭೂತ್ಯೈ
ಪ್ರಸನ್ನೋಽಸ್ತು ಕಿಂ ಜ್ಞಾಪಯಾಮೋಽತ್ರ ಕೃತ್ಯಂ ॥ ೩೨೮ ॥

ಏತಾಂ ಸ್ತುತಿಮಥಾಕರ್ಣ್ಯ ಭಗನೇತ್ರಪ್ರದಃ ಶಿವಃ ।
ವಿಷ್ಣುಮಾಹ ಮುನೀನೇತಾನಾನಯಸ್ವ ಮದಂತಿಕಂ ॥ ೩೨೯ ॥

---

೩೨೭. ಈ ಜಗತ್ತನ್ನು ಹುಟ್ಟಿಸಿ ಕಾಪಾಡಿ ಕೊನೆಗೆ ಸಂಹಾರಮಾಡುವವನು, ವಾಗ್ವಿದೂರನು, ಕಾಲತ್ರಯಸ್ವರೂಪಿಯೂ ಆದ ಪರಮೇಶ್ವರನು ಸರ್ವದಾ ನಮಗೆ ಪ್ರಸನ್ನನಾಗಲಿ.

೩೨೮. ವಿಶೇಷಜ್ಞರಾದರೂ ಸ್ವರೂಪಜ್ಞಾನಿಗಳು ಯಾರ ಆದಿ ಮಧ್ಯಾಂತಗಳನ್ನು ತಿಳಿಯಲಾರರೋ, ಅಂತಹ ಸರ್ವಮೂರ್ತಿಯು ಯಾವಾಗಲೂ ನಮಗೆ ಪ್ರಸನ್ನನಾಗಿ ಐಶ್ವರ್ಯಪ್ರದನಾಗಲಿ, ಅಂತಹ ಈಶ್ವರನಲ್ಲಿ ಕರ್ತವ್ಯವೇನೆಂದರಿಕೆಮಾಡೋಣ? ನಾವು ವಿಶೇಷವಾಗಿ ಏನನ್ನೂ ವಿಜ್ಞಾಪಿಸಲಾರೆವು ಎಂದು ತಾತ್ಪರ್ಯ.

೩೨೯. ಐಶ್ವರ್ಯಜ್ಞಾನಪ್ರದನಾದ ಈಶ್ವರನು ಈ ಸ್ತೋತ್ರವನ್ನು ಕೇಳಿ ಈ ಮುನಿಗಳನ್ನು ನನ್ನ ಹತ್ತಿರಕ್ಕೆ ಕರೆದುಕೊಂಡುಬಾ ಎಂದು ವಿಷ್ಣುವಿಗೆ ಹೇಳಿದನು.

**ಅಥ ವಿಷ್ಣುಃ ಸಮಾಗತ್ಯ ತಪೋಲೋಕನಿವಾಸಿನಃ ।**
**ಮುನೀನ್ಸಾಂತ್ವಯ್ಯ ವಿಶ್ವೇಶಂ ದರ್ಶಯಾಮಾಸ ಶಂಕರಂ ॥ ೩೩೦ ॥**

**ತಾನಾಹ ಶಂಕರೋ ವಾಕ್ಯಂ ಕಿಮರ್ಥಂ ಯೂಯಮಾಗತಾಃ ।**
**ತಪೋಲೋಕಾದ್ಭೂಮಿಲೋಕಂ ಮುನಯೋ ಮುಕ್ತಕಿಲ್ಬಿಷಾಃ ॥ ೩೩೧ ॥**

**ತಚ್ಛ್ರುತ್ವಾ ಶೂಲಿನೋ ವಾಕ್ಯಂ ಪ್ರೋಚುಸ್ತೇ ಮುನಿಸತ್ತಮಾಃ ।**
**ದೇವ ದ್ವಾದಶಲೋಕಾನಾಂ ದೃಶ್ಯಂತೇ ಭಸ್ಮರಾಶಯಃ ॥ ೩೩೨ ॥**

**ಸ್ಥಿತಮೇಕಂ ವನಮಿದಂ ಪಶ್ಯ ತಲ್ಲೋಕಸಂಕ್ಷಯಂ ।**
**ತಚ್ಛ್ರುತ್ವಾ ಗಿರಿಶಃ ಪ್ರಾಹ ತಾನ್ಮುನೀನೂರ್ಧ್ವರೇತಸಃ ॥ ೩೩೩ ॥**

**ಭೂರ್ಲೋಕಸ್ಯ ತು ಸಂದಾಹೇ ಪಾತಾಲಾನಾಂ ತಥೈವ ಚ ।**
**ಸಂದೇಹೋ ನಾಸ್ತಿ ಮುನಯಃ ಸ್ಥಿತಾನಾಂ ನೋ ರಹಃ ಸ್ಥಲೇ ॥ ೩೩೪ ॥**

---

೩೩೦. ತರುವಾಯ ವಿಷ್ಣುವು ಬಂದು ತಪೋಲೋಕದಲ್ಲಿದ್ದ ಋಷಿಗಳನ್ನು ಸಂತೈಸಿ ಜಗದೀಶನಾದ ಶಂಕರನನ್ನು ತೋರಿಸಿದನು.

೩೩೧. ಶಂಕರನು ಆ ಮುನಿಗಳನ್ನು ಕುರಿತು ಮುನಿಗಳೇ ! ಪಾಪಗಳನ್ನು ಪರಿಹರಿಸಿಕೊಂಡಿರುವ ನೀವು ತಪೋಲೋಕದಿಂದ ಭೂಲೋಕಕ್ಕೆ ಏತಕ್ಕಾಗಿ ಬಂದಿರಿ? ಎಂದು ಕೇಳಿದನು.

೩೩೨. ಈಶ್ವರನ ಆ ಮಾತನ್ನು ಕೇಳಿ ಆ ಮುನಿವರ್ಯರು ದೇವನೇ! ಹನ್ನೆರಡು ಲೋಕಗಳೂ ಸುಟ್ಟುಹೋಗಿ ಅದರ ಬೂದಿರಾಶಿಗಳು ಕಾಣಿಸುತ್ತಿವೆ.

೩೩೩. ಈ ವನವೊಂದೇ ಸುಡದೇ ಉಳಿದಿರುವುದು. ಆ ಲೋಕನಾಶವನ್ನು ನೋಡು ಎಂದು ಹೇಳಲು, ಅದನ್ನು ಕೇಳಿದ ಶಂಕರನು ಬ್ರಹ್ಮಚಾರಿಗಳಾದ ಆ ಮುನಿಗಳನ್ನು ಕುರಿತು ಹೀಗೆ ಹೇಳಿದನು.

೩೩೪–೩೩೫. ಮುನಿಗಳೇ ! ಭೂಲೋಕ ಮತ್ತು ಪಾತಾಳಲೋಕಗಳನ್ನು ಸುಟ್ಟಿರುವ ವಿಷಯದಲ್ಲಿ ನನಗೆ ಸಂಶಯವಿಲ್ಲ. ನಮ್ಮ ರಹಸ್ಯ ಸ್ಥಳ

ಊರ್ಧ್ವಪಂಚಕಲೋಕಾನಾಂ ದಾಹೇ ಸಂದೇಹ ಏವ ನಃ ।
ಕಥಮಂಗಾರವೃಷ್ಟಿಶ್ಚ ಕಥಂ ನೋ ವಾ ಮಹಾಧ್ವನಿ || ೩೩೫ ||

ತದಾಕರ್ಣ್ಯ ವಿಭೋರ್ವಾಕ್ಯಂ ಶಂಕರಸ್ಯ ಮುನೀಶ್ವರಾಃ ।
ಪ್ರೋಚುಃ ಪ್ರಾಂಜಲಯೋ ದೇವಂ ಬ್ರಹ್ಮಾದಿಸುರಸಂಗತಂ || ೩೩೬ ||

ಭೀತಿರಸ್ಮಾಕಮಧುನಾ ವರ್ತತೇ ವೀರಭದ್ರತಃ ।
ಸ ಏವಾಂಗಾರವೃಷ್ಟಿಂ ಚ ಪಿಪಾಸುರಪಿಬದ್ವಿಭೋ || ೩೩೭ ||

ದೇವೋಥ ವೀರಮಾಹೂಯ ಕಿಂ ವೀರೇತ್ಯಬ್ರವೀದ್ವಚಃ ।
ವೀರೋಪ್ಯಾಹ ಕಪೇರ್ಲಿಂಗೇ ಪೀಠಾಭಾವಾದಿದಂ ಕೃತಂ || ೩೩೮ ||

---

ದಲ್ಲಿರುವ ಮೇಲಿನ ಐದು ಲೋಕಗಳ ದಾಹವಿಷಯದಲ್ಲಿ ನಮಗೆ ಸಂಶಯವು ಇದ್ದೇ ಇದೆ. (ಅದನ್ನು ನಾನು ನಂಬಲಾರೆನು). ವಿಶಾಲವಾದ ನಮ್ಮ ಮಾರ್ಗದಲ್ಲಿ ಬೆಂಕಿಯ ಮಳೆಯು ಹೇಗೆ ಉಂಟಾದೀತು ? ಎಂದು ಹೇಳಿದನು.

೩೩೬. ಶಂಕರಸ್ವಾಮಿಯ ಆ ಮಾತನ್ನು ಕೇಳಿ ಮುನೀಶ್ವರರು ಬ್ರಹ್ಮಾದಿ ದೇವತೆಗಳ ಜೊತೆಯಲ್ಲಿರುವ ದೇವನನ್ನು ಕುರಿತು ಕೈಮುಗಿದುಕೊಂಡು ಈರೀತಿಯಾಗಿ ಹೇಳಿದರು.

೩೩೭. ದೇವನೇ ! ಈಗ ನಮಗೆ ವೀರಭದ್ರನ ದೆಸೆಯಿಂದ ಭಯವುಂಟಾಗಿದೆ, ಬಾಯಾರಿದ ಆತನೇ ಬೆಂಕಿಯ ಮಳೆಯನ್ನೂ ಸಹ ಪಾನಮಾಡಿದನು ಎಂದು ಹೇಳಿದರು.

೩೩೮. ಬಳಿಕ ದೇವನು ವೀರಭದ್ರನನ್ನು ಕರೆದು ವೀರಭದ್ರನೇ ! ಸಮಾಚಾರವೇನೆಂದು ಕೇಳಿದನು. ವೀರಭದ್ರನು ಕಪಿಯು ತೆಗೆದುಕೊಂಡ ಲಿಂಗದಲ್ಲಿ ಪೀಠವಿಲ್ಲದುದರಿಂದ ಈರೀತಿ ಮಾಡಬೇಕಾಯಿತೆಂದು ಹೇಳಿದನು.

ತಚ್ಛ್ರುತ್ವಾಹ ಶಿವೋ ದೇವೋ ಮುನೀಂಸ್ತ್ರಾತ್ ಭಯವಿಹ್ವಲಾನ್ ।
ಕಪೇಶ್ಚಿತ್ತಂ ಪರಿಜ್ಞಾತಂ ಮಯಾ ಕೃತಮಿದಂ ದ್ವಿಜಾಃ ॥ ೩೩೯ ॥

ಮಾ ಭೈಷ್ಟ ಭವತಾಂ ಸೌಖ್ಯಂ ಸದಾ ಸಂಪಾದಯಾಮ್ಯಹಂ ।
ಇತ್ಯುಕ್ತ್ವಾ ತು ಯಥಾಪೂರ್ವಂ ದೇವದೇವಃ ಕೃಪಾನಿಧಿಃ ॥ ೩೪೦ ॥

ದಗ್ಧಾನಪ್ಯಖಿಲಾನ್ಲೋಕಾನ್ಪೂರ್ವತಃ ಶೋಭನಾನ್ವಿಭುಃ ।
ಕಲ್ಪಯಾಮಾಸ ವಿಶ್ವಾತ್ಮಾ ವೀರಭದ್ರಮಥಾಬ್ರವೀತ್ ॥ ೩೪೧ ॥

ಸಾಧು ವತ್ಸ ಯತೋ ಭದ್ರಂ ಭಕ್ತಾನಾಮೀಹಸೇ ಸದಾ ।
ತತಸ್ತೇ ವಿಪುಲಾ ಕೀರ್ತಿರ್ಲೋಕೇ ಸ್ಥಾಸ್ಯತಿ ಶಾಶ್ವತೀ ॥ ೩೪೨ ॥

ಇತ್ಯುಕ್ತ್ವಾಲಿಂಗ್ಯ ಶಿರಸಿ ಸಮಾಘ್ರಾಯ ಮಹೇಶ್ವರಃ ।
ತಾಂಬೂಲಂ ವೀರಭದ್ರಾಯ ದತ್ತವಾನ್ಪ್ರೀತಮಾನಸಃ ॥ ೩೪೩ ॥

---

೩೩೯. ಅದನ್ನು ಕೇಳಿ ಈಶ್ವರದೇವನು ಭಯಗ್ರಸ್ತರಾದ ಮುನಿಗಳನ್ನು ಕುರಿತು ದ್ವಿಜರೇ! ಈ ಕಪಿಯ ಮನಸ್ಸನ್ನು ತಿಳಿಯಲು ಇದೆಲ್ಲವನ್ನೂ ನಾನೇ ಮಾಡಿರುವೆನು.

೩೪೦-೩೪೧. ಭಯಪಡಬೇಡಿ! ನಿಮಗೆ ಯಾವಾಗಲೂ ಸೌಖ್ಯವನ್ನುಂಟು ಮಾಡುವೆನು ಎಂದು ಹೇಳಿ, ದಯಾಸಾಗರನಾದ ದೇವದೇವನು ಸುಡಲ್ಪಟ್ಟಿದ್ದ ಸಕಲ ಲೋಕಗಳನ್ನೂ ಹಿಂದೆ ಇದ್ದಂತೆಯೇ ವಿರಾಜಿಸುವಂತೆ ಮಾಡಿದನು. ಕೂಡಲೇ ಜಗದೊಡೆಯನು ವೀರಭದ್ರನಿಗೆ ಹೇಳಿದನು.

೩೪೨. ವತ್ಸ! ಒಳ್ಳೆಯದು ನೀನು ಯಾವಾಗಲೂ ಭಕ್ತರಿಗೆ ಮಂಗಳವನ್ನೇ ಆಶಿಸುತ್ತೀಯೇ. ಆದಕಾರಣ ನಿನ್ನ ಕೀರ್ತಿಯು ಲೋಕದಲ್ಲಿ ವಿಶಾಲವಾಗಿ ನಿಲ್ಲುವುದು. ಎಂದಿಗೂ ಹೋಗುವುದಿಲ್ಲ.

೩೪೩. ಹೀಗೆ ಹೇಳಿ ಮಹೇಶ್ವರನು ಅವನನ್ನು ಆಲಿಂಗಿಸಿ, ಶಿರಸ್ಸನ್ನು ಆಘ್ರಾಣಿಸಿ, ಸಂತುಷ್ಟಚಿತ್ತನಾಗಿ ವೀರಭದ್ರನಿಗೆ ತಾಂಬೂಲವನ್ನು ಕೊಟ್ಟನು.

ಅಥಾಸೌ ಹನುಮಾನೀಶಪೂಜನಂ ಕೃತವಾನ್ಯಥಾ ।
ಸಮಾಪ್ತಾಯಾಂ ತು ಪೂಜಾಯಾಂ ಹನೂಮಾನ್ಪ್ರೀತಮಾನಸಃ ॥ ೩೪೪ ॥

ಏಕಂ ವನಚರಂ ತತ್ರ ಗಂಧರ್ವಂ ಸವಿಪಂಚಿಕಂ ।
ದದರ್ಶ ತಮಥಾಭ್ಯಾಹ ವೀಣಾ ಮೇ ದೀಯತಾಮಿತಿ ॥ ೩೪೫ ॥

ಗಂಧರ್ವೋಽಪ್ಯಾಹ ನ ಮಯಾ ತ್ಯಾಜ್ಯಾ ವೀಣಾ ಪ್ರಿಯಾ ಮಮ ।
ಮಮಾಪಿ ಪ್ರಾಣಸದೃಶೀ ವೀಣೇತ್ಯಾಹ ಕಪೀಶ್ವರಃ ॥ ೩೪೬ ॥

ಯದಾ ನ ದತ್ತೇ ಗಂಧರ್ವೋ ವಲ್ಲಕೀಂ ಕಪಯೇ ಪ್ರಿಯಾಂ ।
ತದಾ ಮುಷ್ಟಿಪ್ರಹಾರೇಣ ಗಂಧರ್ವಃ ಪಾತಿತಃ ಕ್ಷಿತೌ ॥ ೩೪೭ ॥

ವೀಣಾಮಾದಾಯ ಮಹತೀಂ ಸ್ವರತಂತುಸಮನ್ವಿತಾಂ ।
ಹನುಮಾನ್ವಾನರಶ್ರೇಷ್ಠೋ ಗಾಯನ್ಪ್ರಾಗಚ್ಛಿವಾಂತಿಕಂ ॥ ೩೪೮ ॥

---

೩೪೪-೩೪೫. ತರುವಾಯ ಈ ಹನುಮಂತನು ವಿಧಿವತ್ತಾಗಿ ಪೂಜೆಯನ್ನು ಮಾಡಿದನು. ಪೂಜೆಯು ಮುಗಿದಮೇಲೆ ಹನುಮಂತನು ಸಂತುಷ್ಟಚಿತ್ತನಾಗಿ ಅಲ್ಲಿ ವನಚರನಾದ ವೀಣಾಪಾಣಿ ಗಂಧರ್ವನೋರ್ವನನ್ನು ನೋಡಿದನು. ಬಳಿಕ ಅವನನ್ನು ನನಗೆ ವೀಣೆಯನ್ನು ಕೊಡೆಂದು ಕೇಳಿದನು.

೩೪೬. ಗಂಧರ್ವನು ನನಗೂ ವೀಣೆಯು ಪ್ರಿಯವಾದುದು, ಅದನ್ನು ಕೊಡಲಾರೆನೆಂದು ಹೇಳಿದನು. ಗಂಧರ್ವನೇ! ನನಗೂ ವೀಣೆಯು ಪ್ರಾಣಕ್ಕೆ ಸಮಾನವಾಗಿದೆ ಎಂದು ಕಪೀಶ್ವರನು ಹೇಳಿದನು.

೩೪೭. ಗಂಧರ್ವನು ಕಪಿಗೆ ಇಷ್ಟವಾದ ವೀಣೆಯನ್ನು ಕೊಡದಿರಲು ಅವನು ಮುಷ್ಟಿಯಿಂದ ಹೊಡೆದು ಗಂಧರ್ವನನ್ನು ನೆಲಕ್ಕೆ ಬೀಳಿಸಿದನು.

೩೪೮. ಕಪಿವರ್ಯನಾದ ಹನುಮಂತನು ಸರ್ವತಂತುಸಹಿತವಾದ ದೊಡ್ಡ ವೀಣೆಯನ್ನು ತೆಗೆದುಕೊಂಡು ಗಾನಮಾಡುತ್ತ ಈಶ್ವರನ ಹತ್ತಿರಕ್ಕೆ ಹೋದನು.

ತತೋ ಗಾನೇನ ಮಹತಾ ಪ್ರಸಾದ್ಯ ಜಗದೀಶ್ವರಂ ।
ಬೃಹತೀಕುಸುಮೈಃ ಶುದ್ಧೈರ್ದೇವಪಾದಾವಪೂಜಯೆತ್ ॥ ೩೪೯ ॥

ತತಃ ಪ್ರಸನ್ನೋ ವಿಶ್ವಾತ್ಮಾ ಮುನೀನಾಂ ಸನ್ನಿಧೌ ತದಾ ।
ದೈತ್ಯಾನಾಂ ದೇವತಾನಾಂ ಚ ನೃಪಾಣಾಂ ಶಂಕರೋಽಪಿ ಚ ॥ ೩೫೦ ॥

ತಸ್ಮೈ ವರಮಥ ಪ್ರಾದಾತ್ಕಲ್ಪಾಂತಂ ಜೀವಿತಂ ಪುನಃ ।
ಸಮುದ್ರಲಂಘನೇ ಶಕ್ತಿಂ ಶಾಸ್ತ್ರಜ್ಞತ್ವಂ ಬಲೋನ್ನತಿಂ ॥ ೩೫೧ ॥

ಏವಂ ದತ್ತಂ ವರಂ ಪ್ರಾಪ್ಯ ಮಹೇಶೇನ ಮಹಾತ್ಮನಾ ।
ಪ್ರತ್ಯಕ್ಷಂ ಮಮ ವಿಪ್ರೇಂದ್ರ ಹನುಮಾನ್ಹರ್ಷಮಾಗತಃ ॥ ೩೫೨ ॥

ಸಮಸ್ತಭೂಷಾಸುವಿಭೂಷಿತಾಂಗಃ
ಸ್ವದೀಪ್ತಿಮಂದೀಕೃತದೇವದೀಪ್ತಿಃ ।
ಪ್ರಸನ್ನಮೂರ್ತಿಸ್ತರುಣಃ ಶಿವಾಂಗಕಃ ।
ಸಂಭಾವಯಾಮಾಸ ಸಮಸ್ತದೇವಾನ್ ॥ ೩೫೩ ॥

---

೩೪೯. ಅನಂತರ ಹೆಚ್ಚಾಗಿ ಗಾನಮಾಡಿ ಜಗದೀಶ್ವರನನ್ನು ಪ್ರಸನ್ನೀಕರಿಸಿಕೊಂಡು, ಶುದ್ಧವಾದ ಹೆಗ್ಗುಳಪುಷ್ಪಗಳಿಂದ ಈಶನ ಪಾದಗಳನ್ನು ಪೂಜಿಸಿದನು.

೩೫೦-೩೫೧. ಆದರಿಂದ ಪ್ರಸನ್ನನಾದ ಜಗನ್ನಾಥನು ಆಗ ಮುನಿಗಳು, ದೈತ್ಯರು, ದೇವತೆಗಳು ಮತ್ತು ದೊರೆಗಳು ಇವರೆದುರಿಗೆ ಆ ಹನುಮಂತನಿಗೆ ಕಲ್ಪಮುಗಿಯುವವರೆಗೆ ಆಯುಸ್ಸನ್ನೂ, ಸಮುದ್ರವನ್ನು ದಾಟುವ ಸಾಮರ್ಥ್ಯವನ್ನೂ, ಶಾಸ್ತ್ರಜ್ಞಾನ ಮತ್ತು ಬಲಾಧಿಕ್ಯಗಳನ್ನೂ ಸಹ ವರವಾಗಿ ಕೊಟ್ಟನು.

೩೫೨. ಈರೀತಿ ಮಹಾತ್ಮನಾದ ಮಹೇಶ್ವರನಿಂದ ಕೊಡಲ್ಪಟ್ಟ ವರವನ್ನು ಸ್ವೀಕರಿಸಿ, ಬ್ರಾಹ್ಮಣವರ್ಯನೇ! ನನ್ನೆದುರಿಗೇ ಹನುಮಂತನು ಸಂತೋಷಪಟ್ಟನು.

೩೫೩. ಸಕಲಾಭರಣಗಳಿಂದಲೂ ಚೆನ್ನಾಗಿ ಅಲಂಕೃತವಾದ ಅವಯವಗಳುಳ್ಳ, ತನ್ನ ಪ್ರಕಾಶದಿಂದ ಇತರ ದೇವತೆಗಳ ತೇಜಸ್ಸನ್ನು ಅಲ್ಪವಾಗಿ

ಆಜ್ಞಪ್ತೋ ಹನುಮಾಂಸ್ತತ್ರ ಮತ್ಸೇವಾಯೈ ಮುನೀಶ್ವರ ।
ಮಹೇಶೇನಾಹಮಪ್ಯೇನಂ ಶಶಿಮೌಲಿಮುಪೈಮಿ ಚ　　　　॥ ೩೫೪ ॥

ಕಿಂ ಬಹೂಕ್ತೇನ ವಿಪ್ರರ್ಷೇ ಯಾದೃಶೋ ವಾನರೇಶ್ವರಃ ।
ಬುದ್ಧೌ ನ್ಯಾಯೇ ಚ ವೈ ಧೈರ್ಯೇ ತಾದೃಗನ್ಯೋಽಸ್ತಿ ನ ಕ್ವಚಿತ್ ॥ ೩೫೫ ॥

ಇತಿ ತೇ ಸರ್ವಮಾಖ್ಯಾತಂ ಚರಿತಂ ಪಾಪನಾಶನಂ ।
ಪಠತಾಂ ಶೃಣ್ವತಾಂ ಚೈವ ಗಚ್ಛ ವಿಪ್ರ ಯಥಾಸುಖಂ　　　　॥ ೩೫೬ ॥

ತಚ್ಛ್ರುತ್ವಾ ರಾಮಭದ್ರಸ್ಯ ರಘುನಾಥಸ್ಯ ಧೀಮತಃ ।
ವಚನಂ ದಕ್ಷಿಣೀಕೃತ್ಯ ನತ್ವಾ ಚಾಗಾಂ ಯಥಾಗತಃ　　　　॥ ೩೫೭ ॥

---

ಮಾಡಿರುವ ಮಂಗಳಕರಾವಯವವುಳ್ಳ ತರುಣನೂ ಆದ ಪ್ರಸನ್ನಮೂರ್ತಿಯು ಸಮಸ್ತದೇವತೆಗಳನ್ನೂ ಸತ್ಕರಿಸಿದನು.

೩೫೪. ಮುನೀಶ್ವರನೇ! ಅಲ್ಲಿ ಹನುಮಂತನು ಮಹೇಶನಿಂದ ನನ್ನ ಸೇವೆಗಾಗಿ ಆಜ್ಞಾಪಿಸಲ್ಪಟ್ಟನು. ನಾನೂ ಸಹ ಈ ಚಂದ್ರಮೌಳಿಯನ್ನೇ ಶರಣುಹೊಂದುವೆನು.

೩೫೫. ವಿಪ್ರರ್ಷಿಯೇ! ಹೆಚ್ಚು ಹೇಳಿದುದರಿಂದೇನು? ಬುದ್ಧಿ, ನ್ಯಾಯ ಧೈರ್ಯ ಇವುಗಳಲ್ಲಿ ಕಪೀಶ್ವರನಿಗೆ ಸಮಾನನಾದವನು ಎಲ್ಲಿಯೂ ಇಲ್ಲ.

೩೫೬. ಈರೀತಿ ಶ್ರವಣ, ಪಠನ ಮಾಡುವವರಿಗೆ ಪಾಪಪರಿಹಾರಕವಾದ ಚರಿತ್ರೆಯೆಲ್ಲವನ್ನೂ ನಿನಗೆ ಹೇಳಿರುವೆನು. ಬ್ರಾಹ್ಮಣನೇ! ನೀನು ಸುಖವಾಗಿ ಹೋಗಿಬಾ.

೩೫೭. ಧೀಮಂತನೂ, ರಘುನಾಥನೂ ಆದ ರಾಮಭದ್ರನ ಆ ಮಾತನ್ನು ಕೇಳಿ ಅವನಿಗೆ ಪ್ರದಕ್ಷಿಣೆ ನಮಸ್ಕಾರ ಮಾಡಿ ಬಂದರೀತಿಯಲ್ಲಿಯೇ ಹಿಂದಿರುಗಿದೆನು.

**ಏತತ್ತೇಽಭಿಹಿತಂ ವಿಪ್ರ ಚರಿತಂ ಚ ಹನೂಮತಃ ।**
**ಸುಖದಂ ಮೋಕ್ಷದಂ ಸಾರಂ ಕಿಮನ್ಯಚ್ಛ್ರೋತುಮಿಚ್ಛಸಿ ॥ ೩೫೮ ॥**

**ಇತಿ ಶ್ರೀನಾರದೀಯಪುರಾಣೇ ಪೂರ್ವಭಾಗೇ ಬೃಹದುಪಾಖ್ಯಾನೇ ತೃತೀಯಪಾದೇ ಹನುಮಚ್ಚರಿತ್ರಂ ನಾಮ ಏಕೋನಾಶೀತಿ ತಮೋಽಧ್ಯಾಯಃ**

---

೩೫೮. ಬ್ರಾಹ್ಮಣನಾದ ನಾರದನೇ! ಸುಖಪ್ರದವು, ಮುಕ್ತಿದಾಯಕವು ಉತ್ತಮವೂ ಆದ ಹನುಮಂತನ ಈ ಚರಿತ್ರೆಯನ್ನು ನಿನಗಾಗಿ ತಿಳಿಸಿರುವೆನು. ಮುಂದೆ ಬೇರೆಯಾವುದನ್ನು ಕೇಳಬಯಸುವೆ ತಿಳಿಸು.

ಇಂತು ಶ್ರೀನಾರದೀಯ ಪುರಾಣದೊಳು ಪೂರ್ವಭಾಗದ ಬೃಹದುಪಾಖ್ಯಾನವೆಂಬ ಮೂರನೆಯ ಪಾದದಲ್ಲಿ ಹನುಮಚ್ಚರಿತ್ರೆಕಥನವೆಂಬ ಎಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಕಥಾಸಂಗ್ರಹ.

ಇದರ ಪೂರ್ವೋತ್ತರಾಧ್ಯಾಯಗಳಲ್ಲಿ ವಿವಿಧಮಂತ್ರಗಳು ಸಪರಿಕರವಾಗಿ ನಿರೂಪಿತವಾಗಿವೆ. ಮಧ್ಯದಲ್ಲಿರುವ ಈ ದೊಡ್ಡ ಅಧ್ಯಾಯದಲ್ಲಿ ಹನುಮಚ್ಚರಿತ್ರೆಯು ಉಕ್ತವಾಗಿದೆ. ಇಲ್ಲಿ ಹೇಳಿರುವ ಕಥೆಯು ರಾಮಾಯಣ ಮುಂತಾದ ಐತಿಹಾಸಿಕ ಗ್ರಂಥಗಳಿಗೆ ಸಮ್ಮತವಾಗಿಲ್ಲ; ವಾಯುದೇವನ ಅವತಾರವೇ ಹನುಮಂತನೆಂಬುದು ಇತಿಹಾಸಸಮ್ಮತವು. ಇಲ್ಲಿಯಾದರೋ ಬೇರೆ ವಿಧವಾಗಿ ವರ್ಣಿತವಾಗಿದೆ. ಹನುಮಂತನೇ ಮುಖ್ಯಪಾತ್ರವಾಗಿರುವ ರಾಮಾಯಣ ಕಥೆಯ ಸಂಪರ್ಕವೇ ಇಲ್ಲಿನ ಹನುಮಂತನಿಗಿಲ್ಲ. ಇಲ್ಲಿ ಹನುಮಂತನು ದೊಡ್ಡ ಸಂಗೀತಗಾರನೆಂದು ಹೇಳಿದೆ. ಅವನ ಸಾಹಸಕಾರ್ಯಗಳಾವುವೂ ಉಕ್ತವಾಗಿಲ್ಲ. ರುದ್ರದೇವರ ಮಹಿಮೆ, ಪೂಜೆಯ ವಿಧಾನ ಮುಂತಾದುವು ವಿಶದವಾಗಿ ಹೇಳಲ್ಪಟ್ಟಿವೆ.

ಮಂಗಳಂ



---

ಮೈಸೂರು :
ಶ್ರೀ ಚಾಮುಂಡೇಶ್ವರಿ ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.